# ಪಿ.ಲಂಕೇಶರ ಕಥನ ಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ

ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನ ಮಹಾಪ್ರಬಂಧ


ಸಂಶೋಧಕರು

ಜೆ.ಎಂ. ನಂದೀಶ

ಖಾಯಂ ನೋಂದಣಿ ಸಂಖ್ಯೆ : ೧೪೧೨೦೧೦೨೦೦೧೧

ಮಾರ್ಗದರ್ಶಕರು

ಡಾ. ಮಧುಸೂದನಾಚಾರ್ಯ ಜೋಷಿ
ಸಹ ಪ್ರಾಧ್ಯಾಪಕರು





ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬



೨೦೧೮

# ಪಿ.ಲಂಕೇಶರ ಕಥನ ಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ

ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನ ಮಹಾಪ್ರಬಂಧ



ಸಂಶೋಧಕರು

ಜಿ.ಎಂ. ನಂದೀಶ

ಖಾಯಂ ನೋಂದಣಿ ಸಂಖ್ಯೆ : ೧೪೧೨೦೧೦೨೦೦೧೧

ಮಾರ್ಗದರ್ಶಕರು

ಡಾ. ಮಧುಸೂದನಾಚಾರ್ಯ ಜೋಷಿ
ಸಹ ಪ್ರಾಧ್ಯಾಪಕರು



ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣಪತ್ರ

ಶ್ರೀ **ಜಿ.ಎಂ.ನಂದೀಶ** ಇವರು **"ಪಿ.ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ"** ಎಂಬ ವಿಷಯದ ಮೇಲೆ ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ, ಪಿಎಚ್.ಡಿ. ಪದವಿಗಾಗಿ ತಮ್ಮ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ.

ಈ ಮಹಾಪ್ರಬಂಧವು ಸಂಶೋಧನಾ ವಿದ್ಯಾರ್ಥಿಯ ಸ್ವಂತ ಪರಿಶ್ರಮದ ಸಂಶೋಧನೆಯ ಮೂಲಕ ರೂಪುಗೊಂಡಿದೆ. ಈ ಮಹಾಪ್ರಬಂಧವನ್ನು ಆಂಶಿಕವಾಗಿಯಾಗಲಿ, ಪೂರ್ಣವಾಗಿಯಾಗಲಿ ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪದವಿಗಾಗಿ ಈ ಮೊದಲು ಸಲ್ಲಿಸಿಲ್ಲವೆಂದು, ಇದನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಲು ನಾನು ಸಮ್ಮತಿಸುತ್ತೇನೆಂದೂ ಈ ಮೂಲಕ ದೃಢೀಕರಿಸುತ್ತೇನೆ.

ವಿದ್ಯಾರಣ್ಯ
ದಿನಾಂಕ: 22/10/2018

**(ಡಾ. ಮಧುಸೂದನಾಚಾರ್ಯ ಜೋಷಿ)**
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಚನ್ನಪಟ್ಟಣ, ರಾಮನಗರ ಜಿಲ್ಲೆ.

ಡಾ.ಮಧುಸೂಧನಾಚಾರ್ಯ ಜೋಷಿ
ಸಹಪ್ರಾಧ್ಯಾಪಕರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣ.

# ಸಂಶೋಧಕರ ಘೋಷಣಾಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ **"ಪಿ.ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ"** ಎಂಬ ಮಹಾಪ್ರಬಂಧವನ್ನು **ಡಾ. ಮಧುಸೂದನಾಚಾರ್ಯ ಜೋಷಿ,** ಸಹ ಪ್ರಾಧ್ಯಾಪಕರು , ಕನ್ನಡ ವಿಭಾಗ, ಸರ್ಕಾರಿ, ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣ, ರಾಮನಗರ ಜಿಲ್ಲೆ. ಇವರ ಸಲಹೆ ಮತ್ತು ಸೂಕ್ತ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಈ ಮಹಾಪ್ರಬಂಧವನ್ನು ಯಾವುದೇ ವಿಶ್ವವಿದ್ಯಾನಿಲಯದ ಪದವಿ, ಡಿಪ್ಲೊಮಾ ಹಾಗೂ ತತ್ಸಮಾನ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

Nandeesh G M

ವಿದ್ಯಾರಣ್ಯ
ದಿನಾಂಕ: ೨೨/೧೦/೨೦೧೮

(ಜಿ.ಎಂ.ನಂದೀಶ)
ಸಂಶೋಧಕರು

# ಅರಿಕೆ

**"ಪಿ.ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ"** ಎಂಬ ವಿಷಯದ ಮೇಲೆ ಸಂಶೋಧನೆ ಮಾಡಲು ಕಾರಣರಾದವರು, ನೆರವಾದವರು, ಸಹಕರಿಸಿದವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡು ಕೃತಜ್ಞತೆ ಸಲ್ಲಿಸುತ್ತೇನೆ.

ನಾನು ಸಂಶೋಧನಾ ಕಾರ್ಯ ಆರಂಭಿಸಲು ಮನಸ್ಸು ಮಾಡಿದಾಗ ಅಧ್ಯಯನ ದೃಷ್ಟಿಯಿಂದ ನನ್ನ ಗುರುಗಳಾದ ಪ್ರೊ. ಶೇಖರ ಎಂ.ಬಿ., ಇವರು ಸಲಹೆ ಮತ್ತು ಮಾರ್ಗದರ್ಶನಗಳನ್ನು ನೀಡುತ್ತಾ ಉತ್ತೇಜಿಸಿದವರು. ನನ್ನ ಈ ಸಂಶೋಧನೆಗೆ ಮಾರ್ಗದರ್ಶನ ಮಾಡಲು ಒಪ್ಪಿದ ಡಾ. ಮಧುಸೂದನಾಚಾರ್ಯ ಜೋಷಿಯವರು ಸಂಶೋಧನಾ ಮಹಾಪ್ರಬಂಧವನ್ನು ತಿದ್ದಿತೀಡಿ ಪ್ರೋತ್ಸಾಹಿಸುತ್ತಾ ಬಂದಿರುತ್ತಾರೆ. ಸಂಶೋಧನೆಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಮುಕ್ತವಾಗಿ ಚರ್ಚಿಸಿ ಉತ್ತಮ ಮಾರ್ಗದರ್ಶನ ನೀಡಿರುತ್ತಾರೆ. ಜೊತೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಪ್ರೊ. ರಹಮತ್ ತರೀಕೆರೆಯವರು ಲಂಕೇಶರ ವಿಷಯದ ಆಯ್ಕೆಯಲ್ಲಿ ನನಗೆ ಸೂಕ್ತ ಸಲಹೆ ಮತ್ತು ಮಾರ್ಗದರ್ಶನವನ್ನು ಸಂಶೋಧನೆಯ ಆರಂಭದಿಂದ ಹಿಡಿದು ಅಂತ್ಯದವರೆಗೂ ಸರಿತಪ್ಪುಗಳನ್ನು ಕುರಿತು ಚರ್ಚಿಸಿರುತ್ತಾರೆ ಹಾಗೂ ಸಾಹಿತ್ಯ ಅಧ್ಯಯನ ವಿಭಾಗದ ಡಾ. ವೆಂಕಟಗಿರಿ ದಳವಾಯಿ, ಡಾ. ಎ.ಆರ್.ಮದನಕುಮಾರ್, ಡಾ. ಪುಟ್ಟಸ್ವಾಮಿ, ಪ್ರೊ. ಸುಂದರಿ, ಡಾ. ಮಂಜುಳಾ ಇವರುಗಳ ಸಲಹೆ ಮತ್ತು ಸೂಕ್ತ ಮಾರ್ಗದರ್ಶನಗಳು ನನಗೆ ಸಾಕಷ್ಟು ಬೌದ್ಧಿಕ ಬೆಳವಣಿಗೆಗೆ ನೆರವಾಗಿವೆ. ಜೊತೆಗೆ ಸಂಶೋಧನಾ ವಿದ್ಯಾರ್ಥಿಗಳಾದ ಹಾಗೂ ಸ್ನೇಹಿತರಾದ ದೊಡ್ಡ ಹನುಮಂತ ಮತ್ತು ಓಬಳೇಶ್ ಇವರೊಟ್ಟಿಗೆ ಚರ್ಚಿಸುವ ಸಂದರ್ಭದಲ್ಲಿ ಹಲವಾರು ಸಂಶೋಧನಾ ಆಯಾಮಗಳನ್ನು ಮತ್ತು ಹೊಸಚಿಂತನ ಲಹರಿಯನ್ನು ತಿಳಿಸಿಕೊಟ್ಟಿರುತ್ತಾರೆ. ಇವರಿಗೆ ನಾನು ಚಿರಋಣಿ.

ಈ ಸಂಶೋಧನೆ ಕೈಗೊಂಡ ಸಂದರ್ಭದಲ್ಲಿ ಸಹಕರಿಸಿದ ಮಾನ್ಯತಾ ಸಂಸ್ಥೆಯ ವಿದ್ವಾಂಸರುಗಳು ಸಲಹೆ ಮತ್ತು ಸೂಚನೆಗಳನ್ನು ನೀಡಿದರು. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಕರ್ನಾಟಕ ಸಂಘದ ಎಲ್ಲರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬದುಕಿನ ದುಃಖದುಮ್ಮಾನಗಳನ್ನೆಲ್ಲ ತಮಗಿರಿಸಿಕೊಂಡು, ಪ್ರೀತಿಯ ಸವಿಯನ್ನಷ್ಟೇ ಉಣಿಸಿ ವಿದ್ಯಾಭ್ಯಾಸ ಮಾಡಿಸಿದ, ನನ್ನ ಇಂದಿನ ಬದುಕಿಗೆ ಕಾರಣಕರ್ತರಾದ, ನನಗೆ ಯಾವಾಗಲೂ ಸ್ಫೂರ್ತಿ ನೀಡುವ, ನನ್ನ ಬದುಕಿಗೆ ಮುಖ್ಯ ಆಗರವಾದ ನನ್ನ ತಂದೆ ಮರೀಗೌಡ ಮತ್ತು ತಾಯಿ ಸಾವಿತ್ರಮ್ಮ, ಅಣ್ಣ ಮಹೇಶ್ ಜಿ.ಎಂ. ಅತ್ತಿಗೆ ರೇಖಾ, ನನ್ನ ಅಣ್ಣನ ಮಗಳಾದ ರಕ್ಷಿತಾ.ಜಿ.ಎಂ. ಅವರಿಗೆ ಸದಾಕಾಲ ಆಭಾರಿಯಾಗಿರುತ್ತೇನೆ.

ಸಂಶೋಧನೆಯ ಕಾರ್ಯದಲ್ಲಿ ನನಗೆ ಬೆನ್ನೆಲುಬಾಗಿ ನಿಂತು ಅಧ್ಯಯನದಲ್ಲಿ ಯಾವ ಅಡಚಣೆಯಾಗದಂತೆ ನೋಡಿಕೊಂಡು, ಅನೇಕ ಸಲಹೆಗಳನ್ನು ಕೊಟ್ಟ ನನ್ನ ಬಾಳಸಂಗಾತಿ ಜಿ.ಎಂ.ಲಕ್ಷ್ಮೀ, ನನ್ನ ಬದುಕಿನಲ್ಲಿ ಹೊಸಬೆಳಕನ್ನು ತಂದು ಸ್ಫೂರ್ತಿ ತುಂಬಿದ ಪ್ರೀತಿಯ ಅತ್ತೆ ಇಂದ್ರಾಣಿ, ಮಾವ ಮಾದೇಗೌಡ.ಜಿ ಇವರಿಗೆ ಪ್ರೀತಿಯ ಕೃತಜ್ಞತೆಗಳು. ಹಾಗೂ ನನ್ನ ಪ್ರಬಂಧದ ಬರವಣಿಗೆಯ ವೇಳೆಯಲ್ಲಿ ಆಗಾಗ್ಗೆ ತನ್ನ ಅಳು ಮತ್ತು ನಗುವಿನಿಂದ ನನ್ನನ್ನು ಆಕರ್ಷಿಸಿ ಸಣ್ಣ ವಿರಾಮ ನೀಡುತ್ತಿದ್ದ ಪ್ರೀತಿಯ ಮಗಳಾದ ಸೌಖ್ಯಳನ್ನು ಈ ಸಮಯದಲ್ಲಿ ನೆನೆಯುವೆ.

ನನ್ನ ಸಂಶೋಧನಾ ಬರಹವನ್ನು ಪ್ರೀತಿಯಿಂದ ಶ್ರಮವಹಿಸಿ ಮಾಡಿಕೊಟ್ಟ ಶ್ರೀ ಚನ್ನಕೇಶವ ಮತ್ತು ಶ್ರೀಮತಿ ರಾಧಾ ಅವರಿಗೆ ಧನ್ಯವಾದಗಳು.

# ಪರಿವಿಡಿ

## "ಪಿ.ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ"



* * * * *

# ಅಧ್ಯಾಯ ಒಂದು

# ಪೀಠಿಕೆ, ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ವಿಧಾನ

**ಪೀಠಿಕೆ:**

ಸ್ವಾತಂತ್ರ್ಯೋತ್ತರ ಸಂದರ್ಭದ ನವ್ಯ ಬರಹಗಾರರಲ್ಲಿ ಅಪರೂಪದ ಕಥೆಗಾರ, ಕವಿ, ನಾಟಕಕಾರ, ಪತ್ರಕರ್ತ, ಪ್ರಗತಿಪರಚಿಂತಕ, ಸಿನಿಮಾ ನಿರ್ದೇಶಕ ಹೀಗೆ ಹಲವು ಸಾಹಿತ್ಯ ಮತ್ತು ಸಾಂಸ್ಕೃತಿಕ ಚಿಂತನೆಗಳಿಂದ ಗುರುತಿಸಿಕೊಂಡವರು ಪಿ.ಲಂಕೇಶ್. ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ತಾವು ದುಡಿಸಿಕೊಂಡ ಇವರು ಮನುಷ್ಯನ ಬದುಕನ್ನು ನೋಡುವ ಪರಿಯೇ ವಿಶಿಷ್ಟವಾದದ್ದು. 'ಆಡುಮುಟ್ಟದ ಸೊಪ್ಪಿಲ್ಲ' ಎನ್ನುವಂತೆ ಲಂಕೇಶರು ಕೈಯಾಡಿಸದ ಸಾಹಿತ್ಯ ಪ್ರಕಾರವಿಲ್ಲ. ಯಾವುದನ್ನೇ ಆಯ್ಕೆ ಮಾಡಿಕೊಂಡಾಗಲೂ ಅದನ್ನು ಕಾಣುವ ಮತ್ತು ವ್ಯಾಖ್ಯಾನಿಸುವ ಪ್ರಕ್ರಿಯೆಯಲ್ಲಿ ಹುದುಗಿರುವ ವಿಮರ್ಶಾಪ್ರಜ್ಞೆ ಸಾಹಿತ್ಯದ ಒಳಹೊರಗನ್ನು ಅರಿತವರಿಗೆ ಸ್ಪಷ್ಟವಾಗುತ್ತದೆ. ವ್ಯಕ್ತಿಯಾಗಿ, ಸಾಹಿತಿಯಾಗಿ, ಸಾಮಾಜಿಕ ಕಳಕಳಿಯನ್ನು ನಿರಂತರವಾಗಿ ಜೀವಂತಿಕೆಯ ನಾಡಿಮಿಡಿತವಾಗಿರಿಸಿಕೊಂಡಿದ್ದ ಇವರು ಮನುಷ್ಯನ ಸಣ್ಣತನದ ವರ್ತನೆಯನ್ನು ಕಂಡು ಕುಪಿತರಾಗುತ್ತಿದ್ದರು. ಮೂಲತಃ ಶಿವಮೊಗ್ಗ ಜಿಲ್ಲೆಯ ಕೋನಗವಳ್ಳಿಯವರಾದ ಲಂಕೇಶರು ಮಲೆನಾಡಿನ ಸಾಹಿತ್ಯ, ಸಂಸ್ಕೃತಿ ಹಾಗೂ ಪ್ರಗತಿಪರ ಚಿಂತನೆಯ ಪರಿಸರದಿಂದ ಬಂದವರು. ಹಾಗೆ ನೋಡಿದರೆ ಕರ್ನಾಟಕದ ಭೂಪಟದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರಕ್ಕೆ ಈ ಜಿಲ್ಲೆ ಕೊಟ್ಟ ಬರಹಗಾರರು ವೈಶಿಷ್ಟ್ಯಪೂರ್ಣ. ವಿಶ್ವಮಾನವ ಸಂದೇಶ ಸಾರಿದ ಕವಿ ಕುವೆಂಪು, ಜಿ.ಎಸ್.ಶಿವರುದ್ರಪ್ಪ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಯು.ಆರ್. ಅನಂತಮೂರ್ತಿ, ಹಾ.ಮಾ.ನಾಯಕ್ ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಸಮಕಾಲೀನ ಬರಹಗಾರರ ಪೈಕಿ ಪಿ.ಲಂಕೇಶ್ ಕೂಡ ಒಬ್ಬರು.

ಕರ್ನಾಟಕದಲ್ಲಿ ಸಾಹಿತ್ಯ ಕ್ಷೇತ್ರದಲ್ಲಷ್ಟೇ ಅಲ್ಲ, ಕನ್ನಡ ನಾಡಿನ ಸಾಮಾಜಿಕ ಜೀವನದಲ್ಲಿ ತಮ್ಮ ಪ್ರಖರ ವೈಚಾರಿಕತೆಯಿಂದ ಸಾಂಸ್ಕೃತಿಕ ವಾಗ್ವಾದಗಳನ್ನು ಹುಟ್ಟು ಹಾಕಿದವರು. ತಮ್ಮ ಮನುಷ್ಯ ಸಂಬಂಧಿ ಸಂವೇದನೆಯ ಮೂಲಕ ತಮ್ಮ ಕೃತಿಗಳಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ದಾಖಲಿಸಿದವರು ಪಿ.ಲಂಕೇಶ್. ಸಾಂಸ್ಕೃತಿಕ ವಾಗ್ವಾದಕ್ಕೆ ತಮ್ಮ ಪುಸ್ತಕಗಳನ್ನು ಹೊರತುಪಡಿಸಿದಂತೆ ಬೇರೆ ಆಯಾಮಗಳಾದ ವರ್ತಮಾನದ ದಿನಚರಿಯ ಪತ್ರಿಕೆಗಳು ಹಾಗೂ ಸಮೂಹ ಮಾಧ್ಯಮಗಳಿಗೆ ಹೆಚ್ಚಾಗಿ ಬಳಸಿದವರು. ಅದಕ್ಕೆ ಒಂದು ಹೊಸ ಅವಕಾಶ ಎಂದರೆ ಅವರದೇ ಹೆಸರಿನ ಅವರದೇ ಪತ್ರಿಕೆ 'ಲಂಕೇಶ್‌ಪತ್ರಿಕೆ' ತಮ್ಮ ಸೃಜನಶೀಲ, ಸೃಷ್ಟಿ ಶೀಲ ಬರಹಗಳ ಸೈದ್ಧಾಂತಿಕ ತಾತ್ವಿಕತೆಯನ್ನು ಅವರು ತಮ್ಮ ಕಥೆ, ಕವಿತೆ, ಕಾದಂಬರಿ,

ವಿಮರ್ಶೆ, ಗದ್ಯ, ಅನುವಾದ, ನಾಟಕ, ಟೀಕೆ–ಟಿಪ್ಪಣಿ, ಸಂವಾದಗಳಲ್ಲಿ ಕೂಡಿಟ್ಟಿದ್ದರೆ, ಅವರ ವೈಚಾರಿಕ ವಾಗ್ಯುದ್ಧಗಳನ್ನು ಪತ್ರಿಕೆಯ ಮುಖೇನ ಮಾಡಿದರು. ಹಾಗೆ ಮಾಡುವಾಗ ಪಿ.ಲಂಕೇಶ್ ಎಂಬ ಬರಹಗಾರನಲ್ಲಿ ಸಂಪಾದಕನೊಬ್ಬ ಕಾಣುತ್ತಾನೆ. ಅಷ್ಟೇ ಪ್ರಮುಖವಾಗಿ ಬದುಕಿನುದ್ದಕ್ಕೂ ಕನ್ನಡದ ಸಾಮಾಜಿಕ ಬದುಕಿನ ಮನುಷ್ಯ ಸಂಬಂಧಗಳ ಸಾಂಸ್ಕೃತಿಕ ವಲಯವನ್ನು ಸದಾ ಎಚ್ಚರವಾಗಿದ್ದು ಕಾಯ್ದುಕೊಂಡ ಜಾಗೃತಗೊಂಡ ಪ್ರತಿಫಲ ಪಿ.ಲಂಕೇಶ್‌ರದು. "ನಾನು ಅನೇಕ ಸಲ ಬರೆಯುವುದು ಕಾಲ ಮತ್ತು ಸಂದರ್ಭದ ಒತ್ತಾಯಕ್ಕೆ ಸಿಕ್ಕು ಯಾವಾಗಲು ಬರೆಯುತ್ತೇನೆ. ಅದು ಅತ್ಯಂತ ಪ್ರಾಮಾಣಿಕವಾಗಿ ನನ್ನನ್ನು ನನ್ನೊಳಗಿನ ಶೂನ್ಯವನ್ನು ಬಿಚ್ಚಿಡುತ್ತದೆ. ಆದರೆ ನನ್ನಲ್ಲೇನೋ ಅತ್ಯಮೂಲ್ಯವಾದದ್ದೊಂದು ಇದೆಯೆಂದು ನನಗೆ ಗೊತ್ತಿದೆ. ಅದನ್ನು ಪ್ರತಿಭೆಯೆಂದು ಕರೆಯಬಹುದು. ನಾನು ಬಹಳ ಅಹಂಕಾರಿ, ಅತಿ ಜಂಬದವನು ಆದರೆ ಅದು ನನ್ನಲ್ಲಿದೆ ಅದನ್ನು ಮುಟ್ಟಿ ನೋಡಬಲ್ಲೆ ಅನಿಸುವ ಹಾಗಿದೆ. ಒಳ್ಳೆಯ ಭರ್ಜರಿಯಾಗಿ ಬೆಳೆದ ಕುಂಬಳಕಾಯಿ ಹಾಗಿದೆ. ನನ್ನನ್ನು ಅದು ಕಂಗೊಳಿಸುತ್ತದೆ. ಅದೊಂದು ನನಗಿರುವ ಭರವಸೆ. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ. ಅದು ನನ್ನ ಒಳಗೂ ಹೊರಗೂ ಇದ್ದು ನನಗೆ ಸಹಿಸಿಕೊಳ್ಳುವುದಕ್ಕೆ ಸಹಾಯ ಮಾಡಿದೆ. ನನ್ನ ಹೊರಗಿನ ಬದುಕು ಆಶ್ಚರ್ಯಕರವಾಗಿದೆ. ಕೆಲವರು ಸಂವೇದನಾ ಶೂನ್ಯರಾಗಿ ಎಷ್ಟು ಸಂತೋಷವಾಗಿರುತ್ತಾರೆಂದು ಆಶ್ಚರ್ಯವಾಗುತ್ತದೆ. ಆ ಸಂತೋಷ ಒಂದು ಮುಖವಾಡವಿರಬಹುದು. ಆದರೆ ನಾನು ಈ ಬಡಪ್ರಾಣಿ ಮುಖವಾಡವನ್ನು ಧರಿಸಲಾರೆ"[೧] ಈ ಪ್ರತಿಕ್ರಿಯೆ ಪಿ.ಲಂಕೇಶರ ಒಳಗನ್ನು ಸ್ಪಷ್ಟಪಡಿಸುತ್ತದೆ. ಪಿ.ಲಂಕೇಶರದು ಒಂದು ಮುಖವಲ್ಲ. ಅಧ್ಯಾಪಕ, ನಿರ್ದೇಶಕ, ನಟ, ರಾಜಕಾರಣಿ, ಕೃಷಿಕ, ವಿಮರ್ಶಕ ಹೀಗೆ ಹತ್ತು ಹಲವು ಮುಖಗಳು ದಶಾವತಾರಗಳು ಎಂದರೂ ನಡೆಯುತ್ತದೆ. ಈ ಅರ್ಥದಲ್ಲಿ ಲಂಕೇಶರು ತಾವು ಕಂಡ ಸಮಾಜವನ್ನು ಅನೇಕ ರೂಪಗಳಲ್ಲಿ ತಾನು ಹೊಂದಿರುವ ಪ್ರತಿಭೆಯನ್ನು ಎತ್ತಿ ಹಿಡಿದು ಸಾಂಸ್ಕೃತಿಕ ರಾಯಭಾರಿಯಾಗಿ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಲೇಖಕ ಎಂದರೆ ಅತಿಶಯೋಕ್ತಿ–ಯಾಗಲಾರದು.

ಪಿ.ಲಂಕೇಶರದು ಪೂಸಿ ಹೊಡೆಯುವ ಬರವಣಿಗೆಯಲ್ಲ 'ಖಂಡಿತವಾದಿ ಲೋಕವಿರೋದಿ' ಎಂಬ ಮಾತಿನಂತೆಯೇ ಕನ್ನಡ ಸಮಾಜದ ನಾಗರಿಕ ಬದುಕಿನ ಅಂಕುಡೊಂಕುಗಳನ್ನು ಬೆರಳು ಮಾಡಿ ತೋರಿಸಿದಂತೆ ಬರೆದರು. ದುಷ್ಟರಾಜಕಾರಣವನ್ನು ಮುಲಾಜಿಲ್ಲದೆ ಲೇವಡಿ ಮಾಡಿದರು. ಈ ದುಷ್ಟರಾಜಕಾರಣದ ಎಳೆ ನಾಗರಿಕತೆಯ ಹೆಸರಿನಲ್ಲಿ

---

೧. ಪ್ರಸ್ತುತ: ಪಿ.ಲಂಕೇಶ್ ಪ್ರಕಾಶನ, ಪುಟ. ೪, ೨೦೦೬.

ನಗರದಿಂದ ನಮ್ಮ ಹಳ್ಳಿಗಳನ್ನು ಪ್ರವೇಶಿಸಿದ ರೀತಿಗೆ ಬೆಚ್ಚಿ ಬೆರಗಾದರು. ಆಗ ಹುಟ್ಟಿಕೊಂಡ ಒಳತೋಟಿಯ ತುಡಿತಗಳನ್ನು ಮುಚ್ಚಿಡಲಾಗದೇ ತಮ್ಮ ನಡುವಿನ ಮಾನವ ಸಂಘರ್ಷ ಸಾಮಾಜಿಕ ಚಿಂತನೆಗಳನ್ನು ಪ್ರೀತಿಯಿಂದ ಕಥಾನಕವಾಗಿ ಬರೆದರು. ಹಾಗೆ ಬರೆಯುವಾಗ ಸ್ವಲ್ಪ ಗದರಿಕೊಂಡೇ ಬರೆದರು. ಅದು ಒಂದು ಆರೋಗ್ಯಕರ ಸಮಾಜಕ್ಕಾಗಿ ಕನಸು ಕಂಡವನ ರೋದನೆಯಂತೆ ಕಾಣಿಸಿತು. ವರ್ತಮಾನದಲ್ಲಿ ಈ ಎಲ್ಲದರ ಬದಲಾವಣೆಯಿಂದ ಮತ್ತು ಮನಸ್ಥಿತಿಯಿಂದ ಮನುಷ್ಯ ಸಂಬಂಧಗಳ ಸ್ವರೂಪದಲ್ಲಿ ಬದುಕನ್ನು ನಿರೂಪಿಸುವುದರ ಜೊತೆಗೆ ಅದನ್ನು ಸಿದ್ದಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಪಿ.ಲಂಕೇಶರದು ಹಠ ಸಾಧನೆ. ಪಿ.ಲಂಕೇಶರ ಮಹತ್ವದ ಮತ್ತೊಂದು ಸಾಹಿತ್ಯಕ ಗುಣವೆಂದರೆ ಆಧುನಿಕ ಸಂವೇದನೆಯನ್ನು ತನ್ನ ವ್ಯಕ್ತಿತ್ವದೆಡೆಗೆ ಜೀರ್ಣಿಸಿಕೊಂಡು ಅಭಿವ್ಯಕ್ತಿಸುವುದಾಗಿದೆ. ತನ್ನೊಳಗಿನ ಸಂಕಟವನ್ನು ಸಾಮಾಜಿಕ ಸಂಬಂಧದೊಂದಿಗೆ ಬೆಸೆಯುವುದಾಗಿದೆ. ಅದಕ್ಕೆ ಪೂರಕವಾದ ಸಂವಹನ ಸಾಧ್ಯತೆಯನ್ನು ಹೊಸದಾದ ರೀತಿಯಲ್ಲಿ ರೂಪಿಸಿಕೊಳ್ಳುವುದಾಗಿದೆ ಮಾತ್ರವಲ್ಲ ಆ ಮೂಲಕ ತಾನು ಹೇಳಬೇಕೆಂದುಕೊಂಡಿರುವುದನ್ನು ಯಾವ ರೀತಿಯಲ್ಲಿ ವ್ಯಕ್ತಪಡಿಸಲು ಸಾಧ್ಯ ಎಂಬುದರ ಹುಡುಕಾಟದಲ್ಲಿ ಲಂಕೇಶರ ಚಿಂತನೆ ವಿಶಿಷ್ಟವಾದುದಾಗಿದೆ.

"ನಾನು ಅನೇಕ ಸಲ ಬರೆಯುವುದು ಕಾಲ ಮತ್ತು ಸಂದರ್ಭದ ಒತ್ತಾಯಕ್ಕೆ ಸಿಕ್ಕು"[೨] ಜೀವನ ಸಂದರ್ಭಗಳ ಒತ್ತಡಗಳು ಲೇಖಕನಿಂದ ಬರಹದ ರೂಪದಲ್ಲಿ ಬಂದಾಗ ಅದು ವಸ್ತು ವೈವಿಧ್ಯದ ವಾಸ್ತವಿಕ ಸಂಬಂಧಗಳ ವಿನ್ಯಾಸದ ಪರಿಯಲ್ಲಿ ನಿಂತು ತತ್ವವನ್ನೇ ಹೇಳುತ್ತದೆ. ಒಂದುವೇಳೆ ಓದುಗನಿಗೆ ಅರ್ಥವೂ! ಅನರ್ಥದಂತೆಯೇ ಕಂಡರೆ ಆಗ ಲೇಖಕ ಉತ್ತರಿಸಬೇಕಾಗುತ್ತದೆ. ಪಿ.ಲಂಕೇಶ್ ತಮ್ಮನ್ನು ತಾವು ಆತ್ಮ ವಿಮರ್ಶೆ ಮಾಡಿಕೊಂಡ ನಿದರ್ಶನವೇ ಅದು.

ಬದುಕು ಹಾಗೂ ಬರಹಗಳೆರಡರಲ್ಲೂ ಅನನ್ಯವಾದ ಸಂಬಂಧವನ್ನು ಕಂಡುಕೊಂಡ ಪಿ.ಲಂಕೇಶರು ನವ್ಯಕಾಲದ ಬಿಸಿಯಲ್ಲಿ ತಮ್ಮ ಸೃಜನಶೀಲ ಬರವಣಿಗೆಯನ್ನು ಪ್ರಾರಂಭಿಸಿದರು. ನಂತರ ನವ್ಯಕ್ಕೆ ಹೊರತಾಗಿ ಬರವಣಿಗೆಯ ಸ್ವರೂಪವನ್ನು ಬದಲಾಯಿಸಿಕೊಂಡರು. ಪ್ರಾರಂಭದಲ್ಲಿ ಹನ್ನೆರಡನೇ ಶತಮಾನದ ವಚನಗಳ ಶೈಲಿ, ಕುಮಾರವ್ಯಾಸ, ಶಿಶುನಾಳಷರೀಫರ ಸಾಹಿತ್ಯ, ಇಪ್ಪತ್ತನೆಯ ಶತಮಾನದಲ್ಲಿ ಕುವೆಂಪು, ಬೇಂದ್ರೆ, ಮಾಸ್ತಿ, ರಾಜರತ್ನಂ ಅವರ ಸಾಹಿತ್ಯದಿಂದ ಪ್ರಭಾವಿತರಾದರು. ಕಾಮೂ, ಕಾಫ್ಕ ಮುಂತಾದ ಪಾಶ್ಚಾತ್ಯ ಬರಹಗಾರರ ಪ್ರಭಾವವನ್ನು ಕೂಡ ಒಪ್ಪಿಕೊಂಡರು. ಇದರ ಜೊತೆಗೆ ಲೋಹಿಯಾರ ಸಮಾಜವಾದ,

---

೨. ಪಿ.ಲಂಕೇಶ್ – ಪ್ರಸ್ತುತ– ಮುನ್ನುಡಿ, ಪುಟ. ೧೩.

ಗಾಂಧೀಜಿಯ ಅಹಿಂಸಾವಾದಗಳನ್ನು ತಮ್ಮ ಸಾಹಿತ್ಯದಲ್ಲಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ನವ್ಯ ಕಾವ್ಯದ ಮೂಲಕ ಪ್ರಾರಂಭವಾದ ಪಿ.ಲಂಕೇಶರ ಬರವಣಿಗೆ ಕಾವ್ಯ, ಕಥೆ, ಕಾದಂಬರಿ, ನಾಟಕ ಹೀಗೆ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಹಾಯ್ದು ಅನನ್ಯ ಸಿದ್ಧಿಯನ್ನು ಪಡೆದಿದೆ. ಮಾನವನ ಸಂಭಾವಿತತನದ ಸೋಗಿನ ಹಿಂದಿರುವ ಸಣ್ಣತನಗಳನ್ನು ಬಯಲಿಗೆಳೆಯುವುದು ಪಿ.ಲಂಕೇಶರ ಬರವಣಿಗೆಯ ವೈಶಿಷ್ಟ್ಯ. ನೇರ ನಡೆ–ನುಡಿ, ಪ್ರಾಮಾಣಿಕತೆ, ಅವಮಾನದ ಅಸಹಿಷ್ಣುತೆ, ಸ್ವಾಭಿಮಾನ, ನೈಜ ಜೀವಂತಿಕೆಗಳಿಗೆ ಪ್ರಾಮುಖ್ಯ ನೀಡುವ ಅವರ ಕಥನ ಬರವಣಿಗೆಯ ಶೈಲಿಯು ವಿಶಿಷ್ಟ ಬಗೆಯದು.

ಸಾಹಿತ್ಯ ಯಾವತ್ತಿಗೂ ವ್ಯಕ್ತಿ ಮತ್ತು ಸಮಾಜಗಳ ಬಹುರ್ಮುಖೀ ನೆಲೆಯನ್ನು ಕಟ್ಟುತ್ತಿದ್ದರೆ, ಲೇಖಕ ಅದರ ಅಂತರ್ಮುಖೀ ಶೋಧನೆಯಲ್ಲಿ ತೊಡಗಿರುತ್ತಾನೆ. ಪಿ.ಲಂಕೇಶರು ತಮ್ಮನ್ನು ತಾವು ಗುರುತಿಸಿಕೊಂಡ ನವ್ಯ ಸಾಹಿತ್ಯ ಅಂತರ್ಮುಖತೆಗೆ ಹೆಚ್ಚು ಒತ್ತು ನೀಡಿದ ಸಂದರ್ಭದಲ್ಲಿ ಲಂಕೇಶರು ಅಲ್ಲಿದ್ದುಕೊಂಡೇ ಧ್ವನಿ, ಪ್ರಜ್ಞಾ ಪ್ರವಾಹ ತಂತ್ರ, ಚಮತ್ಕಾರ, ದ್ವಂದ್ವಗಳಂಥ ಕಾಯಕ ಶ್ರೀಮಂತಿಕೆಯ ಜೊತೆಗೆ ಜನರನ್ನು ತಲುಪಲು ಸೃಜನಶೀಲತೆಯ ಹತ್ತಾರು ಮಾಧ್ಯಮಗಳನ್ನು ಹುಡುಕಿಕೊಂಡರು. ಅಂದರೆ ಪಿ.ಲಂಕೇಶರ ಸಮಗ್ರ ಸಾಹಿತ್ಯ ಹತ್ತಾರು ಮಾರ್ಗಗಳನ್ನು ಹುಡುಕಿಕೊಂಡ ಕಾರಣದಿಂದಲೇ ಅದು ಜನಪರ ಕಾಳಜಿಯಾಯಿತು.

ಜನರನ್ನು ತಲುಪಲು ಸಾಧ್ಯವಾಗುವ ಅದು ಯಾವುದೇ ಜನಪ್ರಿಯ ಮಾಧ್ಯಮವಾಗಲಿ ಸೃಜನಶೀಲವೆನಿಸಿದರೆ ಅಲ್ಲಿ ಪಿ.ಲಂಕೇಶರ ಪ್ರಯೋಗವೊಂದು ಖಾತರಿ. ಅದನ್ನು ಹೇಳಿಕೊಂಡೇ ಬರೆದ ಪಿ.ಲಂಕೇಶರು ತಾವು ಹೇಳಬೇಕಾದ್ದನ್ನು ಪತ್ರಿಕಾ ಓದುಗರಿಗೆ ಅದರದ್ದೇ ಭಾಷೆಯಲ್ಲಿ, ಸಾಹಿತ್ಯದ ಓದುಗರಿಗೆ ಅದರದ್ದೇ ಪರಿಭಾಷೆಯಲ್ಲಿ, ಸಿನಿಮಾ ವೀಕ್ಷಕರಿಗೆ ಅದರದ್ದೇ ರೀತಿ ನೀತಿಗಳಲ್ಲಿ, ರಂಗಭೂಮಿ ಅಭಿರುಚಿ ಉಳ್ಳವರಿಗೆ ಅದರದ್ದೇ ಸೂತ್ರಗಳಲ್ಲಿ ಹೇಳಿದರು. ಹಾಗೇ ಹೇಳುವ ಮೂಲಕ ಅವರು ಜನರನ್ನು ತಲುಪಿದರು. ಹಾಗೆ ತಲುಪುವಾಗ ಅವರ ಎಲ್ಲ ಸೃಜನಶೀಲ ಬರಹಗಳನ್ನು ಅವರು ಎಲ್ಲ ಮಾಧ್ಯಮಗಳಿಗೂ ಅಳವಡಿಸಲಿಲ್ಲ. ಅವರು ಬರೆದ ಮೂರು ಕಾದಂಬರಿಗಳನ್ನು ನಾವಿಂದು ದೃಶ್ಯ ಮಾಧ್ಯಮಕ್ಕೆ ಅಳವಡಿಸಿರುವುದನ್ನು ನೋಡುತ್ತೇವೆ. ಅವರ 'ಬಿರುಕು'ವನ್ನು 'ಪಲ್ಲವಿ' ಎಂಬ ಹೆಸರಿನಲ್ಲಿ ೧೯೭೭ರಲ್ಲಿ ದೃಶ್ಯ ರೂಪಕ್ಕೆ ಅಳವಡಿಸಿದರು. ಅದು ತಮ್ಮ ಅಭಿವ್ಯಕ್ತಿಯ ಕೃತಿ. ಯಾವುದೇ ಜನಪ್ರಿಯ ಮಾಧ್ಯಮದಲ್ಲಿ ಬರಲಿ ಅದು ಕೇವಲ ವಾಹಕವಷ್ಟೇ, ನಿಜದ ನೆಲೆಯನ್ನೇ ಶೋಧಿಸುವುದು ಕಥಾನಕ ಮಾತ್ರ ಎಂಬ ತಿಳಿವಳಿಕೆಯುಳ್ಳ ವಿಶಿಷ್ಟ ಲೇಖಕ ಪಿ.ಲಂಕೇಶ್. "ಪ್ರೋಸ್ ಬರೆಯುವುದು ರಿಯಲಿ ಚಾಲೆಂಜಿಂಗ್ ಯಾಕೆ ಚಾಲೆಂಜಿಂಗ್ ಎಂದರೆ ಅಲ್ಲಿ ಮನುಷ್ಯತನದ ಸುಳ್ಳು, ಸತ್ಯ, ಪೋಸಿಂಗ್ ಎಲ್ಲವೂ ಸುಲಭವಾಗಿ

ಗೊತ್ತಾಗುತ್ತಿರುತ್ತದೆ."[೩] ಪಿ.ಲಂಕೇಶರ ಈ ಮನುಷ್ಯ ಸಂಬಂಧಗಳ ತುಡಿತ ಮತ್ತು ಸೂಕ್ತ ತಳಮಳ ಅವರ ಕಥಾನಕಗಳಲ್ಲಿ ಎಷ್ಟರಮಟ್ಟಿಗೆ ಸಂಚರಿಸಿವೆಯೆಂಬ ಶೋಧನೆ ಸಂಶೋಧನೆಯ ಪ್ರಸ್ತುತ ಮಹಾ ಪ್ರಬಂಧದ ಸ್ವರೂಪದಲ್ಲಿ ದಾಖಲಾಗಿವೆ. ಅವುಗಳ ಸೂಕ್ಷ್ಮ ವಿಶ್ಲೇಷಣೆಗಳನ್ನು ನಾಲ್ಕು ಅಧ್ಯಾಯಗಳಲ್ಲಿ ಸಿದ್ಧಪಡಿಸಲಾಗಿದೆ.

ವಿಶೇಷವಾಗಿ ಪಿ.ಲಂಕೇಶರ ಕೃತಿಗಳ ಮನುಷ್ಯ ಸಂಬಂಧದ ಸ್ವರೂಪವನ್ನೇ ಅಧ್ಯಯನದ ಉದ್ದೇಶವಾಗಿಟ್ಟುಕೊಂಡು ಅವರ ಬರಹಗಳ ತೀವ್ರತೆಯನ್ನು ಗಮನಿಸಿದರೆ ಅವರದ್ದು ಸದಾ ಮನುಷ್ಯನ ಸೂಕ್ಷ್ಮ ಸಂವೇದನೆಗಳಿಗೆ ದನಿಗೂಡಿಸುವ ಚಿಂತನೆ ಹಾಗೂ ಚಡಪಡಿಕೆ. ಲಂಕೇಶರು ಕಂಡದ್ದನ್ನು ನೇರವಾಗಿ ಯಾವ ಇರಿಸುಮುರಿಸು ಇಲ್ಲದೆ ಬರೆದವರು, ಯಾರಿಗೂ ಅಂಜದೆ ಅಳುಕದೆ ಇದ್ದವರು, ಒಂದು ಕಾಲಕ್ಕೆ ಕರ್ನಾಟಕವನ್ನೇ ಪ್ರತಿನಿಧಿಸುವಂತೆ ಇಡೀ ರಾಜಕೀಯ ಮುತ್ಸದ್ಧಿಗಳ ಬಗೆಗೆ ಬರೆದವರು. ಇಡೀ ರಾಜಕಾರಣವನ್ನು ಪತ್ರಿಕೆಯ ಮೂಲಕ ಲೀಲಾಜಾಲವಾಗಿ ಬರೆಯುತ್ತಿದ್ದು ಕರ್ನಾಟಕವನ್ನೇ ನಿಯಂತ್ರಿಸುವ ಪ್ರತಿಭಾಶಕ್ತಿ ಪಿ.ಲಂಕೇಶರದಾಗಿತ್ತು. ಇವರು ಯಾವುದನ್ನು ತಿದ್ದಿತೀಡಿ ಬರೆದವರಲ್ಲ. ಅನಿಸಿದ್ದನ್ನು ನೇರವಾಗಿ ದಾಖಲು ಮಾಡುವ ವ್ಯಕ್ತಿಯಾಗಿದ್ದರು. ಹಾಗಾಗಿ ಪಿ.ಲಂಕೇಶರು ಒಬ್ಬ ವ್ಯಕ್ತಿಯಲ್ಲ ಬೆಂಕಿಯ ಬುಗ್ಗೆ. ಪ್ರಸ್ತುತ ಪ್ರಬಂಧ ಅವರ ಅಪ್ಪಟ ಮನುಷ್ಯ ಕಾಳಜಿಯ ಜೀವನದ ಜನಜಾಗೃತಿಯ ವಿವರಗಳನ್ನು ಹುಡುಕುವ ನಿಟ್ಟಿನಲ್ಲಿ ಸದಾ ಎಚ್ಚರದ ಪ್ರಜ್ಞೆಯ ಕಥಾನಕಗಳ ಸ್ಪಷ್ಟರೂಪಗಳನ್ನು ಮಹಾಪ್ರಬಂಧದ ಶೋಧನೆಯಲ್ಲಿ ಸಂಶೋಧಿಸುತ್ತದೆ. ಸಾಹಿತ್ಯ ಪರಿಭಾಷೆಯಲ್ಲಿ ಸಾಧಿಸಿದ್ದೇನು? ಕಂಡುಕೊಂಡಿದ್ದೇನು? ಆದದ್ದೇನೆಂಬ ಸತ್ಯಗಳನ್ನು ಹುಡುಕುವ ಕುತೂಹಲವೇ ಪ್ರಸ್ತುತ ಮಹಾಪ್ರಬಂಧದ ಆಶಯ.

ಒಟ್ಟಾರೆ ಅವರ ಎಲ್ಲ ಬರವಣಿಗೆಯ ಒಟ್ಟು ಆಶಯವನ್ನು ಗಮನಿಸಿದರೆ ಅದು ಮನುಷ್ಯ ಸಂಬಂಧಗಳ ಜೀವನದ ವಿಲಕ್ಷಣ ತಿರುವುಗಳಿಗೆ ಪ್ರತಿಕ್ರಿಯೆ ನೀಡುವ ಅಕ್ಷರದ ವಕ್ತಾರಿಕೆ ಎನಿಸುತ್ತದೆ. ಅದರಲ್ಲೂ ಕಥಾನಕಗಳನ್ನು ಕಟ್ಟುವಾಗ ಮನುಷ್ಯ ಸಂಬಂಧಿತ ಪರಿಸರದಲ್ಲಿ ವ್ಯಕ್ತಿ ಮತ್ತು ಸಮಾಜಗಳ ಪರಸ್ಪರ ತಿಳುವಳಿಕೆಗಳ ತೀವ್ರ ಚರ್ಚೆಗೆ ಸಂಬಂಧಿಸಿದಂತೆ ಕಾಣುತ್ತದೆ. ಮನುಷ್ಯತ್ವ ಮತ್ತು ಅಮಾನುಷ ಕ್ರೌರ್ಯಗಳ ಜಟಿಲ ಸಂಘರ್ಷಗಳನ್ನು ತಾಯ್ತನದ ಸೋದರಸಂಬಂಧಗಳು ಹುಟ್ಟುಹಾಕಿದ ಕುಟುಂಬ ಪರ ಕಾಳಜಿಗಳು ಅವರನ್ನು ಕಾಡಿದ್ದಿದೆ. ತಾನು ಕಂಡ ದೇಸೀಯ ಸಮಾಜದ ಜೀವ ವೈವಿಧ್ಯವನ್ನು ಕಟ್ಟುವಾಗ ತಮ್ಮ ಅನುಭವ ತೀವ್ರತೆಯ ಜೊತೆ ಜೊತೆಗೆ ತಮ್ಮ ಕಾಲದ ಸಾಹಿತ್ಯ ದಿಗ್ಗಜರ ಪ್ರೇರಣೆ ಮತ್ತು ಪ್ರಭಾವಗಳನ್ನು ದಕ್ಕಿಸಿಕೊಂಡ

---

೩. ಡಾ. ನಟರಾಜ್ ಹುಳಿಯಾರ್ – ಇಂತಿ ನಮಸ್ಕಾರಗಳು, ಪು. ೬೨.

ಲಂಕೇಶರು ಎಲಿಯಟ್, ಲೀವೀಸ್, ರಿಚರ್ಡ್ಸ್, ಎಜ್ರಾಪೌಂಡ್ ಮುಂತಾದವರು ಬಳಸುತ್ತಿದ್ದ ಅಕ್ಷರ ರೂಪದ ತಾಂತ್ರಿಕ ಪರಿಕರಗಳನ್ನು ಗಮನಿಸಿದ್ದಿದೆ. ಮುಂದೆ ಅವರ ನಾಟಕಗಳು ಮತ್ತು ಕಥಾನಕಗಳ ಪಾತ್ರ ಚಿತ್ರಣದಲ್ಲಿ ಹಾಸುಹೊಕ್ಕಾಗಿ ಕಾಣಿಸುವ ಪ್ರಜ್ಞಾಪ್ರವಾಹ ತಂತ್ರ, ಅಸ್ತಿತ್ವವಾದ, ಅಸಂಗತವಾದ ಜೊತೆಗೆ ಲೋಹಿಯವಾದ ಗಂಭೀರವಾದ ಥಿಯರಿಗಳು ಅವರನ್ನು ಹೇಗೆ ಬಿಡದೆ ಹಿಂಬಾಲಿಸಿವೆ ಎಂಬುದನ್ನು ಪ್ರಸ್ತುತ ಮಹಾಪ್ರಬಂಧ ಮಾಡುತ್ತದೆ.

ತಮ್ಮ ಸಾಹಿತ್ಯ ಹಾಗೂ ಜನಜಾಗೃತಿ ಚಳವಳಿಯ ಪ್ರೇರಣಾ ಶಕ್ತಿಯ ಪ್ರಭಾವದಿಂದ ೨೦ನೇಯ ಶತಮಾನದ ಕರ್ನಾಟಕದ ಸಂಸ್ಕೃತಿಯ ಒಂದು ಭಾಗವಾಗಿ ಹೋದವರು ಪಿ. ಲಂಕೇಶ್. ಆದರ್ಶ ಮತ್ತು ವಾಸ್ತವಗಳ ಸ್ಪಷ್ಟ ಕಲ್ಪನೆ ಲಂಕೇಶರಿಗಿದ್ದಂತಿದೆ. ವ್ಯವಸ್ಥೆಯ ವೈಭವೀಕರಣ ಅವರಿಗೆ ಮೆಚ್ಚುಗೆಯಾಗುತ್ತಿರಲಿಲ್ಲ. ಅರ್ಥಹೀನ ಸಹಾನುಭೂತಿ ಅವರ ಜಾಯಮಾನವಲ್ಲ ಈ ನೆಲದ ಮಾನವ ಸಂಬಂಧಗಳ ಬಗೆಗೆ ಅವರ ಜೀವಪರ ಕಾಳಜಿ ಇದೆ. ಅವರು ಬರೆದ 'ಮುಸ್ಸಂಜೆಯ ಕಥಾ ಪ್ರಸಂಗ'ದ ಅವ್ವ (ರಂಗವ್ವ) 'ಅಕ್ಕ'ದ ದೇವೀರಿ, 'ಬಿರುಕು'ವಿನ ಶಾಂತ, 'ನಮ್ಮ ನಡುವಿನ ಹುಡುಗ', 'ಮೃತ' ದಂತ ಕಥೆಗಳಲ್ಲಿ ನೆಲದನಿಯ ಸಂಬಂಧಗಳ ಸೂಕ್ಷ್ಮ ಸಂಘರ್ಷಗಳನ್ನು ಕಟ್ಟುತ್ತವೆ. ಮನುಷ್ಯ ಸಂಬಂಧಗಳು ಒಡೆಯುವ ಘಟನೆಗಳು ನಡೆಯುತ್ತವೆ. 'ಉಮಾಪತಿಯ ಸ್ಕಾಲರ್ ಶಿಫ್ ಯಾತ್ರೆ', 'ಕಲ್ಲುಕರಗುವ ಸಮಯ' ಕತೆಗಳು ಜಾತ್ಯಾತೀತ ಮೌಲ್ಯಗಳ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧದ ಆಶಯಗಳನ್ನು ಕಟ್ಟುವ ಪ್ರಯೋಗಗಳಾಗಿ ಕಾಣಿಸುತ್ತವೆ. "ಲಂಕೇಶರು ಅಸಹಾಯಕ ಸ್ಥರದಲ್ಲಿದ್ದೂ ಬದುಕನ್ನು ಪ್ರೀತಿಸುವ ಆಶಯಗಳನ್ನು ಗೌರವದಿಂದ ಕಾಣುತ್ತಾರೆ."[೪] ಹೀಗೆ ಕಟ್ಟಿಕೊಂಡ ಜೀವ ವೈವಿಧ್ಯದ ಮನುಷ್ಯ ಸಂಬಂಧದ ಸ್ವರೂಪಗಳನ್ನು ಪ್ರಬಂಧ ಸಂಶೋಧಿಸುತ್ತದೆ.

ಸಾಮಾಜಿಕ ಪಿಡುಗುಗಳ ಮತ್ತು ಧೋರಣೆಗಳ ಬಗೆಗೆ ಪಿ.ಲಂಕೇಶರು ಬರೆಯುತ್ತಾ ಕೂರಲಿಲ್ಲ. ಸದಾ ಕಾಯಕ ಜೀವಿಯಂತೆ ಕರ್ನಾಟಕ ಸಾಂಸ್ಕೃತಿಕ ಲೋಕದಲ್ಲಿ ಎಲ್ಲಿ ಏನೇ ನಡೆದರೂ ತಮ್ಮ ಮನೆಯ ಕಾರ್ಯವೇನೋ ಎಂಬಂತೆ ದೌಡಾಯಿಸುತ್ತಿದ್ದರು. ಮಾನವೀಯ ಸಂಬಂಧಗಳಿಗೆ ಮಿಡಿಯುವ ಮನಸ್ಸು ಲಂಕೇಶರದು. ತಮ್ಮ ಕಥೆಗಳಲ್ಲಿ ದಮನಿತ ವರ್ಗದ ಶಕ್ತಿಗೆ ಪ್ರೇರಣೆ ಒದಗಿಸುವಂತೆ ಬರೆದರಷ್ಟೇ ಅಲ್ಲ. ಹಾಗೆಯೇ ಅನೂಚಾನವಾಗಿ ಪ್ರತಿಕ್ರಿಯಿಸುತ್ತಿದ್ದರು. ರಾಮಮನೋಹರ ಲೋಹಿಯಾ ಅವರ ಸಮಾಜವಾದಿ ಧೋರಣೆ, ಶಾಂತವೇರಿ ಗೋಪಾಲಗೌಡ, ಜೆ.ಎಚ್.ಪಟೇಲ್, ಪ್ರೊ. ಎಂ.ಡಿ.ನಂಜುಂಡಸ್ವಾಮಿಯವರಂಥಾ ಸ್ನೇಹ ಬಳಗವಿತ್ತು. ಸಮಾಜವಾದಿ ಚಿಂತನೆಗಳಿಂದ ಪ್ರಭಾವಿತರಾದ ಯು.ಆರ್.ಅನಂತಮೂರ್ತಿ,

---

೪. ಡಾ. ಎನ್.ಕೆ.ಕೋದಂಡರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂದರ್ಭ, ಪುಟ. ೨೧೮.

ಪೂರ್ಣಚಂದ್ರ ತೇಜಸ್ವಿಯವರ ಸಮಕಾಲೀನರಾದ ಪಿ.ಲಂಕೇಶ್ ಗಮನಸೆಳೆಯುವಷ್ಟು ಕ್ರಿಯಾಶೀಲರಾಗಿದ್ದರು. ದಲಿತ ವರ್ಗಕ್ಕೆ ಸೇರಿದ ಮಾಜಿ ಸಚಿವ ಬಸವಲಿಂಗಪ್ಪ ಎಪ್ಪತ್ತರ ದಶಕದಲ್ಲಿ ಕನ್ನಡ ಸಾಹಿತ್ಯದಲ್ಲಿ ಬೂಸಾ ತುಂಬಿದೆ ಎಂಬ ಮಾತಿಗೆ ಎದ್ದ ವಾಗ್ವಾದ ಕೊನೆಗೆ ಜಾತಿ ಚಳುವಳಿಯಾಗಿ ರೂಪುಗೊಂಡಿತ್ತು. ಮೇಲ್ಜಾತಿಗೆ ಸೇರಿದವರು ಬಸವಲಿಂಗಪ್ಪನವರ ವಿರುದ್ಧ ಜಾತಿಯ ಹೆಸರಿನಲ್ಲಿ ಕೂಗೆಬ್ಬಿಸಿದಾಗ ಪಿ.ಲಂಕೇಶರು ಬಸವಲಿಂಗಪ್ಪನವರ ಪರ ನಿಂತು ಬಡಿದಾಡಿದ ಹಲವು ಕಡೆ ಹಲ್ಲೆಯ ಯತ್ನಗಳಿಗೂ ಒಳಗಾದ ಪ್ರಸಂಗಗಳನ್ನಿಲ್ಲಿ ನೆನೆಯಬೇಕು. ಪೂರ್ಣಚಂದ್ರತೇಜಸ್ವಿಯವರು ತಮ್ಮ ಸೃಜನಶೀಲ ಬರಹಗಳಲ್ಲಿ ಸ್ವಾತಂತ್ರ್ಯೋತ್ತರ ಭಾರತವನ್ನು ಗ್ರಾಮಗಳ ನೆಲೆಯಲ್ಲಿ ವಿಶ್ಲೇಷಿಸುತ್ತ ವ್ಯಕ್ತಿಯ ಸಾಮಾಜಿಕ ಸಂದರ್ಭವನ್ನು ವೈನೋದಿಕ ಆಯಾಮಗಳೊಂದಿಗೆ ಅನಾವರಣ ಮಾಡಿದರೆ ಅನಂತಮೂರ್ತಿಯವರು ಇದೇ ಅಂಶವನ್ನು ವ್ಯಕ್ತಿಯ ಅತ್ಯಂತ ಖಾಸಗಿ ಕ್ಷೇತ್ರಗಳೆನಿಸಿದ ಹುಟ್ಟು-ಸಾವು ನಡುವಿನ ಕುಟುಂಬ, ಕಾಮ, ಪ್ರೇಮ ಮೊದಲಾದವುಗಳ ವ್ಯಕ್ತಿಗತ ಆಂತರ್ಯಗಳನ್ನು ಅದರಲ್ಲಿ ಬಹಿರ್ಮುಖ ಆವರಣದೊಂದಿಗೆ ವಿಶ್ಲೇಷಿಸುತ್ತಾರೆ. ಲಂಕೇಶರು ಇವರಿಬ್ಬರಿಗಿಂತ ಭಿನ್ನವಾದ ಜಾಡನ್ನು ತುಳಿಯುತ್ತಾರೆ. ವ್ಯಕ್ತಿಯ ಕನಸು ಮತ್ತು ಕಾಮನೆಗಳು ಏನೆಲ್ಲ ಆಮಿಷಗಳೊಂದಿಗೆ ಮನುಷ್ಯ ಸಂಬಂಧದಲ್ಲಿ ಸಂವಹನ ಸಾಧಿಸಿಕೊಳ್ಳುವಲ್ಲಿ ವಿಫಲಗೊಳ್ಳುತ್ತ, ಸೋಲುಗಳೇ ಪ್ರಧಾನವಾಗುತ್ತ, ಅವೆಲ್ಲದರ ನಡುವೆ ಭವಿಷ್ಯದ ಬೆಳಕಿಗಾಗಿ ತಡಕಾಡುತ್ತ, ಅಸ್ತಿತ್ವಕ್ಕಾಗಿ ಅನವರತ ಪ್ರಯತ್ನಿಸುತ್ತ ಇರುವ ಮನುಷ್ಯರೇ ಪಿ.ಲಂಕೇಶರ ಕಥಾನಾಯಕರು. ಪ್ರಸ್ತುತ ಮಹಾಪ್ರಬಂಧದಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಸಂಶೋಧನೆ ಕೈಗೊಳ್ಳುವ ನಿಟ್ಟಿನಲ್ಲಿ ಲಂಕೇಶರ ಕಥನ ಸಾಹಿತ್ಯದ ವೈಶಿಷ್ಟ್ಯತೆಯನ್ನು ತಿಳಿಸಲಾಗಿದೆ.

ಪಿ.ಲಂಕೇಶರ ಸಾಹಿತ್ಯ ಕೃತಿಗಳ ಸಂಶೋಧನೆಗೆ ಮುಖ್ಯಕಾರಣ ಅವರ ನೇರ ಮತ್ತು ನೈಜ ವ್ಯಕ್ತಿತ್ವ, ಮನುಷ್ಯನ ಸಣ್ಣತನ, ಮುಗ್ಧತೆ, ಪೊಳ್ಳು ಸ್ಥಿತಿಗತಿಗಳನ್ನು ಬಹಿರಂಗಗೊಳಿಸುವ ಮಾಧ್ಯಮವಾಗಿ ಸಾಹಿತ್ಯವನ್ನು ದುಡಿಸಿಕೊಂಡ ಕನ್ನಡದ ಮೇರು ಪ್ರತಿಭೆ. ನವ-ವಸಾಹತುಶಾಹಿಯಿಂದ ಉಂಟಾದ ಬದುಕಿನ ಪಲ್ಲಟ, ಜಿಜ್ಞಾಸೆ, ಸಂಕೀರ್ಣತೆ, ಮನಸ್ಸಿನಾಳದ ಭೋಳೆತನ, ಖಿನ್ನ ಮನಸ್ಸಿನ ಉದ್ವಿಗ್ನತೆ, ತೀಕ್ಷ್ಣವಾದ ವಿಡಂಬನೆಗಳನ್ನು ಮನುಷ್ಯ ಸಂಬಂಧದ ಹಿನ್ನೆಲೆಯಲ್ಲಿ ಬರೆದಿದ್ದಾರೆ. ನಗರಾಭಿಮುಖ ಚಲನೆ, ಪಟ್ಟಣ - ಹಳ್ಳಿಯ ಮುಖಾಮುಖಿ ಅಲ್ಲಿ ನಡೆಯುವ ಪಟ್ಟಣ ಪಂಚಾಯ್ತಿ, ಜಾತಿ ಮತ್ತು ವೃತ್ತಿಗಳು ಗಂಡು-ಹೆಣ್ಣಿನ ಸಂದರ್ಭಗಳು ಲಂಕೇಶರ ಕಥನ ಸಾಹಿತ್ಯದಲ್ಲಿ ರಕ್ತಮಾಂಸದೊಟ್ಟಿಗೆ ಮಿಡಿಯುತ್ತವೆ. ಈ ಹಿನ್ನೆಲೆಯಲ್ಲಿ

ಕೈಗೆತ್ತಿಕೊಂಡಿರುವ ಪ್ರಸ್ತುತ ಸಂಶೋಧನ ಮಹಾಪ್ರಬಂಧದ ಶೀರ್ಷಿಕೆಯೇ **"ಪಿ.ಲಂಕೇಶರ ಕಥನಸಾಹಿತ್ಯ: ಮನುಷ್ಯ ಸಂಬಂಧಗಳ ಸ್ವರೂಪ"**.

ಪಿ.ಲಂಕೇಶರ ಕಥನ ನೇರವಾಗಿ ಮನುಷ್ಯ ಸಂಬಂಧಗಳ ಅಂತರಂಗದ ಆಶೋತ್ತರಗಳನ್ನು ದಾಖಲಿಸುತ್ತದೆ. ಹಾಗಾಗಿಯೇ ಅದರ ಅಭಿವ್ಯಕ್ತಿಗಾಗಿ ಅವರು ಕಥೆ ಮತ್ತು ಕಾದಂಬರಿಗಳಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ರಚಿಸ ಹೊರಡುತ್ತಾರೆ. ಅವರ ಕಾದಂಬರಿಗಳು ಹಾಗೂ ಪ್ರಾತಿನಿಧಿಕ ಕಥಾವಲಯದ ಕಥಾನಕಗಳಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಚರ್ಚಿಸಬೇಕೆನ್ನುವುದು ಪ್ರಸ್ತುತ ಸಂಶೋಧನೆಯ ಉದ್ದೇಶ ಈ ಕಾರಣಕ್ಕಾಗಿ ಪ್ರಸ್ತುತ ಶೀರ್ಷಿಕೆಯಡಿಯಲ್ಲಿ ಈ ಮಹಾಪ್ರಬಂಧವು ತನ್ನ ಸಂಶೋಧನೆಯ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡಿದೆ.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕತೆಯ ಗಂಧ ಗಾಳಿಯ ಸೋಂಕು ಸುಳಿಯದ ಕೋನಗವಳ್ಳಿಯ ಪಿ.ಲಂಕೇಶ್ ತಾವು ಬರೆದ 'ಅವ್ವ' – ಕವಿತೆ ಹೊಸ ತಲೆಮಾರಿನ ಕರುಳುಬಳ್ಳಿಯ ತುಡಿತದಂತೆ ಕಂಡರೂ ತನ್ನ ತಾಯಿಯಲ್ಲಿದ್ದ ಅವಿರತ ಬಿಡುವಿನ ದುಡಿಮೆ. ತನ್ನ ಅಸ್ತಿತ್ವಕ್ಕೆ ಧಕ್ಕೆ ತರುವವರೊಂದಿಗಿನ ಕಾದಾಟ, ಅನ್ಯಾಯವನ್ನು ಪ್ರತಿಭಟಿಸುವ ತಾಯಿಯ ವೈಭವೀಕರಣವನ್ನು ಅವರು ಮಾಡುವುದಿಲ್ಲ. ತಾಯ್ತನದ ಮಿಡಿತದಲ್ಲಿ ಕಾವ್ಯಕಟ್ಟುತ್ತಾ ಸಾರ್ವತ್ರೀಕರಿಸುವ ಸಹಜ ನಡೆ ಕಾಣಿಸುತ್ತದೆ. ಲಂಕೇಶರಲ್ಲಿ ಕಾಣುವ ಪ್ರತಿಭಟಿಸುವ ದಿಕ್ಕಾರದ ಧ್ವನಿ ಎಲ್ಲದಕ್ಕೂ ಉದ್ವಿಗ್ನಗೊಳ್ಳುವುದು ಕಡೆಗೆ ತಾನು ತನ್ನತನವನ್ನು ಕಾಪಾಡಿಕೊಳ್ಳುವ ಸ್ವಾರ್ಥ ಕೂಡ ಕರುಳುಬಳ್ಳಿಯ ಒಂದು ಬದುಕಿನ ಭಾಗವೇ ಹೌದು ಎಂಬುದನ್ನು ನಿಸ್ಸಂಕೋಚದಿಂದ ನಿರ್ವಚಿಸಿಕೊಳ್ಳುವ ಸ್ವಾಭಾವಿಕ ಸತ್ಯಗಳೇ ಲಂಕೇಶರನ್ನು ರೂಪಿಸಿದಂತಿದೆ. ಅದಕ್ಕೆ ತಾಯಿ ದೇವೀರಮ್ಮನ ಬಳುವಳಿ ಕಾರಣ ಎಂದು ತಿಳಿಯಬೇಕಾಗುತ್ತದೆ. 'ಅವ್ವ' ಕವಿತೆಯನ್ನು ಕಟ್ಟುವಾಗ ಲಂಕೇಶರ ಸೂಕ್ಷ್ಮ ಗ್ರಹಿಕೆ ಅತ್ತ ಕಡೆಯೇ ಬೆಳೆದಿದೆ ಎಂಬುದಕ್ಕೆ ಅದು ಸಾಕ್ಷಿಯಾದಂತಿದೆ. ಇಂಥ ಹಂಬಲವಿರುವ ಪಿ.ಲಂಕೇಶ್ ಕಥಾನಕದ ಶೋಧನೆಯು ಈ ಮಹಾಪ್ರಬಂಧದ ಉದ್ದೇಶವಾಗಿದೆ.

ನವ್ಯ–ನವ್ಯೋತ್ತರ ಸಾಹಿತ್ಯದ ಕಾಲದ ಮನುಷ್ಯನ ವರ್ತನೆಗಳನ್ನು, ಸಂಬಂಧಗಳನ್ನು, ಜನಜೀವನವನ್ನು ಲಂಕೇಶ್ ಗ್ರಹಿಸಿದ ರೀತಿ ಸತ್ಯವೂ ನಿಷ್ಠುರವೂ ಆದುದರಿಂದ ಲಂಕೇಶರ ಕುರಿತಂತೆ ಸಂಶೋಧನೆಯ ಕೆಲಸ ಎಲ್ಲಾ ಕಾಲಕ್ಕೂ ನಡೆಯುತ್ತಲೇ ಇರುತ್ತದೆ. ವಸಾಹತೋತ್ತರ ಭಾರತದಲ್ಲಿ ವ್ಯಕ್ತಿ ಮತ್ತು ಸಮಾಜ ತನ್ನ ಸ್ವಹಿತಾಸಕ್ತಿಯ ಗುಂಗಿನಲ್ಲೆ ಮೈಮರೆತು ಅಸ್ವಸ್ಥತೆಯಲ್ಲೇ

ನರಳಿ ಸಾಯುತ್ತದೆ. ಆ ಜೀವನ ಶೈಲಿಯ ಬದುಕಿನ ಸಂಬಂಧಗಳು ಎಲ್ಲಾ ವಿಭಾಗವನ್ನು, ಸಾಮಾಜಿಕ ಸಂಗತಿಗಳನ್ನು ಲಂಕೇಶ್ ತಮ್ಮ ಕಥಾನಕದಲ್ಲಿ ಬೆಳೆಸುವ ಪ್ರಯತ್ನ ಮಾಡಿದ್ದಾರೆ. ತಮ್ಮ ಬಾಲ್ಯ ಮತ್ತು ಶಾಲಾ ದಿನಗಳಲ್ಲಿ ಕಂಡ ಅನುಭವಗಳು ನೈತಿಕ ಶಕ್ತಿಯೊಂದಿಗೆ ಸಾಮಾಜಿಕವಾಗಿ ಮನುಷ್ಯತ್ವ ಕಣ್ಮರೆಯಾಗಿರುವುದಕ್ಕೆ ಲೇಖಕರು ಆತಂಕಗೊಳ್ಳುತ್ತಾರೆ. ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ನಾಗರಿಕ ಸಮಾಜವೆಂಬುದು ಮನುಷ್ಯ ಸಂಬಂಧಗಳು ಮತ್ತು ಸಮಾಜಗಳ ನಡುವಿನ ಸಕಾರಾತ್ಮಕ ಸ್ಪಂದನೆಯೇ ಇಲ್ಲದೆ ಬಳಲುತ್ತಿರುವುದಕ್ಕೆ ಕಾರಣಗಳನ್ನು ಹುಡುಕುವ ಲಂಕೇಶರು ತಮ್ಮ ಬಾಲ್ಯದ ದಿನಗಳ ಸಾಂಪ್ರದಾಯಿಕ ವ್ಯವಸ್ಥೆಯ ಜಾತಿ ಸಂಕರದ ಕಠೋರ ಸತ್ಯಗಳನ್ನು ಭೇಡಿಸುತ್ತಾರೆ. ಆ ಮೂಲಕ ನವ ನಾಗರಿಕ ಸಮಾಜದ ಆತ್ಯಂತಿಕ ನೀಚತನಗಳನ್ನೂ ತಮ್ಮ ಸಮೃದ್ಧ ಸಾಹಿತ್ಯದಲ್ಲಿ ಪರಿಶೀಲಿಸುತ್ತಾರೆ.

ಮನುಷ್ಯ ಸಂಬಂಧಗಳ ಹಿನ್ನಲೆಯಲ್ಲಿ ಜಾತಿ ಮತ್ತು ಸಾಮಾಜಿಕ ವಿವರಗಳು ಬಾಲ್ಯದಲ್ಲಿ ಕಂಡ ಸಂತೆ, ಉತ್ಸವ, ತೇರು, ಕುಸ್ತಿ, ಅಕ್ಷರ ಕಲಿಸುತ್ತಿದ್ದ ಮಾಸ್ತರರ ಕಿಲಾಡಿತನಗಳು, ತನ್ನ ಸುತ್ತಲಿನ ಮನುಷ್ಯರ ವರ್ತನೆಗಳು, ತನ್ನ ವಾರಗೆಯವರ ಆಟಾಟೋಪಗಳು, ಓದಿನ ಬಗೆಗಿನ ಅರಿವು, ರಾಷ್ಟ್ರೀಯ ಭಾವೈಕ್ಯತೆಯ ಚಿಂತನೆಗಳು, ರಾಷ್ಟ್ರೀಯ ಚಳವಳಿಗಳು, ಮೈಸೂರು ರಾಜ್ಯ ಸರ್ಕಾರಕ್ಕಾಗಿ ನಡೆದ ಹೋರಾಟಗಳು, ಪ್ಲೇಗು ಎಂಬ ಮಾರಿ ಈ ರೀತಿ ಎಲ್ಲದರ ಸವಿನೆನಪು ಲಂಕೇಶರಲ್ಲಿದ್ದು ಅವುಗಳ ಪ್ರಭಾವದಿಂದ ಪ್ರಜ್ಞೆಯಲ್ಲಿ ಮೂಡಿದ ಚಿಂತನೆಗಳು ಮುಂದೆ ತಮ್ಮ ಪ್ರಬುದ್ಧ ಲೇಖನಿಯಲ್ಲಿ ವ್ಯಕ್ತಪಡುವಾಗ ತಾವು ಬದುಕುತ್ತಿರುವ ವರ್ತಮಾನದ ಬದುಕಿಗೂ, ಈಗಾಗಲೇ ಪರಿಭಾವಿಸಿದ ತಮ್ಮ ದೇಸೀ ಬದುಕಿಗೂ ಇರುವ ಮನುಷ್ಯ ಸಂಬಂಧದ ಸೂಕ್ಷ್ಮತೆಗಳ ಅಂತರವನ್ನು ಒಬ್ಬ ಬರಹಗಾರನಾಗಿ ಗ್ರಹಿಸುತ್ತಾರೆ. ಹೀಗೆ ಜೀವಂತಿಕೆಯ ಜೀವನ ಪ್ರಕ್ರಿಯೆಗಳನ್ನು ತಮ್ಮ ಸಾಹಿತ್ಯದ ಮೂಲಕ ಕೃತಿಗಳಲ್ಲಿ ಅವರು ದಾಖಲಿಸಿದರು. ಆ ಮೂಲಕ ಕರ್ನಾಟಕದ ದಿನಮಾನಗಳಿಗೆ ಪ್ರತಿಸ್ಪಂದಿಸಿದರು. ಮನುಷ್ಯನ ನೀಚತನಗಳನ್ನು ಯಾವ ಎಗ್ಗೂ ಸಿಗ್ಗೂ ಇಲ್ಲದೆ ಬಹಿರಂಗಗೊಳಿಸಿದರೆಂಬ ಅವರ ಸಾಹಿತ್ಯದ ಧೋರಣೆಗಳು ಮನುಷ್ಯರ ಆಶಯಗಳನ್ನೇ ವ್ಯಕ್ತಪಡಿಸುತ್ತವೆ. ಇಂಥ ಮಾನವಪರ ಧೋರಣೆಯುಳ್ಳ ಪಿ.ಲಂಕೇಶರ ಕಥಾನಕಗಳಲ್ಲಿ ಸಾಮಾಜಿಕ ಪರಿಸರದಲ್ಲಿನ ಮನುಷ್ಯ ಸಂಬಂಧಗಳನ್ನು ಶೋಧಿಸುವುದೇ ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಸಮಾಜ ನಿಂತ ನೀರಲ್ಲ. ಅದು ಹರಿಯುವ ನೀರು, ಇಲ್ಲಿ ಬದಲಾವಣೆ ಸಹಜ ಆ ನಿರಂತರ ಬದಲಾವಣೆಯ ಪ್ರಕ್ರಿಯೆಗೆ ಒಳಪಡುವ ಸಮಾಜದಲ್ಲಿ ಹೊಸ ಹೊಸ ಆಶೆ-ಆಕಾಂಕ್ಷೆಗಳಿಗೆ ಇಂಬು ದೊರೆಯುತ್ತದೆ. ಬದುಕಿನ ಎಲ್ಲ ವಲಯದಲ್ಲೂ ಸಾಧನೆ ಮತ್ತು ಸಿದ್ಧಿ

ಕಂಡುಬರುತ್ತದೆ. ಸಾಹಿತ್ಯದ ಸತ್ಯ ಮತ್ತು ಸತ್ವ ಮನುಷ್ಯನ ಮನಸ್ಸಿನ ಮೇಲೆ ಉಂಟು ಮಾಡುವ ಪರಿಣಾಮ ತುಂಬಾ ಮಹತ್ವದ್ದು. ಈ ದೃಷ್ಟಿಯಿಂದ ನಿಷ್ಠುರ, ಪ್ರಾಮಾಣಿಕ ಹಾಗೂ ಶಿಸ್ತಿನ ಬರವಣಿಗೆಗೆ ಹೆಸರಾದ ಪಿ.ಲಂಕೇಶರ ಕಥನ ಸಾಹಿತ್ಯವನ್ನು ಪ್ರಸ್ತುತ ಸಂಶೋಧನ ಅಧ್ಯಯನದ ತೆಕ್ಕೆಗೆ ತೆಗೆದುಕೊಂಡು ಅದರ ವಸ್ತು, ಅನುಭವ, ಮತ್ತು ಭಾವ ಸ್ಪಂದನೆಗೆ ಒಂದು ಸ್ವರೂಪ ಕೊಡುವುದು. ಇವು ಮನುಷ್ಯ ಸಂಬಂಧಗಳ ಬದುಕಿನ ಮಿಡಿತದಡಿಯಲ್ಲಿ ಹೇಗೆ ಮನೆ ಮಾಡಿಕೊಂಡಿವೆಯೆಂಬುದನ್ನು ಅರಿತಿರುವುದೇ ಈ ಮಹಾಪ್ರಬಂಧದ ಉದ್ದೇಶ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಮಹಾ ಪ್ರಬಂಧದ ಪರಿಕಲ್ಪನೆ 'ಮನುಷ್ಯ ಸಂಬಂಧದ ಸ್ವರೂಪ'ವನ್ನು ಲಂಕೇಶರ ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಲಾಗಿದೆ. ಲಂಕೇಶರು ನವ್ಯ ಸಾಹಿತ್ಯದಲ್ಲಿ ತುಂಬ ವಿಪುಲವಾದ ಸಾಹಿತ್ಯವನ್ನು ಸೃಜನಾತ್ಮಕವಾಗಿ ಬಿತ್ತರಿಸಿದವರು. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ, ಪತ್ರಿಕೆ, ಬರಹ, ವೈಚಾರಿಕ ಲೇಖನ, ಸಿನಿಮಾ ನಿರ್ದೇಶನ ಹೀಗೆ ಹಲವು ಪ್ರಕಾರಗಳಲ್ಲಿ ವೈವಿಧ್ಯಮಯವಾದ ವಿಶಾಲ ಸಾಹಿತ್ಯ ಹಾಗೂ ಸಾಹಿತ್ಯೇತರ ಕ್ಷೇತ್ರವನ್ನು ಒಂದು ನಿರ್ದಿಷ್ಟಪಡಿಸಿದ ಮಹಾಪ್ರಬಂಧದ ವ್ಯಾಪ್ತಿಯಲ್ಲಿ ತರುವುದು ಕಷ್ಟಸಾಧ್ಯ. ಹೀಗಾಗಿ ಅಧ್ಯಯನದ ಅನುಕೂಲತೆಗೆ ಪಿ.ಲಂಕೇಶರ ಕಥನ ಸಾಹಿತ್ಯವನ್ನು ಕೇಂದ್ರೀಕರಿಸಿದೆ. ಇವರ ಕಾದಂಬರಿಗಳಾದ 'ಬಿರುಕು', 'ಮುಸ್ಸಂಜೆಯ ಕಥಾಪ್ರಸಂಗ', 'ಅಕ್ಕ' ಕಥಾಸಂಕಲನಗಳಾದ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಮತ್ತು ಇತರ ಕಥೆಗಳು' 'ನಾನಲ್ಲ ಮತ್ತು ಇತರ ಕತೆಗಳು', 'ಉಮಾಪತಿಯ ಸ್ಕಾಲರ್ ಶಿಫ್ ಯಾತ್ರೆ' ಮತ್ತು ಇತರ ಕತೆಗಳು', 'ಕಲ್ಲು ಕರಗುವ ಸಮಯ ಮತ್ತು ಇತರ ಕತೆಗಳು', 'ಉಲ್ಲಂಘನೆ ಮತ್ತು ಇತರ ಕತೆಗಳು', 'ಮಂಜುಕವಿದ ಸಂಜೆ ಮತ್ತು ಇತರ ಕತೆಗಳು', ಇವುಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹಾಗೆಯೇ ಸಾಂದರ್ಭಿಕವಾಗಿ ನವೋದಯ ಕವಿಗಳು, ಪ್ರಗತಿಶೀಲ ಕವಿಗಳು, ನವ್ಯ ಹಾಗೂ ದಲಿತ–ಬಂಡಾಯ, ಸ್ತ್ರೀವಾದಿ ಸಾಹಿತ್ಯ ಕೃತಿಗಳನ್ನು ಮತ್ತು ಲೇಖಕರನ್ನು ಈ ಸಂಶೋಧನೆಯಲ್ಲಿ ಪೂರಕವಾಗಿ ಚರ್ಚಿಸಲಾಗಿದೆ.

ಪಿ.ಲಂಕೇಶರನ್ನು ಕುರಿತಂತೆ ನಡೆದಿರುವ ಈವರೆಗಿನ ಅಧ್ಯಯನಗಳನ್ನು ಗಮನಿಸಿದಾಗ ಅವರ ಎಲ್ಲಾ ಸಾಹಿತ್ಯ ಕೃತಿಗಳು ಸಾಹಿತ್ಯಕ, ಸಮಕಾಲೀನ ಪ್ರಜ್ಞೆ ಮತ್ತು ಚಿಂತನಾ ಕ್ರಮಗಳ ತಾರ್ಕಿಕ ಚರ್ಚೆಗಳು ಪ್ರೇರಣೆ ಪಡೆದಿದ್ದು ವಸಾಹತೋತ್ತರ ಸಂದರ್ಭದ ಬದಲಾವಣೆಯ ಕಾಲದೊಳಗೆ. ಇಂಥ ಆಧುನಿಕ ಸಂದರ್ಭದ ಹೊಸ ಚಿಂತನೆಗಳ ಬದಲಾವಣೆಯನ್ನು ಕರ್ನಾಟಕದ ಜನಜೀವನ ಸ್ವೀಕರಿಸಿದಾಗ ಉಂಟಾದ ತಲೆಮಾರಿನ ಕಂಪನಗಳನ್ನು ಹೊಸದಕ್ಕೆ ತೆರೆದುಕೊಳ್ಳುವಾಗಿನ ಗ್ರಾಮ ಭಾರತದ ಸಂಗತಿಗಳನ್ನು ನಗರಕೇಂದ್ರಿತ, ವ್ಯಕ್ತಿಕೇಂದ್ರಿತ

ತಿಳುವಳಿಕೆಗಳನ್ನು ಕಟ್ಟಲು ಮನುಷ್ಯನ ಆ ಸಂದರ್ಭದಲ್ಲಿ ಉಂಟಾದ ವರ್ತನೆಗಳು, ತಲ್ಲಣಗಳು, ಸಾಮಾಜಿಕವಾಗಿ ಅವನು ವರ್ತಿಸುವ ರೀತಿ ಇವುಗಳನ್ನು ಕಟ್ಟಲು ಲಂಕೇಶರು ಕಥನ ಮಾರ್ಗವನ್ನೇ ಹುಡುಕಿಕೊಳ್ಳುತ್ತಾರೆ. ಹಾಗೆ ನಿರ್ವಹಿಸಿಕೊಂಡ ಅವರ ಜೀವನಾನುಭವ ನವ್ಯ ಸಾಹಿತ್ಯದ ಪ್ರಖರ ಆಧುನಿಕತೆಯಲ್ಲೇ ಮೈತಾಳಿದ್ದು. ಹಾಗೆ ನವ್ಯದ ಧೋರಣೆಗಳನ್ನು ಹೊತ್ತು ಬಂದರೂ ಎಲ್ಲೋ ಒಂದು ಕಡೆ ಮನುಷ್ಯ ಸಾಮಾಜಿಕವಾಗಿ, ಕೌಟುಂಬಿಕವಾಗಿ ಒಂದು ಬದುಕಿನ ಚೌಕಟ್ಟಿನಲ್ಲಿ ನಡೆಯುವ ಸಂಬಂಧಗಳ ಚರ್ಚೆಯ ಕಡೆಗೆ ಲಂಕೇಶರ ಕಥನಗಳು ಚಲಿಸುತ್ತವೆ. ಅಷ್ಟೊತ್ತಿಗಾಗಲೇ ಸಾಹಿತ್ಯ ಸೃಷ್ಟಿಯ ಹೊಸ ಮಾನವೀಯ ಸಂಚಲನಗಳು ಬದುಕಿನ ಅಳಬಂಡಗಳು ಪಶ್ಚಿಮ ದೇಶಗಳಲ್ಲಿ ಪ್ರಯೋಗಗೊಂಡ ಚಿಂತನಾ ನೆಲೆಗಟ್ಟಿನ ಸೃಷ್ಟಿಕ್ರಿಯೆ ಲಂಕೇಶ್ ಕಥನಗಳನ್ನು ಆಧುನೀಕರಣಗೊಳಿಸಿ ಪರಿಭಾವಿಸಿವೆ. ಹಾಗಾಗಿ ಮನುಷ್ಯನ ತಾಕಲಾಟ ಮತ್ತು ಅಂತಃಕರಣಗಳನ್ನು ಶೋಧಿಸುವ ಔಚಿತ್ಯವಿದೆ. ಸದಾ ಹೊಸದರ ಹುಡುಕಾಟಕ್ಕಾಗಿ ತುಡಿಯುವ ಎಚ್ಚರದ ಸೂಕ್ಷ್ಮ ಪ್ರಜ್ಞೆಗಳು ಹೇಗೆ ಸಾರ್ವಕಾಲಿಕವಾಗಿ ಚರ್ಚೆಗೆ ಒಳಗಾಗುತ್ತವೆ ಎಂಬುದರ ಔಚಿತ್ಯದ ಶೋಧನೆಗಾಗಿ ಪ್ರಸ್ತುತ ಮಹಾಪ್ರಬಂಧ ಸಂಶೋಧನಾ ವಿವರಣೆಯನ್ನು ನಿರೂಪಿಸಿದೆ.

ಪಿ.ಲಂಕೇಶ್ ಬರೆದದ್ದು, ಬಾಳಿದ್ದು, ಎಲ್ಲವೂ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಜೀವನ ಸಂದರ್ಭದಲ್ಲಿ. ಅವರು ಬರೆಯಲು ಆರಂಭಿಸಿದ ವಸಾಹತೋತ್ತರ ಕಾಲಘಟ್ಟದಲ್ಲಿ ಕಂಡುಬಂದ ಮನುಷ್ಯ ಮಾದರಿಗಳು ಹೇಗೆ ಪ್ರತಿಕ್ರಿಯಿಸುತ್ತವೆ ಎಂಬುದನ್ನು ಸಮಾಜದ ಒಟ್ಟಂದದಲ್ಲಿ ಗುರುತಿಸುವುದು ಪ್ರಬಂಧದ ಉದ್ದೇಶವಾಗಿದೆ. ಈಗಾಗಲೇ ಲಂಕೇಶರನ್ನು ಕುರಿತು ಸಂಶೋಧಿಸಿರುವ ಮಹಾ ಪ್ರಬಂಧಗಳ ಸಂಶೋಧಕರು ಮಂಡಿಸಿದ ಅಭಿಪ್ರಾಯಗಳಲ್ಲಿ ಲಂಕೇಶರ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘರ್ಷಗಳ ವಿಭಿನ್ನ ರೂಪದ ಚರ್ಚೆಗಳು ಸಂಶೋಧಿತಗೊಂಡಿವೆ. ಆದರೆ ಲಂಕೇಶರು ಕಂಡ ಪರಿಸರದಲ್ಲಿ ಮನುಷ್ಯ ಸಂಬಂಧಗಳ ರೂಪವು ಧಾರ್ಮಿಕ ಕಟ್ಟಲೆಗಳಲ್ಲಿ ಜಾತಿ, ವರ್ಗ, ವರ್ಣ, ಅಂತಸ್ತು, ಅಧಿಕಾರ, ಹಣ, ಮೇಲುಕೀಳುಗಳೆಂಬ ಒಮ್ಮತವಿರದ ಒತ್ತಾಸೆಗಳಿಂದ ತುಂಬಿ ಹೋಗಿದ್ದ ಕಾಲವಾಗಿತ್ತು. ಅದೇ ಕಾಲಕ್ಕೆ ಸರಿಯಾಗಿ ಶಿಕ್ಷಣ ಮತ್ತು ಸಾಹಿತ್ಯ ಸೃಷ್ಟಿಯ ಆಧುನಿಕ ಶಿಕ್ಷಣ ಪದ್ಧತಿಗಳು ವಸಾಹತೋತ್ತರ ಚಿಂತನೆಯಲ್ಲಿ ಮನುಷ್ಯ ಸಂಬಂಧಗಳನ್ನು ನೋಡುವ ಕ್ರಮ ಅದರ ಧೋರಣೆಗಳು ಒಟ್ಟು ಆಶಯಗಳು ಆಧುನಿಕತೆಯೆಡೆಗೆ ಆಕರ್ಷಿತಗೊಂಡು ಬದಲಾಗುತ್ತಿರುವ ಭಾರತೀಯ ಸಂವೇದನೆ ಹಾಗೂ ವ್ಯಕ್ತಿ ಮತ್ತು ಸಮಾಜದ ಸಾಮರಸ್ಯ ಸಂಬಂಧಗಳು ಪರಿವರ್ತನೆಗೊಳ್ಳುತ್ತಿರುವ ಆಧುನಿಕ ಮನುಷ್ಯನ ತಿಳುವಳಿಕೆ ಮತ್ತು ಚಿಂತನೆಗಳು ವ್ಯಕ್ತಿಕೇಂದ್ರಿತ

ವೃತ್ತಾಂತವಾಗಿ ಹೇಗೆ ನಿಭಾಯಿಸಿದವೆಂಬ ಬೃಹತ್ತಾದ ಪ್ರಶ್ನೆಗಳು ಹೇಳುತ್ತವೆ. ಈ ಪ್ರಶ್ನೆಗಳಿಗೆ ಲಂಕೇಶರಲ್ಲಿ ಉತ್ತರ ಹುಡುಕುವ ಸಂಶೋಧನೆಯೇ ಪ್ರಸ್ತುತ ಮಹಾಪ್ರಬಂಧದ ಉದ್ದೇಶ. ಪ್ರಸ್ತುತ ಮಹಾ ಪ್ರಬಂಧವು ಈಗಾಗಲೇ ವಿವಿಧ ವಿಶ್ವವಿದ್ಯಾನಿಲಯಗಳಿಗೆ ಸಲ್ಲಿಕೆಯಾಗಿರುವ ಮಹಾಪ್ರಬಂಧಗಳಲ್ಲಿ ಚರ್ಚಿಸಿರದ ಮನುಷ್ಯ ಸಂಬಂಧಗಳ ಸ್ವರೂಪವನ್ನು ವಿಶ್ಲೇಷಿಸುತ್ತದೆ.

## ಅಧ್ಯಯನದ ವಿಧಾನ

ಲಂಕೇಶರನ್ನು ಕುರಿತ ಸಂಶೋಧನೆಗಳಲ್ಲಿ ಅವರನ್ನು ಕುರಿತು ಬೇರೆ ಬೇರೆ ಆಯಾಮಗಳಲ್ಲಿ ಶೋಧಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಶೀರ್ಷಿಕೆಯೇ ಸೂಚಿಸುವಂತೆ ಮನುಷ್ಯ ಸಂಬಂಧದ ಮೂಲ ನೆಲೆಗಟ್ಟುಗಳನ್ನು ಇಡಿಯಾಗಿ ಬಿಡಿಯಾಗಿ ವಿವರಣಾತ್ಮಕ ವಿಧಾನದಲ್ಲಿ ಸಂಶೋಧಿಸುವುದು ಪ್ರಸ್ತುತ ಮಹಾಪ್ರಬಂಧದ ಅಧ್ಯಯನದ ವಿಧಾನವಾಗಿದೆ.

ಲಂಕೇಶ್ ದಶಕಗಳ ಕಾಲ ಕನ್ನಡ ಸಂಸ್ಕೃತಿಯನ್ನು ಕರ್ನಾಟಕದ ಜನಜೀವನವನ್ನು ತಮ್ಮ ಬರವಣಿಗೆಯ ಮೂಲಕ ಪ್ರಭಾವಿಸಿದವರು. ಇಲ್ಲಿನ ಜೀವನವೈವಿಧ್ಯದ ಸಂಬಂಧದಲ್ಲಿ ಮನುಷ್ಯನ ವರ್ತನೆಗಳನ್ನು ಪ್ರಶ್ನಿಸುತ್ತಾ ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ, ಕೌಟುಂಬಿಕ ಅಗತ್ಯಗಳನ್ನು ಅದರ ಒಳಿತು ಕೆಡಕುಗಳನ್ನು ಮುಲಾಜಿಲ್ಲದೆ ಪ್ರಶ್ನಿಸಿದರು. ವಸಾಹತೋತ್ತರ ಭಾರತೀಯ ಸಂದರ್ಭದ ನವನಾಗರಿಕತೆಗೆ ತೆರೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಮನುಷ್ಯನ ಸಾಂಸ್ಕೃತಿಕ ತಲ್ಲಣಗಳಿಗೆ ಉತ್ತರದ ಹುಡುಕಾಟದಲ್ಲಿದ್ದ ಲಂಕೇಶರಿಗೆ ತಾವು ಕಂಡ ಮೂಲ ಘಟಕಗಳಾದ ವ್ಯಕ್ತಿ ಮತ್ತು ಸಮಾಜ, ಆಚರಣೆ ಮತ್ತು ಅನುಕೂಲ, ಪ್ರತಿಕೂಲ ಮತ್ತು ಪ್ರತಿಭಟನೆಯ, ಮಾದರಿಗಳನ್ನು ಅವರ ಕಥಾನಕಗಳಲ್ಲಿ ಕಾಣಿಸುವ ಪ್ರಯತ್ನಮಾಡಿದ್ದಾರೆ. ಒಬ್ಬ ಸೃಜನಶೀಲ ಲೇಖಕ. ವ್ಯಕ್ತಿ, ಕುಟುಂಬಗಳನ್ನು ಆ ಮೂಲಕ ಸಾಮುದಾಯಿಕ ಸಂಸ್ಕೃತಿಯ ಮೇಲೆ ಉಂಟು ಮಾಡುವ ಪರಿಣಾಮ, ಪ್ರೇರಣೆ ಮತ್ತು ಧೋರಣೆಗಳನ್ನು ತಮ್ಮ ಕಥಾನಕಗಳಲ್ಲಿ ಕಟ್ಟಿಕೊಡುವ ಯತ್ನದಂತೆ ಅವರ ಕಥಾನಕಗಳು ಗೋಚರಿಸುತ್ತಿವೆಯಾದ್ದರಿಂದ ಮನುಷ್ಯನ ಸಂಗತಿಗಳು ಅವನ ಬದುಕಿನ ಬವಣೆ, ಚಿಂತನೆ ಅವನ ವ್ಯವಹಾರಿಕ ಬುದ್ಧಿ ಕೃತ್ರಿಮತೆ, ಇವುಗಳೆಲ್ಲವನ್ನು ಚಿತ್ರಿಸಲು ಲಂಕೇಶರ ಕಥಾನಕ ಸಹಕಾರಿಯಾಗಲಿದೆ. ಭಾವುಕತೆಯಿದ್ದ ಜಾಗದಲ್ಲಿ ಚಿಂತನಾಕ್ರಮಗಳು ಕಣ್ಣಿಗೆ ಢಾಳಾಗಿ ಕಾಣಿಸುವಷ್ಟು ಬದಲಾದ ಪರಿಸರ ಕುಟುಂಬ ಮತ್ತು ವ್ಯಕ್ತಿಗಳನ್ನು ಹೇಗೆ ನಿಯಂತ್ರಿಸುತ್ತದೆ ಎಂಬ ವಿಲಕ್ಷಣ ಮಾದರಿಗಳನ್ನು ಲಂಕೇಶ್ ಕಥಾನಕಗಳಲ್ಲಿ ಕಂಡುಕೊಳ್ಳುವ ಮೂಲಕ ವಿಶ್ಲೇಷಣಾತ್ಮಕ ವಿಧಾನದಲ್ಲಿ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲಾಗಿದೆ. “ಸಂಶೋಧನೆ ಎನ್ನುವುದು ವಿಶ್ಲೇಷಣಾತ್ಮಕ ವಿಮರ್ಶೆ,

ವಿಮರ್ಶೆಯೆನ್ನುವುದು ವ್ಯಾಖ್ಯಾನಾತ್ಮಕ ಸಂಶೋಧನೆ"[೫] ಎಂಬ ಮಾತು ಇಲ್ಲಿ ಉಲ್ಲೇಖನೀಯ. ಕಾರಣ ವಸಾಹತೋತ್ತರ ಕಾಲದಲ್ಲಿ ಹೊಸ ಮಾನದಂಡಗಳೊಂದಿಗೆ ವಿಭಿನ್ನವಾಗಿ ಬೆಳೆದು ಬಂದ ಈ ವಿವರಣಾತ್ಮಕ ವಿಶ್ಲೇಷಣೆಯ ಗ್ರಹಿಕೆಗಳು ಸಂಶೋಧನೆಯ ಮೇಲೂ ಹೆಚ್ಚು ಪರಿಣಾಮವನ್ನು ಬೀರಿದವು. ಇಲ್ಲಿಯೂ ಸಹ ಸಾಕ್ಷ್ಯ ತೀರ್ಮಾನ ಹಾಗೂ ಸಿದ್ಧಾಂತಗಳು ಎಂಬ ಸೂಚ್ಯಂಕಗಳಲ್ಲಿ ವಿಮರ್ಶೆಯ ಪರಿಭಾಷೆಯ ಸಂಶೋಧನೆ ಸಂಶೋಧನಾ ವಿಧಾನಗಳಲ್ಲಿ ಒಂದಾಯಿತು. ಲೇಖಕ ಸೃಷ್ಟಿಸಿದ ಸೃಜನಶೀಲ ಕೃತಿಯೊಂದರ ವಸ್ತು, ಭಾಷೆ, ಪಾತ್ರ, ಘಟನೆ, ಸಾಮಾಜಿಕ ಸಂದರ್ಭ, ಸಾಂಸ್ಕೃತಿಕ ಘನತೆ ಮುಂತಾದ ಆಯಾಮಗಳನ್ನು ಸೃಜನಶೀಲ ಕೃತಿಯೊಂದು ಕೊಡುವ ಲಭ್ಯತೆಯ ಸಾಕ್ಷ್ಯಗಳಾಗುತ್ತದೆ. ಕೃತಿರಚನೆಯ ಕಾಲಮಾನದ ಸಾಮಾಜಿಕ ಸಂದರ್ಭಗಳು, ನಂಬಿಕೆಗಳು, ವಿಮರ್ಶಾತ್ಮಕ ವಿಶ್ಲೇಷಣೆಯ ನೆಲೆಗಳಾಗುತ್ತವೆ. ಸೃಷ್ಟಿಶೀಲಬರಹ ಸೃಷ್ಟಿಸಿದ ಸಾಂಸ್ಕೃತಿಕ ಚಿಂತನೆಗಳು ಮನುಷ್ಯನಲ್ಲಿ ಉಂಟಾದ ತಲ್ಲಣಗಳು ಸೂಕ್ಷ್ಮವಾಗಿಯೋ, ಸ್ಥೂಲವಾಗಿಯೋ ಎಂಬುದನ್ನು ತೀರ್ಮಾನಿಸಿಕೊಂಡು ಕೈಗೊಳ್ಳುವ ಸಂಶೋಧನಾ ವಿಧಾನ ವಿಮರ್ಶಾತ್ಮಕ ವಿಶ್ಲೇಷಣೆಯಾಗುತ್ತದೆ. ಪ್ರಸ್ತುತ ಮಹಾಪ್ರಬಂಧದ ಸಂಶೋಧನಾ ವಿಧಾನವೂ ವಸಾಹತೋತ್ತರ ಕಾಲದಲ್ಲಿ ವ್ಯಾಪಕಗೊಂಡ ವಿವರಣಾತ್ಮಕ ವಿಶ್ಲೇಷಣೆಯ ಸಂಶೋಧನಾ ವಿಧಾನವನ್ನು ಅಳವಡಿಸಿಕೊಂಡಿದೆ.

ಆಧುನಿಕ ಕಾಲದ ವಿಮರ್ಶಾ ಮಾನದಂಡಗಳು ಹೊಸದರ ಹುಡುಕಾಟಕ್ಕೆ ಸಶಕ್ತವಾದ ಸಂಶೋಧನಾ ವಿಧಾನಗಳಾಗಿ ಬಳಕೆಯಾಗುತ್ತಿವೆ. ಈ ಹಿನ್ನಲೆಯಲ್ಲಿ ಪಿ.ಲಂಕೇಶ್ ಸೃಷ್ಟಿಸಿದ ಕಥಾನಕಗಳು ಕರ್ನಾಟಕದ ಬೇರೆ ಬೇರೆ ಪ್ರದೇಶ, ಭಾಷೆ, ಪರಿಸರ, ವ್ಯಾಪ್ತಿಗಳಲ್ಲಿ ತನ್ನ ಪಾತ್ರಪ್ರಪಂಚವನ್ನು ಹೆಣೆದುಕೊಂಡಿರುವುದರಿಂದ ಮನುಷ್ಯ ಸಂಬಂಧಗಳ ಭಿನ್ನ ಪರಿಸರದ ಒಳಗೆ ಚರ್ಚಿಸುವ ವಿಧಾನ ಪ್ರಸ್ತುತ ಮಹಾಪ್ರಬಂಧದ ಆಶಯವಾಗಿದೆ. ಲಂಕೇಶರು ಕಟ್ಟಿಕೊಟ್ಟ ಸಂಬಂಧಗಳ ಒಳತೋಟಿ, ಮನುಷ್ಯನ ತಲ್ಲಣ, ತಳಮಳಗಳನ್ನು ಅವರ ಸೃಜನ ಶೀಲ ಕೃತಿಗಳನ್ನು ಅಧ್ಯಯನ ಮಾಡುವುದರ ಜೊತೆಗೆ ಸೃಷ್ಟಿಶೀಲ ಬರಹವೊಂದು ಬಂದನಂತರ ನಡೆದ ಚರ್ಚಾಸ್ಪದ ವಿಶ್ಲೇಷಣೆಗಳು, ವಿಮರ್ಶಾತ್ಮಕ ವಿವರಣೆಗಳು ಸೂಚಿಸಿದ ತರ್ಕಗಳು ಬಿಚ್ಚಿಟ್ಟ ಸತ್ಯಗಳು, ಕೃತಿಯಲ್ಲಿ ಹೇಳಲಾಗದ ಸಂಗತಿಗಳು ಹೇಳಲಾಗದ್ದಕ್ಕೆ ಕಾರಣಗಳು. ಒಟ್ಟಾರೆ ಕೃತಿಯ ಗುಣಾವಗುಣಗಳ ಕುರಿತ ಸತ್ಯಾನ್ವೇಷಣೆಗಳು ಇಲ್ಲಿ ಮುಖ್ಯವಾಗುತ್ತವೆ. ಇಲ್ಲಿ "ಭಾವುಕತೆಗಿಂತ ಬೌದ್ಧಿಕತೆ, ಪಕ್ಷಪಾತಕ್ಕಿಂತ ನಿಷ್ಪಕ್ಷಪಾತ ಸಂದೇಹಗಳ ಅಭಿವ್ಯಕ್ತಿಗಿಂತ ಸತ್ಯವೆನಿಸುವ ತೀರ್ಮಾನಗಳತ್ತ ಸಾಗಬೇಕಾಗುತ್ತದೆ. ಈ ಸಾಗುವಿಕೆಯು ಒಂದು ವಸ್ತುನಿಷ್ಠವಾದ,

---

೫. ಬಿ.ವ್ಹಿ. ಶಿರೂರ, ಸಂಶೋಧನಾ ಸ್ವರೂಪ, ಪುಟ. ೮೦.

ವ್ಯಕ್ತಿ ನಿರಪೇಕ್ಷ ಹಾಗೂ ಮೌಲ್ಯ ನಿರಪೇಕ್ಷ ಚಟುವಟಿಕೆಯೂ ಆಗಿರಬೇಕಾಗುತ್ತದೆ."[೬] ಎಂಬ ಡಾ. ನೆ.ಮ. ಗಿರಜಾಪತಿಯವರ ಉಲ್ಲೇಖ ಇಲ್ಲಿ ಸಮಂಜಸವೆನಿಸುತ್ತದೆ. ಕಾರಣ ಬುದ್ಧಿಭಾವ ಬದುಕುಗಳನ್ನು ತರ್ಕದ ಒರೆಗೆ ಹಚ್ಚಬೇಕಾದರೆ ವಿಮರ್ಶನ ಪ್ರಜ್ಞೆಯ ವಿವರಣಾತ್ಮಕ ತಾತ್ವಿಕ ಸಿದ್ಧಾಂತಗಳೇ ಸಮಂಜಸ ಒಂದು ಮೆಚ್ಚುಗೆ, ಒಂದು ಸಮರ್ಥನೆ, ಟೀಕೆ, ಟಿಪ್ಪಣಿ ಲೇಖಕನ ಸೃಜನಶೀಲತೆಯ ಆಂತರಂಗಿಕ ಕಥೆಗೆ ಲೋಕಗ್ರಹಿಕೆಯ ಪ್ರತಿಕ್ರಿಯೆಗಳು ವ್ಯಕ್ತಿಗತವಾದ ಚಿಂತನೆಗಳು ಮನುಷ್ಯ ಸಂಬಂಧಗಳನ್ನು ಒಡೆಯುವ ಮತ್ತು ಕಟ್ಟುವ ಕ್ರಮಗಳು ವ್ಯಕ್ತವಾದ ಬಗೆಯನ್ನು ಪರಿಶೀಲಿಸುವುದರ ಜೊತೆಗೆ ಬಿಟ್ಟುಹೋದ ಹೊಸದರ ಹುಡುಕಾಟಕ್ಕೆ ಅದರ ಚಿಂತನಾತ್ಮಕ ತಿಳುವಳಿಕೆಗೆ ಆಧುನಿಕ ವಿಶ್ಲೇಷಣಾ ಪ್ರಸ್ಥಾನಗಳ ವಿವರಣಾತ್ಮಕ ಸಂಶೋಧನಾ ವಿಧಾನವನ್ನು ಆಯ್ಕೆ ಮಾಡಿಕೊಂಡಿದೆ.

* ಮೂಲಕೃತಿಗಳು ಮತ್ತು ಲಂಕೇಶರನ್ನು ಕುರಿತಂತೆ ಬರೆದ ವಿಮರ್ಶಾ ಬರವಣಿಗೆಗಳ ಮತ್ತು ಮನುಷ್ಯ ಸಂಬಂಧಗಳ ಪರಿಸರಾತ್ಮಕ ಚಿಂತನೆಗಳೊಡನೆ ಚರ್ಚಿಸುವುದು.

* ಲಂಕೇಶ್ ಕುರಿತಾದ ಇತರೆ ಬರಹಗಾರರ ತೌಲನಿಕ ಅಧ್ಯಯನದ ಈವರೆಗಿನ ಸಮೀಕ್ಷೆಯ ಒಪ್ಪಿತ ಅಭಿಪ್ರಾಯಗಳ ಸಂಗ್ರಹ ಹಾಗೂ ಈವರೆಗಿನ ಲಂಕೇಶ್ ಕುರಿತ ಸಾಂದರ್ಭಿಕ ವಿವರಗಳ ಚರ್ಚೆ ಹಾಗೂ ಮಂಥನ.

* ಸಮಕಾಲೀನ ಸಾಹಿತ್ಯದ ಸಂದರ್ಭದಲ್ಲಿ ಲಂಕೇಶ್ ಕಥನದ ಪ್ರಸ್ತುತತೆ ಕುರಿತ ಬಿಡಿ ಬರಹಗಳು ಮತ್ತು ಸೂಚ್ಯಾಂಕಗಳ ಅವಲೋಕನ.

* ಲಂಕೇಶ್ ಕಥನದ ಒಟ್ಟು ಫಲಿತಗಳ ಸಿದ್ಧ ಮಾದರಿಗಳ ಮಹಾಪರಿಶೀಲನೆ ಚಿಂತನೆಯಲ್ಲಿನ ಆಮೂಲಾಗ್ರ ಹೊಸ ಸಂದೇಶಗಳ ಹುಡುಕಾಟ.

* ಲಂಕೇಶ್ ಕಥನ ಮಾದರಿಯ ಹೊಸ ಬದಲಾವಣೆ ಮತ್ತು ಸೂಕ್ಷ್ಮತೆಯ ಅವಲೋಕನದ ಸೈದ್ಧಾಂತಿಕ ನಿಲುವುಗಳ ನೋಟ.

ಪ್ರಸ್ತುತ ಪಿ.ಲಂಕೇಶ್ ಕಥನ ಮನುಷ್ಯ ಸಂಬಂಧಗಳ ಸ್ವರೂಪವನ್ನು ಕುರಿತಂತೆ ವಿಶ್ಲೇಷಣೆ ಮತ್ತು ವಿವರಣಾತ್ಮಕ ಸಂಶೋಧನಾ ವಿಧಾನದ ಮುಖೇನ ಒಟ್ಟಾರೆ ಮನುಷ್ಯ ಸಂಬಂಧಗಳ ಪರಿಸರದ ಶೋಧಿತ ಫಲಿತಗಳನ್ನು ಶೋಧಿಸುವುದು ಪ್ರಸ್ತುತ ಮಹಾಪ್ರಬಂಧದ ಸಂಶೋಧನೆಯ ವಿಧಾನವಾಗಿದೆ.

---

೬. ಡಾ. ನೆ.ಮ.ಗಿರಿಜಾಪತಿ –ಸಂಶೋಧನೆ, ಪು. ೬೬.

ಸಂಶೋಧನಾ ಅಧ್ಯಯನದ ಮಿತಿಗಳನ್ನು ಒಂದೆರಡು ಮಾತುಗಳಲ್ಲಿ ಹೇಳುವುದಾದರೆ ಲಂಕೇಶ್ ಕಥನಗಳನ್ನು ಆಧರಿಸಿದ ಈ ಅಧ್ಯಯನ ಕಥೆ ಮತ್ತು ಕಾದಂಬರಿಗಳನ್ನು ಕೇಂದ್ರೀಕರಿಸಿದೆ. ಕಥನದ ವ್ಯಾಪ್ತಿಗೆ ಸೇರಬಹುದಾದ ನಾಟಕಗಳನ್ನು ಪರಿಗಣಿಸಿಲ್ಲ. ವಿಮರ್ಶಾ ಬರಹಗಳನ್ನು ಪರಿಗಣಿಸಿಲ್ಲ ಇವನ್ನು ನಾನು ಮಿತಿ ಎಂದೇ ಪರಿಭಾವಿಸಿಕೊಳ್ಳುತ್ತೇನೆ. ಆದರೆ ವಸ್ತುನಿಷ್ಠ ಅಧ್ಯಯನಕ್ಕೆ ಈ ಬರಹದ ಆಯ್ಕೆ ಅಗತ್ಯವಾಗಿದೆ. ಮನುಷ್ಯ ಸಂಬಂಧಗಳ ಸ್ವರೂಪ ಎಂಬ ಪರಿಕಲ್ಪನೆಯಡಿಯಲ್ಲಿ ನನ್ನ ಅಧ್ಯಯನ ಲಂಕೇಶರ ಕಥೆ ಮತ್ತು ಕಾದಂಬರಿಗಳನ್ನು ಆಧರಿಸಿರುವುದರಿಂದ ಇನ್ನಿತರ ಸಾಹಿತ್ಯ ಪರಿಕಲ್ಪನೆಯಡಿಯಲ್ಲಿ ಚರ್ಚಿಸಲು ಸಾಧ್ಯವಾಗಿಲ್ಲ. ಈ ಎಲ್ಲಾ ಮಿತಿಗಳಾಚೆಗೂ ಈ ಅಧ್ಯಯನ ತಾನು ಪರಿಭಾವಿಸಿಕೊಂಡಿರುವ ಅಧ್ಯಯನದ ಚೌಕಟ್ಟಿಗೆ ನ್ಯಾಯ ಒದಗಿಸಿದೆ ಎಂಬುದು ಈ ಸಂಶೋಧನೆಯ ನಂಬಿಕೆ.

**ಅಧ್ಯಯನದ ವಿಂಗಡಣೆ:**

**ಪರಿವಿಡಿ**

**ಪಿ.ಲಂಕೇಶರ ಕಥನ ಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ**

**ಮೊದಲನೇ ಅಧ್ಯಾಯವು** ಸಂಶೋಧನಾ ಮಹಾಪ್ರಬಂಧದ ಒಟ್ಟು ಸ್ವರೂಪವನ್ನು ಒಳಗೊಂಡಂತೆ ಅಧ್ಯಯನ ಸ್ವರೂಪ ಹಾಗೂ ವ್ಯಾಪ್ತಿಯನ್ನು ಒಳಗೊಂಡಿದ್ದು ಸಂಶೋಧನಾ ವಿಷಯದ ಆಯ್ಕೆ ಮತ್ತು ಪರಿಚಯವನ್ನು ವಿಶ್ಲೇಷಿಸಿಕೊಂಡಿದೆ. ಮತ್ತು ಅಧ್ಯಯನದ ಮಿತಿಗಳು ಹಾಗೂ ಅಧ್ಯಯನದ ವಿಂಗಡಣೆಗಳ ವಿವರವನ್ನು ನೀಡಲಾಗಿದೆ.

**ಅಧ್ಯಾಯ ಎರಡರಲ್ಲಿ** ಈ ವರೆಗಿನ ಲಂಕೇಶರ ಕುರಿತ ಪೂರ್ವ ಸಾಹಿತ್ಯ ಸಮೀಕ್ಷೆಯನ್ನು ಪರಿಶೀಲಿಸುವುದರ ಮೂಲಕ ಅಧ್ಯಯನಕ್ಕೆ ಒದಗಬಹುದಾದ ವಿಭಿನ್ನ ಅಭಿಪ್ರಾಯಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಹಾಗೂ ಈವರೆಗಿನ ಲಂಕೇಶರ ಕುರಿತ ಸಂಶೋಧನಾತ್ಮಕ ಪ್ರಬಂಧಗಳನ್ನು ಸಮೀಕ್ಷಿಸುವುದರ ಮೂಲಕ ಪ್ರಸ್ತುತ ಮಹಾಪ್ರಬಂಧದ ಶೋಧನೆಯ ಹುಡುಕಾಟಕ್ಕೆ ಮನುಷ್ಯ ಸಂಬಂಧಗಳ ಸ್ವರೂಪದ ನಿರ್ದಿಷ್ಟವಾದ ಗುರಿ ಮತ್ತು ನೆಲೆಯನ್ನು ಅಧ್ಯಯನ ಸ್ಪಷ್ಟವಾಗಿ ಕಂಡುಕೊಂಡಿದೆ.

**ಅಧ್ಯಾಯ ಮೂರರಲ್ಲಿ** ನಿರ್ದಿಷ್ಟಪಡಿಸಿಕೊಂಡಿದ್ದ ಪ್ರಾಕ್ ಕಲ್ಪನೆಯನ್ನು ಯಶಸ್ವಿಯಾಗಿ ಈಡೇರಿಸಿಕೊಂಡಿದೆ. ವಿಶ್ಲೇಷಣೆ ಹಾಗೂ ವಿವರಣೆಯ ಮಾರ್ಗದಲ್ಲಿ ಲಂಕೇಶ್ ಕಥನದ ಸಾರ ಸಂಪೂರ್ಣವಾಗಿ ತನ್ನ ಅಧ್ಯಯನದ ಮಿತಿಯಲ್ಲಿ ಗುರುತಿಸಿಕೊಂಡು ಮುಂದಿನ ಸಂಶೋಧನೆಯ ಸಾಧ್ಯತೆಗಳಿಗೆ ಬಿಟ್ಟುಕೊಟ್ಟಿದೆ ಹಾಗೂ ಮಹಾಪ್ರಬಂಧವೂ ಪ್ರಸ್ತುತ ಈ ಎಂಟು ಅಧ್ಯಾಯಗಳಲ್ಲಿ ಕಂಡುಕೊಂಡ ಲಂಕೇಶರು ಕಟ್ಟಿದ ಕಥನಗಳಲ್ಲಿ ಮನುಷ್ಯ ಸಂಬಂಧಗಳ ಒಟ್ಟಂದದ ಪರಿಕಲ್ಪನೆಗಳು ಫಲಿತಗಳಲ್ಲಿ ಫಲಿಸಿವೆ ಎಂಬುದನ್ನು ಪ್ರಬಂಧ ಘೋಷಿಸಿಕೊಳ್ಳುತ್ತದೆ.

**ನಾಲ್ಕನೇ ಅಧ್ಯಾಯದಲ್ಲಿ** 'ಕಾಮ ಮತ್ತು ಪ್ರೇಮ : ಮನುಷ್ಯ ಸಂಬಂಧಗಳ ಸ್ವರೂಪ' ಎಂಬ ಶೀರ್ಷಿಕೆಯನ್ನು ಹಾಕಿಕೊಂಡಿದ್ದೇನೆ. ಪಿ.ಲಂಕೇಶರ ಕಥನವನ್ನು ಅವಲೋಕಿಸಿದಾಗ ನವ್ಯದ ಸಂದರ್ಭದಲ್ಲಿ ಬಂದಿರುವ ಹಲವಾರು ಕಥೆಗಳಲ್ಲಿ ಮತ್ತು ಕಾದಂಬರಿಗಳಲ್ಲಿ ಈ ಪರಿಕಲ್ಪನೆ ಬಹಳ ವಿಸ್ತಾರವಾಗಿ ಮೂಡಿರುವುದನ್ನು ಕಾಣುತ್ತೇವೆ, ದಾಳಿಯಂತ ಕಥೆ, ಕಲ್ಲು ಕರಗುವ ಸಮಯ, ಒಂದು ಸಂಬಂಧದ ದಾಖಲೆ, ಪ್ರೇಮ ಎಂಬ ವಿಸ್ಮಯ, ನನ್ನ ಗೆಳತಿ ಲಿಸಾ ಎಂಬ ಕಥೆಗಳನ್ನು ತೆಗೆದುಕೊಂಡರೆ ನಮಗೆ ತಿಳಿಯುತ್ತದೆ. ಲಂಕೇಶರು ಕಥನ ಕಟ್ಟುವ ಬಗೆ, ಧ್ವನಿಸುವ ಅರ್ಥಸಾಧ್ಯತೆಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ ಕಾಣಬಹುದು. ಈ ರೀತಿಯ ಮನುಷ್ಯ ಸಂಬಂಧಗಳನ್ನು ಗುರುತಿಸುವ ಸೂಕ್ಷ್ಮಾತಿಸೂಕ್ಷ್ಮ ಪ್ರತಿಭೆಯಾದ ಕಾರಣ ಭಿನ್ನವಾಗಿಯೇ ನಿಲ್ಲುತ್ತಾರೆ. ಜೊತೆಗೆ ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮ ಸಂಬಂಧಗಳನ್ನು ಕಾಣಬಹುದು, ಜಾತಿ ಮತ್ತು ಲೈಂಗಿಕ ಸಂಬಂಧಗಳು ಹೇಗೆ ಹೆಣೆದುಕೊಂಡಿವೆ, ವೃತಿಗಳು ಮತ್ತು ಲೈಂಗಿಕ ಸಂಬಂಧಗಳು ಮೂಡಿರುವಂತಹ ಬಗೆಗಳು,

ಲೈಂಗಿಕತೆಯ ಮೂಲಕ ಗಂಡಿನ ನೆನಪುಗಳು ಕಾಡುವ ಬಗೆಗಳು, ಈ ರೀತಿಯ ಸಂಬಂಧಗಳನ್ನು ಅವರ ಅಕ್ಕ ಕಾದಂಬರಿಯಲ್ಲಿಯಂತು ಬಹಳ ಸ್ಪಷ್ಟವಾಗಿ ಶೋಧಿಸಲಾಗಿದೆ. ಅವರ ಕಥನದಲ್ಲಿ ಕಾಮ ಮತ್ತು ಪ್ರೇಮಗಳನ್ನು ಮನುಷ್ಯನ ಬದುಕಿನ ಅತ್ಯಂತ ಮುಖ್ಯಭಾಗವಾಗಿ ನೋಡಿದ್ದಾರೆ. ಕಥೆಗಾರರು ಸಮಾಜದಲ್ಲಿ ನಡೆಯುವಂತಹ ದೈಹಿಕ ಮತ್ತು ಮಾನಸಿಕ ಸಂಬಂಧಗಳಲ್ಲಿ ಮನುಷ್ಯನ ಸಂಬಂಧಗಳು ಪಡಿಮೂಡಿರುವ ಬಗೆಯನ್ನು ಗುರುತಿಸಲಾಗಿದೆ. ಆಧುನಿಕ ಕಾಲ ಘಟ್ಟದ ಮಹಿಳೆ ಪುರುಷನೊಡನಷ್ಟೇ ಅಲ್ಲ ಬದುಕಿನೊಡನೆಯೇ ಸಂಘರ್ಷಕ್ಕಿಳಿಯಬೇಕಾದ ಅನಿವಾರ್ಯ ಘಟ್ಟದಲ್ಲಿ ಆಧುನಿಕತೆಯ ವಿಘಟನಕಾರಿ ಗೊಂದಲಗಳನ್ನು ಮುಖಾಮುಖಿಯಾಗಿ ಎದುರಿಸುವಂತಹ ಹಲವುಪಾತ್ರಗಳ ಸಂದರ್ಭಗಳನ್ನು ಇಲ್ಲಿ ದಾಖಲಿಸಲಾಗಿದೆ.

**ಐದನೇ ಅಧ್ಯಾಯದಲ್ಲಿ** ಹಸಿವು ಮತ್ತು ದೌರ್ಜನ್ಯ : ಮನುಷ್ಯ ಸಂಬಂಧಗಳ ಸ್ವರೂಪವನ್ನು ಲಂಕೇಶರ ಹಲವು ಕಥೆಗಳಲ್ಲಿ ಕಾಣುತ್ತೇವೆ ದಾಳಿಯಂತಹ ಕತೆಗಳಲ್ಲಿ ರೊಟ್ಟಿ ಕಥೆಯಲ್ಲಿ, ಮುಟ್ಟಿಸಿಕೊಂಡವನು, ಅಧಿಕಾರಿಗಳು ಮತ್ತು ಕೆಲಸದವ ಈ ರೀತಿಯ ಹಲವು ಕಥೆಗಳನ್ನು 'ಮುಸ್ಸಂಜೆಯ ಕಥಾಪ್ರಸಂಗ', 'ಅಕ್ಕ' ಕಾದಂಬರಿಯನ್ನು ಶೋಧಿಸಿದಾಗ ಹಸಿವು ಮತ್ತು ದೌರ್ಜನ್ಯದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳು ಮೂಡಿರುವ ಬಗೆಯನ್ನು ಶೋಧಿಸಲಾಗಿದೆ. ಹಲವು ಕಥೆಗಳಲ್ಲಿ ಹಸಿವು ಮತ್ತು ನೈತಿಕ ಸಂಘರ್ಷದ ಸಂಬಂಧಗಳನ್ನು ತಿಳಿದರೆ ಬೇರೆ ಕೆಲವು ಕಥೆಗಳಲ್ಲಿ ಹಸಿವು ಮತ್ತು ಮಹಿಳಾ ಶೋಷಣೆಯ ಸಂಬಂಧಗಳನ್ನು ಗುರುತಿಸಲಾಗಿದೆ. ಹಸಿವು ಮತ್ತು ಪ್ರಭುತ್ವದ ನಿರ್ಧಯತೆಯನ್ನು ಕಾಣುವ ಸಂಬಂಧಗಳು ಜೊತೆಗೆ ಹಸಿವು ಮತ್ತು ಸಾಮಾಜಿಕ ನಿಲುವುಗಳ ಸಂಬಂಧಗಳು ಹೀಗೆ ಇನ್ನೂ ಹಲವು ಸೂಕ್ಷ್ಮ ಸಂಬಂಧಗಳನ್ನು ಅವರ ಕಥನ ಸಾಹಿತ್ಯದಲ್ಲಿ ಶೋಧಿಸಲಾಗಿದೆ.

**ಆರನೇ ಅಧ್ಯಾಯದಲ್ಲಿ** ಹಣ ಮತ್ತು ಅಧಿಕಾರ : ಮನುಷ್ಯ ಸಂಬಂಧಗಳ ಸ್ವರೂಪದಲ್ಲಿ ಉಮಾಪತಿಯ ಸ್ಕಾಲರ್‌ಷಿಪ್‌ಯಾತ್ರೆಯಂತ ಕಥೆ,ಉಲ್ಲಂಘನೆಯಂತಹ ಕಥೆ, ಸ್ಟೆಲ್ಲಾ ಎಂಬ ಹುಡುಗಿಗೆ ಕಥೆಯಲ್ಲಿ, 'ಬಿರುಕು', 'ಅಕ್ಕ', 'ಮುಸ್ಸಂಜೆಯ ಕಥಾಪ್ರಸಂಗ' ಈ ರೀತಿಯ ಕಥನಗಳಲ್ಲಿ ಹಣದ ಕ್ರೌರ್ಯ, ಅಧಿಕಾರದ ದಾಹದಂತಹ ವಿಕ್ಷಿಪ್ತ ಮನಸ್ಸನ್ನು ಉಳ್ಳ ಪಾತ್ರಗಳು ವರ್ತಿಸುವ ರೀತಿಯನ್ನು ಹಣ ಮತ್ತು ಅಧಿಕಾರದಿಂದ ಕೌಟುಂಬಿಕ ಸಂಬಂಧಗಳು ಹೇಗೆ ತಲ್ಲಣಕ್ಕೆ ಒಳಗಾಗಿವೆ ಎಂಬಂತಹ ಸಂಬಂಧಗಳನ್ನು ಈ ಕಥನಗಳು ಕಟ್ಟಿಕೊಡುತ್ತವೆ, ಜೊತೆಗೆ ಹಣ ಮತ್ತು ಅಧಿಕಾರ ಗಂಡಿನ ಯಜಮಾನಿಕೆಯ ಸಂಬಂಧಗಳು ಮತ್ತು ಶೋಷಣಾನೆಲೆಯ ಸಂಬಂಧಗಳು, ಮಹಿಳಾಶೋಷಣೆಯ ಆಯಾಮಗಳು ಮೂಡಿರುವ ಬಗೆಯನ್ನು ಲಂಕೇಶರ ಕಥೆಗಳಲ್ಲಿ ವಿಶಿಷ್ಟವಾಗಿ ಮೂಡಿರುವುದನ್ನು ಗುರುತಿಸಲಾಗಿದೆ. ಈ ಮೇಲಿನ ಒಳಸೂಕ್ಷ್ಮಗಳಲ್ಲಿ ಕಥೆಗಾರರು

ಸಮುದಾಯಕ್ಕೆ ಕೊಡುವ ಸಂದೇಶ, ಬದಲಾಗಬೇಕಾದ ತುರ್ತು ಹಾಗೂ ಶೋಷಣೆಯಿಂದ ಮುಕ್ತರನ್ನಾಗಿ ಮಾಡಬೇಕೆಂಬ ತಹತಹವುಳ್ಳಂತಹ ಮನಸ್ಸು ಕಥೆಗಾರರದು. ಈ ರೀತಿಯ ಸಾಧ್ಯತೆಗಳನ್ನು ಈ ಅಧ್ಯಾಯದಲ್ಲಿ ಶೋಧಿಸಲಾಗಿದೆ.

**ಏಳನೇ ಅಧ್ಯಾಯದಲ್ಲಿ** ಜಾತಿ ಮತ್ತು ಧರ್ಮ : ಮನುಷ್ಯ ಸಂಬಂಧಗಳ ಸ್ವರೂಪದಲ್ಲಿ ಒಟ್ಟು ಜಾತ್ಯಾತೀತ ಮನಸ್ಸು ಮಾಡುವ ಪರಿಯನ್ನು ಸಮಾಜಕ್ಕೆ ಅಂಟಿರುವ ಕೊಳಕು ಜಾಡ್ಯವನ್ನು ಪಾತ್ರಗಳ ಮುಖೇನಮುಟ್ಟಿಸಲು ಪ್ರಯತ್ನಿಸಿದ್ದಾರೆ. ಸಾಂಪ್ರದಾಯಿಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳನ್ನು ಇವರ ಬರಹದಲ್ಲಿ ಕಾಣಬಹುದು. ಆಧುನಿಕತೆ ಮತ್ತು ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧಗಳು, ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನಲೆಯಲ್ಲಿ ಮನುಷ್ಯ ಸಂಬಂಧಗಳನ್ನು ನೋಡಬಹುದು. ಜೊತೆಗೆ ವಾಸ್ತವಿಕತೆ ಮತ್ತು ಆದರ್ಶಗಳ ಜೊತೆ ಮುಖಾಮುಖಿಯಾಗುವ ಮನುಷ್ಯ ಸಂಬಂಧಗಳನ್ನು ಸಂಶೋಧನೆಗೆ ಒಳಗು ಮಾಡಲಾಗಿದೆ. ಈ ರೀತಿ ವಸ್ತುವಿರುವ ಕಥೆಗಳು ಸಾಕಷ್ಟಿವೆ. ಮುಟ್ಟಿಸಿಕೊಂಡವನು, ಅಕ್ಕ, ಹುಡುಕಾಟ, ಅರಿಕೆ, ತಂದೆಯಂತಹ ಕಥೆಗಳಲ್ಲಿ ಮತ್ತು ಕಾದಂಬರಿಗಳಲ್ಲಿ ಈ ಅಧ್ಯಯನದ ಚಿಂತನೆಗಳನ್ನು ಶೋಧಿಸಲಾಗಿದೆ.

**ಅಧ್ಯಾಯ ಎಂಟರಲ್ಲಿ** ಸಮಾರೋಪದಲ್ಲಿ ಅಧ್ಯಯನವು ತನ್ನ ಉದ್ದೇಶಗಳ ಈಡೇರಿಕೆಗಾಗಿ ರೂಪಿಸಿಕೊಂಡಿದ್ದ ಅಧ್ಯಯನದ ವಿಧಾನಗಳನ್ನು ವಿಶ್ಲೇಷಣಾ ಮಾದರಿಗಳನ್ನು ಗ್ರಹಿಸಿಕೊಂಡ ಗೃಹೀತಗಳನ್ನು ಅಧ್ಯಯನದ ಫಲಿತಗಳ ನಿರೂಪಣೆಯಲ್ಲಿ ದಾಖಲಿಸಿಕೊಂಡಿದೆ. ಈ ಮಹಾಪ್ರಬಂಧದ ಚೌಕಟ್ಟಿಗೆ ಅಗತ್ಯವಾಗಿ ಬೇಕಾಗಿದ್ದ ಅಧ್ಯಯನದ ಪರಿಕರಗಳು ಅಧ್ಯಯನದ ಆಕರಗಳು, ಲಭ್ಯವಿದ್ದ ವಿಮರ್ಶಾತ್ಮಕ ಚಿಂತನೆಗಳು, ಜಿಜ್ಞಾಸೆಗೆ ಒಳಗಾಗಿದ್ದು ಅದನ್ನು ಸ್ವೀಕರಿಸಲು ಸಿದ್ಧವಿದೆಯೆಂಬ ಪ್ರಜಾಸತ್ತಾತ್ಮಕ ಸ್ವೀಕೃತಿಯೊಂದಿಗೆ ಸಮಾರೋಪ ನಿಹಿತಗೊಂಡಿದೆ.

ಈ ರೀತಿಯಾಗಿ ನನ್ನ ಸಂಶೋಧನೆಯು ಲಂಕೇಶರ ಕಥನ ಸಾಹಿತ್ಯದಲ್ಲಿ ಇರುವ ಸೂಕ್ಷ್ಮ ಒಳನೋಟಗಳನ್ನು ಶೋಧಿಸಿದೆ. ಮನುಷ್ಯ ಸಂಬಂಧದ ವರ್ತನೆಗಳನ್ನು ಸಾಚಾತನಗಳನ್ನು ಕಪಟಗಳನ್ನು ನಿಷ್ಠೂರವಾಗಿ ವಿಶ್ಲೇಷಿಸಬಲ್ಲ ಲಂಕೇಶರ ಪ್ರತಿಭೆ ಕೃತಕವಿಲ್ಲದೆ ಸಹಜ ಬರಹದಲ್ಲಿ ಚಿತ್ರಿಸಬಲ್ಲಂತಹ ಕನ್ನಡ ಕಥನ ಸಾಹಿತಿಗಳಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುವ ಲೇಖಕರು. ಆದ್ದರಿಂದ ಇವರ ಪ್ರತಿಭೆಯ ಮುಖ್ಯ ಗುಣವೇ ನೈತಿಕವಾದುದು ಮತ್ತು ಸೂಕ್ಷ್ಮವಾದುದು. ಪಿ.ಲಂಕೇಶರ ಕಥನ ಸಾಹಿತ್ಯದಲ್ಲಿ ಕಾಣುವಂತಹ ಉದ್ವಿಗ್ನತೆ, ಅನುಭವ ನಿರ್ವಹಣೆ, ಆತಂಕಮಯತೆ, ವಿಕ್ಷಿಪ್ತತೆ ಮತ್ತು ಮಾನವೀಯ ಸಂಬಂಧಗಳ ಗ್ರಹಿಕೆ ಇವುಗಳ ನಿರ್ಣಾಯಕ ಸ್ವರೂಪವನ್ನು ಈ ಮಹಾಪ್ರಬಂಧದಲ್ಲಿ ಶೋಧಿಸಲಾಗಿದೆ.

*****

# ಅಧ್ಯಾಯ ಎರಡು

# ಇದುವರೆಗೆ ನಡೆದಿರುವ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಕನ್ನಡ ಸಾಹಿತ್ಯ ಪರಂಪರೆಯು ತನ್ನದೇ ಆದ ಅರಿವು ಮತ್ತು ಹರಹನ್ನು ಕಾಲಕಾಲಕ್ಕೆ ವಿಸ್ತರಿಸಿಕೊಳ್ಳುತ್ತಲೇ ಬಂದಿದೆ. ಅಭಿಜಾತ ನೆಲೆಯಿಂದ ಹಿಡಿದು ಪಾಶ್ಚಾತ್ಯ ಪರಿಕಲ್ಪನೆಗಳವರೆವಿಗೂ ಅದು ತನ್ನ ವಿಭಿನ್ನ ನೆಲೆಗಳನ್ನು ಅನುಸಂಧಾನಗೊಳಿಸಿಕೊಳ್ಳುತ್ತದೆ. ಈ ನೆಲದ ಅಭಿವ್ಯಕ್ತಿಯ ದನಿಯಾಗಿ ಮೂಡಿ ನಿಂತಿವೆ. ಅದು ಪ್ರಾಚೀನ ಶಾಸ್ತ್ರೀಯ ನೆಲೆಯಿಂದ ಹಿಡಿದು ಇಂದಿನ ಕಾವ್ಯ, ಕಥೆ, ನಾಟಕ, ಕಾದಂಬರಿಗಳ ಪ್ರಕಾರಗಳಲ್ಲಿ ತನ್ನ ಮೂರ್ತತೆಯನ್ನು ಬಿತ್ತರಿಸಿದೆ.

ಕನ್ನಡ ಸಾಹಿತ್ಯ ಕಾಲಧರ್ಮ, ಮತಧರ್ಮ ಮತ್ತು ಮನೋಧರ್ಮದಲ್ಲಿ ಸ್ಪಂಧಿಸುತ್ತಾ ಅದರ ಅಭಿವ್ಯಕ್ತಿ ಹಾಗೂ ಇವುಗಳ ಪ್ರತಿಕ್ರಿಯಾತ್ಮಕ ರೂಪವಾಗಿ ಮೂಡಿದೆ. ಇದು ಪಂಪನ 'ಮನುಷ್ಯಜಾತಿ ತಾನೊಂದೆವಲಂ' ನಿಂದಿಡಿದು ಕುವೆಂಪು ಅವರ "ವಿಶ್ವಮಾನವ ಪ್ರಜ್ಞೆ"ವರೆಗಿನ ಸಾಹಿತ್ಯ ನೆಲೆಯಲ್ಲಿ ಅವುಗಳ ಮೂಲವನ್ನು ಹುಡುಕ ಹೊರಟರೆ ಹಲವಾರು ಹೊಸ-ಹೊಸ ವಿಷಯಗಳು ದೊರೆಯುತ್ತಾ ಹೋಗುತ್ತವೆ. ಅಂತಹ ಹೊಸ-ಹೊಸ ವಿಷಯಗಳು ದೊರೆತಂತೆ ಅವುಗಳ ಮೇಲೆ ಮತ್ತಷ್ಟು ಆಸಕ್ತಿ ಹೆಚ್ಚಾಗುವುದರೊಂದಿಗೆ ಅದು ಸಂಶೋಧನೆಗೆ ದಾರಿ ಮಾಡಿಕೊಡುತ್ತದೆ. ಇದು ಸಾಹಿತ್ಯ ಮತ್ತು ಸಂಶೋಧನೆಯ ಕ್ರಿಯಾಶೀಲತೆಯನ್ನು ಸಾಬೀತುಪಡಿಸಿದೆ. ಯಾವುದೇ ಒಂದು ಕ್ಷೇತ್ರದ ವಿಸ್ತಾರವನ್ನು ತಿಳಿಯಲು ಸಂಶೋಧನೆ ಎಂಬುದು ಒಂದು ಮಾನದಂಡವಾಗಿದೆ. ಹಾಗಾಗಿ ಸಂಶೋಧನೆಯು ಕನ್ನಡ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸಿದ್ದಲ್ಲದೆ, ಹೊಸ ಸಾಧ್ಯತೆಗಳಿಗೆ ಎಡೆ ಮಾಡಿಕೊಟ್ಟಿದೆ. ಆಧುನಿಕ ಕನ್ನಡ ಸಾಹಿತ್ಯ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ವಿಭಿನ್ನ ಸಂಸ್ಕೃತಿಯ ಹೊಸ ರೂಪುರೇಷೆಗಳು ಕನ್ನಡ ಸಾಹಿತ್ಯದಲ್ಲಿ ಬದಲಾವಣೆಯನ್ನು ಕಂಡವು. ಆದ್ದರಿಂದಲೇ ಕನ್ನಡ ಸಾಹಿತ್ಯ ಸಂಶೋಧನೆಯು ಬದಲಾವಣೆಯ ಹಾದಿಯನ್ನು ಹಿಡಿಯಿತು ಎಂಬುದು ಇದರಿಂದ ಸ್ಪಷ್ಟವಾಗಿ ಅರಿವಾಗುತ್ತದೆ.

೨೦ನೇ ಶತಮಾನದ ಹೊಸ ಚಿಂತನೆಗಳ ಕೊಡುಗೆಗಳ ಸಾಲಿನಲ್ಲಿ ಸಂಶೋಧನೆಯು ಒಂದು. ಈಗಾಗಲೇ ರೂಪಿತವಾಗಿರುವ ಕಲಾಕೃತಿಗಳು ವಿಭಿನ್ನ ನೆಲೆಗಳ ಹೊಸ ಶೋಧವನ್ನು ಹೊಸ ಚಿಂತನೆಯ ನೆಲೆಯಲ್ಲಿ ನೋಡ ಹೊರಟಿದ್ದು ಸಂಶೋಧನೆಯ ಹಿರಿಮೆ, ಹಾಗಾಗಿ ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯ ಪರಂಪರೆಯ ಸಂಶೋಧನೆಗಳ ಜೊತೆಗೆ ಆಧುನಿಕ ಸಾಹಿತ್ಯಗಳ ತೌಲನಿಕ ವಿವೇಚನೆ, ತಾತ್ವಿಕ ಹಾಗೂ ಮೌಲಿಕ ಚಿಂತನೆಗಳು, ಸಾಂಸ್ಕೃತಿಕ ಭಿನ್ನತೆಗಳು ಮತ್ತು ವ್ಯಕ್ತಿ ಅಧ್ಯಯನಗಳಾಚೆಗೂ ಸಂಶೋಧನೆ ತನ್ನ ಬಾಹುಗಳನ್ನು ವಿಸ್ತರಿಸಿಕೊಳ್ಳುತ್ತಲೆ ಬಂದಿದ್ದು ಅವುಗಳ ಸಂಕ್ಷಿಪ್ತ ಚಿತ್ರಣವನ್ನು ಕೆಳಕಂಡಂತೆ ನೋಡಬಹುದು.

ನವೋದಯ ಸಾಹಿತ್ಯದ ಮುಖ್ಯ ಲೇಖಕರೆಂದರೆ ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಮಾಸ್ತಿ, ಶಿವರಾಮ ಕಾರಂತ, ಪು.ತಿ.ನ, ಈ ಲೇಖಕರು ವಾಸ್ತವ ಮಾರ್ಗವನ್ನು ಆಯ್ದುಕೊಂಡು ತಮ್ಮ ಪರಿಸರದಲ್ಲಿ ಹುಟ್ಟಿದ ಆಸ್ಥೆ ಮತ್ತು ವಾಸ್ತವವನ್ನು ಹಿಡಿದಿಡುವಲ್ಲಿ ಭಾಷೆಯ ಸಾಮರ್ಥ್ಯದ ಬಗ್ಗೆ ತುಂಬಾ ವಿಶ್ವಾಸವುಳ್ಳ ಲೇಖಕರು. ಸಮಾಜವನ್ನೇ ವಸ್ತುವನ್ನಾಗಿ ಆರಿಸಿಕೊಂಡು ವೈವಿಧ್ಯಪೂರ್ಣವಾದ ಕರ್ನಾಟಕದ ಪ್ರಾದೇಶಿಕ ಜೀವನವನ್ನು ದಾಖಲೆಗೊಳಿಸುವ ಒಳ್ಳೆಯ ಬರಹಗಾರರು ನವೋದಯ ಕವಿಗಳು. ಪ್ರಗತಿಶೀಲ ಕವಿಗಳು ಅ.ನ.ಕೃ, ತ.ರಾ.ಸು, ಶ್ರೀರಂಗ, ಚದುರಂಗ, ಬಸವರಾಜಕಟ್ಟೀಮನಿ, ನಿರಂಜನ. ಇವರೆಲ್ಲರೂ ತಮಗೆ ಲಭ್ಯವಿದ್ದ ಎಲ್ಲಾ ಸಾಹಿತ್ಯ ಪ್ರಕಾರಗಳನ್ನು ಉಪಯೋಗಿಸಿಕೊಂಡವರು. ವಿಚಾರ ಪ್ರಚೋದನೆ ಮತ್ತು ಭಾವಶುದ್ಧಿ ಅವುಗಳ ಗುರಿಯಾಗಿ ಪ್ರಗತಿಶೀಲರು ಒಂದೆಡೆ ತಂದವರು. ಧರ್ಮ, ತತ್ವಜ್ಞಾನ ಮತ್ತು ಸಾಹಿತ್ಯ ಎಲ್ಲವುಗಳ ಉದ್ದೇಶ ಜೀವನವನ್ನು ಪವಿತ್ರಗೊಳಿಸಿ ಅದನ್ನು ಶುಭಕರವಾಗಿ ಮಾಡುವುದು ಮತ್ತು ಸಾಂಪ್ರದಾಯಿಕ ಮೌಲ್ಯಗಳ ಮೇಲೆ ನಿಂತ ಸಾವಯವ ಸಮಾಜ ಮತ್ತು ಆಧುನಿಕ ಒತ್ತಡಗಳಿಂದ ಅದರ ವಿಘಟನೆ, ಕುಟುಂಬದ ಶಿಥಿಲೀಕರಣ, ಲೈಂಗಿಕತೆ ಹಾಗೂ ವಿವಾಹ, ಕಲಾವಿದ ಮತ್ತು ಅವನ ಜಗತ್ತನ್ನು ಪ್ರಗತಿಶೀಲ ಬರಹಗಾರರಲ್ಲಿ ಕಾಣಬಹುದು ಸಂಪ್ರದಾಯ ಮತ್ತು ಆಧುನಿಕತೆಗಳ ಹೋರಾಟದಲ್ಲಿ ಸಿಕ್ಕಿ ಬದಲಾಗುತ್ತಿರುವ ಸಮಾಜದ ಬೃಹತ್ ಚಿತ್ರವನ್ನೇ ಪ್ರಗತಿಶೀಲ ಲೇಖಕರ ಚಿಂತನೆಗಳಲ್ಲಿ ಕಾಣಬಹುದು.

ನವ್ಯ ಕವಿಗಳಾದ ವಿ.ಕೃ.ಗೋಕಾಕ್, ಗೋಪಾಲಕೃಷ್ಣ ಅಡಿಗ, ಯು.ಆರ್. ಅನಂತಮೂರ್ತಿ, ಪಿ.ಲಂಕೇಶ್, ಶಾಂತಿನಾಥದೇಸಾಯಿ, ಬಿ.ಸಿ.ರಾಮಚಂದ್ರಶರ್ಮ, ಎ.ಕೆ.ರಾಮಾನುಜನ್, ಯಶವಂತ ಚಿತ್ತಾಲ, ಕೆ.ಪಿ.ಪೂರ್ಣಚಂದ್ರತೇಜಸ್ವಿ, ಈ ಲೇಖಕರ ನವ್ಯ ಸಾಹಿತ್ಯದ ಬರಹದಲ್ಲಿ ಹೊಸತನ ಹಾಗೂ ಅವುಗಳ ಮೌಲ್ಯಪ್ರಜ್ಞೆಗೂ ಇರುವ ನಿಕಟ ಸಂಬಂಧವನ್ನು ಗುರುತಿಸಬಹುದು. ಆತ್ಮನಿಷ್ಠ ಅನುಭವವನ್ನೇ ಪ್ರಮಾಣವೆಂದು ಸ್ವೀಕರಿಸುವ ನವ್ಯ ಸಾಹಿತ್ಯದ ಕಥನಗಳ ನಾಯಕರು ಸಂಸ್ಕೃತಿ ಜನ್ಯ ಮೌಲ್ಯಗಳನ್ನು ಇದ್ದಕ್ಕಿದ್ದಂತೆ ಒಪ್ಪಿಕೊಳ್ಳದೇ ಇರುವಂತಹ ಮನೋಧರ್ಮ ಮತ್ತು ತಾತ್ವಿಕ ದೃಷ್ಟಿ ಹೊಸ ಮೌಲ್ಯಗಳನ್ನು ಶೋಧಿಸುವುದರ ಮೂಲಕ ಸಂಸ್ಕೃತಿಯ ಸ್ವರೂಪವನ್ನೇ ಬದಲಿಸಲು ನವ್ಯ ಕಥನಸಾಹಿತ್ಯಕಾರರು ಪ್ರಯತ್ನಿಸಿದ್ದಾರೆ. ಈ ರೀತಿಯಾಗಿ ನವ್ಯ ಸಾಹಿತ್ಯದ ಧೋರಣೆಗಳು ಪ್ರಬಲವಾಗಿದ್ದ ಕಾಲದಲ್ಲೇ ಪೂರ್ಣಚಂದ್ರ ತೇಜಸ್ವಿ ಹಾಗೂ ಲಂಕೇಶರು ಬರವಣಿಗೆ ಪ್ರಾರಂಭಿಸಿ ಅನಂತರ ಅದರಿಂದ ಹೊರಬಂದು ನವ್ಯಕ್ಕಿಂತ ವಿಭಿನ್ನವಾಗಿ ಚಿಂತಿಸಿದರು. "ಕನ್ನಡ ಸಾಹಿತ್ಯ ನವ್ಯ ಸಂಪ್ರದಾಯವನ್ನು ಸಂಪೂರ್ಣ ತೊರೆದು ಹೊಸ ದಿಕ್ಕಿನಲ್ಲಿ ಅನ್ವೇಷಿಸಬೇಕಾಗಿದೆ". ಎಂದು ತಮ್ಮ ಅಬಚೂರಿನ ಪೋಸ್ಟಾಫೀಸು ಕಥಾಸಂಕಲನದ ಮುನ್ನುಡಿ ಹೊಸ ದಿಗಂತದೆಡೆಗೆ ಎಂಬಲ್ಲಿ ತಿಳಿಸಿದ್ದಾರೆ. ನವ್ಯದ ಅನಂತರ ದಲಿತ-ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ದೇವನೂರಮಹಾದೇವ, ಸಿದ್ದಲಿಂಗಯ್ಯ, ಬರಗೂರುರಾಮಚಂದ್ರಪ್ಪ,

ಕಾಳೇಗೌಡನಾಗವಾರ, ಇನ್ನೂ ಮುಂತಾದವರು ಕನ್ನಡ ಸಾಹಿತ್ಯಕ್ಕೆ ಅವರವರ ಚಿಂತನೆಗಳ ಮೂಲಕ ಒಂದು ಎತ್ತರದ ಸ್ಥಾನವನ್ನು ತಂದುಕೊಟ್ಟಿದ್ದಾರೆ.

ಪಿ.ಲಂಕೇಶರ ಕಥನಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ ನನ್ನ ಸಂಶೋಧನಾತ್ಮಕ ಚಿಂತನೆಯ ಪರಿಕಲ್ಪನಾ ಹಿನ್ನೆಲೆಯಲ್ಲಿ ಈವರೆಗೆ ನಡೆದಿರುವ ಅಧ್ಯಯನಗಳನ್ನು ನೋಡೋಣ

***ಡಾ.ಎಚ್.ಶಿವಕುಮಾರ್ ಅವರು 'ಪಿ.ಲಂಕೇಶರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ – ಒಂದು ಅಧ್ಯಯನ'** ಎಂಬ ಶೀರ್ಷಿಕೆಯಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ ಈ ಸಂಶೋಧನಾ ಪ್ರಬಂಧದಲ್ಲಿ ಲಂಕೇಶರ ಬಹುಮುಖಪ್ರತಿಭೆ ಅನಾವರಣ ಮಾಡಲು ಲಂಕೇಶರ ಸಾಹಿತ್ಯ ಲೋಕ, ವ್ಯಕ್ತಿ ಮತ್ತು ಸಮಾಜದಗ್ರಹಿಕೆ, ಮನುಷ್ಯ ಪರಿಕಲ್ಪನೆಯಲ್ಲಿ ಆಧುನಿಕತೆ ಮತ್ತು ಸ್ತ್ರೀ ಪುರುಷ ಸಂಬಂಧಗಳು ಆಧುನಿಕತೆಯ ಮೂಲಕ ಮನುಷ್ಯನ ವಿನಾಶ, ಮನುಷ್ಯನ ಭ್ರಷ್ಟತೆ, ಗೋಸುಂಬೆತನ ಸ್ತ್ರೀ ಪುರುಷ ಸಂಬಂಧಗಳು, ವಸ್ತು ನಿರೂಪಣಾ ತಂತ್ರಗಳನ್ನು ವ್ಯಕ್ತಿನಿಷ್ಠ ನೆಲೆ ಹಾಗೂ ಸಮಷ್ಠಿ ನೆಲೆಯಲ್ಲಿ ಲಂಕೇಶರ ಕಾದಂಬರಿಗಳನ್ನು ಇವರು ಸಾಮಾಜಿಕ ಪ್ರಜ್ಞೆಯ ನೆಲೆಯಲ್ಲಿ ನೋಡಿದ್ದಾರೆ. ಲಂಕೇಶರ ಕಥನ ಸಾಹಿತ್ಯದಲ್ಲಿ ಸಮಾಜವನ್ನು ಗ್ರಹಿಸಿರುವ ರೀತಿ, ನೇರವಾದ ನುಡಿ ಅವರ ವ್ಯಕ್ತಿತ್ವದ ರೀತಿಯನ್ನು ಪಾತ್ರಗಳ ಮೂಲಕ ಅವರು ಸಂಬಂಧಗಳನ್ನು ಮನುಷ್ಯತ್ವದ ಹಿನ್ನೆಲೆಯಲ್ಲಿ ಗ್ರಹಿಸುವ ಕ್ರಮವನ್ನು ನೋಡಬಹುದು. ಪಿ.ಲಂಕೇಶರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಕಟ್ಟಿಕೊಡುತ್ತಾ ಮನುಷ್ಯ ಸಂಬಂಧಗಳನ್ನು ಬಹಳ ಮುಖ್ಯವಾಗಿ ಲೇಖಕರು ತರುತ್ತಾರೆ. ಸಾಂಪ್ರದಾಯಿಕ ಸಮಾಜದ ಬದುಕಿನ ನೆಲೆಗಟ್ಟುಗಳಲ್ಲಿ ಜಾತಿ–ವರ್ಗಗಳಿಗೆ ಆಧುನಿಕತೆಯು ಹೊಸ ಬಗೆಯ ಆಯಾಮಗಳನ್ನು ತಂದುಕೊಟ್ಟ ರೀತಿಯನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಸಾಮಾಜಿಕವಾಗಿ ಸಮಾನತೆಯನ್ನು ಪಡೆಯುವ ಮನಸ್ಸುಗಳನ್ನು ಲಂಕೇಶರು ತಮ್ಮ ಕಥನ ಸಾಹಿತ್ಯದಲ್ಲಿ ತರುತ್ತಾರೆ. ಜೊತೆಗೆ ಶೈಕ್ಷಣಿಕವಾಗಿ ಆದಂತಹ ಅರಿವು ಎಲ್ಲಾ ಸಮಸ್ಯೆಗಳಿಂದ ಬಿಡುಗಡೆಯನ್ನು ಪಡೆಯುವ ದಾರಿಯನ್ನು ಕಂಡುಕೊಳ್ಳಲು ನೆರವಾಗುತ್ತದೆ. ಆ ಮೂಲಕ ಮನುಷ್ಯ ಸಂಬಂಧಗಳು ಗಟ್ಟಿಗೊಳ್ಳಲು ಮತ್ತಷ್ಟು ಸಹಾಯಕವಾಗುತ್ತವೆ. ಇಂತಹ ಗಟ್ಟಿತನವನ್ನು ಎತ್ತಿ ತೋರಿಸುವ ಕೆಲಸ ಸಂಶೋಧನೆಯಲ್ಲಿ ಆಗಬೇಕಿದೆ.

*** ಸಿ.ವೆಂಕಟೇಶ – 'ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ',** ಎಂಬ ಶೀರ್ಷಿಕೆಯಲ್ಲಿ ಪ್ರೊ.ಕಿ.ರಂ.ನಾಗರಾಜ ಅವರ ಮಾರ್ಗದರ್ಶನದಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಶೋಧನಾ ಗ್ರಂಥ ಇದಾಗಿದೆ. ಈ ಗ್ರಂಥದಲ್ಲಿ ನವ್ಯ ಸಂದರ್ಭದ ಗ್ರಾಮ ಸಮಾಜವನ್ನು ಪ್ರಾತಿನಿಧಿಕ ಕೃತಿಗಳ ಜೊತೆಯಲ್ಲಿ ಚರ್ಚಿಸಿದ್ದಾರೆ. ಮತ್ತು ಆರಂಭದ ಗ್ರಹಿಕೆಯ ನೆಲೆಯಲ್ಲಿ ನವ್ಯ ಘಟ್ಟದ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜದ ಚಿಂತನೆಗಳನ್ನು ಕಾಣಬಹುದು

ಮುಸ್ಸಂಜೆಯ ಕಥಾಪ್ರಸಂಗವನ್ನು ಸಮಗ್ರ ಗ್ರಾಮ ಭಾರತದ ಕತೆಯಾಗಿ ನೋಡಿರುವ ಕ್ರಮವನ್ನು ಕಾಣಬಹುದು.

ಜೀವ ಪ್ರೀತಿಯ ಹೊಸದಾರಿಯನ್ನು ಹುಡುಕುತ್ತಾ ವಾಸ್ತವ ಬದುಕಿನ ಅಂಶಗಳನ್ನು ಕಲ್ಲು ಕರಗುವ ಸಮಯ ಮತ್ತು ಇತರ ಕತೆಗಳ ಮೂಲಕ ನೋಡಿರುವ ಕ್ರಮವನ್ನು ಹಾಗೂ ಗ್ರಾಮಸಮಾಜದ ಬದುಕಿನ ಕ್ರಮವನ್ನು ಲಂಕೇಶರು ಹೇಗೆ ನಿರೂಪಿಸಿದ್ದಾರೆ. ಅವರ ಸಾಹಿತ್ಯದ ಸೂಕ್ಷ್ಮತೆಗಳೇನು? ಎಂಬುದನ್ನು ಗುರುತಿಸುತ್ತಾ ಸಾಗಿದ್ದಾರೆ.

ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮಸಮಾಜ ವಿಶಿಷ್ಟವಾಗಿ ಮೂಡಿ ಬಂದಿರುವುದು ಹಾಗೂ ವಿಶಿಷ್ಟತೆ ಇರುವುದು ಲಂಕೇಶರು ಗ್ರಾಮೀಣ ಸಮಾಜವನ್ನು ನೋಡುವ ಬಗೆ ಮತ್ತು ಹೊಸ ದೃಷ್ಟಿಕೋನವನ್ನು ಸಂಶೋಧನೆಯಲ್ಲಿ ಗುರುತಿಸಿದ್ದಾರೆ. ಗ್ರಾಮೀಣ ಪ್ರದೇಶದ ಜೀವನ ರೀತಿಯಲ್ಲಿ ಉಂಟಾಗುತ್ತಿರುವ ಪಲ್ಲಟಗಳನ್ನು ಬದಲಾವಣೆಯನ್ನು ಬಯಸುವ ಹೊಸ-ಹೊಸ ಮನಸ್ಸುಗಳನ್ನು ಮುಖ್ಯವಾಗಿ ಇಲ್ಲಿ ಗುರುತಿಸುತ್ತಾರೆ. ಹೊಸದಾದ ಐಡಿಯಾಲಜಿ, ನಂಬಿಕೆ, ಅನಿಸಿಕೆ, ಅಭಿಪ್ರಾಯಗಳು ಬಿತ್ತರಗೊಳ್ಳುತ್ತಿರುವ ಮನಸ್ಸುಗಳನ್ನು ನಾವಿಲ್ಲಿ ಕಾಣಬಹುದು. ಹಳ್ಳಿಗಳಲ್ಲಿ ಆಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಅವುಗಳ ಗುಣದೋಷ-ಗಳೊಂದಿಗೆ ಮನುಷ್ಯನ ವ್ಯಕ್ತಿತ್ವದ ವೈವಿಧ್ಯತೆಯ ಶೋಧನಾಕಾರ್ಯ ಹೇಗೆ ನಡೆದಿದೆ ಎಂಬುದನ್ನು ಕಾಣಬಹುದು. ಕಥನ ಸಾಹಿತ್ಯದಲ್ಲಿ ಲಂಕೇಶರು ಚಿತ್ರಿಸಿರುವ ಗ್ರಾಮ ಸಮಾಜವನ್ನೂ ಅಧ್ಯಯನ ಮಾಡಿ ಅವರ ಒಟ್ಟಾರೆ ನಿಲುವುಗಳನ್ನು ಅರ್ಥ ಮಾಡಿಕೊಳ್ಳುತ್ತಾ ಮನುಷ್ಯ ಸಂಬಂಧಗಳನ್ನು ಮತ್ತಷ್ಟು ಹುಡುಕುವ ಪ್ರಯತ್ನವನ್ನೂ ನನ್ನ ಸಂಶೋಧನೆಯಲ್ಲಿ ಕೈಗೊಂಡಿದ್ದೇನೆ.

*** ಸಿ.ಜೆ. ರಮೇಶ್ – 'ಪಿ.ಲಂಕೇಶ್ ಕಥನ : ಆಧುನಿಕ ಸಾಮಾಜಿಕ ಸಂರಚನೆ ತಾತ್ವಿಕತೆ'**

ಡಾ. ಲೋಲಾಕ್ಷಿ ಎನ್.ಕೆ. ಯವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿದ ಸಂಶೋಧನಾ ಪ್ರಬಂಧ ಇದಾಗಿರುತ್ತದೆ. ಈ ಪ್ರಬಂಧದಲ್ಲಿ ಆಧುನಿಕ ಸಾಮಾಜಿಕ ಸಂರಚನೆಯ ಮೂಲಕ ಲಂಕೇಶರ ಕಥನವನ್ನು ನೋಡಲು ಮುಂದಾಗಿದ್ದಾರೆ. ಕಾದಂಬರಿ ಸಾಹಿತ್ಯ ಸ್ವರೂಪ ಮತ್ತು ವಿವಿಧ ನೆಲೆಗಳು ಸಾಮಾಜಿಕ ಘಟಕಗಳಲ್ಲಿ ಶೋಧಿಸಲ್ಪಡುವ ಜೀವನ ಮೌಲ್ಯಗಳು. ಲಂಕೇಶರು ಸೃಷ್ಟಿಸಿದ ಸಾಮಾಜಿಕ ಸ್ತರದ ರಚನೆಯಲ್ಲಿ ಹೇಳುವ ಬದುಕಿನ ಆಯಾಮಗಳನ್ನು ಸಂಶೋಧಕರು ನೋಡಿದ್ದಾರೆ. ಲಂಕೇಶರು ಕಥೆ, ಕವಿತೆ, ನಾಟಕ, ಸಿನಿಮಾ, ಪತ್ರಿಕೆ ಹೀಗೆ ಸಾಹಿತ್ಯ ಸಂಸ್ಕೃತಿಯ ಹತ್ತಾರು ಮಾರ್ಗಗಳನ್ನು ಅವರು ಹುಡುಕಿಕೊಂಡು ಜನಪರ ಕಾಳಜಿಯನ್ನು ಕಂಡವರು. ವಿಶೇಷವಾಗಿ ಲಂಕೇಶರ ಕೃತಿಗಳ ಸಾಮಾಜಿಕ ಸಂರಚನೆಯನ್ನೇ ಅಧ್ಯಯನದ ಉದ್ದೇಶವನ್ನಾಗಿಸಿಕೊಂಡು ಬರಹಗಳ ತೀವ್ರತೆಯನ್ನು ಗಮನಿಸಿದರೆ ಅವರ

ಸೃಜನಶೀಲತೆಯ ಮನಸ್ಸು ತಿಳಿಯುತ್ತದೆ. ಪಿ.ಲಂಕೇಶರು ಮನುಷ್ಯ ಪಾತ್ರಗಳ ಮೂಲಕ ಏನೆಲ್ಲಾ ಸಂಬಂಧಗಳನ್ನು ಬದುಕಿನ ಜೀವಂತಿಕೆಯನ್ನು ಕಟ್ಟುತ್ತಾರೆ ಎಂಬುದನ್ನು ಕಾಣುತ್ತೇವೆ.

**ಕವಿತ ಕೆ.ಜೆ – 'ಲಂಕೇಶ್ ಮತ್ತು ಪೂರ್ಣಚಂದ್ರ ತೇಜಸ್ವಿ ಅವರ ಸಣ್ಣ ಕಥೆಗಳ ತೌಲನಿಕ ಅಧ್ಯಯನ'.**

ಈ ಸಂಶೋಧನಾ ಪ್ರಬಂಧವನ್ನು ಪ್ರೊ.ಎಂ.ಎಸ್. ಶೇಖರ್ ರವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಈ ಮಹಾಪ್ರಬಂಧದ ಹರವು ಇಬ್ಬರು ಲೇಖಕರ ಕಥಾಸಾಹಿತ್ಯದಲ್ಲಿ ತೌಲನಿಕವಾಗಿ ವಿಸ್ತಾರವನ್ನು ಕಂಡುಕೊಂಡಿದೆ. ಲಂಕೇಶ್ ಮತ್ತು ತೇಜಸ್ವಿ ಇವರ ಸಾಂಸ್ಕೃತಿಕ ಪರಿಸರ ಸಾಹಿತ್ಯ ಹಾಗೂ ಸಮಾಜ ಸೇವೆಗಳಿಗೆ ಸಿಕ್ಕ ಮನ್ನಣೆ ಮತ್ತು ಪ್ರೇರಣೆ ಹಾಗೂ ಸಾಹಿತ್ಯಕ ಸ್ಪೂರ್ತಿ ಚಿತ್ರಿತವಾಗಿರುವುದು ನವ್ಯಕಥಾ ಸಾಹಿತ್ಯದ ಹಿನ್ನೆಲೆಯ ಕಥೆಗಳಲ್ಲಿನ ನಿರೂಪಣಾತಂತ್ರ ವಸ್ತು ವೈವಿದ್ಯತೆ ಭಾಷೆ ಅವರ ಬಹುಮುಖ ಆಸಕ್ತಿಗಳು, ಸಮಾಜದ ಸಂಬಂಧಗಳಲ್ಲಿ ಕಥನ ಪ್ರಯೋಗದ ನೆಲೆಗಟ್ಟಿನ ಇಬ್ಬರು ಲೇಖಕರು ವಿಭಿನ್ನ ಸಾಂಸ್ಕೃತಿಕ ಪರಿಸರದಿಂದ ಬಂದಿದ್ದರೂ ಅವರ ಸೃಜನಶೀಲತೆ ಪರಿಸರದ ಬಗೆಗಿನ ಕಾಳಜಿ ಮುಂತಾದವುಗಳ ಬಗೆಗೆ ಸಮಾನ ಆಸಕ್ತಿಯಿರುವುದನ್ನು ಸಂಶೋಧಕರು ಗುರುತಿಸಿದ್ದು ವಿಭಿನ್ನ ಬರಹಗಾರರ ಕಥನ ಸಾಹಿತ್ಯವನ್ನು ತೌಲನಿಕವಾಗಿ ಅಧ್ಯಯನ ನಡೆಸಿದ್ದಾರೆ.

ಲಂಕೇಶ್ ಮತ್ತು ತೇಜಸ್ವಿಯವರ ಕಥಾಸಾಹಿತ್ಯದಲ್ಲಿ ಮನುಷ್ಯ ಸಂಬಂಧಗಳನ್ನು ಬಹಳ ತೀಕ್ಷ್ಣವಾಗಿ ಗುರುತಿಸಬಹುದು ಪ್ರಾಕೃತಿಕ ಪರಿಸರದಲ್ಲಿರುವ ಪ್ರಾಣಿಪಕ್ಷಿಗಳೊಂದಿಗೆ ಮನುಷ್ಯ ಸಂಬಂಧಗಳನ್ನು ಬಹಳ ಮುಖ್ಯವಾಗಿ ತೇಜಸ್ವಿಯವರು ಗುರುತಿಸುತ್ತಾರೆ. ಈ ನೆಲೆಗಟ್ಟಿನಲ್ಲಿ ಇಬ್ಬರು ಲೇಖಕರ ಬದುಕು ಮತ್ತು ಸಾಹಿತ್ಯವನ್ನು ಅವಲೋಕಿಸಿದಾಗ ಮಾನವಪರ ಕಾಳಜಿ ಮತ್ತು ಧೋರಣೆಯು ತಿಳಿಯುತ್ತದೆ.

*** ಯು.ಆರ್.ಅನಂತಮೂರ್ತಿ ಮತ್ತು ಪಿ.ಲಂಕೇಶರ ಕಥನ ಸಾಹಿತ್ಯದ ತೌಲನಿಕ ಅಧ್ಯಯನ'**

ಈ ಸಂಶೋಧನಾ ಪ್ರಬಂಧವನ್ನು ಬಿಂದುರಾಣಿ ಎಂಬ ವಿದ್ಯಾರ್ಥಿ ಪ್ರೊ. ಸಿ.ಪಿ.ಸಿದ್ಧಾಶ್ರಮ ಅವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಕನ್ನಡ ಸಂದರ್ಭದಲ್ಲಿ ನವ್ಯದ ಬೆಳವಣಿಗೆ ಈ ಲೇಖಕರ ಕೃತಿಗಳ ಮೂಲಕ ಹೇಗೆ ನಡೆದಿದೆ ಎಂಬುದನ್ನು ತಿಳಿಸಿದ್ದಾರೆ. ನವ್ಯ ಸಾಹಿತ್ಯ ಒಂದು ಚಳವಳಿಯಾಗಿ ರೂಪುಗೊಂಡಿದ್ದರ ಬಗ್ಗೆ ತಿಳಿಸುತ್ತಾ ನವ್ಯದ ಉತ್ತುಂಗದ ಸಮಯದಲ್ಲಿ ಲಂಕೇಶ್ ಮತ್ತು ಅನಂತಮೂರ್ತಿಯವರ ಕಥನಸಾಹಿತ್ಯದ ಬಗ್ಗೆ ವಿವೇಚಿಸಿದ್ದಾರೆ.

ಅನಂತಮೂರ್ತಿಯವರ ಕೃತಿಗಳು ಹಾಗೂ ಪಿ. ಲಂಕೇಶರ ಕೃತಿಗಳ ವಿಶಿಷ್ಠ ಸಂವೇದನೆ ವೈಚಾರಿಕತೆ, ಪಾಶ್ಚಾತ್ಯ ದೃಷ್ಠಿಕೋನಗಳು ಇವುಗಳಿಂದ ಹೇಗೆ ಕನ್ನಡದ ನವ್ಯ ಸಂದರ್ಭದ ಮಹತ್ವದ ಲೇಖಕರಾದರು ಎಂಬುದನ್ನು ವಿವರಿಸಿದ್ದಾರೆ ಹಾಗೆಯೇ ಮಿತಿಗಳನ್ನು ಗುರುತಿಸಿದ್ದಾರೆ.

*** ಹಾಲತಿ ಸೋಮಶೇಖರ್ – 'ಪಿ. ಲಂಕೇಶ್ ಸಾಹಿತ್ಯ'**

ಈ ಸಂಶೋಧನಾ ಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗಿದೆ. ಈ ಬರಹದಲ್ಲಿ ಲಂಕೇಶರ ಒಟ್ಟು ಬರಹವನ್ನು ಇಟ್ಟುಕೊಂಡು ಸಂಶೋಧನೆ ಮಾಡಿದ್ದಾರೆ. ವಿಮರ್ಶೆ, ಕಥೆ, ಕಾದಂಬರಿ, ಮುಖ್ಯವಾಗಿ ಚರ್ಚೆಗೆ ಒಳಪಡಿಸಿದ್ದಾರೆ. ಈ ಮೂಲಕ ಗ್ರಾಮ ಸಮಾಜದ ಚಿಂತನೆಗಳು ಪಡಿಮೂಡಿರುವ ನೆಲೆಗಳು ಇವುಗಳನ್ನು ಅವರು ಸಂಶೋಧನೆಗೆ ಒಳಗು ಮಾಡಿದ್ದಾರೆ. ಲಂಕೇಶರ ಬಹುಮುಖ ಆಯಾಮಗಳನ್ನು ಸಮಕಾಲೀನ ಸಾಹಿತ್ಯದೊಂದಿಗೆ ತೆರೆದು ತೋರಿಸುವ ಕೆಲಸವನ್ನು ಸಂಶೋಧನೆಯಲ್ಲಿ ಮಾಡಿದ್ದಾರೆ.

ಲಂಕೇಶರ ಸಾಹಿತ್ಯ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಸಾಹಿತ್ಯದಲ್ಲಿ ಸುಪ್ತಪ್ರಜ್ಞೆ, ಬಂಡಾಯ ಪ್ರಜ್ಞೆ, ಮಹಿಳಾ ಪ್ರಜ್ಞೆ, ಗ್ರಾಮಪ್ರಜ್ಞೆಗಳನ್ನು ಒಳಗೊಂಡಿದೆ. ಹೀಗೆ ಲಂಕೇಶರ ಒಟ್ಟು ಸಾಹಿತ್ಯವನ್ನು ಅಧ್ಯಯನದ ಮಿತಿಯಲ್ಲಿ ಸಂಶೋಧನೆಗೆ ಒಳಪಡಿಸಿ ಚರ್ಚೆಯ ಒಟ್ಟು ಸಾರವನ್ನು ಸಂಶೋಧಕರು ಸ್ಪಷ್ಟಪಡಿಸಿದ್ದಾರೆ. ಅಂದರೆ ಲಂಕೇಶರ ಸೃಜನ ಸೃಜನೇತರ ಸಾಹಿತ್ಯದ ವಿಶ್ಲೇಷಣೆ ಮಾಡಿದ್ದಾರೆ. ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಕಥನ ಸಾಹಿತ್ಯದಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ನೋಡಲಾಗಿದೆ.

*** ಎಸ್.ಎನ್. ನೀಲಗುಂದ – 'ಪಿ. ಲಂಕೇಶ ಸಮಗ್ರ ಸಾಹಿತ್ಯ'**

ಕುಮಾರಿ ಎಸ್.ಎನ್.ನೀಲಗುಂದ ಅವರು 'ಪಿ ಲಂಕೇಶ್ ಸಮಗ್ರ ಸಾಹಿತ್ಯ' ಎಂಬ ಶೀರ್ಷಿಕೆಯಡಿಯಲ್ಲಿ ಸಂಶೋಧನೆ ಕೈಗೊಂಡು ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಅವರು ಮಾಡಿಕೊಂಡ ಅಧ್ಯಯನ ವಿಭಾಗ ಕ್ರಮಗಳು, ಅವರು ನಿರ್ವಹಿಸಿದ ಸಾಹಿತ್ಯ ವಿಮರ್ಶೆ, ಅವರು ನೋಡಿದ ದೃಷ್ಠಿಕೋನ ಮಹಾಪ್ರಬಂಧದಲ್ಲಿ ಅವರ ವಿವರಗಳನ್ನು ಆಳವಾಗಿ ಅಧ್ಯಯನ ಮಾಡಿ ವಿವರಿಸಿದ್ದಾರೆ. ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವವನ್ನು ವಿವರಿಸಿದ್ದು ಅಧ್ಯಾಯ ಎರಡರಲ್ಲಿ ಲಂಕೇಶ್ ವ್ಯಕ್ತಿತ್ವದ ವಿವಿಧ ಮುಖಗಳ ಪರಿಚಯ ಮಾಡಿದ್ದಾರೆ. ಅಂದರೆ ಪ್ರಾಧ್ಯಾಪಕ, ನಟ–ನಿರ್ದೇಶಕ, ನಿರ್ಮಾಪಕ, ಪತ್ರಕರ್ತ, ಕ್ರಾಂತಿಕಾರಿ, ವಿಚಾರವಾದಿ, ವೈಚಾರಿಕತೆ, ವಿಮರ್ಶೆ, ಅನುವಾದಕ, ಪತ್ರಿಕಾಸಂಪಾದಕ, ಪ್ರಕಾಶಕ, ಮಾಲಿಕ, ಸಾಹಸಪ್ರಿಯ ಉತ್ಸಾಹದ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಲಂಕೇಶರ ಕಾದಂಬರಿ ಸಾಹಿತ್ಯ ಎಂಬ ಪರಿಕಲ್ಪನೆಯಲ್ಲಿ ರಾಜಕೀಯ ಪರಿಕಲ್ಪನೆ, ದಲಿತಪ್ರಜ್ಞೆ, ಕಾಮದ ಪರಿಕಲ್ಪನೆಯನ್ನು ವಿಸ್ತೃತವಾಗಿ ಸಾದರಪಡಿಸಿದ್ದಾರೆ.

ಅಧ್ಯಾಯ ಐದರಲ್ಲಿ ಲಂಕೇಶರ ನಾಟಕ ಸಾಹಿತ್ಯವನ್ನು ಕುರಿತು ವಿವೇಚಿಸಿದ್ದು. ಆ ಭಾಗದಲ್ಲಿ ಅಸಂಗತ ನಾಟಕಗಳು ಸಂಕೀರ್ಣ ನಾಟಕಗಳ ಬಗ್ಗೆ ವಿವರಣೆ ನೀಡಲಾಗಿದೆ. ಅಧ್ಯಾಯ ಆರರಲ್ಲಿ ಲಂಕೇಶರ ಪತ್ರಿಕಾ ಸಾಹಿತ್ಯವನ್ನು ನಿಷ್ಠುರ, ಪರ್ತಕರ್ತ ಬರಹಗಾರರ ಸೃಷ್ಟಿಕರ್ತ, ಪತ್ರಿಕಾ ಧೋರಣೆ, ಅಭಿಮಾನಿಗಳ ಅನಿಸಿಕೆ, ಅಂಕಣ, ಬರಹಗಳ ಬಗೆಗೆ ವಿವರಣೆ ನೀಡಿದ್ದಾರೆ. ಅಧ್ಯಾಯ ಏಳರಲ್ಲಿ ಲಂಕೇಶರ ಕವನಗಳು ಎಂಬ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯ ಆಶಯ, ವಿಡಂಬನೆ, ಸತ್ಯಾನ್ವೇಷಣೆ ಹಾಗೂ ಅಧ್ಯಾಯ ಎಂಟರಲ್ಲಿ ಲಂಕೇಶರ ಇತರ ಸಾಹಿತ್ಯ ಪ್ರಕಾರಗಳಿಂದ ಸಂಪಾದನಾ ಸಾಹಿತ್ಯ, ವಿಮರ್ಶೆ, ಲೇಖನ, ಅನುವಾದ, ಸಿನಿಮಾ, ಸಾಹಿತ್ಯ ಆತ್ಮಕಥನದ ವಿಶ್ಲೇಷಣೆಯನ್ನು ಮಾಡಿದ್ದಾರೆ. ಕೊನೆಯ ಅಧ್ಯಾಯದಲ್ಲಿ ಸಮಾರೋಪ ಒಟ್ಟು ಫಲಿತಗಳನ್ನು ನೀಡಿದ್ದಾರೆ.

* **'ಕನ್ನಡ ನವ್ಯ ಕಾದಂಬರಿಗಳಲ್ಲಿ ಮನುಷ್ಯರ ಪರಿಕಲ್ಪನೆ'** – ಎಚ್.ಪಿ.ಗೀತಾ ಈ ಮಹಾಪ್ರಬಂಧವನ್ನು ಪ್ರೊ.ಆರ್.ವಿ.ಎಸ್.ಸುಂದರಂ ಅವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ್ದಾರೆ. ನವ್ಯಕಾದಂಬರಿಕಾರರಲ್ಲಿ ಪಿ.ಲಂಕೇಶರ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ಪ್ರಬಂಧದಲ್ಲಿ ಹೊಸ ನೆಲೆಯಲ್ಲಿ ಕಟ್ಟಿರುವುದನ್ನು ಕಾಣಬಹುದು. ಪಿ.ಲಂಕೇಶರ ಕಾದಂಬರಿಗಳಲ್ಲಿ ಸಮಾಜ ಎಷ್ಟೇ ಕ್ರೂರವಾದರೂ ಕ್ರೌರ್ಯದ ಅಡಿಯಲ್ಲಿ ಹೊಸ ಚೇತನವೊಂದು ಹುಟ್ಟಿಕೊಂಡು, ಅದು ಸಮಾಜವನ್ನು ವಿರೋಧಿಸದೆ ಮಾನವೀಯ ನೆಲೆಯಲ್ಲಿ ಬದುಕನ್ನು ರೂಪಿಸಿಕೊಳ್ಳುತ್ತದೆಯೆಂಬುದಕ್ಕೆ 'ಅಕ್ಕ' ಕಾದಂಬರಿಯಲ್ಲಿ ವ್ಯಕ್ತವಾಗಿರುವ ಅಂಶಗಳನ್ನು ಸಂಶೋಧಿಸಿದ್ದಾರೆ. ಮನುಷ್ಯನಿಗೆ, ಮನುಷ್ಯನ ಅಂತರಾಳದ ತುಡಿತಗಳಿಗೆ ಮಹತ್ವ ನೀಡುವ ಲಂಕೇಶರು ಮನುಷ್ಯ ಸ್ವಭಾವವನ್ನು, ವರ್ತನೆಯನ್ನು ಅವನ ವ್ಯಕ್ತಿತ್ವದಲ್ಲಿನ ಅಸಂಗತ್ವವನ್ನು ತುಂಬಾ ಸೂಕ್ಷ್ಮವಾಗಿ ಚಿತ್ರಿಸುತ್ತಾರೆ. ಹಳ್ಳಿಯಿಂದ ನಗರಕ್ಕೆ ಕಾಲಿಟ್ಟ ಮನುಷ್ಯನ ಚಿಂತನೆಗಳ ತಾಕಲಾಟಗಳನ್ನು ವಿವರಿಸುತ್ತಾರೆ. 'ಮುಸ್ಸಂಜೆಯ ಕಥಾಪ್ರಸಂಗದಲ್ಲಿ' ಆಧುನಿಕತೆಯ ಸ್ಪರ್ಶವಿಲ್ಲದೆ ಹಳ್ಳಿಯಲ್ಲಿ ಬದುಕಿಗಾಗಿ ವ್ಯವಸ್ಥೆಯವಿರುದ್ಧ ಸಂಘರ್ಷಕ್ಕಿಳಿದ ಜನಸಮೂಹದ ಕತೆಗಳನ್ನು ವಿವರಿಸಿದ್ದಾರೆ. 'ಬಿರುಕು' ಕಾದಂಬರಿಯ ಬಸವರಾಜನ ಪಾತ್ರದ ಮೂಲಕ ಥಿವರಿಸುವ ಜಗತ್ತನ್ನು ಹೊಸ ರೀತಿಯಲ್ಲಿ ತೆರೆದುಕೊಳ್ಳುವ ಮಾನಸಿಕ ಸ್ಥಿತ್ಯಂತರದ ಚಿಂತನೆಯಲ್ಲಿ ಬಸವರಾಜುವಿನ ಪ್ರಜ್ಞೆಯು ರೂಪುಗೊಳ್ಳುವುದನ್ನು ಕಾಣಬಹುದು. ವಸಾಹತು–ವಸಾಹತೋತ್ತರ ಪ್ರಜಾಪ್ರಭುತ್ವ ಸಮಾಜದ ರಾಜಕೀಯ ಸ್ಥಿತ್ಯಂತರಗಳನ್ನು ಲಂಕೇಶರ ಕಾದಂಬರಿಯಲ್ಲಿ ನೋಡುವ ಪ್ರಯತ್ನವನ್ನು ಮಾಡಿದ್ದಾರೆ.

*** 'ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ ಮತ್ತು ಪಿ.ಲಂಕೇಶ್ ಅವರ ಕಥೆಗಳಲ್ಲಿ ಸ್ತ್ರೀಪಾತ್ರಗಳು' – ಎಂ.ಕೆ.ಮಂಜುಳ**

ಈ ಸಂಶೋಧನಾ ಮಹಾಪ್ರಬಂಧವನ್ನು ಡಾ. ಕೆ.ಎಸ್.ಗಂಗಾನಾಯಕ್ ಅವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಅರ್ಪಿಸಲಾಗಿದೆ. ನವ್ಯ ಕಾಲಘಟ್ಟದ ಪ್ರಮುಖ ಕತೆಗಾರರಾದ ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ ಮತ್ತು ಪಿ.ಲಂಕೇಶ್ ಅವರ ಸಣ್ಣಕತೆಗಳಲ್ಲಿ ಸ್ತ್ರೀಪಾತ್ರಗಳ ಹಲವು ಮಗ್ಗುಲುಗಳನ್ನು ಶೋಧಿಸಿರುವುದು ಈ ಸಂಶೋಧನೆಯ ಉದ್ದೇಶ. ಈ ದೃಷ್ಟಿಯಿಂದ ಈ ಮೂವರು ಕತೆಗಾರರ ಸಣ್ಣಕತೆಗಳಲ್ಲಿ ಸ್ತ್ರೀ ಪಾತ್ರಗಳು ಪ್ರಧಾನವಾಗಿರುವ ಸಣ್ಣಕತೆಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿದ್ದಾರೆ. ಸಣ್ಣಕತೆಗಳನ್ನೇ ಕೇಂದ್ರವಾಗಿಟ್ಟಕೊಂಡು ಅಧ್ಯಯನ ಮಾಡಲಾಗಿದೆ. ಚಿತ್ತಾಲ, ದೇಸಾಯಿ ಮತ್ತು ಪಿ.ಲಂಕೇಶರ ಸಣ್ಣಕತೆಗಳಲ್ಲಿ ಆಧುನಿಕ ತಂತ್ರಗಾರಿಕೆಯಿದೆ. ವಸ್ತು–ವಿಷಯ ನಿರೂಪಣೆಗೆ ತಂತ್ರಗಾರಿಕೆ ಪ್ರಮುಖವಾಗಿದೆ. ಕತೆಯೊಳಗೆ ಕತೆ, ಪಾತ್ರಗಳ ಮೂಲಕ ನಿರೂಪಣೆ, ಭೂತದ ಘಟನೆಗಳೊಂದಿಗೆ ವರ್ತಮಾನದ ನಿರೂಪಣೆಯನ್ನು ತಿಳಿಸಿದ್ದಾರೆ.

*** 'ಲಂಕೇಶರ ಕಥೆಗಳು: ಒಂದು ಸ್ತ್ರೀವಾದಿ ಪ್ರವೇಶದ ಸಾಧ್ಯತೆ'**

ಪದ್ಮಿನಿ ಹೆಗಡೆ ಲಂಕೇಶರ ಕಥೆಗಳ ಸ್ತ್ರೀವಾದಿ ಪ್ರವೇಶದ ಹಿನ್ನೆಲೆಯನ್ನು ಕುರಿತು ಬರೆದ ಲೇಖನವಿದು. ಬೋದಿಲೇರನ ಸಖ ಸಂಕಲನದಲ್ಲಿ ಸಂಕಲಿತಗೊಂಡಿರುವ ಈ ಲೇಖನ ಬಂದಾಗ ಪತ್ರಿಕೆ ಪ್ರಕಾಶನ ಹೊರತಂದಿರುವ "ಪಿ.ಲಂಕೇಶರ ಸಮಗ್ರಕಥೆಗಳು" ಎಂಬ ಕೃತಿಯನ್ನು ಇವರು ಮುಖ್ಯವಾಗಿರಿಸಿಕೊಂಡಿದ್ದಾರೆ. ಲಂಕೇಶರ ಕಥಾಪ್ರಪಂಚದಲ್ಲಿ ಗಂಡು–ಹೆಣ್ಣಿನ ಕೂಡುವಿಕೆಯು ಸಮಸ್ಯೆಯನ್ನು ಎದುರಿಸಬಹುದಾದ ಮೊರೆ ಹೋಗುವ ಒಂದು ಆಶ್ರಯ ತಾಣವೆಂಬಂತೆ ಚಿತ್ರಿತವಾಗಿದೆ. "ಸ್ಟೆಲ್ಲಾ ಎಂಬ ಹುಡುಗಿ" ಇದಕ್ಕೆ ಉದಾಹರಣೆಯಂತೆ ಅದನ್ನು ಚರ್ಚಿಸುತ್ತಾ ಸಮರಸದ ವೈಚಾರಿಕವಾದ ಮತ್ತು ಮಾನವೀಯ ಬದುಕಿಗೆ ಅಡ್ಡಿಯಾಗಿರುವುದು 'ಹೆಣ್ಣೇ' ಎಂದು ದೊಡ್ಡ ದನಿಯಲ್ಲಿ ಲಂಕೇಶರ ಕಥೆಗಳು ದೂಷಿಸುತ್ತವೆ ಎಂಬುದು ಆರೋಪ.

ಸ್ತ್ರೀಯ ಸಂಗ ಸುಖಬೇಕು. ಅವಳಿಗಾಗಿ ಮಿಡಿಯುವ ಹೃದಯವಂತಿಕೆ ಬೇಕು ಎಂಬುದು ಲಂಕೇಶರ ಸ್ತ್ರೀಸಂವೇದನೆಯುಳ್ಳ ಕಥೆಗಳ ಧೋರಣೆಯಾಗಿದ್ದರೂ ಅವಳನ್ನು ಒಂದು ಸಾಧನದಂತೆ ಬಳಸಿಕೊಳ್ಳಬಾರದು ಎಂಬಂತೆ ಅವಳನ್ನೂ ಎಚ್ಚರಿಸಬೇಕು. ಗಂಡನ್ನು ಎಚ್ಚರಿಸಬೇಕು ಎಂತೆನ್ನುವ ದಿಕ್ಕಿನಲ್ಲಿ ಆಗಬೇಕಾದ ಸಾಮಾಜಿಕ ಬದಲಾವಣೆಯ ಕಡೆಗೆ ಬೆರಳು ಮಾಡಿ ತೋರಿಸಬೇಕು ಎನ್ನುವುದು ಮಾತ್ರ ಲಂಕೇಶರ ಕಥೆಗಳಲ್ಲಿ ಮೂಡಿ ಬಂದಿಲ್ಲ. ಕಥೆಗಳ ತುಂಬೆಲ್ಲಾ ಭೋರ್ಗರೆಯುವ ಗಂಡಿನ ಅಬ್ಬರ ಸದ್ದಿಲ್ಲದೆ ಅವು ಯಾವ ವೈಚಾರಿಕ ನೆಲೆಗಟ್ಟಿನ ಪ್ರಸ್ತಾಪವೂ ಇಲ್ಲದೆ ಒಮ್ಮೆಗೆ ಸಂಪೂರ್ಣವಾಗಿ ತಣ್ಣಗಾಗಿ ಬಿಡುತ್ತದೆ. ಆದರೆ ಇವುಗಳಲ್ಲಿನ ಹೆಣ್ಣಿನ

ದೋಷಗಳನ್ನು ಎತ್ತಿ ಹಿಡಿಯುವ ಮಾತುಗಳು ಮಾತ್ರ ಎದ್ದು ಕಾಣುತ್ತದೆ. ಆದರೆ ಲಂಕೇಶರು ಮತ್ತೆ ಮತ್ತೆ ಪ್ರಸ್ತಾಪಿಸುವ ಮಾನವೀಯ ಬದುಕು ಇಲ್ಲಿ ಸ್ತ್ರೀತತ್ವದ ಪ್ರವೇಶಗಳಲ್ಲಿ ನಿರಾಕರಣೆಗೊಳಗಾಗಿದೆ. ನಮ್ಮ ಮುಖ್ಯ ದುರಂತವೆಂದರೆ, ಗಂಡು ತನಗೆ ಮತ್ತು ಸಮಾಜಕ್ಕೆ ಅನ್ವಯವಾಗುವಂತೆ ವ್ಯಾಖ್ಯಾನಿಸುವುದೇ ಆಗಿದೆ. ಇಲ್ಲಿ ದೈಹಿಕ ಕೂಟಕ್ಕಿಂತ ಮನಸ್ಸಿನ ಮೇಳೈಸುವಿಕೆ ಮುಖ್ಯವಾದದ್ದು. ಇಬ್ಬರೂ ಕೈ ಕೈ ಜೋಡಿಸಿ ಕೌಟುಂಬಿಕ ಜೀವನವನ್ನು ಒಪ್ಪಿಕೊಂಡರೆ ಮಾತ್ರ ಸಮರಸ ಬದುಕು ಸಾಧ್ಯವಾಗುತ್ತದೆ. ಎನ್ನುವ ಅವರ ವಾದ ಸತ್ಯವೆಂದೇ ತೋರುತ್ತದೆ.

*** 'ಸ್ಮೃತಿ ಮತ್ತು ಕೃತಿ' – ಟಿ.ಪಿ.ಅಶೋಕ**

ಲಂಕೇಶ್ ನಮಗೆ ಮುಖ್ಯವಾಗುವುದು, ಪ್ರಸ್ತುತವಾಗುವುದು ಹೇಗೆ ಎಂದರೆ ಸದ್ಯದ ರಾಜಕೀಯ, ಸಾಮಾಜಿಕ ಒತ್ತಡಗಳಿಗೆ ತೀವ್ರವಾಗಿ ಸ್ಪಂದಿಸುತ್ತಿದ್ದರೂ ಅವುಗಳಿಂದ ವಿಚಲಿತರಾಗದೆ ಕೇವಲ ರಾಜಕೀಯವಾಗಿ ಸರಿ. ಎನ್ನಿಸುವ ಜನಪ್ರಿಯ ನಿಲುವುಗಳನ್ನು ಸಲೀಸಾಗಿ ತೆಗೆದುಕೊಳ್ಳದೆ ತಮ್ಮ ಅಂತರಂಗದ ಕಾಣ್ಕೆಗಳಿಗೆ ಬದ್ದರಾಗಿ ತಾವು ಕಂಡುಕೊಂಡ ಸತ್ಯಕ್ಕೆ ನಿಷ್ಠರಾಗಿ ಬರೆಯುತ್ತಿದ್ದವರೆಂದರೆ ಲಂಕೇಶ್ ಅವರು ಇವರ ಕಥನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಬರವಣಿಗೆಯ ಹಿಂದಿನ ಉದ್ದೇಶ ಲೇಖಕ–ಓದುಗರ ಸಂಬಂಧ ಸ್ವರೂಪ ಮುಂತಾದ ಮಹತ್ವದ ತಾತ್ವಿಕ ಪ್ರಶ್ನೆಗಳು ಸುಳಿದು ಹೋಗುತ್ತವೆ.

*** 'ಲಂಕೇಶರ ಕಥೆಗಳು'**

ಡಾ.ಎಚ್.ಎಸ್.ರಾಘವೇಂದ್ರರಾವ್ ಅವರು ಕಳೆದ ಮೂರು ದಶಕಗಳ ಹರವಿನಲ್ಲಿ ಕನ್ನಡದ ಸೃಜನಶೀಲತೆಯು ಎದುರಿಸಿದ ಸವಾಲುಗಳನ್ನು ಹಾಗೂ ಕಂಡುಕೊಂಡ ಅರ್ಥಪೂರ್ಣ ಉತ್ತರಗಳ ಒಂದು ಮುಖ್ಯಮಾದರಿಯನ್ನು ೧೯೯೨ರಲ್ಲಿ ಪ್ರಕಟವಾಗಿರುವ ಪಿ.ಲಂಕೇಶ ಸಮಗ್ರ ಕಥಾ ಸಂಕಲನದಲ್ಲಿ ಗುರುತಿಸಬಹುದು ಎಂದು ಹೇಳುತ್ತಾ ಲಂಕೇಶರ ಒಟ್ಟು ಕಥೆಗಳು ಅಲ್ಲಿನ ಸಾಂಸ್ಕೃತಿಕ ಮಹತ್ವವನ್ನು ಸಾರುತ್ತವೆ. ಇಂತಹ ಕಥೆಗಳನ್ನು ಒಟ್ಟಿಗೆ ನೋಡಿದರೆ ಬೇರೆ–ಬೇರೆ ಮಾತುಗಳ ನಡುವೆ ಒಡಕು ಕಾಣುವುದಿಲ್ಲ. ಇವರ ಕೆಲವು ಕಥೆಗಳ ಸ್ಥಾಯಿಯೆಂದರೆ ಜಗತ್ತನ್ನು ತನ್ನ ದೃಷ್ಟಿಕೋನದಿಂದ ಯಾವುದೇ ಭಾವುಕತೆಯಾಗಲೀ, ಆದರ್ಶಪ್ರಿಯತೆಯಾಗಲೀ ಇಲ್ಲದೆ ನೋಡುವ ಪ್ರಯತ್ನವಾಗಿದೆ ಎಂದು ಉಲ್ಲೇಖಿಸುತ್ತಾರೆ. ಮನೋಧರ್ಮವು ಕ್ರಮೇಣ ಇತರರ ದೃಷ್ಟಿಕೋನವನ್ನು ತನ್ನೊಳಗೆ ಕೂಡಿಸಿಕೊಳ್ಳುತ್ತದೆ ಹಾಗಾದಾಗ ಸಹಜವಾದ ನಿರ್ಲಿಪ್ತತೆಯಿಂದ ಕಥೆಗಳನ್ನು ಕಟ್ಟುವುದು ಇದರಿಂದ ಸಾಧ್ಯವಾಗುತ್ತದೆ. ಇದು ಲಂಕೇಶರಿಗೆ ಪ್ರಿಯವಾದ ಆಲ್ಬರ್ಟ್‌ಕಾಮು ಮತ್ತು ಟಾಲ್‌ಸ್ಟಾಯ್‌ರಂಥ ಲೇಖಕರು ಹಾಕಿಕೊಟ್ಟ ಮಾದರಿ ಆದ್ದರಿಂದಲೇ ಲಂಕೇಶರ ಕಥೆಗಳನ್ನು ನಾವು ಅಭ್ಯಾಸ ಮಾಡಬೇಕಾದದ್ದು ಅವರು ಸೂಚಿಸುವ ಸಾಮಾಜಿಕ

ಸಿದ್ಧಾಂತಗಳ ಸರಿತಪ್ಪುಗಳ ಮೇಲೆ ಅಲ್ಲ. ಅನುಷ್ಠಾನ ಸಾಧ್ಯತೆಗಳ ಹಿನ್ನೆಲೆಯಲ್ಲಿ ಅವರ ಗ್ರಹಿಕೆಗಳನ್ನು ವಿಸ್ತರಿಸಬಹುದು ಧೋರಣೆಗಳನ್ನು ಮೂಡಿಸಬಹುದು ಅವು ಕೂಡ ಇತರ ಲೇಖಕರಿಗಿದ್ದ ನಿರೀಕ್ಷಿತ ಗುರಿಯನ್ನು ತಲುಪಿರಬಹುದು. ಆದರೆ ಅವರು ಬರೆದ ಕಥೆಗಳು ಮಾತ್ರ ಇಂಥ ಯಾವುದೇ ಅಳತೆಗೋಲಿಗೂ ಅಧೀನವಾಗದೆ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಳ್ಳುತ್ತವೆ.

*** 'ಲಂಕೇಶರ ನೀಲು ಕವಿತೆಗಳಲ್ಲಿ ಪ್ರೇಮದ ಆಖ್ಯಾನ'**

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಿರುವ ಎಂ.ಫಿಲ್ ಪ್ರಬಂಧವಾಗಿದೆ. ನೀಲು ಕಾವ್ಯದ ಮೂಲಕ ಲಂಕೇಶರ ದೃಷ್ಠಿಕೋನ ಪ್ರೇಮ-ಪ್ರೀತಿಗಳ ಕಾಣ್ಕೆ ನಿರೂಪಿತವಾಗಿರುವ ರೂಪಕಗಳ ನೆಲೆಗಳನ್ನು ಕಾಣಬಹುದು ನೀಲು ಎಂಬ ಹೆಸರಿನ ಮನುಷ್ಯ ಸಂಬಂಧಗಳ ಪ್ರೀತಿಯನ್ನು ಕುರಿತಾದ ಧೋರಣೆಯನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಪ್ರಕೃತಿಯ ಗಾಢ ಅನುಭವ, ಸಾಮಾಜಿಕವಾಗಿ ಇರುವ ಧೋರಣೆ, ನಗರ-ಹಳ್ಳಿಗಳನ್ನು ಆವರಿಸಿಕೊಂಡಿರುವ ಕ್ಷುದ್ರ ರಾಜಕಾರಣ, ನಾಗರಿಕತೆಯ ಟೊಳ್ಳು ಬದುಕಿನ ಆಳದ ನೋವುಗಳು ಅಂತರಂಗ-ಬಹಿರಂಗ ಸುತ್ತಲ ವಾಸ್ತವದ ಬಗೆಗಿನ ವಿಷಾದ-ವಿಷಣ್ಣತೆ, ವ್ಯಂಗ್ಯ-ಉದ್ವಿಗ್ನತೆಗಳನ್ನು ಒಟ್ಟಿಗೆ ಹಿಡಿಯುವ ಜೀವಂತಿಕೆ – ಇವುಗಳನ್ನು ಲಂಕೇಶರ ಕಾವ್ಯದಲ್ಲಿ ನೋಡಬಹುದು. ಸಾಮಾಜಿಕ ಬದುಕಿನ ಅನೇಕ ತಲ್ಲಣಗಳನ್ನು ವ್ಯಂಗ್ಯ – ವಿಡಂಬನೆಗಳಲ್ಲಿ ಸೂಚಿಸುತ್ತ ತಾತ್ವಿಕ ಶೋಧ ನಡೆಸುತ್ತ, ವಿಭಿನ್ನ ಆಯಾಮಗಳಲ್ಲಿ ಬದುಕನ್ನು ಅಭಿವ್ಯಕ್ತಿಸುವುದರಿಂದ ಅವರ ಕಾವ್ಯದಲ್ಲಿ ಅಸಮಾನ್ಯತೆಯ ಎಳೆಗಳು ಎದ್ದು ಕಾಣುತ್ತವೆ.

*** "ಲಂಕೇಶರ ಟೀಕೆ ಟಿಪ್ಪಣಿಗಳಲ್ಲಿ ಕನ್ನಡ ಸಂಸ್ಕೃತಿಯ ವಿಮರ್ಶೆ"**

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಿರುವ ಎಂ.ಫಿಲ್ ಪ್ರಬಂಧವಾಗಿದೆ. ಲಂಕೇಶರು ತಮ್ಮ ಪತ್ರಿಕೆಯಲ್ಲಿ ಪ್ರತಿ ವಾರವೂ ಕಾಲದ ಒತ್ತಡಕ್ಕೆ ಒಳಗಾಗಿ ಬರೆಯಲೇಬೇಕಾದ ಅನಿವಾರ್ಯತೆಗೆ ತಮ್ಮನ್ನು ತಾವೇ ಒಡ್ಡಿಕೊಂಡು ಬರೆದ ಬರಹಗಳೇ ಟೀಕೆ-ಟಿಪ್ಪಣಿಗಳು ಈ ಬರಹ ಅವರ ಸಾಹಿತ್ಯಕ ಬರೆಹಗಳಷ್ಟೇ ಪ್ರಧಾನವಾಗಿವೆ. ಅವುಗಳಿಗೆ ಸಾಹಿತ್ಯಕ ಬಂಧಗಳ ವಿಶಿಷ್ಟ ಆಯಾಮಗಳಲ್ಲಿ ರಚಿತವಾಗಿದೆ. ಪಿ.ಲಂಕೇಶರ ಟೀಕೆ-ಟಿಪ್ಪಣಿಯ ಅನೇಕ ಬರಹಗಳಲ್ಲಿ ವ್ಯವಸ್ಥೆಯ ವಿರುದ್ಧ ಹರಿಹಾಯುವ ಗುಣಗಳಿವೆ. ಸಮಕಾಲೀನ ಸಾಹಿತ್ಯ, ರಾಜಕೀಯ, ಸಂಸ್ಕೃತಿ, ಚಳವಳಿಗಳನ್ನು ಕುರಿತು ಅವರ ಗುಣಾತ್ಮಕ ಬರವಣಿಗೆಯ ಮೂಲಕ ಉತ್ತರ ಕೊಡುತ್ತಾರೆ. ಈ ರೀತಿಯಾಗಿ ಲಂಕೇಶರು ಸಾಹಿತ್ಯೇತರ ಬರಹಗಳು ಕನ್ನಡನಾಡಿನ ಸಾಂಸ್ಕೃತಿಕ ದಾಖಲೆಗಳಾಗಿ ಅವರ ಟೀಕೆ-ಟಿಪ್ಪಣಿಯಲ್ಲಿ ಬರುತ್ತವೆ.

*** "ಲಂಕೇಶ ಟೀಕೆ–ಟಿಪ್ಪಣಿಗಳಲ್ಲಿ ರಾಜಕೀಯ ಗ್ರಹಿಕೆ"**

ಕುವೆಂಪು ವಿಶ್ವವಿದ್ಯಾಲಯಕ್ಕೆ ಅರ್ಪಿಸಿರುವ ಎಂ.ಫಿಲ್ ಪ್ರಬಂಧವಾಗಿದೆ. ಲಂಕೇಶರು ಟೀಕೆ–ಟಿಪ್ಪಣಿಯಲ್ಲಿ ರಾಜಕೀಯ ಗ್ರಹಿಕೆಯನ್ನು ಒಮ್ಮೊಮ್ಮೆ ಹೊಗಳಿಕೆ, ತೆಗಳಿಕೆ, ಅವಹೇಳನ, ಮೂದಲಿಕೆ, ವ್ಯಂಗ್ಯ, ಸಿನಿಕತನ, ತಮಾಷೆಗಳ ಆಳದಲ್ಲಿ ಸಾಮಾಜಿಕ ವಿಮರ್ಶೆ ಇರುತ್ತದೆ, ಬಂಡಾಯದ ದಂಗೆ ಏಳುವ ಧೋರಣೆ ಇರುತ್ತದೆ. ಇಷ್ಟೆಲ್ಲಾ ಚರ್ಚೆಗಳ ಜೊತೆಗೆ ಲಂಕೇಶರ ಸಾಹಿತ್ಯೇತರ ಬರೆಹಗಳು ಕನ್ನಡ ನಾಡಿನ ಸಾಂಸ್ಕೃತಿಕ ದಾಖಲೆಗಳಾಗಿ ಅವರ ಟೀಕೆ–ಟಿಪ್ಪಣಿಯಲ್ಲಿ ಬರುತ್ತವೆ.

*** "ಲಂಕೇಶರ ಕಾದಂಬರಿಯಲ್ಲಿ ಸ್ತ್ರೀಚಿತ್ರಣ"**

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ಇಲ್ಲಿಗೆ ಸಲ್ಲಿಸಿರುವ ಎಂ.ಫಿಲ್ ಪ್ರಬಂಧವಾಗಿರುತ್ತದೆ. ಲಂಕೇಶರು ಬರೆದ ಕಾದಂಬರಿಗಳು ಮೂರು 'ಬಿರುಕು' (೧೯೬೭) ಮೊದಲನೆಯದು ಇದು ಅಪ್ಪಟ ನವ್ಯ ಕಾದಂಬರಿ. ಅನಂತರದಲ್ಲಿ ವಾಸ್ತವವಾಗಿ ಕಾದಂಬರಿಯಾದ 'ಮುಸ್ಸಂಜೆ ಕಥಾ ಪ್ರಸಂಗ'(೧೯೭೮)ವನ್ನು ರಚಿಸಿದರು. ಮೂರನೇಯದಾಗಿ ಮೊದಲಿನ ಎರಡಕ್ಕಿಂತ ಭಿನ್ನವಾದ ನಿರೂಪಕನ ಸ್ವಗತ ಲಹರಿಯಲ್ಲಿ ಸ್ಲಂನ ಜೀವನಚಿತ್ರಣ ನೀಡುವ ಉದ್ದೇಶವನ್ನುಳ್ಳ 'ಅಕ್ಕ' (೧೯೯೧) ಕಾದಂಬರಿಯನ್ನು ರಚಿಸಿದರು ಲಂಕೇಶರು. ಈ ಮೂರು ಕಾದಂಬರಿಯಲ್ಲಿ ಕಂಡು ಬರುವ ಸ್ತ್ರೀ ಚಿತ್ರಣವನ್ನು ಈ ಪ್ರಬಂಧದಲ್ಲಿ ನೋಡಲಾಗಿದೆ. ಬಿರುಕುವಿನ ಶಾಂತ, ಶಾಂತಳ ತಾಯಿ. ಮುಸ್ಸಂಜೆಯ ಕಥೆಯ ಶಿವಿ, ಸಾವಂತ್ರಿ, ರಂಗವ್ವ, ಅಕ್ಕ ಕಾದಂಬರಿಯ ದೇವೀರಿ ಈ ಪಾತ್ರಚಿತ್ರಣದ ಮೂಲಕ ಸ್ತ್ರೀ ಸಂವೇದನೆಯನ್ನು ಈ ಪ್ರಬಂಧದಲ್ಲಿ ಕಟ್ಟಿಕೊಟ್ಟಿದ್ದಾರೆ.

*** "ಪಿ ಲಂಕೇಶರ ನಾಟಕಗಳಲ್ಲಿ ಸಂಘರ್ಷದ ಸ್ವರೂಪ"**

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲಾದ ಎಂ.ಫಿಲ್ ಪ್ರಬಂಧ ಇದಾಗಿರುತ್ತದೆ. ಲಂಕೇಶರು ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯುಳ್ಳ ನಾಟಕಗಳ ಜೊತೆಗೆ ಮನುಷ್ಯನ ಅಸ್ತಿತ್ವದ ಅಸಂಗತತೆಯನ್ನು ಚಿತ್ರಿಸುವ ಆಶಯದಿಂದ ಅಸಂಗತ ನಾಟಕಗಳನ್ನು ಬರೆಯತೊಡಗಿದರು. ಲಂಕೇಶರ ಎಲ್ಲಾ ನಾಟಕಗಳನ್ನು ಅಧ್ಯಯನ ಮಾಡಿರುವ ಹಿನ್ನೆಲೆಯನ್ನು ನೋಡಿದಾಗ ಮನುಷ್ಯನ ಮಾನಸಿಕ ಅಸ್ವಸ್ಥತೆಯ ಚಿತ್ರಣವನ್ನು ನೀಡುವುದು ಲಂಕೇಶ ನಾಟಕಗಳ ಸ್ಥಾಯೀಭಾವ ಕೆಲವು ಏಕಾಂತ ನಾಟಕಗಳಲ್ಲಿ ವ್ಯಕ್ತಿಯ ಮಾನಸಿಕ ಅಸ್ವಸ್ಥತೆಯನ್ನು ಅದಕ್ಕೆ ಕಾರಣವಾಗುವ ಸಂಗತಿಗಳನ್ನು ವಿವರಿಸಿದ್ದಾರೆ. ಜೊತೆಗೆ ಸಮಕಾಲೀನ ಅಸ್ವಸ್ಥ ಕೌಟುಂಬಿಕ

ಬಿಕ್ಕಟ್ಟನ್ನು ವ್ಯಕ್ತಿಯ ಆಷಾಢಭೂತಿತನವನ್ನು, ಒಂದು ಸಮಾಜದ ಅಲ್ಲೋಲ-ಕಲ್ಲೋಲಗಳನ್ನು, ಅದರ ಆಳ-ಪಾತಾಳಗಳನ್ನು, ಯಾವ ಕಾಲಕ್ಕೂ ಸಲ್ಲುವಂತೆ ಲಂಕೇಶರು ಬಿಚ್ಚಿಟ್ಟಿದ್ದಾರೆ.

*** ತಲೆಮಾರಿನ ತಳಮಳ**

ಈ ಸಂಪಾದಿತ ಕೃತಿ ಗಂಗಾಧರ ಕುಷ್ಟಗಿಯವರದು. ಲಂಕೇಶರ ಸಮಗ್ರ ಸಾಹಿತ್ಯ ಹಾಗೂ ವ್ಯಕ್ತಿತ್ವವನ್ನು ಸಾಕ್ಷೀಕರಿಸಿದ ಕೃತಿ. ಅವರ ವಾರಗೆಯವರು ಮತ್ತು ಸಮಕಾಲೀನರು ಅವರವರ ಅಭಿಪ್ರಾಯಗಳನ್ನು, ಅನಿಸಿಕೆಗಳನ್ನು ದಾಖಲಿಸಿದ ಕೃತಿಯಿದು. ಈ ಕೃತಿಯಲ್ಲಿ ಲಂಕೇಶರನ್ನು ಅವರ ಚಿಂತನೆಗಳನ್ನು ಮತ್ತು ಅವರ ಸಾಹಿತ್ಯಕ ಚಿಂತನೆಗಳನ್ನು ಕುರಿತು ವಿವರಿಸಿದೆ.

ಚನ್ನವೀರಕಣವಿ 'ಲಂಕೇಶ್ : ಕೆಲವು ಅನಿಸಿಕೆಗಳು' ಎಂಬ ಲೇಖನ ಬರೆಯುತ್ತಾ ಕಣವಿ ಮತ್ತು ಲಂಕೇಶರ ಒಡನಾಟ ಅವರ ನಡೆ-ನುಡಿಯನ್ನು ಸ್ಮರಿಸುತ್ತಾರೆ. ಬಿ.ಆರ್.ಲಕ್ಷ್ಮಣರಾವ್ ಲಂಕೇಶರ ಸ್ನೇಹ ಸಂಬಂಧಗಳು ಮೆಚ್ಚುಗೆ, ಗೌರವಗಳನ್ನು ನೆನೆಯುತ್ತಾರೆ. ಲಂಕೇಶರನ್ನು 'ಗೂಢಮೌನ, ಗಾಢಪ್ರೀತಿ' ಎಂದು ಕರೆದು ಇವರ ಪ್ರತಿಭೆಯನ್ನು ಕುರಿತಂತೆ ಬಸವರಾಜ ಕಟ್ಟೀಮನಿಯವರು ಬರೆಯುತ್ತಾರೆ. ಇವರೇ ಅಲ್ಲದೆ ಶಂಕರಮೋಕಾಶಿ ಪುಣೇಕರ, ಪುಂಡಲೀಕ ಶೇಟ್ ಇವರು ಲಂಕೇಶರ ಪರಿಚಯವಾದ ರೀತಿ ಮತ್ತು ಅವರವರ ನಡುವಿನ ವೈರುಧ್ಯ ವೈಷಮ್ಯಗಳ ಬಗೆಗೆ ಬರೆಯುತ್ತಾರೆ.

ಪ್ರೀತಿಯ ಮೇಷ್ಟ್ರು ಎಂದು ಡಾ. ಕೆ.ಎಂ. ಶ್ರೀನಿವಾಸಗೌಡರು ಬರೆಯುತ್ತಾರೆ ಬಿ.ಟಿ.ಲಲಿತಾನಾಯಕ್, ಸಾ.ರಾ.ಅಬೂಬಕರ್ ಇವರೆಲ್ಲರು ಲಂಕೇಶರ ಹತ್ತಿರದ ಒಡನಾಟಗಳನ್ನು ಚರ್ಚಾ ಸಂದರ್ಭಗಳನ್ನು ಇವರ ಸಾಹಿತ್ಯವನ್ನು ಲಂಕೇಶ್ ಪತ್ರಿಕೆಯಲ್ಲಿ ಪ್ರಕಟಿಸಿದ ದಿನಗಳನ್ನು ನೆನೆಯುತ್ತಾರೆ. ಶ್ರೀನಿವಾಸರವರು 'ಹೆಂಗರುಳಿನ ಮನುಷ್ಯ' ಎಂದು ದಾಖಲು ಮಾಡುತ್ತಾರೆ. ಟಿ.ಜಾಹ್ನವಿಯವರು ಪತ್ರಿಕೆಯ ಮಾಂತ್ರಿಕ ಎಂದು ಬರೆಯುತ್ತಾರೆ. ಗೌರಿಲಂಕೇಶ್ 'ಅಪ್ಪ' ಎಂಬ ಲೇಖನದಲ್ಲಿ ಸ್ಕೂಲಿನ ವಾರ್ಷಿಕೋತ್ಸವ ಕ್ರೀಡಾಕೂಟದ ನೆನಪನ್ನು ನೆನಪಿಸುತ್ತಾರೆ. ಟಿ.ಕೆ. ತ್ಯಾಗರಾಜ್‌ರವರು ನಿಸ್ವಾರ್ಥವಾಗಿ ಪ್ರೀತಿಸುವುದು ಸಾಧ್ಯವಾದರೆ ಅದು ಹೇಗೆ ಲಂಕೇಶರಿಂದ ಮಾತ್ರ ಸಾಧ್ಯ ಎಂದು ಬರೆಯುತ್ತಾರೆ. ಜಿ.ಗೀತಾನಾಗಭೂಷಣ್ "ಆತ್ಮೀಯ ನಿರ್ದಯ ಸ್ನೇಹಿತ" ಎಂದು ಉಲ್ಲೇಖಿಸಿ ಅವರ ಸಾಹಿತ್ಯವನ್ನು ಅವು ಖುಷಿ ಕೊಟ್ಟ ಕ್ಷಣಗಳನ್ನು ಬರೆಯುತ್ತಾರೆ. ಈ ರೀತಿಯಾಗಿ ಲಂಕೇಶರ ಒಡನಾಡಿಗಳಾಗಿ ವಿಚಾರ ಮಾಧಕರಾಗಿ ಇವರೆಲ್ಲರೂ ತಮ್ಮ ತಮ್ಮ ಗಾಢ ಅನುಭವಗಳನ್ನು ಯಾವುದೇ ಮುಚ್ಚುಮರೆ ಇಲ್ಲದೆ ಹೇಳಿಕೊಳ್ಳುತ್ತಾರೆ.

*** ಬೋದಿಲೇರನ ಸಖ**

ರಾಘವೇಂದ್ರ ಪಾಟೀಲರು ಸಂಪಾದಿಸಿರುವ ಲಂಕೇಶರ ನೆನಪಿನ ಸಂಪುಟ ಬೋದಿಲೇರನ ಸಖ. ಕನ್ನಡ ವಿಮರ್ಶಾವಲಯದಲ್ಲಿ ಸುಪ್ರಸಿದ್ಧರೆನಿಸಿರುವ ಮಹಾನ್ ಬರಹಗಾರರಿಂದ ವಿಮರ್ಶಾತ್ಮಕ ಬರಹಗಳನ್ನು ಬರೆಸಿ ಸಂಕಲಿಸಿರುವ ಕೃತಿ ಇದಾಗಿದೆ. ಲಂಕೇಶ್ ಒಂದಿಷ್ಟು ಹತ್ತಿರ, ಒಂದಿಷ್ಟು ದೂರ, ಒಂದಿಷ್ಟು ಲೋಕಾಭಿರಾಮ, ಲಂಕೇಶ್ ಒಂದು ಸಾಂಸ್ಕೃತಿಕ ವಿದ್ಯಮಾನ, ಲಂಕೇಶ್ ಸೃಜನಶೀಲತೆ, ಲಂಕೇಶ್ ಸ್ವತಃ ಈ ರೀತಿಯಲ್ಲಿ ಅಧ್ಯಾಯದ ವಿಭಾಗ ಕ್ರಮಗಳನ್ನು ಮಾಡಿ ಚರ್ಚಿತವಾಗಿರುವಂತಹ ಕೃತಿ ಇದಾಗಿದೆ. ಲಂಕೇಶರ ಕಾವ್ಯ, ನಾಟಕ, ಕಾದಂಬರಿ, ವಿಮರ್ಶೆ, ಅನುವಾದ, ಪತ್ರಿಕೆ, ಟೀಕೆ–ಟಿಪ್ಪಣಿ ಇತ್ಯಾದಿಗಳನ್ನು ಕುರಿತು ಚರ್ಚಿಸಲಾಗಿದೆ.

ಡಾ. ಎಚ್.ಎಸ್.ರಾಘವೇಂದ್ರರಾವ್, ಪದ್ಮಿನಿ ಹೆಗಡೆ, ಡಾ. ಸಿ.ಎನ್.ರಾಮಚಂದ್ರನ್, ಎಚ್.ಎಸ್.ವೆಂಕಟೇಶ್ ಮೂರ್ತಿ, ಶಂಕರಮೂರ್ತಿ, ಶಂಕರಕಟಗಿ, ಸತ್ಯನಾರಾಯಣರಾವ್ ಅನತಿ, ಗಜಾನನ ಈಶ್ವರಹೆಗಡೆ ಇನ್ನೂ ಪ್ರಮುಖರು. ಅವರ ಚಿಂತನೆಗಳನ್ನು ಇಟ್ಟುಕೊಂಡು ಚರ್ಚಿಸಿದ್ದಾರೆ.

*** ಪಿ.ಲಂಕೇಶ್**

ಡಾ. ಕೆ.ಮರುಳ ಸಿದ್ದಪ್ಪನವರು 'ಭಾರತೀಯ ಸಾಹಿತ್ಯ ನಿರ್ಮಾಪಕರು' ಮಾಲಿಕೆಗಾಗಿ ಲಂಕೇಶರ ಸಮಗ್ರ ವ್ಯಕ್ತಿತ್ವ ಹಾಗೂ ಬರವಣಿಗೆಯನ್ನು ಕುರಿತಂತೆ ಪಿ.ಲಂಕೇಶ್ ಕೃತಿಯನ್ನು ಹೊರ ತಂದಿದ್ದಾರೆ. ಈ ಕೃತಿ ಒಟ್ಟು ಹನ್ನೊಂದು ಅಧ್ಯಾಯಗಳಿಂದ ಕೂಡಿದೆ. ಲಂಕೇಶರ ವ್ಯಕ್ತಿ ಚಿತ್ರ, ಜೀವನ ವೃತ್ತಾಂತ, ಕವಿಯಾಗಿ ಬರವಣಿಗೆಯನ್ನು ಪ್ರಾರಂಭ ಮಾಡಿದ ದಿನಗಳು ನಾಟಕ ಮತ್ತು ರಂಗಭೂಮಿ, ಚಲನಚಿತ್ರ ನಿರ್ಮಾಣ ಮತ್ತು ನಿರ್ದೇಶನ, ಅಸಾಧಾರಣ ಕಥೆಗಾರರಾಗಿ ಹೊರ ಹೊಮ್ಮಿದ್ದು, ನಂತರ ನಗರದಲ್ಲಿ ಕಾದಂಬರಿಕಾರರಾಗಿ ಮೂರು ಕಾದಂಬರಿಗಳ ಸೃಷ್ಟಿ, ಹುಳಿ ಮಾವಿನಮರ ಆತ್ಮಕಥೆ, ಪ್ರಸ್ತುತ, ಕಂಡದ್ದು ಕಂಡ ಹಾಗೆ, ಟೀಕೆ–ಟಿಪ್ಪಣಿಗಳು ಇವುಗಳ ಬಗೆಗೆ ವಿಮರ್ಶೆ, ತರ್ಕ, ಅನಿಸಿಕೆ ಇವುಗಳನ್ನೂ ಒಳಗೊಂಡ ಹಾಗೆ ವಿವರಗಳಿವೆ.

ಲಂಕೇಶರು ಕಥೆ ಬರೆಯಲು ಆರಂಭಿಸಿದ್ದು ನವ್ಯ ಕಾಲದಲ್ಲಿ ಈ ಕಾಲ ತುಂಬಾ ಇಸಂಗಳನ್ನು ತನ್ನೊಳಕ್ಕೆ ತೆಗೆದುಕೊಂಡು ಹೊಸ ಚಿಂತನೆ ಹೊಸ ಆಯಾಮಗಳನ್ನು ಕೊಟ್ಟಂತಹ ಕಾಲವಿದು. ಜೊತೆಗೆ ಲೋಹಿಯಾ, ಗಾಂಧೀಜಿ ವಿಚಾರಗಳು ಲಂಕೇಶರ ವೈಚಾರಿಕತೆಯ ಮೇಲೆ ಪ್ರಭಾವ ಬೀರಿದ್ದರೂ ಅವರೆಂದೂ ಯಾವುದೇ 'ಇಸಂ'ಗಳಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಳ್ಳದೆ ಮೂಲತಃ ಅವರೊಬ್ಬ ವ್ಯಕ್ತಿಯಾಗಿ ಕಥಾ ಜಗತ್ತನ್ನು ತೆರೆದು ತೋರಿಸಿದವರು.

ಭಿನ್ನ ಕಾಲ ಹಾಗೂ ಮನೋಧರ್ಮದಿಂದಾಗಿ ನಿರೂಪಣೆಯಲ್ಲಾಗಿರುವ ಬದಲಾವಣೆ ಬದುಕನ್ನು ಕುರಿತ ಗ್ರಹಿಕೆಯಲ್ಲೇ ತೋರಿ ಬರುವ ಪಲ್ಲಟಗಳು ಮೌಲ್ಯ ಪ್ರಶಂಸೆಯಲ್ಲಿ ಅರಿವಾಗುವ ಸೂಕ್ಷ್ಮ ವ್ಯತ್ಯಾಸ ಇವೆಲ್ಲಾ ಅಧ್ಯಯನ ಯೋಗ್ಯವೆಂಬುದು ಕೆ.ಮರುಳಸಿದ್ದಪ್ಪರ ಅಭಿಪ್ರಾಯ. ಒಟ್ಟಾರೆ ಲಂಕೇಶ್ ಎಂಬ ಕಥನಕಾರನ ವಿವಿಧ ಮಜಲುಗಳನ್ನು ಈ ಕೃತಿ ಚರ್ಚಿಸುತ್ತದೆ.

*** "ಇಂತಿ ನಮಸ್ಕಾರಗಳು" – ಡಾ.ನಟರಾಜ್ ಹುಳಿಯಾರ್**

ಡಾ.ನಟರಾಜ್ ಹುಳಿಯಾರ್ ಅವರ ಪಿ.ಲಂಕೇಶ್ ಹಾಗೂ ಡಿ.ಆರ್ ನಾಗರಾಜ್ ಕುರಿತ 'ಇಂತಿ ನಮಸ್ಕಾರಗಳು' ಪ್ರಮುಖ ಕೃತಿ. ಕನ್ನಡದ ಬಹುದೊಡ್ಡ ಸೃಜನಶೀಲ ಲೇಖಕರಲ್ಲಿ ಒಬ್ಬರಾದ ಪಿ.ಲಂಕೇಶ್ ದಿನನಿತ್ಯದ ಹಾಗೂ ದೀರ್ಘಕಾಲದ ರಾಜಕೀಯ, ಸಮಾಜ ಹಾಗೂ ಸಂಸ್ಕೃತಿಯ ಬಿಕ್ಕಟ್ಟುಗಳನ್ನು, ಸಾಹಿತ್ಯಕ ಹಾಗೂ ಖಾಸಗೀತನವನ್ನು ಕುರಿತು ಆಳವಾಗಿ ಚಿಂತಿಸಿ ಕಂಡುಕೊಂಡ ಕಟು ಸತ್ಯಗಳನ್ನು ಮಂಡಿಸಿದವರು. ಭಾರತದ ಮುಖ್ಯ ಸಂಸ್ಕೃತಿ ಚಿಂತಕರಲ್ಲಿ ಡಿ.ಆರ್.ನಾಗರಾಜ್‌ರವರು ಬಗೆಬಗೆಯ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಎದುರಿಸುವ ಮಾರ್ಗೋಪಾಯಗಳನ್ನು ಹುಡುಕಿದವರು. ಜೊತೆಗೆ ಆಳವಾದ ಬೌದ್ಧಿಕ ಚಿಂತನೆಗಳನ್ನು ಬೆಳೆಸಿದವರು. ಇವರಿಬ್ಬರ ಮಾರ್ಗಗಳು ಕನ್ನಡದಲ್ಲಿ ಎಲ್ಲಾವಲಯಗಳಲ್ಲಿಯೂ ಜೀವಂತವಾಗಿ ನಿರೂಪಿತವಾಗಿವೆ. ಪ್ರೊ.ನಟರಾಜ್ ಹುಳಿಯಾರ್‌ರವರು ಪಿ.ಲಂಕೇಶ್ ಮತ್ತು ಡಿ.ಆರ್.ನಾಗರಾಜ್ ಅವರ ಆತ್ಮೀಯ ಆವರಣದಲ್ಲಿ ಬೆಳೆದ ಕಾರಣ. ಅವರಿಬ್ಬರ ಚಿಂತನಾ ಕ್ರಮಗಳನ್ನು ಕ್ರೋಢೀಕರಿಸಿ ಮಾಡಿಕೊಂಡ ಕೆಲ ಟಿಪ್ಪಣಿಗಳಿಗೆ ಪುಸ್ತಕ ರೂಪ ಕೊಟ್ಟಂತ ಕೃತಿಯೇ 'ಇಂತಿನಮಸ್ಕಾರಗಳು'

*** "ಕಲ್ಲುಕರಗಿದಾಗ" – ಡಾ. ಗೋವಿಂದರಾಜ ತಳಕೋಡ**

ಪಿ.ಲಂಕೇಶರ ಕಲ್ಲು ಕರಗುವ ಸಮಯ ಕಥೆಗಳ ವಿಮರ್ಶೆಯನ್ನು ಕುರಿತಾದ ಗ್ರಂಥ ಇದಾಗಿದೆ. ಚಂದಗ್ರಂಥ ಪ್ರಕಾಶನ, ಧಾರವಾಡ ಹೊರತಂದಿರುವ ಈ ಪುಸ್ತಕ ೨೦೧೩ರಲ್ಲಿ ಪ್ರಥಮ ಆವೃತ್ತಿಯಾಗಿ ಹೊರಬಂದಿದೆ. ಲಂಕೇಶರ ಪ್ರಗತಿಪರ ಚಿಂತನೆ ವಿಚಾರವಾದಿ ಬರಹವು ರಸಿಕತೆಗಿಂತ ಬೌದ್ಧಿಕತೆಗೆ, ಕಲಾತ್ಮಕತೆಗಿಂತ ವಾಸ್ತವಿಕತೆಗೆ, ಭಾವಕ್ಕಿಂತ ಭಾಷೆಗೆ ಒತ್ತುಕೊಟ್ಟು ಬರೆದಂತಹ ಲೇಖಕರಲ್ಲಿ ಪ್ರಮುಖರಾದವರು ಲಂಕೇಶರು. ಕನ್ನಡದಲ್ಲಿಯೇ ವಿರಳಾತಿವಿರಳ. ಪ್ರಖರ ವಿಚಾರಶೀಲ ಲೇಖಕ ಪಿ.ಲಂಕೇಶ್ ಸಾಹಿತ್ಯ ವಿಮರ್ಶೆಗೆ ತೊಡಗುವಲ್ಲಿಯೂ ಧೈರ್ಯಬೇಕಾಗುತ್ತದೆ. ಜೊತೆಗೆ ಆಳವಾದ ಅಧ್ಯಯನ ಚಿಂತನೆಶೀಲತೆ, ಬಿಚ್ಚು ಮನಸ್ಸು ಬೇಕಾಗುತ್ತದೆ. ಈ ಎಲ್ಲಾ ಗುಣಗಳನ್ನು ಇಟ್ಟುಕೊಂಡು ರಚಿತವಾಗಿರುವ ಕೃತಿ ಇದಾಗಿದೆ. ಡಾ.ಗೋವಿಂದ ರಾಜ ತಳಕೋಡರು. ಸಮಾಜದಲ್ಲಿನ ವ್ಯಕ್ತಿಯ ಓರೆಕೋರೆ, ದ್ವಂದ್ವ, ಸಂಘರ್ಷ, ಒಳಿತು, ಕೆಡಕು, ಪ್ರೀತಿ, ಪ್ರೇಮ ಏನೇ ಇರಲಿ ಅವುಗಳನ್ನು ಸಾಹಿತ್ಯ ಕೃತಿ ಕಲಾತ್ಮಕವಾಗಿ

ಚಿತ್ರಿಸಿರುತ್ತದೆ. ಅಲ್ಲಿ ಲೇಖಕರು ಎಷ್ಟೋ ಸಲ ಲೇಖಕನಾಗುವುದಿಲ್ಲ. ಪಾತ್ರವಾಗುತ್ತದೆ, ವಿಮರ್ಶಕನಾಗುತ್ತಾನೆ, ವಿಡಂಬಕನಾಗುತ್ತಾನೆ, ಸಂಶೋಧಕನಾಗುತ್ತಾನೆ, ಆದ್ದರಿಂದ ಕಲಾಕೃತಿ ಅದರ ಸೃಷ್ಟಿಕರ್ತನ ಸಹೃದಯನಾಗಿ ತನ್ನ ಆನಂದಕ್ಕಾಗಿ ಓದುತ್ತಾನೆ, ಇಷ್ಟ ಪಡುತ್ತಾನೆ, ಅದೇ ಅವನ ವಿಶಿಷ್ಟ ಅನುಭೂತಿ, ವಿಮರ್ಶಕನೂ ಕೂಡ ಒಂದು ಕೃತಿಯನ್ನು ಇಂತಹ ಅನುಭೂತಿಗಾಗಿಯೇ ವಿಮರ್ಶಿಸುತ್ತಾನೆ. ಲಂಕೇಶರ ಕೃತಿಯೊಂದನ್ನು ಈ ಹರಹಿನಲ್ಲಿ ವಿಮರ್ಶೆ ಮಾಡಿರುವ ಕೃತಿಯಾಗಿದೆ.

*** "ಲಂಕೇಶರ ಕಾದಂಬರಿಗಳನ್ನು ಮತ್ತೆ ಓದಿದಾಗ"**

ಸಿ.ಎನ್.ರಾಮಚಂದ್ರನ್‌ರವರು ರಚಿಸಿದ ಈ ಲೇಖನ ಒಂದು ಕಾಲಘಟ್ಟದಲ್ಲಿ ಓದಿದ ಕೃತಿಗಳನ್ನು ಒಂದೆರಡು ದಶಕಗಳ ನಂತರ ಓದಿದಾಗ ಮತ್ತೆ ಒಂದು ಸಂಕೀರ್ಣ ಅನುಭವ ಉಂಟಾಗುತ್ತದೆ. ಮೊದಲ ಬಾರಿ ಓದಿದ ಸಂರ್ಭದಲ್ಲಿ ಹೊಳೆದ ಅರ್ಥಗಳು, ಅನುಭವಿಸಿದ ಉದ್ವೇಗ–ಕಳವಳಗಳು, ಪಡೆದ ನೋವು–ಸಂಭ್ರಮಗಳು ಇವೆಲ್ಲವುಗಳು ಮರೆಯಾಗುತ್ತವೆ. ಯಾವ ಕಾರಣಗಳಿಗಾಗಿ ಅಂದು ಒಂದು ಕೃತಿ ಅರ್ಥಪೂರ್ಣ ಅಥವಾ ಅರ್ಥಹೀನವಾಗಿತ್ತೋ ಆ ಕಾರಣಗಳೇ ಇಲ್ಲವಾಗಿ ಅಥವಾ ಅದು ಸಕಾರಣವೆಂದು ತೋರದೇ, ಒಂದು ವಿಧದ ಹಳಹಳಿಕೆಯನ್ನು ಒಳಗೊಂಡ ಖಿನ್ನತೆ ಆವರಿಸುತ್ತದೆ. ಹಾಗೆಯೇ ಆ ಖಿನ್ನತೆಯ ಗರ್ಭದಿಂದಲೇ ಹೊಸ ಅರ್ಥಗಳು ಹೊಸ ಒಳನೋಟಗಳು ಮತ್ತು ನೂತನ ನೋವು–ಸಂಭ್ರಮಗಳು ಜನ್ಮಿಸುತ್ತವೆ. ಕೃತಿಯ ಅರ್ಥವೆನ್ನುವುದು ಕೇವಲ ಕೃತಿಗೆ ಮಾತ್ರ ಸೀಮಿತವಾಗಿದೆ. ಒಂದು ಕಾಲಘಟ್ಟದಲ್ಲಿ ಓದುಗರಾದ ನಾವು ಗೌರವಿಸುವ ಲೇಖಕ–ವಿಮರ್ಶಕ ಸಮುದಾಯ ಕಟ್ಟಿಕೊಟ್ಟ ಅಪೇಕ್ಷೆ–ನಿರೀಕ್ಷೆಗಳು ಹಾಗೂ ಮೌಲ್ಯ–ಮಾನದಂಡಗಳು, ನಮ್ಮ ಅರಿವಿಗೆ ಬರುತ್ತವೆ. ಈ ಹಿನ್ನೆಲೆಯಲ್ಲಿ 'ಬಿರುಕು', 'ಅಕ್ಕ', 'ಮುಸ್ಸಂಜೆಯ ಕಥಾ ಪ್ರಸಂಗ'ವನ್ನು ನೋಡಿದ್ದಾರೆ. ಹಾಗಾಗಿ ಲಂಕೇಶರಿಗೆ ಕಥನವಸ್ತು ಎಷ್ಟು ಮುಖ್ಯವೋ ಕಥನಕ್ರಮವೂ ಅಷ್ಟೇ ಮುಖ್ಯ. ಈ ಕಾರಣದಿಂದ ಲಂಕೇಶರ ಮೂರು ಕಾದಂಬರಿಗಳಲ್ಲಿ ಮೂರು ಬಗೆಯ ನಾಯಕರನ್ನು ಕಾಣುತ್ತೇವೆ. ಆ ಮೂಲಕ ಕನ್ನಡ ಕಾದಂಬರಿಗೆ ನೂತನ ಆಯಾಮಗಳನ್ನು ಕೊಟ್ಟವರು ಲಂಕೇಶ್ ವ್ಯವಸ್ಥೆ, ಕ್ರಾಂತಿ ಮತ್ತು ಜೋಗುಳದ ಹಾಡು ಇವೆಲ್ಲವನ್ನು ಒಂದೇ ಎಂದು ಕಂಡು ವ್ಯಕ್ತಿಗಳ ನೈತಿಕತೆಯನ್ನು ಅತಿ ಶ್ರೇಷ್ಠ ಮೌಲ್ಯವಾಗಿ ಕಂಡವರು ಲಂಕೇಶ್ ಪ್ರತಿಯೊಂದು ಕೃತಿಯಲ್ಲಿಯೂ ಹೊಸ ಪ್ರಶ್ನೆಗಳನ್ನು ಹೊಸ ಸಂದೇಹಗಳನ್ನು ಹುಟ್ಟು ಹಾಕಿದವರು ಲಂಕೇಶರು.

ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ಗಮನಿಸಿದಾಗ ಲಂಕೇಶರ ಸಮಗ್ರ ಸಾಹಿತ್ಯದಲ್ಲಿ ಭಿನ್ನ–ಭಿನ್ನ ಪರಿಕಲ್ಪನೆಗಳಲ್ಲಿ ಸಂಶೋಧನೆಯು ನಡೆದಿರುವುದನ್ನು ಕಾಣಬಹುದು. ನನ್ನ ಸಂಶೋಧನಾ ಶೀರ್ಷಿಕೆಗೆ ಸಂಬಂಧಿಸಿದ ಹಾಗೆ ಬೇರೆ–ಬೇರೆ

ಸಂಶೋಧಕರು ವಿವರಿಸಿರುವ ವಿವರಣೆ, ಹುಡುಕಾಟ, ವಿಮರ್ಶೆ, ಸಂಶೋಧನೆಯಲ್ಲಿ ಪೂರ್ಣ ಪ್ರಮಾಣದಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಯಾರೂ ಕಟ್ಟಿಕೊಟ್ಟಿಲ್ಲ ಬಹಳ ಮುಖ್ಯವಾಗಿ ಮನಷ್ಯನ ಬದುಕು ಚಲನಶೀಲವಾದುದು. ಚಲನಶೀಲವಾದ ಬದುಕಿನಲ್ಲಿ ಬದಲಾವಣೆಯೆನ್ನುವುದು ಅಷ್ಟೇ ಸಹಜ ಹಾಗೂ ಜೀವಂತಿಕೆಯ ಲಕ್ಷಣವಾಗಿದೆ. ಕಾಲದಿಂದ ಕಾಲಕ್ಕೆ ಮನುಷ್ಯನ ಚಿಂತನೆ, ಆಲೋಚನೆ, ವರ್ತನೆಗಳು ಸಾಮಾಜಿಕ ಕಟ್ಟಲೆಯಲ್ಲಿ ಬದಲಾವಣೆಯ ಗತಿಸ್ಥಿತಿಯನ್ನನುಸರಿಸಿದೆ. ಸಾಹಿತ್ಯ ಕೂಡ ಅಂದಂದಿನ ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಅಭಿವ್ಯಕ್ತಿ ಪಡೆಯುತ್ತಿರುತ್ತದೆ. ಈ ರೀತಿಯಾಗಿ ಬದಲಾವಣೆಯ ಸಂವೇದನೆಯ ಮೂಲಕ ಮನುಷ್ಯನ ಸಂಬಂಧಗಳನ್ನು ಲಂಕೇಶರು ಕಥನ ಸಾಹಿತ್ಯದಲ್ಲಿ ಕಟ್ಟಿರುವ ಬಗೆಯನ್ನು ಅವರ ಎಲ್ಲಾ ಕಥೆಗಳು ಮತ್ತು ಕಾದಂಬರಿಯಲ್ಲಿ ಬಿಂಬಿತವಾಗಿವೆ. ಹೊಸ ಆಲೋಚನೆಗಳಿಂದಾಗಿ ಮನುಷ್ಯ ತಲ್ಲಣಕ್ಕೆ ಒಳಗಾಗಿ ಸಂಬಂಧಗಳು ಕೂಡ ಬದಲಾವಣೆಯನ್ನು ಪಡೆಯುತ್ತವೆ. ಮನುಷ್ಯನು ಸಂಬಂಧಗಳ ಮೂಲಕ ಕುಟುಂಬದಲ್ಲಿ, ಸಮಾಜದಲ್ಲಿ ತನ್ನ ಅರ್ಥಪೂರ್ಣವಾದ ಬದುಕಿಗೆ ಹಂಬಲಿಸುತ್ತಾನೆ. ಇಂತಹ ಅತಂತ್ರ ಪರಿಸ್ಥಿತಿ, ಏಕಾಕಿತನ, ಚಿಂತೆ, ಗೊಂದಲ, ತಲ್ಲಣ ಈ ರೀತಿಯಲ್ಲಿ ಸಾಮಾಜಿಕ ಬದುಕಿನಲ್ಲಿ ಮನುಷ್ಯ ಸಂಬಂಧವನ್ನು ಹುಡುಕುವ ಕಾರ್ಯ ನನ್ನ ಮುಂದಿನ ಅಧ್ಯಾಯಗಳಲ್ಲಿ ಸಂಶೋಧನಾತ್ಮಕವಾಗಿ ಸಾಗಿದೆ.

*****

# ಅಧ್ಯಾಯ ಮೂರು

# ಮನುಷ್ಯ ಸಂಬಂಧಗಳ ಸ್ವರೂಪದ ಪ್ರಾಕ್ ಕಲ್ಪನೆ

ಮನುಷ್ಯ ಸಂಬಂಧಗಳು ಪ್ರಾಚೀನ ಕನ್ನಡ ಸಾಹಿತ್ಯದಿಂದ ಹಿಡಿದು ಇವತ್ತಿನ ಸಾಹಿತ್ಯದಲ್ಲಿಯೂ ವ್ಯಕ್ತವಾಗುತ್ತಿರುವ ಬಗೆಯನ್ನು ಸಾಹಿತ್ಯಚರಿತ್ರೆಯೊಳಗೆ ನೋಡಬಹುದು. ಶಾಸನಗಳನ್ನು ತೆಗೆದುಕೊಂಡರೆ ಬಹುತೇಕ ಶಾಸನಗಳು ಆಳುವವರನ್ನು ಹೊಗಳಲೆಂದೇ ರಚಿತವಾಗಿರುವ ಮನುಷ್ಯ ಸಂಬಂಧಗಳನ್ನು ಚಿತ್ರಿಸುತ್ತವೆ. ಇಲ್ಲಿ ಸಾಮಾನ್ಯ ಮನುಷ್ಯನು ಸಂಪೂರ್ಣ ನಿರ್ಲಕ್ಷ್ಯಕ್ಕೊಳಗಾಗುವುದನ್ನು ನೋಡಬಹುದು. ಮನುಷ್ಯನು ಇಹದಲ್ಲಿರುವಾಗಲೇ ಪರರ ಚಿಂತೆ ಮಾಡುತ್ತ ಕೆಲವೊಂದು ಸಂಕೀರ್ಣ ಸಂದರ್ಭಗಳಲ್ಲಿ ಸಮಾಜದ, ಧರ್ಮದ ವಿರುದ್ಧ ನಿಲ್ಲಲಾಗದೆ ಇಹದ ಬದುಕನ್ನು ತ್ಯಾಗ ಮಾಡಿ ಪರಲೋಕದಲ್ಲಿಯಾದರೂ ನೆಮ್ಮದಿಯಿಂದ ಸುಖವಾಗಿರಬಹುದು ಎಂಬ ಕನಸು ಕಾಣುತ್ತಾ ಅಂತ್ಯ ಕಂಡ ಚಿತ್ರಣವನ್ನು ನಾವು ಶಾಸನಗಳಲ್ಲಿ ನೋಡಬಹುದು.

ಶಾಸನ ಸಾಹಿತ್ಯದಂತೆಯೇ ಪ್ರಾಚೀನ ಕನ್ನಡಸಾಹಿತ್ಯದಲ್ಲಿ ಮನುಷ್ಯನ ಧರ್ಮಪ್ರಭುತ್ವ ಮತ್ತು ರಾಜಪ್ರಭುತ್ವದ ಅಡಿಯಾಳಾಗಿ ಬೆಳೆದಿರುವುದನ್ನು ಕಾಣಬಹುದು. ಬಹುತೇಕವಾಗಿ ಶಾಸನಗಳಲ್ಲಿ ವ್ಯಕ್ತವಾಗಿರುವ ಸಾಮಾಜಿಕ ಮೌಲ್ಯಗಳೇ ಪ್ರಾಚೀನ ಸಾಹಿತ್ಯದಲ್ಲೂ ಪ್ರತಿಪಾದಿತವಾಗಿವೆ. ಸತ್ಯ, ತ್ಯಾಗ, ವೀರ, ಶೌಚ, ಅಭಿಮಾನ, ಸ್ವಾಮಿಭಕ್ತಿ ಮೊದಲಾದ ಮೌಲ್ಯಾದರ್ಶಗಳ ಬದ್ಧತೆಗಳೊಳಗಾಗಿ ಬದುಕಿದ ಮನುಷ್ಯರು ಯಾರು ಎಂಬುದನ್ನು ಮೊದಲಿಗೆ 'ಆದಿಕವಿ ಪಂಪ'ನ ಕಾವ್ಯಗಳಿಂದ ನೋಡಬಹುದು. 'ಪಂಪ'ನು ತನ್ನ ಕಾವ್ಯದಲ್ಲಿ ವ್ಯಕ್ತಪಡಿಸಿರುವ ಮನುಷ್ಯ ಸಂಬಂಧಗಳು ಕಟ್ಟಿಕೊಂಡಿರುವ ಬಗೆಯನ್ನು ಸಾಮಾಜಿಕ ಮೌಲ್ಯಗಳನ್ನು ಮತ್ತು ಸಮಾಜದ ಎಲ್ಲಾ ಸ್ವೀಕೃತ ಮಾದರಿಗಳನ್ನು ಚಿತ್ರಿಸಿದ್ದಾನೆ. ಆದ್ದರಿಂದ ಮನುಷ್ಯ ಸಂಬಂಧಗಳ ನೆಲೆಯಲ್ಲಿ ಒಂದೊಂದು ಮೌಲ್ಯಕ್ಕೆ ಒಬ್ಬೊಬ್ಬ ವ್ಯಕ್ತಿಯನ್ನು ಪ್ರತಿನಿಧಿಯನ್ನಾಗಿಸುತ್ತಾನೆ. ಈ ವ್ಯಕ್ತಿಗಳನ್ನು ಆದರ್ಶವಾಗಿಟ್ಟುಕೊಂಡು ಸಾಮಾನ್ಯ ಮನುಷ್ಯ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಾನೆ. ಹೀಗೆ ಪ್ರಾಚೀನ ಕಾಲದ ಮೌಲ್ಯಾದರ್ಶಗಳು ಮನುಷ್ಯ ಸಂಬಂಧಗಳಲ್ಲಿ ಮಿಳಿತಗೊಂಡಿದ್ದವು.

೧೦ನೇ ಶತಮಾನದ ಕಾವ್ಯಗಳ ಮತ್ತೊಂದು ವೈಶಿಷ್ಟ್ಯವೆಂದರೆ ನಾಯಕನಲ್ಲಿ ಅಲ್ಲದೆ ಪ್ರತಿನಾಯಕನಲ್ಲೂ ಮಾನವೀಯ ವ್ಯಕ್ತಿತ್ವವನ್ನು ಕಾಣುವುದು. ಆ ಮೂಲಕ ಮನುಷ್ಯನ ಉದಾತ್ತ ಚಿಂತನೆಯನ್ನು ಮನುಷ್ಯ ಸಂಬಂಧಗಳ ನೆಲೆಗಟ್ಟುಗಳನ್ನು ಚಿತ್ರಿಸಿರುವುದು. 'ರನ್ನ' ಕವಿಯ ಸಾಹಿತ್ಯ ಕೃತಿಯಲ್ಲಿ ಮನುಷ್ಯ ಸಹಜ ದ್ವೇಷ, ಹಠ, ಶೌರ್ಯ, ಅಭಿಮಾನಗಳೇ ಮನುಷ್ಯನನ್ನು ರೂಪಿಸಿವೆ. ಲೌಕಿಕ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಮನುಷ್ಯನ ಸಹಜ ಗುಣಗಳು ತಾನು ನಂಬಿದ್ದ

ಮೌಲ್ಯವನ್ನು ಬದುಕಿನ ಅಂತ್ಯದವರೆವಿಗೂ ಪರಿಪಾಲಿಸಿ ಉದಾತ್ತ ಮನುಷ್ಯನಾಗಿ ಚಿತ್ರಿತನಾದರೆ ಆಗಮಿಕ ಕಾವ್ಯಗಳಲ್ಲಿನ ಮನುಷ್ಯನ ಸಹಜತೆ ಸಂಪೂರ್ಣವಾಗಿ ಧಾರ್ಮಿಕ ಚಿಂತನೆಯಲ್ಲಿಯೇ ಮೂಡಿದೆ. ಲೌಕಿಕ ಕಾವ್ಯಗಳಲ್ಲಿ ಮನುಷ್ಯನ ಸಹಜತೆಯನ್ನು ರಾಜ ಪ್ರಭುತ್ವ ನಿಯಂತ್ರಿಸಿದರೆ ಧಾರ್ಮಿಕ ಕಾವ್ಯಗಳಲ್ಲಿ ಆ ಕೆಲಸವನ್ನು ಮತ ಧರ್ಮ ಮಾಡುತ್ತದೆ. ಇಲ್ಲಿ ಮನುಷ್ಯನ ಬದುಕಿನ ಪ್ರತಿಯೊಂದು ಧೋರಣೆಗಳು ಧರ್ಮದ ಹಿನ್ನಲೆಯಲ್ಲೇ ರೂಪುಗೊಂಡಿವೆ. ಹೀಗಾಗಿ ಆ ಕಾಲಘಟ್ಟದಲ್ಲಿ ರಚನೆಯಾದ ಎಲ್ಲ ಆಗಮಿಕ ಕಾವ್ಯಗಳಲ್ಲಿನ ಮನುಷ್ಯ ಸಂಬಂಧಗಳ ಧೋರಣೆ ಒಂದೇ ರೀತಿಯಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಇಹದ ಬದುಕನ್ನು ನಿರ್ಲಕ್ಷಿಸಿದವರೆ ಬದುಕಿನ ಒಂದು ಘಟ್ಟದವರೆಗೆ ಲೌಕಿಕ ಬದುಕಿನ ಸುಖಭೋಗಗಳನ್ನು ಅತಿಯೆನಿಸುವಷ್ಟರಮಟ್ಟಿಗೆ ಅನುಭವಿಸಿ ಆನಂತರದ ಮನುಷ್ಯ ಅದರಿಂದ ವೈರಾಗ್ಯ ಹೊಂದಿ ಮೋಕ್ಷ ಮಾರ್ಗದೆಡೆಗೆ ಸಾಗಿದವರಾಗಿದ್ದಾರೆ.

ಒಟ್ಟಾರೆಯಾಗಿ ಆಗಮಿಕ ಕಾವ್ಯಗಳಲ್ಲಿ ರೂಪುಗೊಂಡ ಮನುಷ್ಯನನ್ನು ಕುರಿತು ಹೇಳಬೇಕೆಂದರೆ ಇಲ್ಲಿ ಧಾರ್ಮಿಕವಾಗಿ ಸಿದ್ಧಮೌಲ್ಯಗಳ ಹಿನ್ನಲೆಯಲ್ಲಿ ರೂಪುಗೊಂಡವು. ಇಹದ ಬದುಕನ್ನು ನಿರಾಕರಿಸಿ ಅಲೌಕಿಕ ಬದುಕನ್ನಪ್ಪಿಕೊಳ್ಳುವಾಗ ಯಾವುದೇ ದ್ವಂದ್ವವಾಗಲಿ, ಒಳತೋಟಿಯಾಗಲಿ ಕಾಡದೆ ದ್ವಂದ್ವಾತೀತರಾದವರು ಈಗಾಗಲೇ ಇಲ್ಲಿನ ಮನುಷ್ಯರು ಆದರ್ಶ ವ್ಯಕ್ತಿತ್ವಗಳಂತೆ ಚಿತ್ರಿತವಾಗಿಲ್ಲ. ಅವನು ಬದುಕಿನ ಕ್ರಮವನ್ನು ಅನುಸರಿಸಲಾಗದ್ದರಿಂದ ಸಾಮಾನ್ಯ ಮನುಷ್ಯನಿಗಿಂತ ಮಿಗಿಲಾದ ಸ್ಥಾನವನ್ನು ಪಡೆದು ದೈವತ್ವಕ್ಕೇರಿದ ಅಸಾಮಾನ್ಯರಂತೆ ಕಂಡುಬರುತ್ತಾರೆ. 'ನಾಗವರ್ಮನ' 'ಕರ್ನಾಟಕ ಕಾದಂಬರಿ'ಯಲ್ಲಿ ಮಾನವೀಯ ಸಂಬಂಧಗಳು ಪ್ರೇಮ ತತ್ವ ಮತ್ತು ಸ್ನೇಹದ ಅನನ್ಯತೆಯನ್ನು ಸಾರುವ ನೆಲೆಯಲ್ಲಿ ಸಂಬಂಧಗಳನ್ನು ಕಾಣಬಹುದು. 'ನಾಗಚಂದ್ರನ'–'ರಾಮಚಂದ್ರಚರಿತ ಪುರಾಣ'ದಲ್ಲಿ ಸಹಜ ಮನುಷ್ಯನ ವರ್ತನೆ, ಧಾರ್ಮಿಕ ತತ್ವಗಳಿಗನುಗುಣವಾಗಿ ರೂಪುಗೊಂಡ ಮನುಷ್ಯ ಸಂಬಂಧಗಳ ನೆಲೆಯಲ್ಲಿ ಕಾಣಬಹುದು. 'ಜನ್ನ'ನ ಕೃತಿಗಳಲ್ಲಿ ಧರ್ಮಕ್ಕೂ ಮನುಷ್ಯ ಸಹಜ ತುಡಿತಗಳಿಗೂ ಸಂಘರ್ಷವುಂಟಾಗಿ ಮನುಷ್ಯನ ತುಡಿತಗಳೇ ಮೇಲುಗೈ ಪಡೆಯುವುದನ್ನು ಇವರ ಕಾವ್ಯಗಳಲ್ಲಿ ಗಮನಿಸಬಹುದು.

ಪ್ರಾಚೀನ ಸಾಹಿತ್ಯದಲ್ಲಿ ಮನುಷ್ಯ ರಾಜಪ್ರಭುತ್ವ ಮತ್ತು ಮತಧರ್ಮ ಪ್ರಭುತ್ವದ ನಿಯಂತ್ರಣದಲ್ಲಿ ಬೆಳಿದಿದ್ದರಿಂದ ಇವೆರಡನ್ನು ವಿರೋಧಿಸಿ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. "ರಾಜ ಪ್ರತ್ಯಕ್ಷ ದೇವತಾ ಎಂಬ ಮೌಲ್ಯ ಜಾರಿಯಲ್ಲಿದ್ದ ಕಾಲದಲ್ಲಿ ಮನುಷ್ಯನ ಸರ್ವಸ್ವವೂ ಅವನಿಗೆ ಅರ್ಪಿತವಾಗಬೇಕಿದ್ದಿತು. ಅವನಿಗೆ ತನ್ನನ್ನು ತಾನೇ ಅರ್ಪಿಸಿಕೊಳ್ಳುತ್ತಿದ್ದ.

ಆದರೆ ಹನ್ನೆರಡನೇ ಶತಮಾನದಲ್ಲಿ ರಾಜನ ಸ್ಥಾನವನ್ನು ದೈವ ಆಕ್ರಮಿಸಿತು. ಮನುಷ್ಯ ಮನುಷ್ಯನಿಗೆ ಆಳಾಗುವುದನ್ನು ಮಾನವಧರ್ಮ ನಿರಾಕರಿಸಿತು."[೧]

ಮನುಷ್ಯ ಸಂಬಂಧಗಳ ಹಿನ್ನಲೆಯಲ್ಲಿ ನೋಡಿದಾಗ ಸಮಾಜದಲ್ಲಿ ಮೇಲು ಕೀಳೆಂಬುದಿಲ್ಲ ಎಲ್ಲರೂ ಒಂದೇ ಎಂಬ ಸಮಾನತಾ ತತ್ವವನ್ನು ಪ್ರತಿಪಾದಿಸಿದ ವಚನ ಸಾಹಿತ್ಯ ಕಾಯಕಕ್ಕೆ ಹೆಚ್ಚಿನ ಮನ್ನಣೆ ನೀಡಿತು. ಸಮಾಜದ ಎಲ್ಲ ವರ್ಗದ ಜನರನ್ನು ಒಂದು ಮುಖ್ಯವಾಹಿನಿಯಲ್ಲಿ ತರಲು ಶಿವಭಕ್ತಿ ಸೂತ್ರವನ್ನು ಮುಖ್ಯವಾಗಿಟ್ಟುಕೊಂಡಿತು. ಸಮಾನ ಕೆಲಸ, ಸಮಾನ ಗೌರವದ ಆಧಾರದ ಮೇಲೆ ನಿರ್ಲಕ್ಷ್ಯಕ್ಕೀಡಾದ ಸಾಮಾನ್ಯ ಮನುಷ್ಯ ಸಾಮೂಹಿಕವಾಗಿ ಬದುಕಲಾರಂಭಿಸಿದ, ಶತಶತಮಾನಗಳಿಂದ ಸಾಮಾಜಿಕ ನಿರ್ಬಂಧಗಳಿಂದಾಗಿ ತುಳಿತಕ್ಕೊಳಗಾಗಿದ್ದ ಸಾಮಾನ್ಯ ಮನುಷ್ಯ ಎಲ್ಲ ಕಟ್ಟುಪಾಡುಗಳನ್ನು ಕಿತ್ತೊಗೆದು ಮೊದಲ ಬಾರಿಗೆ ತನ್ನ ಅನುಭವಕ್ಕೆ ಶಿವಪಾರಮ್ಯದಡಿ ಅಭಿವ್ಯಕ್ತಿ ನೀಡಲಾರಂಭಿಸಿದ. ಅದುವರೆವಿಗೂ ರಾಜಪ್ರಭುತ್ವಕ್ಕಾಗಿ ದುಡಿಯುತ್ತಿದ್ದ ಕಾಯಕನಿಷ್ಠೆಯ ಸ್ಥಾನಕ್ಕೆ ಬದಲಾಗಿ ಅದರ ಸ್ಥಾನವನ್ನು ಧರ್ಮ ಆಕ್ರಮಿಸಿತು. ಅಲ್ಲಿನ ಸ್ವಾಮಿ ಸೇವಕ ಸಂಬಂಧ, ಭಕ್ತನ ಸಂಬಂಧವಾಗಿ ಮಾರ್ಪಾಡಾಯಿತು.

ವಚನಸಾಹಿತ್ಯದಂತೆ "ರಾಘವಾಂಕ'ನಲ್ಲೂ ಮನುಷ್ಯನ ಅಂತರಂಗದ ಹುಡುಕಾಟವೂ 'ಕುಮಾರವ್ಯಾಸ' ನಲ್ಲಿ ಮನುಷ್ಯ ಬದುಕಿನ ದೈವದ ಪ್ರಭಾವದಲ್ಲಿ ಮನುಷ್ಯ ಸಂಬಂಧಗಳು ಗಾಢವಾಗಿ ಶೋಧನೆಗೊಳ್ಳುವುದನ್ನು ಗುರುತಿಸಬಹುದು. ರಾಜ ಮತ್ತು ಮತಧರ್ಮ ಪ್ರಭುತ್ವಗಳೆರಡನ್ನು ಒಟ್ಟಿಗೆ ನಿರಾಕರಿಸಿ ನಿಜವಾದ ಮನಷ್ಯನನ್ನು ಚಿತ್ರಿಸಿದವನು 'ಸರ್ವಜ್ಞ'. ಸಮಾಜದಲ್ಲಿಯ ವಿರೋಧವನ್ನು ಲೆಕ್ಕಿಸದೆ ತನಗೆ ಸರಿಕಂಡ ಮಾರ್ಗದಲ್ಲಿ ಮುನ್ನಡೆದವನು. ಅಂದಿನ ಸಂದರ್ಭದಲ್ಲಿನ ವಿಷಮತೆಗಳನ್ನು ಹೋಗಲಾಡಿಸುವ ಆಶಯ ಸರ್ವಜ್ಞನಲ್ಲಿ ಮನುಷ್ಯ ಸುಧಾರಣಾವಾದಿಯಾಗಿದ್ದಾನೆ. ಜಾತಿಮತಗಳನ್ನು ಕಿತ್ತೊಗೆದ ಸರ್ವಜ್ಞನಲ್ಲಿ ನಾವು ನಿಜವಾದ ಸಾಮಾನ್ಯ ಮನುಷ್ಯನನ್ನು ಕಾಣುತ್ತೇವೆ. ಅಂದಿನ ಮನುಷ್ಯನ ಬದುಕು ಸಮಾಜದ ಚಿತ್ರಣದ ವಿವರ ಇವನ ತ್ರಿಪದಿಗಳಲ್ಲಿ ಕಣ್ಣಿಗೆ ಕಾಣುತ್ತವೆ.

ಮಧ್ಯಕಾಲಿನ ಕನ್ನಡ ಸಾಹಿತ್ಯದಲ್ಲಿ ಚಿತ್ರಣಗೊಂಡಿರುವ ಮನುಷ್ಯನಿಗೆ ಮತಧರ್ಮ ನಿಷ್ಠೆಯನ್ನು ವಿರೋಧಿಸಲು ಸಾಧ್ಯವಾಗಲಿಲ್ಲ. ಈ ಹಿನ್ನೆಲೆಯಲ್ಲಿ ನಾವು ಮಧ್ಯಕಾಲೀನ ಮನುಷ್ಯನನ್ನು ನೋಡಿದಾಗ ನಮಗೆ ಅಲ್ಲಿ ಗೋಚರವಾಗುವುದು ರಾಜನಿಷ್ಠೆಗೆ ಬದಲಾಗಿ ಧರ್ಮನಿಷ್ಠೆಗೆ ಬದ್ಧನಾದ ಮನುಷ್ಯ ಕಾಣಿಸುತ್ತಾನೆಯೇ ಹೊರತು ಇವೆರಡರಿಂದ ಬಿಡಗಡೆಗೊಂಡ ಸ್ವತಂತ್ರ ಪ್ರವೃತ್ತಿಯ ಸಾಮಾನ್ಯ ಮನುಷ್ಯ ನಮಗಲ್ಲಿ ಕಂಡುಬರುವುದಿಲ್ಲ.

---

೧. ಕನ್ನಡ ಸಾಹಿತ್ಯದಲ್ಲಿ ಮನುಷ್ಯ ಪರಿಕಲ್ಪನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ. ೮೮.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮನುಷ್ಯ ಸಂಬಂಧಗಳ ನೆಲೆಗಳನ್ನು ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯಕ್ಕಿಂತ ಭಿನ್ನ ರೀತಿಯಲ್ಲಿ ಹೊಸ ಮನುಷ್ಯನ ಹುಡುಕಾಟದ ಚಿಂತನೆಗಳನ್ನು ನೋಡಬಹುದು. ಇಂಗ್ಲಿಷರ ಆಡಳಿತದಿಂದಾಗಿ ಇಂಗ್ಲೀಷ್ ವಿದ್ಯಾಭ್ಯಾಸ ಪಡೆದ ಮನುಷ್ಯ ಪಾಶ್ಚಾತ್ಯ ಚಿಂತನೆಯ ಕ್ರಮಗಳಿಗೆ ಬೆರಗಾಗಿ ತನ್ನ ಸಂಸ್ಕೃತಿಯ ಹಿನ್ನಲೆಯಲ್ಲಿ ಪ್ರತಿಯೊಂದನ್ನು ವಸ್ತುನಿಷ್ಠವಾಗಿ ಆಲೋಚಿಸಲಾರಂಭಿಸಿದ. ಪಾಶ್ಚಾತ್ಯ ಜೀವನ ವಿನ್ಯಾಸ ಬದುಕಿನ ಗ್ರಹಿಕೆ ಶತಶತಮಾನಗಳಿಂದ ಜಡ್ಡುಗಟ್ಟಿದ ಭಾರತೀಯ ಬದುಕಿನ ಕ್ರಮವನ್ನು ಬದಲಾಯಿಸಲಾರಂಭಿಸಿತು. ಪಾಶ್ಚ್ಯಾತೀಕರಣ ಎನ್ನುವುದು ಒಟ್ಟು ಭಾರತೀಯ ಬದುಕಿನಲ್ಲಿ ಒಂದು ಹೊಸ ಸಂಚಲನವನ್ನುಂಟು ಮಾಡಿತು. ಪ್ರತಿಯೊಬ್ಬ ಸಂವೇದನಾಶೀಲ ವ್ಯಕ್ತಿಗೆ ಈ ಪ್ರಭಾವದಿಂದ ಹೊರಗುಳಿಯಲು ಸಾಧ್ಯವಾಗಲಿಲ್ಲ. ಹೀಗೆ ಭಿನ್ನ ಭಿನ್ನ ಸಂಸ್ಕೃತಿಗಳು ಭಾರತೀಯ ಬದುಕಿನ ಮೇಲೆ ಅಪ್ಪಳಿಸಲಾರಂಭಿಸಿದಂತಹ ಸಂದರ್ಭದಲ್ಲಿ ಸೃಷ್ಟಿಯಾದಂತಹ ಸಾಹಿತ್ಯದಲ್ಲಿ ಚಿತ್ರಿತಗೊಂಡ ಮನುಷ್ಯ ಸಂಬಂಧಗಳ ನೆಲೆಗಳನ್ನು ಗಮನಿಸಬಹುದು.

ಈ ದೃಷ್ಟಿಯಿಂದ ನವೋದಯ ಸಾಹಿತ್ಯ ಸಂದರ್ಭದಲ್ಲಿ ಮನುಷ್ಯ ಸಂಬಂಧಗಳ ಅಧ್ಯಯನವನ್ನು ನೋಡಿದಾಗ ಹೆಚ್ಚು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ವರ್ಗಕ್ಕೆ ಸೇರಿದ ಕವಿಗಳೇ ಆಗಿದ್ದರು. ಇವರೆಲ್ಲರೂ ಮನುಷ್ಯ ಸಂಬಂಧಗಳನ್ನು ಕಟ್ಟಿದ ಬಗೆಯನ್ನು ನೋಡಬಹುದು. ಆಧುನಿಕ ಸಾಹಿತ್ಯದಲ್ಲಿ ಚಿತ್ರಿತಗೊಂಡ ಮನುಷ್ಯ ಸಂಪ್ರದಾಯನಿಷ್ಠ ಮನುಷ್ಯನಾಗಿದ್ದಾನೆ. ಜೊತೆಗೆ ಮನುಷ್ಯ ಸಂಬಂಧಗಳು ಆದರ್ಶದ ನೆಲೆಯಲ್ಲಿ ರೂಪುಗೊಂಡವೇ ಹಾಗಿವೆ. ಈ ರೀತಿಯ ನೆಲೆಗಟ್ಟಿನಲ್ಲಿ ಚಿತ್ರಿಸಿದವರೆಂದರೆ 'ಕುವೆಂಪು', 'ಬೇಂದ್ರೆ', 'ಮಾಸ್ತಿ', 'ಪು.ತಿ.ನ', 'ಶಿವರಾಮಕಾರಂತ' ಇವರುಗಳ ಸಾಹಿತ್ಯ ಕೃತಿಗಳಲ್ಲಿ ಮನುಷ್ಯನ ಮೌಲ್ಯಾದರ್ಶಗಳನ್ನು ಪಾಲಿಸುವ ಮತಧರ್ಮದಲ್ಲಿ ವಿಶ್ವಾಸವಿಟ್ಟಿರುವ ಇಹಪರಗಳೆರಡರ ಬಗ್ಗೆಯೂ ಚಿಂತನೆ ಮಾಡುವವರಾಗಿದ್ದಾರೆ. ಇಲ್ಲಿನ ಮನುಷ್ಯ ಸಾಂಪ್ರದಾಯಿಕವಾಗಿ ಬದುಕು ರೂಪಿಸಿಕೊಂಡು ಮೌಲ್ಯಾಚರಣೆಯಲ್ಲಿ ತೊಡಗಿದಾಗ ಅವುಗಳನ್ನು ಬದಲಾದ ಸಾಮಾಜಿಕ ಸಂದರ್ಭದಲ್ಲಿ ಪಾಲಿಸುವ ಯುಕ್ತಾಯುಕ್ತತೆಯನ್ನು ವಿವೇಚಿಸುವುದಿಲ್ಲ. ಮೌಲ್ಯಗಳ ಶೋಧನೆಯ ಬಗ್ಗೆ ಚಿಂತನೆ ನಡೆಸುವುದು ನವೋದಯದ ಮನುಷ್ಯನ ಕೆಲಸವಾಗಿರಲಿಲ್ಲ. ಪರಂಪರೆಯ ಬಗ್ಗೆ ಕೇವಲ ಕುರುಡು ನಂಬಿಕೆಯಿಂದ ವರ್ತಿಸುವ ವ್ಯಕ್ತಿತ್ವಗಳು ಇಲ್ಲಿ ಕಾಣುತ್ತವೆ. ಆದರ್ಶ, ಕನಸುಗಾರಿಕೆ, ಆಧ್ಯಾತ್ಮದಲ್ಲಿ ನಂಬಿಕೆಯಿಟ್ಟ ನವೋದಯದ ಮನುಷ್ಯ ವಾಸ್ತವದ ಬದುಕನ್ನೆ ಎದುರಿಸಲಾರದೆ ಕೇವಲ ಆದರ್ಶದ ನೆಲೆಯಲ್ಲಿ ನಿಲ್ಲುವ ದುರ್ಬಲ ಮನುಷ್ಯರಾಗಿರುತ್ತಾರೆ.

ನವೋದಯ ಸಾಹಿತ್ಯದ ಆಧ್ಯಾತ್ಮಿಕ ಒಲವು, ನಿಸರ್ಗಪ್ರೇಮ, ಸೌಂದರ್ಯಾರಾಧನೆ, ಮೌಲ್ಯಾದರ್ಶ ಪರಿಪಾಲನೆ ಮೊದಲಾದ ಬದ್ಧತೆಗಳಿಗೆ ಪ್ರತಿಕ್ರಿಯೆಯಾಗಿ ಬಂದದ್ದು ಪ್ರಗತಿಶೀಲ

ಸಾಹಿತ್ಯ, ರಷ್ಯಾದ ಮಾರ್ಕ್ಸ್‌ವಾದದ ಪ್ರಭಾವದಿಂದ ೧೯೪೪ರಲ್ಲಿ ಭಾರತದಲ್ಲಿ ಪ್ರಗತಿಶೀಲ ಬರಹಗಾರರ ಸಂಘ ಸ್ಥಾಪನೆಯಾಗಿ, ಕ್ರಮೇಣ ಇದು ಪ್ರಾಂತೀಯ ಭಾಷೆಗಳಿಗೂ ವ್ಯಾಪಿಸಿ ಪ್ರಗತಿಪರ ಸಂಘಗಳು ರಚನೆಗೊಂಡವು. ಸಮಾಜದಲ್ಲಿನ ಅಸಮಾನತೆಯನ್ನು ತೊಡೆದು ಹಾಕುವ ಮೂಲಕ ವ್ಯವಸ್ಥೆಯನ್ನು ಸುಧಾರಿಸುವ ಧೋರಣೆ ಪ್ರಗತಿಶೀಲರದಾಗಿತ್ತು. ವರ್ಗಕಲಹದ ಸ್ವರೂಪ, ವಿಧವಾಸಮಸ್ಯೆ, ವೇಶ್ಯಾಸಮಸ್ಯೆ, ಶೋಷಿತರ ಬದುಕು, ಕೌಟುಂಬಿಕ ಸಮಸ್ಯೆ, ಹಣಕ್ಕಾಗಿ ನೈತಿಕ ಅಧಃಪತನದತ್ತ ಮನುಷ್ಯ ಸಂಬಂಧಗಳು ಸಾಗುತ್ತಿರುವುದು ಮುಂತಾದ ಸಾಮಾಜಿಕ ಸಮಸ್ಯೆಗಳನ್ನೆತ್ತಿಕೊಂಡು ಪ್ರಗತಿಶೀಲ ಲೇಖಕರು ಸಾಹಿತ್ಯ ರಚನೆಯಲ್ಲಿ ತೊಡಗಿದರು. ಇವರ ಅಭಿವ್ಯಕ್ತಿ ಮಾಧ್ಯಮ ಮುಖ್ಯವಾಗಿ ಕಾದಂಬರಿ ಪ್ರಕಾರದಲ್ಲಿತ್ತು. ಕನ್ನಡದಲ್ಲೂ ನಲವತ್ತರ ದಶಕದಲ್ಲಿ ಪ್ರಗತಿಶೀಲ ಚಳವಳಿ ಆರಂಭವಾಯಿತು. ಈ ಪಂಥದಲ್ಲಿ 'ಅ.ನ.ಕೃಷ್ಣರಾಯ', 'ತ.ರಾ.ಸುಬ್ಬರಾಯರು', 'ಚದುರಂಗ', 'ಬಸವರಾಜಕಟ್ಟೀಮನಿ', 'ನಿರಂಜನ' ಮೊದಲಾದವರು ತಮ್ಮನ್ನು ಪ್ರಗತಿಶೀಲ ಲೇಖಕರೆಂದು ಗುರುತಿಸಿಕೊಂಡರು. ಸಾಮಾಜಿಕ ಕಳಕಳಿಯನ್ನು ಮುಖ್ಯ ಮಾನದಂಡವನ್ನಾಗಿಸಿಕೊಂಡು ಕೃತಿರಚನೆ ಮಾಡಲಾರಂಭಿಸಿದರು. ಕನ್ನಡದ ಪ್ರಗತಿಶೀಲ ಲೇಖಕರ ಧೋರಣೆಗಳು ನವೋದಯ, ನವ್ಯದಂತೆ ಮೊದಲಿಗೆ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆಯದೆ ಕಾದಂಬರಿಯಲ್ಲಿ ಅಭಿವ್ಯಕ್ತಿ ಪಡೆಯಿತು. ಸಾಮಾಜಿಕ ಬದಲಾವಣೆಯಾಗಬೇಕು, ವರ್ಗ ತಾರತಮ್ಯ ರಹಿತ ಸಮಾಜ ನಿರ್ಮಾಣವಾಗಬೇಕು ಎಂಬ ಆಶಯವನ್ನೊಂದಿರುವ ಪ್ರಗತಿಶೀಲ ಪಂಥದ ಕಾದಂಬರಿಗಳಲ್ಲಿ ರೂಪುಗೊಂಡಿರುವ ಮನುಷ್ಯ ಸಂಬಂಧಗಳು ಅನುಭವ ಕೊರತೆಯಿಂದ, ಗುರುತಿಸಿಕೊಳ್ಳಲಾರಂಭಿಸಿದವು. ಅ.ನ.ಕೃ.ರವರ ಕಾದಂಬರಿಗಳ ಮನುಷ್ಯ ಸಂಬಂಧಗಳು ಈ ಮಾದರಿಯಲ್ಲಿ ಚಿತ್ರಿತವಾದರೆ ನಿರಂಜನ ಕಟ್ಟೀಮನಿಯವರ ಕಾದಂಬರಿಗಳಲ್ಲಿ ವ್ಯವಸ್ಥೆಯ ವಿರುದ್ಧ ಮನುಷ್ಯ ದನಿ ಎತ್ತಿದರೆ, ಮಾನವತೆಯನ್ನು ಪ್ರತಿಪಾದಿಸುವ ಚದುರಂಗರ ಕೃತಿಗಳಲ್ಲಿ ಪ್ರಗತಿಶೀಲ ಮನುಷ್ಯ ಸಂಬಂಧಗಳು ತಕ್ಷಣಕ್ಕೆ ಬದಲಾವಣೆಗೊಳಗಾಗದೆ, ವ್ಯವಸ್ಥೆಯ ವಿರುದ್ಧ ದನಿ ಎತ್ತದೆ ಕಾಲದ ಬದಲಾವಣೆಗೆ ಕಾಯುವ ಆಶಯದ ಭವಿಷ್ಯದಲ್ಲಿ ನಂಬಿಕೆಯಿಡುವ ವ್ಯಕ್ತಿಗಳಂತೆ ಚಿತ್ರಿತವಾಗಿದೆ.

ಬದುಕು ಚಲನಶೀಲವಾದುದು, ಚಲನಶೀಲವಾದ ಬದುಕಿನಲ್ಲಿ ಬದಲಾವಣೆಯೆನ್ನುವುದು ಸಹಜ ಹಾಗೂ ಜೀವಂತಿಕೆಯ ಲಕ್ಷಣವಾಗಿದೆ. ಬದಲಾವಣೆಯ ಗತಿಸ್ಥಿತಿಯನ್ನು ಅನುಸರಿಸಿ ಸಾಹಿತ್ಯ ಕೂಡ ಅಂದಂದಿನ ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಅಭಿವ್ಯಕ್ತಿ ಪಡೆಯುತ್ತಿರುತ್ತದೆ. ಇದು ಕೇವಲ ಕನ್ನಡ ಅಥವಾ ಭಾರತೀಯ ಭಾಷಾ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿರದೆ ವಿಶ್ವದ ಯಾವುದೇ ಭಾಷೆಯ ಸಾಹಿತ್ಯವನ್ನು ಗಮನಿಸಿದಾಗಲೂ ಈ ಅಂಶ ವೇದ್ಯವಾಗುತ್ತದೆ. ಈ ಹಿಂದೆ ಒಮ್ಮೆ ಪ್ರಸ್ತಾಪವಾಗಿರುವಂತೆ ಕನ್ನಡ ಭಾಷೆಯ ಸಾಹಿತ್ಯಕ್ಕೆ ಸುಮಾರು ೧೫೦೦ ವರ್ಷಗಳಿಗೂ ಮೀರಿದ ಸುದೀರ್ಘವಾದ ಇತಿಹಾಸವಿದೆ. ಯೂರೋಪಿನಲ್ಲಿ ಸಂಭವಿಸಿದ

ಔದ್ಯೋಗಿಕ ಕ್ರಾಂತಿಯಂತೆ ಮೊದಲ ಮತ್ತು ದ್ವಿತೀಯ ಮಹಾಯುದ್ಧಗಳು ನವ್ಯಸಾಹಿತ್ಯಕ್ಕೆ ಪ್ರೇರಣೆ ನೀಡಿದವು. ಈ ಎರಡು ಜಾಗತಿಕ ಮಹಾಯುದ್ಧಗಳು ರಾಷ್ಟ್ರಗಳನ್ನೊಳಗೊಂಡಂತೆ ಪ್ರಪಂಚದ ಇನ್ನಿತರ ದೇಶಗಳ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳ ಮೇಲೆ ತಕ್ಷಣವೇ ಚೇತರಿಸಿಕೊಳ್ಳಲಾಗದಂತಹ ದೀರ್ಘ ಪರಿಣಾಮವನ್ನುಂಟುಮಾಡಿತು. ಈ ಯುದ್ಧ ವಿಚಾರವಂತರ ಮೇಲೆ ಪ್ರಭಾವಬೀರಿತು.

ಮನೋವೈಜ್ಞಾನಿಕ ಸಿದ್ಧಾಂತದ ಹಿನ್ನಲೆಯಲ್ಲಿ ನವ್ಯ ಸಾಹಿತ್ಯದಲ್ಲಿ ಮನುಷ್ಯ ಸಂಬಂಧಗಳನ್ನು ರೂಪಿಸಿರುವ ಬಗೆಯನ್ನು ನೋಡಬಹುದು. ಈವರೆಗಿನ ಚಿಂತನೆ ಸಂಪ್ರದಾಯಗಳನ್ನು ಆತ ನಂಬಿಕೆಯಿಂದ ನೋಡುವಂತೆ ಫ್ರಾಯ್ಡನ ಮನೋವೈಜ್ಞಾನಿಕ ಸಿದ್ಧಾಂತ ಮನುಷ್ಯರ ನಂಬಿಕೆಗಳನ್ನು ಬುಡಮೇಲು ಮಾಡಿತು. ವ್ಯಕ್ತಿಯ ಸ್ಥಿತಿಗತಿಗಾಗಲಿ, ಸಮಾಜದ ಸ್ವರೂಪಕ್ಕಾಗಲಿ ಮನುಷ್ಯ ಕಾರಣನೇ ಹೊರತು ದೇವರಲ್ಲ ಎಂದು ಈ ಸಿದ್ಧಾಂತ ಪ್ರತಿಪಾದಿಸಿತು. ಫ್ರಾಯ್ಡನ ಈ ಸಿದ್ಧಾಂತದಿಂದ ದಿಗ್ಭ್ರಮೆಗೊಂಡ ಮನುಷ್ಯ ಈ ಬಗ್ಗೆ ಸೂಕ್ಷ್ಮವಾಗಿ ಆಲೋಚಿಸತೊಡಗಿದನು. ಮನುಷ್ಯನ ಹೊಸ ಆಲೋಚನೆ ಆಗ ತಾನೇ ನೆಲೆಯೂರಲು ಹವಣಿಸುತ್ತಿದ್ದ ನವ್ಯಸಾಹಿತ್ಯವನ್ನು ಪ್ರಭಾವಿಸಿತು. ಜೊತೆಗೆ ಮನುಷ್ಯನ ಎಲ್ಲ ಸಂಬಂಧಗಳು ಮನುಷ್ಯನನ್ನು ಕುಟುಂಬ ಜೀವಿಯಾಗಿ ಸಮಾಜದಲ್ಲಿ ಗೌರವಯುತವಾಗಿ ಬದುಕುವಂತೆ ಮಾಡಿತ್ತು. ಈಗ ಮನುಷ್ಯ ಅರ್ಥಪೂರ್ಣ ಬದುಕಿಗೆ ಹಂಬಲಿಸುವಂತೆಯೇ ದ್ವಂದ್ವಕ್ಕೂ ತಲುಪಿದ. ಇಂತಹ ಮನುಷ್ಯ ನಿಜಕ್ಕೂ ಅತಂತ್ರವೆನ್ನುವಂಥ ಪರಿಸ್ಥಿತಿ ತಲುಪಿದ. ಚಿಂತೆ, ಏಕಾಂಗಿತನಗಳಿಂದಾಗಿ ಬಳಲತೊಡಗಿದ. ಮನುಷ್ಯ ಇಂತಹ ಗೊಂದಲ ಸ್ಥಿತಿಯಲ್ಲೇ ವರ್ತಿಸತೊಡಗಿದ.

ಒಟ್ಟಿನಲ್ಲಿ ಮನುಷ್ಯನ ಜ್ಞಾನದ ಪರಿಧಿ ವಿಸ್ತಾರವಾದಂತೆ ಹಲವಾರು ಭಿನ್ನ ಅನುಭವಗಳನ್ನು ಪಡೆದಂತೆ ಅವನ ಆಲೋಚನಾ ವಿಧಾನ, ಬದುಕನ್ನು ನೋಡುವ ಕ್ರಮ ಬದಲಾಯಿತು. ಆದರ್ಶ ವಾಸ್ತವಗಳ ನಡುವಣ ಅಂತರ ಹೆಚ್ಚಾಗುತ್ತ ಹೋದಂತೆ ಮೌಲ್ಯಾದರ್ಶನಗಳನ್ನು ಪಾಲಿಸುವುದು ದುಸ್ತರವೆಂಬ ನಿಲುವಿಗೆ ಮನುಷ್ಯ ತಲುಪಿದ ದೇವರು – ಧರ್ಮಗಳ ಬಗೆಗಿನ ಹೊಸ ತಿಳುವಳಿಕೆ, ಡಾರ್ವಿನ್, ಫ್ರಾಯ್ಡ್, ಮಾರ್ಕ್ಸ್, ಲೆನಿನ್ನರ ವಿಚಾರಧಾರೆ ಹಾಗೂ ಮಹಾಯುದ್ಧಗಳ ಪರಿಣಾಮ ಮನುಷ್ಯ ಸಂಬಂಧದ ವಿಘಟನೆ ಮೊದಲಾದವುಗಳಿಂದಾಗಿ ರಾಜಕೀಯ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ತೀವ್ರ ಬದಲಾವಣೆಯಾಯಿತು. ನವೋದಯ ಸಾಹಿತ್ಯದಲ್ಲಿ ಮನುಷ್ಯನಿಗೆ ಪ್ರತ್ಯೇಕ ಅಸ್ತಿತ್ವವಿರಲಿಲ್ಲ. ವ್ಯಕ್ತಿಯ ವೈಯಕ್ತಿಕ ಸಮಸ್ಯೆಯ ಅಭಿವ್ಯಕ್ತಿಗಿಂತ ಸಾಮಾಜಿಕ ಜೀವನ, ಸಾಮಾಜಿಕ ಸಮಸ್ಯೆಗಳೇ ಮುಖ್ಯವಾಗಿತ್ತು. ವ್ಯಕ್ತಿ ಹಿಂದೆ ಸರಿದು ಸಮಾಜ ಮುಖ್ಯವಾಗಿದ್ದ ನವೋದಯ ಸಾಹಿತ್ಯ

ಮನುಷ್ಯನನ್ನು ಸಮಾಜ ಜೀವಿಯೆಂದೆ ಪರಿಗಣಿಸುತ್ತಿದ್ದರೆ ಸಮಾಜವನ್ನು ವ್ಯಕ್ತಿ ಪ್ರಜ್ಞೆಯಿಂದ ನವ್ಯ ಸಾಹಿತ್ಯ ನೋಡುತ್ತಿತ್ತು. ಮನುಷ್ಯ ಮತ್ತು ಸಮಾಜದ ನಡುವಿನ ಸಾವಯವ ಸಂಬಂಧದ ಚಿತ್ರಣ ನವೋದಯ ಸಾಹಿತ್ಯದಲ್ಲಿದ್ದರೆ ನವ್ಯ ಸಾಹಿತ್ಯ ವ್ಯಕ್ತಿಗಷ್ಟೇ ಸೀಮಿತವಾಗಿ ಸಾಮಾಜಿಕ ಚೌಕಟ್ಟಿನಿಂದಾಚೆಗೂ ಮನುಷ್ಯನ ಸಮಸ್ಯೆಗಳೇನು? ಎಂಬುದನ್ನು ವಿಶ್ಲೇಷಿಸಿತು. ಸಮಾಜ ಜೀವಿಯಾಗಿ ಬದುಕಿದ ನವೋದಯ ಮನುಷ್ಯ ಸಮಾಜದ ಮೌಲ್ಯದರ್ಶನಗಳಿಗೆ ಅನುಗುಣವಾಗಿ ಬದುಕು ರೂಪಿಸಿಕೊಂಡು ಮೌಲ್ಯಕ್ಕೋಸ್ಕರ ಬದುಕಿದರೆ ನವ್ಯ ಸಾಹಿತ್ಯದ ಮನುಷ್ಯ ಈ ಮೌಲ್ಯಗಳನ್ನು ವಿಷಾದದ ಮೂಸೆಯಲ್ಲಿ ಹಾಕಿ ಶೋಧಿಸತೊಡಗಿದ. ಈ ಹಿನ್ನಲೆಯಲ್ಲಿ ರೂಪುಗೊಂಡ ನವ್ಯ ಸಾಹಿತ್ಯದಲ್ಲಿನ ಮನುಷ್ಯ ಹೇಗಿದ್ದನೆಂಬುದನ್ನು ನೋಡಬಹುದು.

ದಲಿತ ಬಂಡಾಯದ ಸಾಹಿತ್ಯದಲ್ಲಿ ಮನುಷ್ಯ ಸಂಬಂಧವನ್ನು ನೋಡುವುದಾದರೆ ಅಂಬೇಡ್ಕರ್, ಗಾಂಧಿ, ಲೋಹಿಯಾ ಚಿಂತನೆಗಳ ಪ್ರಭಾವದಿಂದ ಹುಟ್ಟಿಕೊಂಡ ಪಂಥವಿದು. 'ದೇವನೂರ ಮಹಾದೇವ' ಹೇಳುವ ಹಾಗೆ "ಸಂಬಂಜ ಅನ್ನೋದು ದೊಡ್ಡು ಕನಾ" ಎಂಬ ಮಾತು ಮನುಷ್ಯ ಸಂಬಂಧದ ವಿಭಿನ್ನ ಆಯಾಮಗಳನ್ನು ತಿಳಿಸುತ್ತದೆ. 'ಮೊಗಳ್ಳಿ ಗಣೇಶ್', 'ಕಾಳೇಗೌಡನಾಗವಾರ', 'ಬೆಸಗರಹಳ್ಳಿರಾಮಣ್ಣ', 'ಕುಂ.ವೀರಭದ್ರಪ್ಪ', ಇನ್ನೂ ಮುಂತಾದವರು ಮನುಷ್ಯ ಸಂಬಂಧಗಳನ್ನು ಚಿತ್ರಿಸಿರುವ ಕಥನ ಸಾಹಿತ್ಯವನ್ನು ಭಿನ್ನ ನೆಲೆಯಲ್ಲಿ ಕಾಣಬಹುದು.

ಸ್ತ್ರೀವಾದಿ ಸಾಹಿತ್ಯದಲ್ಲಿ ಮಹಿಳಾ ಬವಣೆಗಳು, ಶೋಷಣೆಗಳು, ಪುರುಷ ಪ್ರಧಾನ ವ್ಯವಸ್ಥೆ ನಡೆಸಿಕೊಂಡ ಬಗೆಯಲ್ಲಿ ಮನುಷ್ಯ ಸಂಬಂಧದ ನೆಲೆಗಳನ್ನು ಕಟ್ಟಿಕೊಟ್ಟ ಬಗೆಗಳನ್ನು ಕಾಣಬಹುದು. ಈ ಹಿನ್ನಲೆಯಲ್ಲಿ 'ವೈದೇಹಿ', 'ಅನುಪಮಾನಿರಂಜನ', 'ಗೀತಾನಾಗಭೂಷಣ್', 'ಬಿ.ಟಿ.ಲಲಿತಾನಾಯಕ್', 'ವೀಣಾಶಾಂತೇಶ್ವರ' ಇನ್ನೂ ಮುಂತಾದ ಲೇಖಕಿಯರು ಕಟ್ಟಿಕೊಟ್ಟ ಮನುಷ್ಯ ಸಂಬಂಧದ ನೆಲೆಗಳನ್ನು ನೋಡಬಹುದು.

ನವ್ಯ ಕಥನ ಸಾಹಿತ್ಯದಲ್ಲಿ ಮುಖ್ಯವಾಗಿ "ಶಾಂತಿನಾಥದೇಸಾಯಿ', 'ಯಶವಂತಚಿತ್ತಾಲ', 'ಯು.ಆರ್.ಅನಂತಮೂರ್ತಿ', 'ಪಿ.ಲಂಕೇಶ್', 'ಪೂರ್ಣಚಂದ್ರತೇಜಸ್ವಿ', 'ಚಂದ್ರಶೇಖರ ಕಂಬಾರ', 'ಗಿರಿ', 'ಕುಸುಮಾಕರ ದೇವರಗಣ್ಣೂರ' ಇನ್ನೂ ಮೊದಲಾದವರು ಆಧುನಿಕ ಮನುಷ್ಯ ಸಂಬಂಧದ ಸ್ವರೂಪವನ್ನು ಕಟ್ಟಿಕೊಟ್ಟ ಪ್ರಮುಖ ಲೇಖಕರು.

ಒಟ್ಟಿನಲ್ಲಿ ಪಾಶ್ಚಾತ್ಯ Modern Poetryಯಿಂದ ಪ್ರಭಾವಿತವಾಗಿ ಕನ್ನಡದಲ್ಲಿ ರಚನೆಯಾದ ನವ್ಯ ಕಥನಸಾಹಿತ್ಯದಲ್ಲಿನ ಮನುಷ್ಯ ನವೋದಯ ಮನುಷ್ಯನಂತೆ ಆದರ್ಶವಾದಿಯಾಗಿರದೆ ಅಂತರ್ಮುಖಿಯಾಗಿದ್ದು, ಪರಂಪರಾಗತ ಮೌಲ್ಯಗಳನ್ನು ತನ್ನ ದೃಷ್ಟಿಯಲ್ಲಿ ಕಂಡರಿಸಿ ವಿಶ್ಲೇಷಿಸುವ ಸಂವೇದನಾಶೀಲ ಮನುಷ್ಯನಾಗಿದ್ದಾನೆ. ಸಮಾಜಕ್ಕಾಗಿ ಬದುಕಬೇಕು. ಸಮಾಜ ಮೊದಲು ಅನಂತರ ವ್ಯಕ್ತಿ ಎಂಬ ಮನೋಭಾವದವನಾಗಿರದೆ ತನಗಾಗಿ

ಬದುಕು, ತನ್ನದೇ ಬದುಕು ಎಂಬ ವ್ಯಕ್ತಿವಾದಿ ನಿಲುವಿನವನು. ಹೊಸತನಕ್ಕಾಗಿ ತುಡಿಯುವವನು, ಇಂತಹ ಮನುಷ್ಯ ಸಮಾಜದಲ್ಲಿ ಹೇಗೆ ಬದುಕುತ್ತಾನೆ. ಮನುಷ್ಯ ಮತ್ತು ಸಮಾಜದ ಸಂಬಂಧ ಎಂತಹುದು, ತಾನು ಒಪ್ಪಿಕೊಳ್ಳಲಾಗದ ಸಾಮಾಜಿಕ ವ್ಯವಸ್ಥೆಯಲ್ಲಿ ಹೇಗೆ ತನ್ನ ಅಸ್ತಿತ್ವಕ್ಕಾಗಿ ತಡಕಾಡುತ್ತಾನೆ. ವ್ಯವಸ್ಥೆ ಇಂತಹ ಮನುಷ್ಯನನ್ನು ನಿಯಂತ್ರಿಸಲು ಯಾವ ಕ್ರಮ ಕೈಗೊಳ್ಳುತ್ತವೆ ಎಂಬುದನ್ನು **'ಪಿ. ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ'** ಎಂಬ ಮಹಾಪ್ರಬಂಧದಲ್ಲಿ ಶೋಧಿಸಲಾಗಿದೆ.

*****

# ಅಧ್ಯಾಯ ನಾಲ್ಕು

# ಕಾಮ ಮತ್ತು ಪ್ರೇಮ : ಮನುಷ್ಯ ಸಂಬಂಧಗಳ ಸ್ವರೂಪ

ಸಾಹಿತ್ಯ ಸದಾಕಾಲದ ಆಸಕ್ತಿಯ ವಿಷಯ ಮನುಷ್ಯ. ಸಾಹಿತ್ಯ ಕೃತಿಗಳು ಮನುಷ್ಯ ಸಾಮಾಜಿಕ ಅಸ್ತಿತ್ವದ ಹುಡುಕಾಟಗಳಾಗಿದ್ದು, ಆತನ ಚಹರೆಗಳನ್ನು ಕಟ್ಟಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಮನುಷ್ಯನ ನೆಲೆಗಳನ್ನು ಶೋಧನೆಗೆ ಒಡ್ಡುವ ಮೂಲಕ ಅವುಗಳ ಹಿಂದಿರುವ ಆಶಯಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡುತ್ತದೆ ಎಂತಲೇ ಭಾವಿಸಬಹುದು.

ಆಧುನಿಕ ಸಾಹಿತ್ಯವು ಮನುಷ್ಯನ ಇರುವಿಕೆಯನ್ನು ಕಟ್ಟಿಕೊಡುವುದರೊಂದಿಗೆ ಅವನ ಅಗಲುವಿಕೆಯ ನೆಲೆಗಳನ್ನು ತಿಳಿಸುತ್ತದೆ. ಈ ಇರುವಿಕೆ ಮತ್ತು ಅಗಲಿಕೆಯ ನಡುವಿನ ಕೊಡುಕೊಳ್ಳುವಿಕೆಯಲ್ಲಿ ವ್ಯತ್ಯಾಸಗಳಿದ್ದು ಅಂತಹ ಸಹಜವಾದ ವ್ಯತ್ಯಾಸಗಳನ್ನು ಮನುಷ್ಯನ ಸಾಮಾಜಿಕ ರೂಪಗಳಾಗಿ ಸಾಹಿತ್ಯ ಸೂಕ್ಷ್ಮವಾಗಿ ನೋಡುತ್ತಲೇ ಬಂದಿದೆ. ವಸಾಹತುಶಾಹಿ ಆಗಮನದೊಂದಿಗೆ ಆಧುನಿಕ ಮನುಷ್ಯನ ಬದುಕನ್ನು ಪ್ರವೇಶಿಸಿದ ಹೊಸತನ, ಹೊಸಸಂವೇದನೆ, ಹೊಸಸಂಚಲಗಳನ್ನು ಸಮಾಜದಲ್ಲಿ ಮೂಡಿಸಿತು. ಇದು ಹೊಸ ಸಂಸ್ಕೃತಿಯೊಡನೆ ಮುಖಾಮುಖಿಯಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆಗೆ ಸಿಲುಕಿದ್ದು, ಇಂತಹ ಸಂದರ್ಭದಲ್ಲಿ ಹುಟ್ಟಿದ ಲಂಕೇಶರ ಕಥನ ತಮ್ಮ ಕಾಲದ ತವಕ ತಲ್ಲಣಗಳನ್ನು ಸಾಹಿತ್ಯದ ಇನ್ನೂ ಹಲವು ಪ್ರಕಾರಗಳಲ್ಲಿ ಚಿತ್ರಿಸಿದ್ದಾರೆ.

ಲಂಕೇಶರ ಬರವಣಿಗೆಯಲ್ಲಿ ವ್ಯಕ್ತಿ ತಾನೇ ಕೇಂದ್ರವಾಗಿ, ತನ್ನ ಪಾತಳಿಯಲ್ಲಿ ಎದುರಾಗುವ ಘಟಕಗಳನ್ನು ಅನುಮಾನ, ತಿರಸ್ಕಾರ, ಪರಕೀಯದಲ್ಲಿ ತಪ್ತಗೊಂಡ ಅನಾಥಸ್ಥಿತಿ, ವಿಷಾದ ಮತ್ತು ಆತ್ಮರತಿಯ ನೆಲೆಗಳಲ್ಲಿ ಮುಖಾಮುಖಿಯಾಗುತ್ತಾನೆ. ಆವರಣವನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ಸಂದರ್ಭದಲ್ಲಿ ತನ್ನ ಅಸ್ತಿತ್ವವನ್ನೇ ಪ್ರಧಾನವಾಗಿ ಗಳಿಸುತ್ತಾನೆ. ಬದುಕಿನ ಅಗತ್ಯ ಬೇಡಿಕೆಯಿಂದ ಮಾನವೀಯ ಸ್ತರದಲ್ಲಿನ ಭಾವುಕತೆಯನ್ನು, ಅದು ವಾಸ್ತವತೆಯನ್ನು ಅರಿಯುವ ಶಕ್ತಿಯನ್ನು ಕೊಂದುಬಿಡುತ್ತದೆ ಅನ್ನುವ ಕಾರಣಕ್ಕಾಗಿ ತಿರಸ್ಕರಿಸಿಬಿಡುತ್ತಾರೆ. ಆದ್ದರಿಂದ ಇಲ್ಲಿ ವ್ಯಕ್ತಿಯ ಅಸ್ತಿತ್ವವು ಸಾಮಾಜಿಕ ಆಶಯಗಳನ್ನು ಅಷ್ಟಾಗಿ ಗಣನೆಗೆ ತೆಗೆದುಕೊಳ್ಳದ ನಿಷ್ಠುರ ನೆಲೆಯತ್ತ ಸರಿಯುತ್ತದೆ. ಇಂಥ ಸಂದರ್ಭದಲ್ಲಿ ಹೆಣ್ಣು-ಗಂಡಿನ ಸಂಬಂಧ, ಕಾಮ ಮತ್ತು ಪ್ರೇಮದ ಸಂಬಂಧ ಕೂಡ ಅನ್ಯಗೊಳ್ಳುತ್ತದೆ. ಆದರೆ ವೈವಾಹಿಕ ಲೈಂಗಿಕತೆಯು ವಿವಾಹೇತರ ಸ್ತರದಲ್ಲಿ ಪಲ್ಲಟಗಳ್ಳುವಾಗ ಲಂಕೇಶ್ ಅದರ ಸಮಾನ ಕರ್ಷಣ ಶಕ್ತಿಯನ್ನು ವೈದೃಶ್ಯ ಪಾತಳಿಯಲ್ಲಿ ಗುರುತಿಸುತ್ತಾರೆ. ಈ ಮಾತು ಅವರ ಕಥನ ಸಾಹಿತ್ಯಕ್ಕೆ ಅನ್ವಯಿಸುವುದರಿಂದ, ಮೊದಲ ತಲೆಮಾರಿನ ಹೆಣ್ಣು ಮತ್ತು ಗಂಡುಗಳ ಕಾಮ ಹಾಗೂ ಪ್ರೇಮವೇ ಲಂಕೇಶರಲ್ಲಿ ತುಂಬು ಪ್ರವಾಹವಾಗಿ ಧ್ವನಿ ಪಡೆಯುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಾಸ್ತಿ, ಕುವೆಂಪು,

ಶಿವರಾಮಕಾರಂತ, ಯು.ಆರ್.ಅನಂತಮೂರ್ತಿ, ಪೂರ್ಣಚಂದ್ರತೇಜಸ್ವಿ, ಯಶವಂತಚಿತ್ತಾಲ, ಬೆಸಗರಹಳ್ಳಿ ರಾಮಣ್ಣ, ಇವರೆಲ್ಲರೂ ಉತ್ಸಾಹದಿಂದ ಹೆಣ್ಣು-ಗಂಡಿನ ಸಂಬಂಧಗಳನ್ನು ಗಮನಿಸಿದವರು. ಈ ಸಂಬಂಧಗಳ ಜೊತೆಗೆ ಯಾರೂ ತೋರದ ವೈಯಕ್ತಿಕ ಸ್ತರದ ಕಳಕಳಿಯನ್ನು ತೋರಿಸಿದವರೆಂದರೆ ಪಿ.ಲಂಕೇಶರು. ಆದ್ದರಿಂದ ಇವರ ಕಥನಸಾಹಿತ್ಯದ ಅಧ್ಯಯನ ಹೆಚ್ಚು ಕುತೂಹಲಕಾರಿಯಾದುದು.

ಬಹಿರಂಗ ಜಗತ್ತಿನ ವಾಸ್ತವಗಳನ್ನು ಮನುಷ್ಯನ ಅಂತರಂಗದ ಆತ್ಮಸಾಕ್ಷಿಯ ಒರೆಗಲ್ಲಿಗೆ ಸಿಕ್ಕಿ ಪರೀಕ್ಷಿಸುವ ಕ್ರಮವನ್ನು ಮನುಷ್ಯ ಸಂಬಂಧದ ನೆಲೆಗಟ್ಟುಗಳಲ್ಲಿ ಒಂದಾದ ಕಾಮ ಮತ್ತು ಪ್ರೇಮದ ಶೋಧನೆ ಮತ್ತು ವಿಶ್ಲೇಷಣೆ ಇವರ ಕಥನಸಾಹಿತ್ಯದಲ್ಲಿ ಹೇರಳವಾಗಿ ಸಿಗುತ್ತವೆ. ಮೊದಲನೆಯದಾಗಿ ಮನುಷ್ಯನ ದ್ವಂದ್ವಗಳು, ಅವನ ಆಕ್ರಮಣಶೀಲತೆ, ಅವಮಾನಗಳನ್ನು ಎದುರಿಸುವ ಅವರ ವಿಧಾನಗಳು, ಮಾನವೀಯ ಸಾಧ್ಯತೆಗಳು ಹೀಗೆ ಹಲವಾರು ದಿಕ್ಕುಗಳಲ್ಲಿ ಅವರ ಮೂಲಭೂತವಾದ ಶೋಧ ನಡೆಯುತ್ತದೆ. ಎರಡನೆಯದಾಗಿ ವ್ಯವಸ್ಥೆಯ ಬಗ್ಗೆ ಅವರಿಗಿರುವ ಅನುಮಾನಗಳ ಮೂಲಕ ವ್ಯವಸ್ಥೆಯ ಕ್ರೌರ್ಯ, ಭ್ರಷ್ಟತೆಗಳನ್ನು ಅವರು ಥಟ್ಟನೆ ಗುರುತಿಸಿಬಿಡುತ್ತಾರೆ. ಇದರಿಂದಾಗಿ ಅವರ ಎಲ್ಲಾ ಬರೆಹಗಳಿಗೂ ರಾಜಕೀಯ ಸ್ವರೂಪ ತನ್ನಷ್ಟಕ್ಕೆ ತಾನೇ ಬಂದುಬಿಡುತ್ತದೆ. ಮನುಷ್ಯ ಪ್ರಕೃತಿದತ್ತವಾದಂತಹ ಬದುಕಿನ ಭಾಗಗಳಾಗಿರುವ ಪ್ರೀತಿ, ಪ್ರೇಮ, ಬಾಂಧವ್ಯ ಇವುಗಳು ಮನುಷ್ಯನ ಅಂತರಂಗದಿಂದ ಒಡಮೂಡುವ ಭಾವನಾತ್ಮಕ ತೀವ್ರತೆಯ ಅಂಶಗಳೇ ಆಗಿರುತ್ತವೆ. "ಈ ಅನುಮಾನ ಸಿದ್ಧಾಂತ, ಮೌಲ್ಯ, ಭಾವನೆಗಳನ್ನು ಒಳಗೊಳ್ಳುತ್ತದೆ. ಆದರೆ ಮಹತ್ವದ ಸಂಗತಿಯೆಂದರೆ ಈ ಎಲ್ಲಾ ಅನುಮಾನಗಳನ್ನು ಮೀರಿದ ಪ್ರೀತಿ ಮತ್ತು ಪ್ರೇಮದ ನೈಜತೆಯನ್ನು ಅವರು ಅಲ್ಲಗಳೆಯುವುದಿಲ್ಲ"[೧] ಪಿ.ಲಂಕೇಶರು ಮನುಷ್ಯ ಸಂಬಂಧಗಳನ್ನು ಗ್ರಹಿಸಿದ ರೀತಿ ತೀಕ್ಷ್ಣವಾದುದಾಗಿದೆ. ತಾವು ಅಂದುಕೊಂಡದ್ದನ್ನು ಹೇಳಬೇಕಾದ್ದನ್ನು ಎಲ್ಲಿಯೂ ಅಳುಕದೆ ಅಂಜದೆ ಮುಜುಗರ ಪಡದೆ ನೇರವಾದ ಮಾತುಗಳಲ್ಲಿ ಹೇಳುವ ವ್ಯಕ್ತಿತ್ವ ಅವರಲ್ಲಿದ್ದು ಅದನ್ನು ಅವರ ಕಥನಸಾಹಿತ್ಯದ ಅಭಿವ್ಯಕ್ತಿಯಲ್ಲಿ ಗುರುತಿಸಬಹುದಾಗಿದೆ.

### ೪.೧. ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮ ಸಂಬಂಧಗಳು.

ಹೊಸಗನ್ನಡ ಸಾಹಿತ್ಯದ ಮಹತ್ವದ ಬರಹಗಾರರಲ್ಲಿ ಒಬ್ಬರಾದ ಪಿ.ಲಂಕೇಶ್ ತಮ್ಮ ಸೃಜನಶೀಲ ರಚನೆಗಳಲ್ಲಿ ಸೂಕ್ಷ್ಮತೆಗಳ ಸ್ವಂತಿಕೆಗಾಗಿ ಹೆಣಗಾಡಿದಂತಹ ಕಥೆಗಾರ. ಜೊತೆಗೆ ಲೇಖಕ-ವಿಮರ್ಶಕ ಸಮುದಾಯ ಕಟ್ಟಿಕೊಟ್ಟ ಅಪೇಕ್ಷೆ ನಿರೀಕ್ಷೆಗಳು ಹಾಗೂ ಮೌಲ್ಯ

---

೧. ಡಾ. ಜಿ.ಎಸ್.ಆಮೂರ – ಕನ್ನಡ ಕಥನ ಸಾಹಿತ್ಯ : ಕಾದಂಬರಿ, ಪುಟ. ೩೧೬

ಮಾನದಂಡಗಳು. ಆಗಿನ ನಮ್ಮ ಸಾಹಿತ್ಯಾನುಭವ ಮತ್ತು ಕೃತಿ ಇವುಗಳು ಕೆಲಸ ಮಾಡುವ ಪ್ರಕ್ರಿಯೆಯಲ್ಲಿ ಅರಿವನ್ನು ತೋರಿಸಿಕೊಡುವತ್ತ ಪಿ.ಲಂಕೇಶರು ಸಾಗುತ್ತಾರೆ.

ವ್ಯಕ್ತಿ ಕೇಂದ್ರಿತ ನವ್ಯ ಮನೋಧರ್ಮವನ್ನು ಮೀರಿ ಸಾಮಾಜಿಕ ಆಶಯಗಳ ಕಡೆಗೆ ಹೊರಳಿಕೊಂಡ ಲಂಕೇಶರ ಕಥನಸಾಹಿತ್ಯ ನವ್ಯದ ಕಾಮ ಮತ್ತು ಸಾವಿನ ಆಪ್ತತೆಯನ್ನು ಪೂರ್ಣಪ್ರಮಾಣದಲ್ಲಿ ಕೈಬಿಡಲಿಲ್ಲ. "ನನ್ನನ್ನು ಆಳವಾಗಿ ಅಲ್ಲಾಡಿಸಿದ ಮೂರು ಪ್ರೇಮ, ಜೂಜು ಮತ್ತು ಕಥನ"[೨] ಎನ್ನುತ್ತಲೇ ತಮ್ಮ ಅನೇಕ ಕಥೆಗಳಲ್ಲಿ ಪ್ರೇಮ–ಕಾಮ–ಲೈಂಗಿಕತೆಯನ್ನು ಕೌಟುಂಬಿಕವಾಗಿ ನಡೆಯುವ ಸಂಬಂಧಗಳ ಹಿನ್ನೆಲೆಯಲ್ಲಿಯೇ ತಂದಿದ್ದಾರೆ. ಪ್ರೇಮ–ಕಾಮ, ಸಾವುಗಳನ್ನು ತಮ್ಮ ಕಥನ ಸಾಹಿತ್ಯದ ವಸ್ತು–ತಂತ್ರಗಳನ್ನಾಗಿಸಿಕೊಂಡು ಅನುಭವಗಳ ಮೂಲಕ ತನ್ನೊಳಗನ್ನು ಪರಿಶೋಧಿಸಿಕೊಳ್ಳುವವನೇ ನಿಜವಾದ ಕಥೆಗಾರ ಎನ್ನುವ ಲಂಕೇಶ್ "ನನ್ನ ಕಥೆಗಳು ನನ್ನಿಂದ ಹೆಚ್ಚು ಹೆಚ್ಚು ಮುಕ್ತವಾಗಿರಬೇಕು. ಜೀವನದ ಮರ್ಜಿಗಳಿಂದ ತಮ್ಮ ರೂಪ ನಿರ್ವಹಿಸಿಕೊಳ್ಳುವಂತಾಗಬೇಕು"[೩] ಎಂದು ಆಶಿಸಿದ್ದಾರೆ.

ಕುಟುಂಬ ಸಂಬಂಧ ಹಾಗೂ ಸಾಮಾಜಿಕ ಸಂಬಂಧಗಳ ಜೊತೆಗೆ ವ್ಯಕ್ತಿಯ ಸಂವೇದನಾ ಪ್ರಪಂಚ ಹೇಗೆ ವ್ಯವಹರಿಸುತ್ತದೆ. ಅದರೊಟ್ಟಿಗೆ ಮನುಷ್ಯ ಸಂಬಂಧಗಳಿಗೆ ಸಮಾಜ ಹೇಗೆ ಪ್ರತಿಸ್ಪಂದನದಿಂದ ಮಿಡಿಯುತ್ತದೆ ಎಂಬುದರ ಕ್ರಿಯಾಜನ್ಯ ಮುಖಾಮುಖಿ ಅಂತರಾವಲೋಕನ ಇಲ್ಲಿನ ಕಥೆಗಳಲ್ಲಿ ಆಧಾರವಾಗಿ ವ್ಯಾಖ್ಯಾನಿಸಿಕೊಳ್ಳುತ್ತದೆ. "ವ್ಯಕ್ತಿಯ ಕನಸು ಹಾಗೂ ಕಾಮನೆಗಳು ಏನೆಲ್ಲಾ ಆಮಿಷಗಳೊಂದಿಗೆ ಮನುಷ್ಯ ಸಂಬಂಧದಲ್ಲಿ ಸಂವಹನ ಸಾಧಿಸಿಕೊಳ್ಳುವಲ್ಲಿ ವಿಫಲವಾಗುತ್ತಾ, ಸೋಲುಗಳೇ ಪ್ರಧಾನವಾಗುತ್ತಾ ಅವೆಲ್ಲದರ ನಡುವೆ ಭವಿಷ್ಯದ ಬೆಳಕಿಗಾಗಿ ತಡಕಾಡುತ್ತಾ ಅಸ್ತಿತ್ವಕ್ಕಾಗಿ ಅನವರತ ಪ್ರಯತ್ನಿಸುತ್ತಾ ಇರುವ ಮನುಷ್ಯರೇ ಲಂಕೇಶರ ಕಥಾನಾಯಕರು. ನಿರೂಪಕನ ಸಾಕ್ಷಿ ಪ್ರಜ್ಞೆಯಲ್ಲಿ ಬಹುಮುಖಿ ಚಿಂತನೆಗಳನ್ನು ಒಂದೇ ಕಥೆಯಲ್ಲಿ ಹೇಳುವುದು, ಒಂದಕ್ಕಿಂತ ಹೆಚ್ಚು ಕತೆಗಳನ್ನು, ಘಟನೆಗಳನ್ನು ಒಂದೇ ಕತೆಯಲ್ಲಿ ತರುವುದು. ಪಿ.ಲಂಕೇಶರ ತಂತ್ರ, ಆ ಮೂಲಕ ಗೃಹೀತವಾದ ನೈತಿಕ ಮೌಲ್ಯಗಳನ್ನು ತೆರೆದಿಡುವುದು, ಟೀಕೆಗೊಳಪಡಿಸುವುದು. ಬಹಿರಂಗಗೊಳಿಸುವುದು ಮುಖ್ಯವಾಗಿ ಅವರ ಕಥೆಗಳಲ್ಲಿ ಕಂಡು ಬರುತ್ತವೆ. ಮನುಷ್ಯನ ಅವಿವೇಕಗಳ ಬೇರೆ–ಬೇರೆ ಮುಖಗಳನ್ನು ಅನಾವರಣಗೊಳಿಸಬೇಕು. ಮನುಷ್ಯ ಧರಿಸುವ ಸಾಮಾಜಿಕ ಮುಖವಾಡಗಳನ್ನು ಕಳಚಿಟ್ಟು ಆತನ ನಿಜತ್ವದಲ್ಲಿ ಅಭಿಪ್ರಾಯಗಳು ಯಾವ ಹಂಗಿಲ್ಲದೆ ಹೊರಬರಬೇಕು. ಆ ಸ್ಫೋಟದಲ್ಲಿಯೇ

---

೨ ಪಿ.ಲಂಕೇಶ್ ಕಂಡದ್ದು ಕಂಡ ಹಾಗೆ, ಪು. ಸಂ. ೯, ೨೦೦೪

೩ ಪಿ.ಲಂಕೇಶ್, ಪಿ.ಲಂಕೇಶರ ಸಮಗ್ರ ಕಥೆಗಳು, ಮುನ್ನುಡಿ, ೧೯೯೨

ವ್ಯಕ್ತಿಗಳನ್ನು ನಗ್ನರನ್ನಾಗಿಸಬೇಕು. ಅತ್ಯಂತ ಉತ್ಕಟ ಕ್ಷಣದಲ್ಲಿ ವ್ಯಕ್ತಿ ಏನು ಎಂಬುದನ್ನು ಸಾರ್ವಜನಿಕವಾಗಿ ಪ್ರಕಟಿಸಬೇಕು".[೪] ಎಂಬುದು ಲಂಕೇಶರ ಆಶಯವಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಬಹುತೇಕ ನವ್ಯ ಕತೆಗಾರರು ಗ್ರಾಮೀಣ ಕುಟುಂಬದ ಮನುಷ್ಯ ಸಂಬಂಧಗಳನ್ನು ರೂಪಿಸುವ ಹಿನ್ನೆಲೆಯನ್ನು ಉಳ್ಳವರಾಗಿದ್ದಾರೆ. ಇವರುಗಳು ಸೃಜನಶೀಲ ರಚನೆಗಳಲ್ಲಿ ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮ ಸಂಬಂಧಗಳು ಹಾಗೂ ಸಾಮಾಜಿಕ ಸಂಬಂಧಗಳು ನಾನಾ ಆಯಾಮಗಳೊಂದಿಗೆ ಅನಾವರಣದೊಂಡಿವೆ. ವಿವಿಧ ಲೇಖಕರ ವಿವಿಧ ಸಂಸ್ಕೃತಿಯ ಸ್ಥಿತ್ಯಂತರಗಳು ಹಾಗೂ ಸಿದ್ಧಾಂತಗಳಿಗನುಗುಣವಾಗಿ ಕುಟುಂಬದ ಮನುಷ್ಯ ಸಂಬಂಧಗಳು ವೈವಿಧ್ಯಮಯವಾಗಿ ಅಭಿವ್ಯಕ್ತಗೊಂಡಿವೆ. ಯು.ಆರ್.ಅನಂತಮೂರ್ತಿ, ಪಿ.ಲಂಕೇಶ್, ಯಶವಂತಚಿತ್ತಾಲ, ಶಾಂತಿನಾಥ ದೇಸಾಯಿ, ಚಂದ್ರಶೇಖರ ಕಂಬಾರ, ಶ್ರೀಕೃಷ್ಣ ಆಲನಹಳ್ಳಿ, ಪೂರ್ಣಚಂದ್ರತೇಜಸ್ವಿ ಇವರೆಲ್ಲರೂ ನಾನಾ ರೀತಿಯಲ್ಲಿ ಕುಟುಂಬದ ಸಾಮಾಜಿಕ ಸಂಬಂಧಗಳನ್ನು ಗ್ರಹಿಸಿದ್ದಾರೆ. ಭಾರತದ ಒಟ್ಟು ಸಂಸ್ಕೃತಿಯನ್ನು ಮನುಷ್ಯ ಸಂಬಂಧದ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಾದ ಅಗತ್ಯವಿರುವುದರಿಂದ ಪಿ.ಲಂಕೇಶರ ಕಥನ ಸಾಹಿತ್ಯದಲ್ಲಿನ ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ–ಪ್ರೇಮ ಸಂಬಂಧದ ಸಂವೇದನೆಯು ಈ ಅಧ್ಯಾಯದ ಸಕಾಲಿಕವಾಗಿದೆ.

ಪಿ.ಲಂಕೇಶರು ಕವಿ ಸಹಜವಾದ ಪ್ರತಿಭೆಯುಳ್ಳವರು. ಜೊತೆಗೆ ನವ್ಯ ಘಟ್ಟದ ಕಥನ ಸಾಹಿತ್ಯದ ಬಹಳ ಮುಖ್ಯಗುಣವೆಂದರೆ ಒಂದು ರೀತಿಯ ಉದ್ವಿಗ್ನತೆ. ಅನುಭವ ನಿರ್ವಹಣೆ ಮತ್ತು ಮಾನವ ಸಂಬಂಧದ ಗ್ರಹಿಕೆ, ಇವೆರಡರ ಸಂಬಂಧದ ನಿರ್ಣಾಯಕ ಸ್ವರೂಪವನ್ನು ನಾವು ಕಾಣಬಹುದು.

ಪಿ.ಲಂಕೇಶರು 'ಅಕ್ಕ' ಎಂದು ಕಾದಂಬರಿಗೆ ಹೆಸರು ಕೊಟ್ಟಿದ್ದಾರೆಯಾದರೂ ಇದು ಕೇವಲ ದೇವೀರಿಯ ಕತೆಯಲ್ಲ. ಅಕ್ಕ, ತಮ್ಮ ಇಬ್ಬರದೂ ಹಾಗಿದೆ. ಕತೆಯನ್ನು ತಮ್ಮನಾದ ಕ್ಯಾತನೇ ಹೇಳಿಕೊಂಡಿದ್ದಾನೆ. ಜೊತೆಗೆ ಇವರು ಆಶ್ರಯ ಪಡೆದ ಕೊಳಗೇರಿಯ ಸಮುದಾಯದ ಕತೆಯೂ ಇಲ್ಲಿ ಸೇರಿಕೊಂಡಿದೆ. ಕೊಳಗೇರಿಯ ಜನರುಗಳನ್ನು ಮುತ್ತಿಕೊಂಡಿರುವಂತಹ ವಿಶಾಲ ಜಗತ್ತನ್ನು ಬಿಟ್ಟು ಕೊಳಗೇರಿ ಇಲ್ಲವಾದುದರಿಂದ ನಾಗರೀಕ ಸಮುದಾಯವೂ ಈ ಕತೆಯಲ್ಲಿ ಸ್ವಲ್ಪಮಟ್ಟಿನ ಅವಕಾಶ ಪಡೆದಿದೆ. ಹೀಗೆ 'ಅಕ್ಕ' ಕಾದಂಬರಿಯು ಕೊಳಗೇರಿಯೊಂದರಲ್ಲಿ ಬೆಳೆದ ಹದಿ ಹರೆಯದ ಅಂಕು ಡೊಂಕುಗಳನ್ನು ವ್ಯವಸ್ಥೆಯ ಕ್ರೂರ ಹಿಡಿತವನ್ನು ಶೋಷಣೆಯ ಕರಾಳ ಮುಖವನ್ನು ಯಾವುದೇ ಮುಲಾಜಿಲ್ಲದೆ ಕಟ್ಟಿಕೊಡುತ್ತದೆ. ಕ್ಯಾತನ ಮೂಲಕ ಇಡೀ ಕತೆಯು ತೆರೆದುಕೊಳ್ಳುತ್ತದೆ. ಕ್ಯಾತನಿಗೆ ತನ್ನ ಅಕ್ಕನನ್ನು ಸುತ್ತುವರಿದಿರುವ ಗುಂಡಾಗಳು, ಅವರ ಒಡೆಯು

---

೪ ಹಾಲತಿ ಸೋಮಶೇಖರ್, ಪಿ.ಲಂಕೇಶ್ ಪು.ಸಂ ೨೭–೨೮, ೨೦೦೯

ನರಸಿಂಹ ಮೇಸ್ತ್ರಿ ಬಗೆಗೆ ಆಕ್ರೋಶ ಮತ್ತು ದ್ವೇಷವಿದೆ. ಈ ಕೋಪಕ್ಕೆ ವಿಚಿತ್ರವಾದ ಕಾರಣವೆಂದರೆ ಅವನ ನೈತಿಕ ಪ್ರಜ್ಞೆಯ ಪ್ರೇರಣೆಯ ಮೂಲ ಆಳ ಮನಸ್ಸಿನಲ್ಲಿದ್ದು ಲೈಂಗಿಕ ಮಾತ್ಸರ್ಯವೂ ಅಲ್ಲಿ ಸೇರಿರುವುದು ಅತ್ಯಂತ ಸೂಕ್ಷ್ಮವಾಗಿ ಬಂದಿರುವುದನ್ನು ನೋಡಬಹುದು.

ಹೆಣ್ಣಿನ ಮೇಲಾಗುವ ಲೈಂಗಿಕ ಶೋಷಣೆಯನ್ನು ರಾಮಪ್ಪನಂತಹ ಪುಢಾರಿಗಳ ಒಳ್ಳೆಯತನದ ಹಿಂದೆ ಇರುವ ಸ್ವಾರ್ಥ ಮತ್ತು ಚುನಾವಣಾ ರಾಜಕೀಯ ಸಿನಿಮಾ ಹೆಸರಿನಲ್ಲಿ ಡಿಸಿಲ್ವಾ, ಖಡವಾ, ನಾಗ್ರ ಮುಂತಾದವರಿಂದ ಬಲಿಪಶುಗಳಾಗುವ ದೇವೀರಿಯಂತಹ ಎಷ್ಟೋ ಹೆಣ್ಣುಗಳನ್ನು ಕಾಣಬಹುದು. ಈ ಮೂಲಕ ಪಿ.ಲಂಕೇಶ್ ಕಂಡ ಕೊಳಗೇರಿಯ ಸಮಾಜ ಅತ್ಯಂತ ಜಟಿಲವೂ, ಸ್ವಾರ್ಥವೂ, ಸಿನಿಕತನದಿಂದ ಕೂಡಿದ ಕುಟುಂಬವೂ ಆದ ವಾತಾವರಣದಿಂದ ಕೂಡಿದೆ. ಇಲ್ಲಿ ಕ್ಯಾತ ನಿರೂಪಕನಾಗಿ ಕೊಳಗೇರಿಯ ಮನುಷ್ಯ ಮಾದರಿಗಳನ್ನು ಕಟ್ಟಿಕೊಡುವ ನೆಪದಲ್ಲಿ ಲೇಖಕರು ಸೃಷ್ಟಿಸಿದ ಆ ವ್ಯಕ್ತಿ ತಂತ್ರ ಇಲ್ಲಿ ಹೊಸದು ಅಂದರೆ ಕ್ಯಾತ ತನ್ನ ಬದುಕಿನಲ್ಲಿ ನಡೆದ ಘಟನೆಗಳನ್ನು ವರ್ತಮಾನದಲ್ಲಿ ಹೇಳುತ್ತಾ ಭೂತಕಾಲದ ಬದುಕಿನ ಲೆಕ್ಕಾಚಾರಗಳನ್ನು ತುಡಿತಗಳನ್ನು ಕುಟುಂಬದ ಆಚೆ ಮತ್ತು ಈಚೆ ನಡೆಯುವ ಘಟನೆಗಳನ್ನು ತಿಳಿಸುವವನು. ಪ್ರೀತಿಯ ಹೆಸರಲ್ಲಿ ಕಾಮದ ಸೆಳೆತವನ್ನು ತಿಳಿಸುವನು. ಕ್ಯಾತ ಒಂದು ಪರಿಸರದಿಂದ ಮತ್ತೊಂದು ಪರಿಸರಕ್ಕೆ ಒಂದು ಮನೆಯಿಂದ ಮತ್ತೊಂದು ಮನೆಗೆ ಜಿಗುಪ್ಸೆಗೊಂಡವನಂತೆ ಜಿಗಿಯುತ್ತಾ ಓಡಾಡುವ ಕ್ಯಾತ ತನ್ನೆಲ್ಲಾ ಪರಿಸರವನ್ನು ತೆರೆದ ಕಣ್ಣುಗಳಿಂದ ನೋಡುತ್ತಾ ಮನುಷ್ಯ ಲೋಕದ ಹೊಸ ಅನುಭವಗಳಿಗೆ ತನ್ನನ್ನು ತಾನು ತೆರೆದುಕೊಳ್ಳುತ್ತಾನೆ. "ಈ ಕ್ಯಾತನೊಂದು ಕಟ್ಟೆಗೆ ಚೂರು ಅನ್ನೋ ಹಂಗೆ ದೇವಿರಿ ಕ್ಯಾತನ ಎದುರೆ ಚೆಡ್ಡಿ ಬದಲಾಯಿಸೋದು. ಜಾಕೀಟಿನೊಳಗಿನ ಪಟ್ಟೀನ ಕಿತ್ಕೊಂಡು ಬೇರೆ ಹಾಕ್ಕೊಳೋದು ನೋಡ್ತಾ ಬಲೆ ದಿಗಿಲಾಗುತ್ತಿತ್ತು. ಈ ಚರ್ಮ, ಈನನ್ನಕ್ಕ ದೇವೀರಿ ಚರ್ಮ ಒಂಚೂರು ಕಪ್ಪಗಿದ್ರೂ ಅದ್ಯಂಗೆ ಮಿರ ಮಿರ ಎಣ್ಣೆ ಹಚ್ಚಿದ ಹಿಪ್ಪರಿಗಿಯ ಕರಿಯವ್ವನ ಹಂಗೆ ಹೊಳೀತಿತ್ತು ಅಂತೀರಿ. ನೋಡ್ತಾ ನೋಡ್ತಾ ಇನ್ನೋಂಚೂರು ನೋಡಬೇಕು ಅನ್ನಿಸಿ, ಅಯ್ಯೋ ನನ್ನಕ್ಕ ಅನ್ನಿಸಿ ಬಲೆ ಅಳು ಬಂದುಬಿಡ್ತಿತ್ತು."[೫೨] ಇಲ್ಲಿ ಕ್ಯಾತನ ಬಾಲಬೋಧೆ ಹಾಗೂ ಅವನ ತಲೆಯಲ್ಲಿ ಅಳಿದುಳಿದ ಲೆಕ್ಕಾಚಾರಗಳ ತುಡಿತ ನಾಗ್ರ, ರಂಗಜೆಟ್ಟಿ ರಾಮಪ್ಪರು ದೇವೀರಿಯ ಬಗೆಗೆ ಯೋಚಿಸುವ ಮತ್ತು ನಡೆದುಕೊಳ್ಳುವ ರೀತಿಗೆ ಕ್ಯಾತನ ಮನಸ್ಸು ವಾಲುತ್ತದೆ.

ಕೊಳಗೇರಿಯ ಮನುಷ್ಯ ಮಾದರಿಗಳನ್ನು ಕಾಮ ಮತ್ತು ಪ್ರೇಮದ ಹಿನ್ನೆಲೆಯಲ್ಲಿ ಕಟ್ಟಿಕೊಡುವಾಗ ಪದ್ದಿಯ ವಿಷಯ ಹೇಳಲೇಬೇಕು ಗಿಲೀಟು ಶಂಕ್ರನಾರಾಯಣ ಮಾಡುವ ಕೆಲಸಗಳು "ಅಸಲಿ ಪೆಕರು ನನ್ಮಗ ಸಾರ್ ಅವನ ಇಂಗ್ಲೀಸು, ಮೆಲ್ಲಗೆ ಪದ್ದಿಯ ಸೊಂಟದ ಸುತ್ತ

---

೫೨ ಪಿ.ಲಂಕೇಶ್, ಅಕ್ಕ, ಪು.ಸಂ ೫೨, ೨೦೧೧

ಕೈ ಹಾಕಿ ಮೇಲಕ್ಕೆ ಸರಿಸೋದು ನೋಡಿ ಇನ್ನೂ ಅಸಕ್ಯ ಆತು"[೬] ಈ ಸಂದರ್ಭವನ್ನು ನೆನೆಸಿಕೊಂಡ ಕ್ಯಾತನಿಗೆ ದೇವೀರಿಯ ಮೇಲೂ ಸಿಟ್ಟು ಬರುವಂತಹ ಸಂದರ್ಭ ಉಂಟಾಯಿತು. ಇದೇನು ನಡೀತಿದೆ ಇಲ್ಲಿ ಎಲ್ಲವೂ ಅಯೋಮಯ ಈ ದೇವೀರಿ, ಪದ್ದಿ ಇವರೆಲ್ಲಾ ಯಾಕ ಈತರ ಎಂದು ಯೋಚಿಸತೊಡಗಿದ. ಜೊತೆಗೆ ಅವನಲ್ಲಿ ಉಂಟಾದ ದ್ವಂದ್ವ ಈ ಪಾತ್ರಗಳಲ್ಲಿ ಹುಟ್ಟುತ್ತೆ ಮತ್ತು ಅನಿರೀಕ್ಷಿತವಾದ ತಿರುವನ್ನು ಪಡೆಯತ್ತೆ. ಕ್ಯಾತನಿಗೆ ಕೊನೆ ಕಂಬನಿಯಲ್ಲಿ ಜೈಲು ಸೇರಿದಾಗ ಆತನಿಗೆ ತೋರುವ ಪ್ರೀತಿ ಅವನನ್ನು ಬಿಡಿಸಿಕೊಂಡು ಬಂದು ಅವನ ದೇಹ ಸೌಂದರ್ಯವನ್ನು ಸುಧೀರನ ರೀತಿ ಮಾಡೋದು ಅವನ ಹೊಸ ಪ್ರಪಂಚಕ್ಕೆ ಕರೆದೊಯ್ದ ಹಾಗೆ ಆಗುತ್ತದೆಂದು ತಿಳಿಯಬಹುದು. 'ಮುಸ್ಸಂಜೆಯ ಕಥಾಪ್ರಸಂಗ'ದಲ್ಲಿ ಲಂಕೇಶರಿಗೆ ಕ್ರಿಯೆ ಎಷ್ಟು ಮುಖ್ಯವೋ ಅಷ್ಟೇ ಮಹತ್ವವುಳ್ಳದ್ದು ಸಂಬಂಧಗಳು ಕಾರಣ ಮುಸ್ಸಂಜೆಯ ಪಾತ್ರಗಳು ತಮ್ಮ ಸ್ವಭಾವವನ್ನು ತೆರೆದು ತೋರಿಸುವುದು ಈ ಸಂಬಂಧಗಳ ಮೂಲಕವೇ. ಉದಾಹರಣೆಗೆ ಲಂಕೇಶರು ಬಹುವಾಗಿ ಮೆಚ್ಚಿಕೊಳ್ಳುವ ಸಾವಂತ್ರಿಯನ್ನೇ ನೋಡಬಹುದು. ರಂಗವ್ವ, ಮಂಜ, ಶಿವನಂಜ, ಶಿವಿ, ಮಮತಾಜ, ಕರಿಯ, ಬಸ್ಯಾ, ಉಡುಪ, ಶ್ರೇಷ್ಠಿ ಇವರೊಡನೆ ಸಾವಂತ್ರಿಗಿರುವ ಸಂಕೀರ್ಣ ಸಂಬಂಧಗಳಲ್ಲಿ ಅವಳು ಜೀವಂತವಾಗುತ್ತಾಳೆ.

ಮುಸ್ಸಂಜೆ ಮೂಲತಃ ಹಳ್ಳಿಗಳ ಚಹರೆ ರಾಜಕಾರಣದ ಅಸಲೀಯತ್ತನ್ನು ಬೆತ್ತಲುಗೊಳಿಸುವ ಮೂಲ ಸೆಲೆಯೊಂದಿಗೆ ಹುಟ್ಟಿಕೊಂಡ ದೇಸಿ ಕಾದಂಬರಿಯಾದರೂ ಇಲ್ಲಿ ಕಥಾ ವೃತ್ತಾಂತದ ಪ್ರತಿ ಹಂದರ ಪ್ರತಿಪಾತ್ರಗಳು ಕೂಡ ಒಳಗೊಳಗೇ ಕುದಿಯುತ್ತವೆ. ಕೆಲವು ಪಾತ್ರಗಳು ಪ್ರೀತಿ, ಕಾಮದ ಲೆಕ್ಕಾಚಾರದ ಹಾಸುಗಳ ಮೇಲೆ ಗುರಿಯಿಟ್ಟು ನಡೆಯುತ್ತವೆ. ಜೊತೆಗೆ ರಾಜಕಾರಣವೂ ಕೂಡ ತೀರ ವೈಯಕ್ತಿಕ ಜೀವನಕ್ಕೆ ಕೈ ಹಾಕಿ ಅದನ್ನು ಸಾಮಾಜಿಕ ಜೀವನದಂತೆ ದಾಖಲಿಸಿದಂತಿವೆ. ಕಂಬಳ್ಳಿಯ ಬದುಕು ಮೂಲಭೂತವಾಗಿ ಇಲ್ಲಿನ ಆರ್ಥಿಕ ಸ್ಥಿತಿ ಹಾಗೂ ಲೈಂಗಿಕ ಸಂಬಂಧಗಳ ಪಡಿಪಾಟಲಾಗಿ ಗೋಚರಿಸುವುದನ್ನು ನೋಡಬಹುದು. ವೈಯಕ್ತಿಕ ಅಧಿಕಾರ, ಪ್ರಭಾವ, ಹಣ, ಕಾಮ ಇವುಗಳು ಮಾನವಪರ ಧೋರಣೆಗಳನ್ನು ಬುಡಮೇಲು ಮಾಡುವಲ್ಲಿ ಯಶಸ್ವಿಯಾಗುತ್ತವೆ.

ಕಂಬಳ್ಳಿಯ ಘಟನೆಗಳು, ಪಾತ್ರಗಳು ಯು.ಆರ್.ಅನಂತಮೂರ್ತಿಯವರ ಸಂಸ್ಕಾರದಲ್ಲಿ ಬರುವ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳಲ್ಲಿ ಕಾಣುವ ಪಾತ್ರಗಳಂತೆ ಸಾಚಾತನದ ಸಚಿತ್ರ ಮಾದರಿಯಂತೆ ಕಂಡು ಬರುತ್ತವೆ. ಸಾವಂತ್ರಿ ಮತ್ತು ಮಂಜರ ಪ್ರೇಮ ಸಂಬಂಧ ಕುಟುಂಬದ ಸಂಬಂಧವಾಗಿ ಕಂಡರೆ ಇವರ ಪ್ರೇಮವನ್ನು ಸಹಿಸದ ಭರ್ಮಣ್ಣ ಹಾಗೂ ಸಂಗಡಿಗರಲ್ಲಿ ಅಸೂಯೆ ಪ್ರಬಲವಾಗಿ ಸಾವಂತ್ರಿಯ ಶೀಲವನ್ನು ಕೆಡಿಸುವ ಸಾಹಸಕ್ಕೆ

---

೬ ಪಿ.ಲಂಕೇಶ್, ಅಕ್ಕ, ಪು.ಸಂ. ೯೩, ೨೦೧೧

ಮುಂದಾಗುತ್ತಾನೆ. ಭರ್ಮಣ್ಣನ ಪ್ರಯತ್ನ ವಿಫಲವಾಗಿ ಹಿಂದಿರುಗಿ ಬರುವಷ್ಟರಲ್ಲಿ ಪೈಲ್ವಾನ್ ಶಿವಾಜಿ ಭರ್ಮಣ್ಣನ ಕಿರಿಯ ಹೆಂಡತಿ ರಾಮಿಯನ್ನೇ ಹಾರಿಸಿಕೊಂಡು ಹೋಗಿರುತ್ತಾನೆ. ಇಬ್ಬರು ಹೆಂಡಿರನ್ನು ಕಟ್ಟಿಕೊಂಡಿದ್ದ ಭರ್ಮಣ್ಣ ಅವರಿಗೆ ಸುಖ ಕೊಡಲಾರದೆ ಇದ್ದದ್ದೂ, ಹಾಗೆಯೇ ಚಿಕ್ಕ ವಯಸ್ಸಿನವಳಾದ ರಾಮಿಯನ್ನು ಮದುವೆ ಮಾಡಿಕೊಂಡದ್ದು ಪ್ರಮುಖ ಕಾರಣವಾಗಿ ಕಾಣುತ್ತದೆ. ಇಷ್ಟಾದರೂ ಅರಿತುಕೊಳ್ಳದ ಭರ್ಮಣ್ಣ ತನ್ನ ಭ್ರಷ್ಟತನಗಳನ್ನು ಮುಂದುವರಿಸುತ್ತಾನೆ. ರಂಗಪ್ಪನಿಗೆ ಅಪಮಾನ ಮಾಡುವುದಕ್ಕಾಗಿಯೇ ಮಠದ ಸ್ವಾಮಿಗಳನ್ನು ಕರೆಸಲು ಯೋಜನೆ ರೂಪಿಸುತ್ತಾನೆ. ಹೀಗಿರುವಾಗಲೂ ಸಾವಂತ್ರಿ ಮಂಜರ ಪ್ರೇಮ ತಾರಕ ಮುಟ್ಟಿದಾಗ ಅದನ್ನು ವಿಫಲಗೊಳಿಸುವ ಕೊನೆಯ ಪ್ರಯತ್ನವಾಗಿ ರಂಗವ್ವನ ತಮ್ಮನಾದ ಶಿವನಂಜನನ್ನು ಕರೆಸಿ ಅವನಿಗೆ ತಲೆಕೆಡೆಸಿ ಅವನನ್ನು ಉದ್ರೇಕಕ್ಕೆ ಒಳಗಾಗಿಸಿ ರಾಜ, ಬೂಸಿ, ಶಿವಾಜಿ, ಅಂಜನಿ ಜೊತೆಗೂಡಿ ತೋಪಿನ ಹತ್ತಿರ ಪ್ರೇಮದಲ್ಲಿ ತೊಡಗಿದ್ದ ಸಾವಂತ್ರಿ ಮಂಜರನ್ನು ತೀವ್ರವಾಗಿ ಹಿಂಸಿಸುವ ಮೂಲಕ ತನ್ನ ಅಸೂಯೆಯ ಪರಮಾವಧಿಯನ್ನು ಮೆರೆಯುತ್ತಾನೆ. ಇದೆಲ್ಲವನ್ನು ಸಮಾಧಾನದಿಂದಲೇ ಸ್ವೀಕರಿಸುವ ರಂಗವ್ವ ತನ್ನ ತಾಳ್ಮೆಯನ್ನು ಕಳೆದುಕೊಂಡು ಇಡೀ ಸಮಾಜಕ್ಕೆ ಮಾದರಿಯಾಗುವ ರೀತಿಯಲ್ಲಿ ಸಾವಂತ್ರಿ ಮಂಜರನ್ನು ಮದುವೆ ಮಾಡಿಸುತ್ತಾಳೆ.

ಭರ್ಮಣ್ಣನ ನಿರ್ವೀರ್ಯ ಸ್ಥಿತಿಯಲ್ಲಿ ಕುಟಂಬದಾಚೆಗಿನ ರಾಮಿಯ ಕಾಮದ ಸೆಳೆತವನ್ನು ನಾವು ಕಾಣಬಹುದು. "ಭರ್ಮಣ್ಣನ ಕಿರಿಯ ಹೆಂಡತಿ ರಾಮಿ ತನ್ನ ಕಾಮ ತಾಳಲಾರದೆ ಇಲಮಿಲಗುಟ್ಟುತ್ತ ನಡುರಾತ್ರಿಗೆ ಮತ್ತು ಬರಿಸುತ್ತಿದ್ದಳು. ಇವನ ಕೈ ತಾಗಿದೊಡನೆ ಹತ್ತಿರ ಬಂದು ಅವನ ಚಣ್ಣದ ಲಾಡಿ ಬಿಚ್ಚಹತ್ತಿದಳು. ಭರ್ಮಣ್ಣ ಇವಳನ್ನು ತೃಪ್ತಿಪಡಿಸುವುದಕ್ಕಾಗಿ ಪ್ರಯತ್ನಿಸುವುದು ಈಗ ಸಾಧ್ಯವಿಲ್ಲವೆಂದು ಇನ್ನೊಂದು ಮಗ್ಗುಲಿಗೆ ತಿರುಗಿದಾಗ ನಿದ್ರೆಯಲ್ಲೋ, ಎಚ್ಚರದಲ್ಲೊ ಕರಿಯ ದೊಡ್ಡ ಪಾತ್ರಧಾರಿಯಾಗಿ ಕಂಡ".[೭] ಇಲ್ಲಿ ರಾಮಿಯ ಆಸೆಯನ್ನು ಈಡೇರಿಸಲಾಗದ ಭರ್ಮಣ್ಣ ರಾಮಿಯಿಂದ ಅಂತರಾಳದ ಪ್ರೇಮದಿಂದ ದೂರಾಗುವುದನ್ನು ಕಾಣಬಹುದು. ಕರಿಯ ಅಷ್ಟು ಸುಂದರನಲ್ಲದಿದ್ದರೂ ಕಾಮ ಮತ್ತು ಪ್ರೇಮದ ಸಂಬಂಧದಲ್ಲಿ ರಾಮಿಗೆ ಮುಖ್ಯನಾಗುತ್ತಾನೆ.

ಬೂಸಿಬಸ್ಯ ಭರ್ಮಣ್ಣನಿಗಿಂತ ತುಂಬಾ ಚಾಲುಕಾದ ಮನುಷ್ಯ ಏಕೆಂದರೆ ಬಸ್ಯನ ತಂಗಿ ಸಿದ್ದಿ ನೋಡಲು ಚೆನ್ನಾಗಿದ್ದಳು ಅವಳನ್ನು ಯಾರಾದರೂ ನೋಡಬಹುದೆಂದು ಹೆದರಿ ಅವಳು ಮನೆಯ ಹೊರಗೆ ಬಿಡುತ್ತಿರಲಿಲ್ಲ. ಆದರೆ ಈ ಬೂಸಿಬಸ್ಯ ಮಾತ್ರ ಇಡೀ ದೇಶದ ಹುಡುಗಿಯರ ಕನ್ಯತ್ವ ನಾಶ ಮಾಡಿರುವುದಾಗಿ ಹೇಳಿಕೊಳ್ಳುತ್ತಿದ್ದ. ಬೂಸಿ ಬಸ್ಯನ ವಿಕೃತ ಮನಸ್ಸನ್ನು ಮನುಷ್ಯ ಸಂಬಂಧಗಳಲ್ಲಿಯೇ ವಿಚಿತ್ರ ಮತ್ತು ವಿಕ್ಷಿಪ್ತವಾಗಿ ಕಾಣುವುದನ್ನು ನೋಡಬಹುದು. ಸಾವಂತ್ರಿಯು ಮಂಜನನ್ನು ಮಂಜನು ಸಾವಂತ್ರಿಯನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಪ್ರೀತಿಸುವ

---

೭ ಪಿ. ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ, ಪು.ಸಂ-೨೦, ೧೯೯೦

ಹಾಗೂ ಕಾಮಿಸುವ ಗುಣವನ್ನು ನೋಡಬಹುದು. "ಸಾವಂತ್ರಿ ಅವನ ತಲೆಯ ಉದ್ದನೆಯ ಕೂದಲನ್ನು ಹಿಡಿದು ತನ್ನ ಎದೆಯವರೆಗೆ ಎತ್ತಿ ಅವನ ಮೂತಿಗೆ ಚಟೀರನೆ ತಪರಾಕಿ ಕೊಟ್ಟು ಅದರಿಂದ ಸುಧಾರಿಸಿಕೊಳ್ಳಲು ಕೂಡ ಅವಕಾಶ ಕೊಡದೆ ಅವನ ತುಟಿಗೆ ತನ್ನ ತುಟಿ ಇಟ್ಟು ನಾಲಿಗೆಯಿಂದ ಶೋಧಿಸಿದಳು. ಏನಾಗುತ್ತಿದೆಯೆಂದು ಗಡಿಬಿಡಿಗೊಂಡ ಮಂಜ ಕಾಲು ಕೈಗಳನ್ನು ಹೊಂದಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಅವನ ಮುಖವನ್ನೆಲ್ಲಾ ನಾಲಿಗೆಯಿಂದ ನೆಕ್ಕಿ ಕೊರಳನ್ನು ಜಿಗುಟಿ ತನ್ನೆದೆಯನ್ನು ಅವನೆದೆಯಿಂದ ಗಟ್ಟಿಯಾಗಿ ಒತ್ತಿಕೊಂಡು ಮರು ಕ್ಷಣದಲ್ಲಿ ಅವನನ್ನು ಬಿಸಾಡಿ ಬಿಂದಿಗೆ ತೆಗೆದುಕೊಂಡು ಊರ ಕಡೆಗೆ ಹೊರಟಳು".[೮] ಮಂಜ ಸಾವಂತ್ರಿಗೆ ವಿದೇಯನಾಗಿ ಅವಳಿಗೆ ಸೋತು ಬಿಡುತ್ತಾನೆ. ಕಂಬಳ್ಳಿಯಲ್ಲಿ ಹರಡಿಕೊಂಡಿದ್ದ ಹಿಂಸೆಯ ನಡುವೆ ಮಂಜನು ಪ್ರೀತಿಯಲ್ಲಿ ಲೀನನಾಗುತ್ತಾನೆ. ದೈಹಿಕ ಆಕರ್ಷಣೆ, ಆರೋಗ್ಯ ಅವಳಿಗೆ ಮುಖ್ಯವಾದವುಗಳು.

ಈ ನೆಲೆಯಲ್ಲಿ ಗುತ್ಯವ್ವ ಪೇಟೆಯೊಂದಿಗೆ ಸಂಬಂಧವನ್ನು ಇಟ್ಟುಕೊಂಡವಳಾಗಿದ್ದದ್ದನ್ನು ಹನುಮಕ್ಕ ಪ್ರಚಾರ ಮಾಡತೊಡಗಿದ್ದನ್ನು ಕಾಣುತ್ತೇವೆ. ಸಣ್ಣೀರನ ಜೊತೆಗಿನ ಒಡನಾಟ ಮತ್ತು ಸಂಬಂಧಗಳನ್ನು ಕಾಣುತ್ತೇವೆ. ಕರಿಬಸ್ಯ ರಾಮಿಯೊಂದಿಗೆ ಸಿನಿಮಾ ನೋಡಿದ್ದು ಆ ಸಂದರ್ಭದಲ್ಲಿ ಆತನಲ್ಲಿ ಎದ್ದ ಕಾಮಭಾವನೆಗಳನ್ನು ಮನುಷ್ಯ ಸಂಬಂಧದ ಹಿನ್ನೆಲೆಯಲ್ಲಿ ಗಮನಿಸುತ್ತೇವೆ.



ಇನ್ನು ಸಾವಂತ್ರಿ ಮತ್ತು ಮಂಜರ ಪ್ರೇಮ ಹತ್ತಿಕ್ಕುವ ಕೆಲಸವು ನಡೆಯುವುದನ್ನು ಲೇಖಕರು ಕಾದಂಬರಿಯಲ್ಲಿ ತರುತ್ತಾರೆ. ಈ ಮೂಲಕ ಪ್ರೇಮದ ಪ್ರಖರತೆ ಮತ್ತು ಬದುಕಿನ ವಾಸ್ತವತೆಯನ್ನು ಗಮನಿಸಬಹುದು. ಇನ್ನೊಂದೆಡೆ ಭಗ್ನ ಪ್ರೇಮಿ ಶಿವನಂಜನ ಮನಸ್ಥಿತಿಯನ್ನು ಅರಿಯಬಹುದು. ಲಂಕೇಶರ ಗದ್ಯದಲ್ಲಿ ಸಮಾಜದ ಸ್ವಾಸ್ಥ್ಯದ ಕಡೆಗಿನ ಸೂಕ್ಷ್ಮವನ್ನು ಗುರುತಿಸಬಹುದು. ಸಾಮಾಜಿಕ ಸಂದರ್ಭದಲ್ಲಿ ಬದುಕಿನ ಅಸ್ವಸ್ಥೆಗೆ ಅನೇಕ ಸಂದರ್ಭದಲ್ಲಿ ಮನುಷ್ಯ ಕಾರಣನಾಗಿರುವುದಕ್ಕೆ ಲಂಕೇಶರ ವಿರೋಧವಿದೆ. ಅದು ತನ್ನನ್ನು ತಾನು ಒಳಗು ಮಾಡಿಕೊಂಡ ಸಮಾಜದ ಬಗೆಗಿನ ಪ್ರೀತಿಯ ಸೆಳೆತವಾಗಿದೆ. "ಲಂಕೇಶ್ ನವ್ಯದ ಶಿಸ್ತನ್ನು ಬಿಟ್ಟುಕೊಟ್ಟಿಲ್ಲ. ಆದರೆ ನವ್ಯತೆಯನ್ನಾಗಲೀ, ಪ್ರಗತಿಶೀಲತೆಯನ್ನಾಗಲೀ, ಒಂದು ಗೀಳನ್ನಾಗಿ ಮಾಡಿಕೊಳ್ಳದೆ Form ಬಗ್ಗೆ ತೀರಾ ತಲೆಕೆಡಿಸಿಕೊಳ್ಳದೆ ಬರೆಯುತ್ತಿದ್ದರು."[೯] ಎನ್ನುವ ಮಾತನ್ನು ಒಪ್ಪಬೇಕಾಗುತ್ತದೆ.

ಶಾಂತಿನಾಥ ದೇಸಾಯಿಯವರ 'ಮುಕ್ತಿ' ನವ್ಯ ಕಾದಂಬರಿ ಲೋಕದ ಕದ ತೆರೆದರೆ 'ಬಿರುಕು' ಗೃಹ ಪ್ರವೇಶ ಮಾಡಿತು. 'ಬಿರುಕು' ಕಾದಂಬರಿಯ ಬಗ್ಗೆ ಸಕಾರಾತ್ಮಕವಾದ

---

೮ ಪಿ. ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ, ಪು.ಸಂ-೭೪, ೧೯೯೦

೯ ಟಿ.ಪಿ ಅಶೋಕ : ಪುಸ್ತಕ ಪ್ರೀತಿ ಪುಟ- (೩೭೦)

ಮಾತೆಂದರೆ ತಂತ್ರ ಮತ್ತು ನಾವೀನ್ಯತೆಯ ದೃಷ್ಟಿಯಿಂದ ಇದು ಕಥಾ ವಸ್ತುವಿನ ಅನಿವಾರ್ಯ ಎಂಬಂತೆ ಜೋಡಿಸಿಕೊಂಡಿರುತ್ತೆ ವಿನಃ ಕಥಾವಸ್ತು ಮತ್ತು ನಿರೂಪಣಾ ಕೌಶಲ್ಯಗಳು ಪರಸ್ಪರ ಬೇರೆ ಎಂದೆನಿಸುವುದಿಲ್ಲ. ಕಾರಣ ನವ್ಯದ ತಾಂತ್ರಿಕ ನಿರೂಪಣೆ ಇವುಗಳು ಇದ್ದರೂ ಸಹ ಪಿ.ಲಂಕೇಶರು ಮನುಷ್ಯ ಸಂಬಂಧವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ ಕಾಮ ಮತ್ತು ಪ್ರೇಮದ ಹಿನ್ನೆಲೆಯಲ್ಲಿ ಕುಟುಂಬದ ನೈತಿಕ ನೆಲೆಗಟ್ಟನ್ನು ನಿರೂಪಿಸುವ ಕ್ರಮವನ್ನಾಗಿ ತರುತ್ತಾರೆ.

ಕಾದಂಬರಿಯ ವಸ್ತು ವೈವಿಧ್ಯ ಹೆಚ್ಚಾಗಿದ್ದಾಗ ಈ ಬಗೆಯ ನಿರೂಪಣೆ ಅನಿವಾರ್ಯವಾಗಿರುತ್ತದೆ. 'ಗ್ರಾಮಾಯಣ', 'ಮೃಮನಗಳ ಸುಳಿಯಲ್ಲಿ', 'ಮರಳಿ ಮಣ್ಣಿಗೆ' ಈ ರೀತಿಯ ನಿರೂಪಣಾ ಕೌಶಲ್ಯವನ್ನು ಮೆಚ್ಚದೇ ಇರುವುದು ಇದೆ. ಆದರೆ ಸ್ವತಃ ಕಾದಂಬರಿಕಾರಿನಾದ ಇ.ಎಂ.ಫಾರ್ಸ್ಟರ್ ಈ ಬಗೆಯ ಕಾದಂಬರಿಕಾರರು ತಮ್ಮ ಪಾತ್ರಗಳ ವಿಷಯದಲ್ಲಿ ಓದುಗರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಾರೆ. 'ಬಿರುಕು'ವಿನ ಕಾದಂಬರಿ ಪಾತ್ರಗಳಾದ ಬಸವರಾಜ್ ಪ್ರೊಫೆಸರ್, ವಸುಂಧರ, ಸುವರ್ಣ, ಗಂಗಪ್ಪ, ರಾಮಯ್ಯ, ಪರಮ ಆನಂದ, ಶ್ರೀನಿವಾಸ್, ಸಬ್‌ಇನ್ಸ್‌ಪೆಕ್ಟರ್, ಶಾಂತ, ರುಕ್ಮಿಣಿ, ಮೀನಾ, ಶಂಕರ್, ರಮೇಶ್‌ರಂಥಹ ಪಾತ್ರಗಳು ಮನುಷ್ಯ ಸಂಬಂಧಗಳನ್ನು ಹಿಡಿದಿಟ್ಟುಕೊಂಡಿರುವ ಹಿನ್ನೆಲೆಯನ್ನು ಮತ್ತು ಆ ಪಾತ್ರಗಳು ಪಡುವ ತೊಳಲಾಟ, ಅನಾಥ ಪ್ರಜ್ಞೆಯನ್ನು ಕಾಣಬಹುದು.

ಬಸವರಾಜನಿಗೆ ಪ್ರೊ॥ ರಂಗಯ್ಯನವರೇ ಸಂಶೋಧನಾ ಮಾರ್ಗದರ್ಶಕರಾಗಿದ್ದರು. ಜೊತೆಗೆ ರಂಗಯ್ಯನವರ ಮಗಳು ಶಾಂತಳೊಂದಿಗೆ ಬಸವರಾಜನ ಅವ್ಯಕ್ತ ಸಂಬಂಧವಿರುವುದನ್ನು ನೋಡುತ್ತೇವೆ. ಆದರೆ ರಂಗಯ್ಯನವರ ಬಗೆಗೆ ಇರಬೇಕಾದ ಗೌರವಾದರಗಳು ಬಸವರಾಜನಲ್ಲಿಲ್ಲ. ಇಬ್ಬರೂ ಮುಖವಾಡದ ಬದುಕನ್ನು ಬದುಕಿರುತ್ತಾರೆ. "ಬದುಕಿನ ನಿಷ್ಠುರತೆಗೆ ಹೆದರಿ ಓಡುವ ಬಸವರಾಜ ಆಕಸ್ಮಿಕವಾಗಿ ರಾಜಭವನ ಪ್ರವೇಶಿಸುತ್ತಾನೆ. ಅಲ್ಲಿ ರಾಜ ಭವನದಲ್ಲಿದ್ದ ನಾಯಕನ ದರ್ಶನ; ಹೆಂಗಸಿನೊಂದಿಗೆ ಆತನ ಕೆಟ್ಟ ನಡವಳಿಕೆ ಪೋಲೀಸರ ನಿಷ್ಕ್ರಿಯತೆ, ಶಾಮೀಲುತನ; ತನ್ನ ಮೇಲೆರಗಿದ ನಾಯಕನ ಕಾಮುಕತೆ (ಸಲಿಂಗರತಿ); ರಂಗಯ್ಯನ ಹೆಂಡತಿಯ ಕಾಮುಕತೆ ಎಲ್ಲವೂ ಬಸವರಾಜನನ್ನು ತಲ್ಲಣಗೊಳಿಸಿವೆ. ಲಂಕೇಶರು ಮನುಷ್ಯನ ಲೈಂಗಿಕ ಸ್ವೇಚ್ಛಾಚಾರ, ನೀಚ ಅಭಿರುಚಿಗಳ ಮನೋಧೋರಣೆಗಳನ್ನು, ತಮ್ಮ ಪರಿಸರದಲ್ಲಿ ಕಂಡ ಜೀವನ ಸತ್ಯಗಳನ್ನು, ಅವು ತಂದೊಡ್ಡುವ ಸವಾಲುಗಳನ್ನು ಇಲ್ಲಿ ಅನುಭವಕ್ಕೆ ತರುತ್ತಾರೆ. ಲಂಕೇಶರು ಕಂಡಿರುವ ಸಾಮಾಜಿಕ ಕನಸು, ನೆನಪು, ಭ್ರಮೆ, ನಿಜ–ಸುಳ್ಳುಗಳ ನಡುವೆ ತಾನಿರುವ ಸಮಾಜದಲ್ಲಿ ತಾವಿಲಾರದೆ ಒದ್ದಾಡುವ ವ್ಯಕ್ತಿಗಳೇ ಆಗಿದ್ದಾರೆ"[೧೦]

---

೧೦ ಡಾ॥ ಹಾಲತಿ ಸೋಮಶೇಖರ್, ಪಿ. ಲಂಕೇಶ್ ಪು. ಸಂ. ೪೪, ೨೦೦೮

ಶಾಂತಾ ಬಸವರಾಜುವಿನ ಮೇಲೆ ಲೈಂಗಿಕ ಆಕ್ರಮಣ ಮಾಡುವುದು ಅವನು ಇನ್ನೊಂದು ರೀತಿಯಲ್ಲಿ ತಿಮಿಂಗಿಲದ ಥರ ಎಂದುಕೊಳ್ಳುವುದನ್ನು ಸಮರ್ಥಿಸಿದರೂ, ಕತೆಯ ಕೊನೆಗೆ ತಿಮಿಂಗಿಲ ಬಸವರಾಜುವಿನ ಮೇಲೆ ಆಕ್ರಮಣ ಮಾಡುವುದನ್ನು ಸೂಚಿಸಿದರು ಅವಳು ಪಾತ್ರ ಚಿತ್ರಣದ ದೃಷ್ಟಿಯಿಂದಾಗಲಿ, ಸಾಂಕೇತಿಕವಾಗಿಯಾಗಲಿ ಲೇಖಕರ ಈ ಆಶಯಕ್ಕೆ ಅಭಿವ್ಯಕ್ತಿ ಕೊಡುವಷ್ಟು ಬೆಳೆಯುವುದಿಲ್ಲ. ಕಾಮ ಮತ್ತು ಪ್ರೇಮದ ಹಿನ್ನೆಲೆಯಲ್ಲಿ ಸೂಚ್ಯವಾಗಿ ಈ ಪಾತ್ರಗಳನ್ನು ಗಮನಿಸಬಹುದು. ಪಿ.ಲಂಕೇಶರು ತರುವ ಬಸವರಾಜನ ಪಾತ್ರ ಕೇವಲ ಕನಸಿನ ಪಾತ್ರವಾಗಿ ಉಳಿಯದೆ ವಾಸ್ತವಜಗತ್ತಿನ ಮತ್ತು ಶಾಂತಾಳಜಗತ್ತಿನ ಮೇಲೆ ಬೆಳಕು ಚೆಲ್ಲುತ್ತದೆ. ಇಲ್ಲಿ ಬಸವರಾಜು ಅವನ ನಡುವಿನ ವಿಕೃತ ಸಮಾಜ ಈ ಎರಡೂ ಸ್ಪಷ್ಟವಾಗಿ ಅರ್ಥವಾಗಿರುವುದು ಶಾಂತಳಿಗೆ ಮಾತ್ರ. ತಂದೆ ರಂಗಯ್ಯ ಹಾಗೂ ತಾಯಿ ತಿಮಿಂಗಲಗಳ ಜೊತೆ ಸಲೀಸಾಗಿ ಇದ್ದುಕೊಂಡು ಅವರ ಸಮಾಜದ ಪೆದ್ದುತನವನ್ನು ತಿಳಿದುಕೊಂಡು, ಯಾವ ದ್ವಂದ್ವವೂ ಇಲ್ಲದೆ ಇದ್ದು ಹೋದವಳು ಶಾಂತ.

ಬಿರುಕುವಿನಲ್ಲಿ ಚಿತ್ರಿತವಾಗಿರುವ ಶಾಂತಾಳ ತಾಯಿಯ ಚಿತ್ರಣ ವಿಶಿಷ್ಟವಾಗಿದೆ. ದೈತ್ಯ ದೇಹದ ಆಕೆಯ ಆಕಾರ, ವರ್ತನೆ, ಮಾತು, ತಿರುಗಾಟ ಮತ್ತು ನಡವಳಿಕೆಯಿಂದಾಗಿ ಕಾಮುಕಳಾಗಿ ಕಾಣುತ್ತಾಳೆ. ಜೊತೆಗೆ ಲಜ್ಜೆ ಇಲ್ಲದವಳು. ಬಸವರಾಜ ಕೊನೆಗೂ ಶಾಂತಳ ಚೆಲುವಿಗೆ ಆಕರ್ಷಿತನಾಗಿ ನಿಲ್ಲುತ್ತಾನೆ. ಲಂಕೇಶರ ಕಾದಂಬರಿಗಳಲ್ಲಿ ಪ್ರೀತಿ, ಪ್ರೇಮ, ಲೈಂಗಿಕತೆ ಸರಳವಾಗಿ ಸಿಗದ ವಸ್ತು ಪ್ರೊ.ರಂಗಯ್ಯನವರ ಮಗಳ ಪ್ರೇಮವಾಗಲೀ ರೌಂಡಿಗ್ಯಾಂಗಿನಲ್ಲಿ ಬರುವ ಹೆಣ್ಣಾಗಲೀ, ಪ್ರೀತಿಸಲು ಮುಂದಾದ ಹೆಣ್ಣಿನ್ನಾಗಲೀ ಬಸವರಾಜ ಯಾರನ್ನು ಸಹ ಹೃದಯ ತುಂಬಿ ಪ್ರೀತಿಸಲಾಗುವುದಿಲ್ಲ ಇದು ಪೂರ್ಣಪ್ರಮಾಣದ ಪ್ರೀತಿಗೆ ಅಡ್ಡಿಯಾಗುತ್ತದೆ ಎಂಬಂತಹ ಮನಸ್ಥಿತಿಯನ್ನು ತಿಳಿಸುತ್ತದೆ. ಪಿ.ಲಂಕೇಶರು ಓದುಗರಿಗೆ ವಿವೇಚಿಸಲು ಪ್ರಶ್ನಾತೀತವಾಗಿ ಸೃಷ್ಟಿಸುವ ಸನ್ನಿವೇಶವಾಗುತ್ತದೆ.

ಲಂಕೇಶರು ಸಣ್ಣ ಕತೆಗಳಲ್ಲಿ ಮನುಷ್ಯ ಸಂಬಂಧವನ್ನು ಅತ್ಯಂತ ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಮನುಷ್ಯ ಸಂಬಂಧಗಳ ನಡುವೆ ಉಂಟಾಗುವ ಪಲ್ಲಟಗಳನ್ನು ಗುರುತಿಸಿದ್ದಾರೆ. ಈ ಪಲ್ಲಟಗಳು ಹಳ್ಳಿಗಳಲ್ಲಿ ಆಗುತ್ತಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು, ಅನಾಹುತಗಳು ಹಳ್ಳಿ ಮತ್ತು ನಗರಗಳ ಬದುಕಿನ ಮನುಷ್ಯ ಸಂಬಂಧದ ವಿವಿಧ ಆಯಾಮಗಳನ್ನು ಸಾಹಿತ್ಯ ಬದುಕಿನ ರೂಪು-ರೇಷೆಗಳಲ್ಲಿ ತಿಳಿಸಹೊರಟಿದ್ದಾರೆ.

ಮನುಷ್ಯನ ಬದುಕಿನಲ್ಲಿ ಲೈಂಗಿಕ ಸುಖಾಪೇಕ್ಷೆಗಿರುವ ಮಹತ್ವವನ್ನು ಲಂಕೇಶರ ಅನೇಕ ಕತೆಗಳಲ್ಲಿ ಪರಿಶೀಲಿಸಬಹುದು. ಹೆಣ್ಣು ಗಂಡಿನ ಸಂಬಂಧದ ಬಹುಮುಖ್ಯ ಕೊಂಡಿಯಾದ ಲೈಂಗಿಕ ಸಾಹಚರ್ಯವನ್ನು ಅದರ ಎಲ್ಲ ಆಯಾಮಗಳೊಡನೆ ಪ್ರತಿಪಾದಿಸುವ ಲಂಕೇಶರ

ಕತೆಗಳು, ಯಾವುದೇ ಮುಚ್ಚುಮರೆಯಿಲ್ಲದೇ ಕಾಮ ಮತ್ತು ಪ್ರೇಮದ ವಿಚಾರಗಳನ್ನು ಚರ್ಚಿಸಿವೆ. 'ಗೊಮ್ಮಟೇಶ', 'ಕೊನೆ', 'ನಿವೃತ್ತರು', 'ಸೆಪ್ಟೆಂಬರಿನಲ್ಲಿ ಪ್ರಥಮ ರಾತ್ರಿ', 'ಕಲ್ಲು ಕರಗುವ ಸಮಯ' 'ಉಮಾವತಿಯ ಸ್ಕಾಲರ್‌ಶಿಫ್ ಯಾತ್ರೆ', 'ಬೆಳದಿಂಗಳ ದಾಹ', 'ಸ್ಟೆಲ್ಲಾ ಎಂಬ ಹುಡುಗಿ', 'ಮಾರಲಾಗದ ನೆಲ', 'ಉತ್ತರವಿಲ್ಲ', 'ಐಲೀನ್ ಮತ್ತು ಟೆಲ್ಡಿ' ಇನ್ನೂ ಹಲವು ಕತೆಗಳಲ್ಲಿ ಇದೊಂದು ಬಗೆಯ ಚಡಪಡಿಕೆಯಂತಿದೆ ಮನುಷ್ಯನ ಮೂಲ ಪ್ರವೃತ್ತಿಗಳಲ್ಲೊಂದಾದ ಕಾಮದ ಸೆಳೆತವನ್ನು ಸ್ವಚ್ಛತೆಯ ಹಂಗಿಲ್ಲದೆ ಚರ್ಚಿಸುವ ಈ ಕತೆಗಳು ಮುಕ್ತ ಲೈಂಗಿಕತೆಯನ್ನೇನೂ ಪ್ರತಿಪಾದಿಸುವುದಿಲ್ಲ. ಆದರೆ ಲೈಂಗಿಕತೆಯನ್ನು ಕುರಿತು ಸಮಾಜದ ಆಷಾಢಭೂತಿತನವನ್ನು ಚಿತ್ರಿಸುತ್ತದೆ. ಒಮ್ಮೊಮ್ಮೆ ಅನೈತಿಕ ಮಾರ್ಗದಿಂದ ಸಂಬಂಧಗಳನ್ನು ಹೊಂದಿರುವ ಅಂಶಗಳನ್ನು ತಿಳಿಸುವ ಕಥಾ ಹಂದರವಿದೆ. ಜೀವನ ಸಂಬಂಧ ಮತ್ತು ಸಾಮಾಜಿಕ ಸಂಬಂಧಗಳ ಜೊತೆಗೆ ವ್ಯಕ್ತಿಯ ಸಂವೇದನಾ ಪ್ರಪಂಚ ಹೇಗೆ ವ್ಯವಹರಿಸುತ್ತದೆ. ಅದರೊಟ್ಟಿಗೆ ಸಮಾಜ ಕೂಡ ವ್ಯಕ್ತಿಯ ಜೊತೆ ಪ್ರತಿಸ್ಪಂದನದಿಂದ ಹೇಗೆ ಮಿಡಿತಗೊಳ್ಳುತ್ತದೆ? ಎಂಬುದರ ಕ್ರಿಯಾ ಜನ್ಯ ಮುಖಾಮುಖಿ ಅಂತರಾವಲೋಕನ ಇಲ್ಲಿನ ಕಥೆಗಳಲ್ಲಿ ಆಧಾರವಾಗಿ ವ್ಯಾಖ್ಯಾನಿಸಿಕೊಳ್ಳುತ್ತದೆ.

'ದಾಹ' ಮತ್ತಿತರ ಕಥೆಗಳು ಗಂಡ-ಹೆಂಡತಿಯರ ನಡುವಿನ ಸಂಕೀರ್ಣ ಬದುಕಿನ ಅಭಿಲಾಷೆಗಳನ್ನು ಹೊತ್ತು ಸಾಗುತ್ತದೆ. ನೋವಿನ ಹಿಂದೆ ಉಲ್ಲಾಸಗಳು, ದುರಂತದ ನೆನಪು ಎಲ್ಲದಕ್ಕೂ ಸ್ಫೂರ್ತಿ ಎಂಬಂತಿದೆ 'ನಮ್ಮ ನಡುವಿನ ಹುಡುಗ' ಕಥೆಯಲ್ಲಿ ಗಂಭೀರ ಚರ್ಚೆಯ ಕೌಟುಂಬಿಕ ಘಟನೆಯಲ್ಲಿ ಆವರಿಸುತ್ತದೆ. ಅದರೊಟ್ಟಿಗೆ 'ಗಂಡು ಹೆಂಡಿರ ಜಗಳ ಗಂಧ ತೇದಂಗ', ಎಂಬ ಮಾತಿನೊಂದಿಗೆ ಸ್ವಾಭಿಮಾನ ಮತ್ತು ಪರಿಶ್ರಮದ ಪಂಥಗಳ ಜೊತೆಗೆ ಭ್ರಷ್ಟಾಚಾರದ ಛಾಯೆಗಳು ಮತ್ತು ಮುಖವಾಡಗಳು ಕಥೆಯಲ್ಲಿ ಬಿಚ್ಚಿಕೊಳ್ಳುತ್ತವೆ. ಅದರಲ್ಲೂ 'ಗೊಮ್ಮಟೇಶ'ದ ಕಥೆ ಅದರ ಶೀರ್ಷಿಕೆಯಿಂದ ಹಿಡಿದು ಕಥೆ ಕೊನೆಯಾಗುವವರೆಗೆ ಯಾವ ಎಗ್ಗು ಸಿಗ್ಗು ಇಲ್ಲದೆ ಚಲಿಸುವ ಕಾಮದ ಸೆಳೆತ ಅಲಮೇಲು ಎದೆಯಿಂದ ಹಿಡಿದು ಡ್ರೈವರ್‌ನ ಸೋದರಳಿಯ ನಂದಿ ಎಸೆದ ಹಾವಿನ ತನಕ ಹದಿ ಹರೆಯದವರ ಲೈಂಗಿಕ ಆಸಕ್ತಿಯನ್ನು ಕಥಾವಸ್ತುವನ್ನಾಗಿ ಒಳಗೊಂಡಿದೆ.

ವಿದ್ಯಾರ್ಥಿಗಳು ಜೋಗ, ಹಂಪೆ, ಶ್ರವಣಬೆಳಗೊಳಕ್ಕೆ ಪ್ರವಾಸ ಹೊರಟಿದ್ದರು ಶಾಂತ ತಿಲವಳ್ಳಿ ಜೊತೆ ಎಲ್ಲರ ಕಣ್ಣು ತಪ್ಪಿಸಿ ಸೆಕೆಂಡ್ ಷೋ ಸಿನಿಮಾ ನೋಡಿ ಬಂದಿದ್ದಳು. ನಿರೂಪಕಿಯನ್ನು ಕಂಡರೆ ಶ್ರೀಧರನಿಗೆ ಇಷ್ಟ. ಪ್ರಯಾಣದ ವೇಳೆ ಕಾಲುಗಳ ಘರ್ಷಣೆಯಲ್ಲಿ ತೊಡಗಿ ಗೆಲುವಿನ ಸಂತೋಷಪಡುತ್ತಿದ್ದುದು ಅಲಮೇಲು ಜಾರಬಂಡಿಯನ್ನು ಜಾರುವಾಗ ಹೆದರಿ ಕೆಳಗೆ ಉರುಳುತ್ತಿದ್ದಾಗ ನಂದಿ ಈಕೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕೆಳಗೆ ಬೀಳುವಾಗ ಸ್ತನಗಳನ್ನು ಹಿಡಿದುಕೊಂಡಿದ್ದನು. ಕಥೆಯಲ್ಲಿ ಅನೇಕ ಸ್ಥಳಗಳಲ್ಲಿ ಹಾವು ಕಾಣಿಸಿಕೊಳ್ಳುತ್ತದೆ.

'ಹಾವು' ಕಾಮದ ಸಂಕೇತ. ಮನುಷ್ಯನ ಹಲವು ಆಸೆಗಳಲ್ಲಿ ಕಾಮವು ಒಂದು ಎಂಬುದನ್ನು ಚಿತ್ರಿಸಲಾಗಿದೆ.

ಹಾಲತಿ ಸೋಮಶೇಖರ್ ಅವರು "ಲಂಕೇಶರ ಕಾಮ ಮತ್ತು ಪ್ರೇಮ ಕೌಟುಂಬಿಕ ಸಂಬಂಧಗಳಲ್ಲಿ ಹೆಣ್ಣು ಲೈಂಗಿಕ ತೃಪ್ತಿಗಾಗಿ ಸುಖ ಭೋಗಗಳನ್ನು ಹುಡುಕುತ್ತಾ ಸಾಗಿ ಯಾವುದೇ ಮಾರ್ಗದಿಂದಲಾದರೂ ಅದನ್ನು ಪಡೆಯುವ ಚೆಲ್ಲಾಟದ ಪಾತ್ರಗಳಾಗಿ ಸಾಂಕೇತಿಕ ಲೈಂಗಿಕತೆಯ ಪ್ರತಿಯಾಗಿ ಹೆಣ್ಣು ಬರುತ್ತಾಳೆ. ಲಂಕೇಶರು ಚಿತ್ರಿಸಿರುವ ಹೆಣ್ಣು ಹದಿಹರೆಯದ ಲೈಂಗಿಕ ತೊಳಲಾಟಗಳನ್ನು ವಿಕ್ಷಿಪ್ತ ನೆಲೆಯಲ್ಲಿ ಕಾಣಿಸುತ್ತದೆ. ಪುರುಷ ದೃಷ್ಟಿಯಿಂದ ಹೆಣ್ಣನ್ನು ನೋಡುವ ಬಗೆ ಇದೇ ಎಂಬುದು ಸ್ಪಷ್ಟವಾಗುತ್ತದೆ."[೧೧] ಈ ಅಭಿಪ್ರಾಯವನ್ನು ಒಪ್ಪಬಹುದು.

'ಕಲ್ಲು ಕರಗುವ ಸಮಯ'ದಲ್ಲಿನ ಕಥೆಯ ಶ್ಯಾಮಲಾ ಮನೆಯವರ ಮತ್ತು ಊರಿನವರೆಲ್ಲರ ವಿರುದ್ಧವಾಗಿ ಅಂತರ್ಜಾತಿಯ ವಿವಾಹವಾಗುವುದೇ ಈ ಕತೆಯ ಪ್ರಧಾನ ವಸ್ತುವಾಗಿದೆ. ಇಲ್ಲಿ ಜಾತಿಗಿಂತ ಕೌಟುಂಬಿಕ ಪ್ರೀತಿಯಾಗಿ ಪರಿವರ್ತನೆಯಾಗುವುದು ಬಹಳ ಮುಖ್ಯವಾಗುತ್ತದೆ. ಶ್ಯಾಮಲಾ ಮತ್ತು ತಿಪ್ಪಣ್ಣರು ಜಾತಿಯನ್ನು ಮೀರಿ ನಿಲ್ಲುವ ಜೀವಗಳಾಗಿ ಕಂಡು ಬರುತ್ತಾರೆ. "ಕಲ್ಲು ಕರಗುವ ಸಮಯ" ಕತೆಯು "ಗೋವಿನ ಹಾಡು" ಕವಿತೆಯ ಆಧುನಿಕ ರೂಪ-ರೂಪಾಂತರದಂತಿವೆ. ಒಳಿತಿನ ಸ್ವರೂಪವನ್ನು ಶೋಧಿಸುವ ಮಹತ್ವಾಕಾಂಕ್ಷೆ ಈ ಕತೆಯಲ್ಲಿದೆ. ಒಳಿತು ಎಂಬ ಮೌಲ್ಯವು 'ಕೇಡು' ಎಂಬ ಸ್ಥಿತಿಯನ್ನು ಎದುರಿಸುವ ಮತ್ತು ಅದನ್ನು ಬದಲಿಸುವ ಈ ಕತೆ ನಿಜಕ್ಕೂ ಒಂದು ಪ್ರೇಮ ಕಥೆ.

ಹೆಣ್ಣು ಗಂಡಿನ ಸಂಬಂಧದ ನೆಲೆಯಲ್ಲಿರುವ ಕತೆಗಳು ಲೈಂಗಿಕ ಸೆಳೆತದ ಬದುಕನ್ನು ನಿಯಂತ್ರಿಸುವ ಪ್ರಧಾನಶಕ್ತಿಯಾಗಿರುವುದು 'ದಾಹ' ಕತೆಯಲ್ಲಿ ಕಂಡು ಬರುತ್ತದೆ. ನಾಯಕನ ಹೆಂಡತಿ ಸರೋಜಮ್ಮ, ಮಗಳು-ಶಾಂತ, ಪದ್ಮಾ-ಟೀಚರ್, ಟೈಪಿಸ್ಟ್-ಮೀರಾ ಮತ್ತು ಸೆಲ್ವಿಯಾ ಪ್ರಮುಖವಾಗಿ ಕಂಡು ಬರುವ ಪಾತ್ರಗಳು. ವಿವಾಹ ಸಂಬಂಧಗಳ ಬಗ್ಗೆ ನಾಚಿಕೆ ಇಟ್ಟುಕೊಂಡು ದೇವಿ ಗಂಡನ ಜೊತೆ ಬದುಕುತ್ತಲೇ ವಿವಾಹೇತರ ಸಂಬಂಧಗಳಿಗೆ ಪ್ರಾಧಾನ್ಯ ಕೊಡುವುದನ್ನು, ಒಂದೇ ಒಂದು ಸಂದರ್ಭದ ಮೂಲಕ ಗಂಡು-ಹೆಣ್ಣುಗಳ ಜೀವನ ಸಾರ್ಥಕ್ಯ ಕಂಡುಕೊಳ್ಳುವ ನೆಲೆಯಲ್ಲಿ ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮ ಸಂಬಂಧಗಳನ್ನು ಲಂಕೇಶರು ಚಿತ್ರಿಸಿರುವುದನ್ನು ಕಾಣಬಹುದು.

ಲಂಕೇಶರ ಕಲಾ ಸೃಷ್ಟಿಗೆ ಕನ್ನಡಿಯಂತಿರುವ ಅತ್ಯುತ್ತಮ ಕಥೆಗಳಲ್ಲಿ "ಸ್ಟೆಲ್ಲಾ ಎಂಬ ಹುಡುಗಿ" ಕಥೆಯು ಮುಖ್ಯವಾದುದು ಇದು ಲೇಖಕರ ಕಲಾವಂತಿಕೆಯ ವಿಕಾಸದ ಕ್ರಮವನ್ನು

---

೧೧. ಹಾಲತಿ ಸೋಮಶೇಖರ್. ಪಿ.ಲಂಕೇಶರ ಸಾಹಿತ್ಯ, ಮಹಾಪ್ರಬಂಧ, ೨೦೦೧, ಪುಟ. ೨೯೧

ಸಂವೇದನೆಯ ಪ್ರಬುದ್ಧತೆಯನ್ನು ಗುರುತಿಸುವಲ್ಲಿ ಸ್ಪಷ್ಟ ನಿದರ್ಶನವೆನಿಸಿದೆ. ಪ್ರೇಮ, ಕಾಮ, ಸಾವು ಇತ್ಯಾದಿಗಳ ಕುರಿತಾದ ಲಂಕೇಶರ ಚಿಂತನೆ ಬದುಕಿನ ಅವಸ್ಥೆಗಳ ಯಥಾರ್ಥ ಚಿತ್ರಣ ಈ ಕಥೆಯ ಮೂಲಕ ಅಭಿವ್ಯಕ್ತಿಗೊಂಡಿದೆ. ಸ್ಟೆಲ್ಲಾಳ ವೈವಾಹಿಕ ಬದುಕು ಅಷ್ಟು ಹಿತಕರವಾಗಿರಲಿಲ್ಲ. ಏಕೆಂದರೆ ಸ್ಮಿತ್ ಕುಡಿತದ ದಾಸ. ಸ್ಟೆಲ್ಲಾ ಸುಬ್ಬಣ್ಣನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು. ಸುಬ್ಬಣ್ಣನಿಗೆ ಸ್ಟೆಲ್ಲಾ ಎಂದರೆ ಪ್ರಾಣ. ಸುಬ್ಬಣ್ಣ ತನ್ನ ಜೀವನ ಘಟನೆಗಳನ್ನೆಲ್ಲಾ ಸ್ಟೆಲ್ಲಾ ಬಳಿ ಹೇಳಿಕೊಂಡು ಮನಸ್ಸನ್ನು ಹಗುರ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದ. ಹಾಗೂ ತಾನು ಮಾಡಿದ ಪಾಪದ ಕೆಲಸಗಳನ್ನು ಹೇಳಿಕೊಂಡು ಪಶ್ಚಾತ್ತಾಪ ಪಡುತ್ತಿದ್ದ. ಏನೆಂದರೆ ತನ್ನ ಹೆಂಡತಿಯಾದ ಪಾರ್ವತಿಯನ್ನು ತನ್ನ ಸ್ನೇಹಿತ ಅಬೂಬಕರ್ ಅತ್ಯಾಚಾರ ಮಾಡಿದ್ದನು. ಇವೆಲ್ಲವನ್ನು ಪ್ರೀತಿಯಿಂದ ನಿವೇದಿಸಿಕೊಳ್ಳುತ್ತಿದ್ದನು. ಸ್ಟೆಲ್ಲಾ ಎಂದರೆ ಸುಬ್ಬಣ್ಣನಿಗೆ ಅಷ್ಟು ಪ್ರೇಮ.

'ಬೆಳದಿಂಗಳ ದಾಹ'ದ ನಿರೂಪಕಿಯಾದ ಲತಾಳಿಗೆ ಕಲ್ಪನೆ–ಊಹೆ–ವಾಸ್ತವ ವಿಷಯಗಳು ಸಾಹಿತ್ಯದ ವಿಷಯಗಳಾಗಿ ಹೊರ ಹೊಮ್ಮುವುದು ಈ ಕತೆಯ ವಿಶೇಷವಾಗಿದೆ. ಈ 'ಬೆಳದಿಂಗಳ ದಾಹ' ಹಲವು ದಾಹಗಳ ಸಂಗಮವಾಗಿದೆ. ಪಾರು ಚಿಕ್ಕಮ್ಮಳ ಜೀವನ ಪ್ರೀತಿ, ಬದುಕಿನ ಆತಂಕ, ಶರೀರದ ದಾಹ, ವಿವಾಹೇತರ ಸಂಬಂಧದ ಒಲವು, ಪೂಜೆ–ನೇಮಗಳ ಬಗ್ಗೆ ಆಕೆಯ ನಂಬಿಕೆ– ಹೀಗೆ ಹಲವು ದಾಹಗಳು ಕಥೆಯಲ್ಲಿವೆ. ಕಥೆಯು ಯಾವುದನ್ನು ಪ್ರೇಮದ ನೆಲೆಯಲ್ಲಿ ಹೇಳಬೇಕೋ ಅದನ್ನು ಸೂಚ್ಯವಾಗಿ ತರುವ ನೆಲೆಯಲ್ಲಿ ಗುರ್ತಿಸಬಹುದು. ಪಾರು ಚಿಕ್ಕಮ್ಮನ ವಿವಾಹೇತರ ಬದುಕಿನ ಏರಿಳಿತಗಳನ್ನು ಕಾಣಬಹುದು. 'ನನ್ನ ಅಣ್ಣನ ನೆನಪು" ಎಂಬ ಕತೆಯಲ್ಲಿ ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮದ ಸಂಗತಿ ಬರುತ್ತದೆ. ಅಪ್ಪನ ಅನೈತಿಕ ಸಂಬಂಧದಿಂದ ಅವ್ವನ ಸೊರಗುವಿಕೆ ಹಾಗೂ ಮಗಳ ಪ್ರೇಮ ವಿವಾಹದ ಯಶಸ್ಸು ಜೊತೆಗೆ ಅಪ್ಪ ಸರಸಿ ಎಂಬುವವಳ ಜೊತೆ ಅನೈತಿಕ ಸಂಬಂಧ ಹೊಂದಿದ್ದು, ಈ ವಿಷಯವನ್ನು ತಿಳಿದು ಅವ್ವ ಗಂಡನ ಅನೈತಿಕ ಜೀವನದ ಸಂಬಂಧವನ್ನು ಬಿಡಿಸಲಾಗದೆ ಅಸಹಾಯಕಳಾಗಿ ತಣ್ಣಗೆ ಭೂಮಿ ತ್ಯಜಿಸುವುದು ಕಂಡು ಬರುತ್ತದೆ.

'ಉತ್ತರವಿಲ್ಲ' ಕಥೆಯಲ್ಲಿ ನಾಯಕಿ ಮರಿಯಾ ಈಕೆಯ ಗಂಡ ಜವಾನ್. ಜವಾನ್‌ನ ಪ್ರೇಯಸಿ ರೋಸಾ. ಜವಾನ್ ಮರಿಯಾಳನ್ನು ಮೆಚ್ಚಿ ಚರ್ಚಿನಲ್ಲಿ ಮದುವೆಯಾಗಿದ್ದನು. ಜೊತೆಗೆ ಜವಾನ್‌ರೋಸಾಳ ಪ್ರೀತಿಯನ್ನು ಬಯಸಿ ಸರಸ ಸಲ್ಲಾಪದಲ್ಲಿ ಇರುತ್ತಿದ್ದನು. ಇದನ್ನು ಸಹಿಸದ ಮರಿಯಾ ರೋಸಾಳನ್ನು ಕೊಲೆಗೈದು ಸಬಲೆಯಾದದ್ದು ಕುಟುಂಬದಾಚೆಯ ಕಾಮ ಮತ್ತು ಪ್ರೇಮವನ್ನು ಇಷ್ಟ ಪಡದ ವ್ಯಕ್ತಿಯಾಗುತ್ತಾಳೆ.

'ಐಲೀನ್ ಮತ್ತು ಟಿಲ್ಡಿ' ಕಥೆಯಲ್ಲಿ ಸುರೂಪಿ ಮತ್ತು ಕುರೂಪಿಯರ ಪ್ರೇಮ ಕತೆ ಕೇಂದ್ರವಸ್ತುವಾಗಿ ಬರುತ್ತದೆ. ಐಲೀನ್ ಬಹಳ ಸುಂದರಿ ಟಿಲ್ಡಿ ಆಕರ್ಷಕಣೀಯಳಲ್ಲದ ಹೆಣ್ಣು.

ನ್ಯೂಯಾರ್ಕಿನ ಜೋಗಲ್ ಮಾಂಸದ ರೆಸ್ಟುರಾ ಹೋಟೆಲ್‌ನಲ್ಲಿ ಸರ್ವರ್ ಆಗಿ ಕೆಲಸ ಮಾಡುತ್ತಿದ್ದಳು. ಅಲ್ಲಿಗೆ ಬರುವ ಗಿರಾಕಿಗಳು ನಡೆದುಕೊಳ್ಳುವ ರೀತಿಯನ್ನು ಕಾಣಬಹುದು.

'ಮಂಜು ಕವಿದ ಸಂಜೆ' ಕಥೆಯಲ್ಲಿ ಗೌರಮ್ಮ ಗಂಡನ ಲೈಂಗಿಕ ಹಗರಣದಿಂದ ಅಸಹಾಯಕಳಾಗಿ ನಿರಾಶೆಗೊಂಡಿದ್ದ ಕಥೆಯ ಮುಖ್ಯ ವಸ್ತು. ಗೌರಮ್ಮನ ಗಂಡ ಪ್ರಭುದೇವ. ಪ್ರಭುದೇವನ ಅಕ್ಕನ ಮಗಳು ಸುಂದರಿ, ಪ್ರಭುದೇವನ ಹಾರ್ಟ್‌ಬೀಟ್ ಆಫೀಸಿನಲ್ಲಿ ರೀಟಾ, ವೇದವತಿ ಮತ್ತು ಜಯ ಪಾತ್ರಗಳನ್ನು ಈ ಕತೆಯಲ್ಲಿ ಕಾಣಬಹುದು. ಪ್ರಭುದೇವ ಪುಸ್ತಕ ಓದತೊಡಗಿದ್ದರೆ ಎಂದೋ ನೋಡಿದ್ದ ಹೆಣ್ಣು ಕಾಣಿಸಿಕೊಂಡಿದ್ದಳು. ಮುದುಕಿ ಕೂಡ ಹುಡುಗಿಯ ಹಾಗೆ ಕಾಣುತ್ತಿದ್ದಳು. ನಡು ವಯಸ್ಸಿನ ಹೆಂಗಸು ಹೋಗುತ್ತಿದ್ದರೆ ಅವರನ್ನು ನೋಡಲು ರಸ್ತೆಗೆ ಬರುತ್ತಿದ್ದ ಅವನು ಕಾಮಾತುರತೆಯಿಂದ ನಿರಾಶನಾಗುತ್ತಿದ್ದ. ಗೌರಮ್ಮನಂತ ಒಳ್ಳೆಯ ಪತ್ನಿಯನ್ನು ಪಡೆದು ಸಹ ವಿಕ್ಷಿಪ್ತಲೋಲುಪತೆಯಲ್ಲಿ ಪ್ರಭುದೇವನ ಪಾತ್ರ ದುರಂತದ ಕನಸುಗಳನ್ನು ಕಾಣುತ್ತಿದ್ದುದು ವಿಪರ್ಯಾಸವೇ ಸರಿ. 'ರುದ್ರಾಣಿಯ ಸುಪ್ತಕತೆ'ಯಲ್ಲಿ ನಿಗೂಢ ಸಾವು ಅಸಹಾಯಕರಿಗೆ ಸಹಾಯ ಮಾಡುವುದು ಹಾಗೂ ಕಾಮಕ್ಕೆ ಬಲಿಯಾಗುವುದು ಈ ಕಥೆಯಲ್ಲಿ ಬರುತ್ತದೆ. "ಬದುಕಿನಲ್ಲಿ ಕಾಮವು ಉಳಿದೆಲ್ಲಾ ಪ್ರವೃತ್ತಿಗಳಿಗಿಂತ ಪ್ರಖರವಾದುದು. ಅಲ್ಲಿ ಸಫಲಗೊಳ್ಳುವುದಾದರೆ ಅದೇ ಅಂತಿಮ ಸುಖ; ಉಳಿದೆಲ್ಲವೂ ಮರೆತು ಪ್ರಾಣಿಯಂತೆ, ಪಕ್ಷಿಯಂತೆ ದೇಹದ ನೆಲೆಯಲ್ಲೇ ಬದುಕುವುದಾದರೆ ಮನುಷ್ಯ ಪರಮ ಸುಖಿ. ಶುದ್ಧ ಲೈಂಗಿಕತೆಗೆ ಮನಸ್ಸಿನ ಹಂಗಿಲ್ಲವೆಂಬುದನ್ನು 'ಚಂದ್ರಪ್ಪಗೌಡರಿಗೆ ಬಿದ್ದ ಕನಸು', 'ವಾಸ್ತವ', ಇಂತಹ ಕಥೆಗಳು ಪ್ರತಿಪಾದಿಸುತ್ತವೆ. ಅದರ ಹಿಂದಿನ ಕತೆಗಳಲ್ಲೂ ಲಂಕೇಶರ ಈ ನಿಲುವನ್ನು ಈಗಾಗಲೇ ಪರಿಶೀಲಿಸಲಾಗಿದೆ. ಆದರೆ ಲೈಂಗಿಕತೆಗೆ ಶೋಷಣೆಯ ಒಂದು ಮುಖವೂ ಇದೆ. ಆಗ ಅದು ಅಪವಿತ್ರಗೊಳ್ಳುತ್ತದೆ. ವಂಚನೆಗೆ ಗುರಿಯಾದಂತೆನ್ನಿಸುತ್ತದೆ. 'ಮಂಜು ಕವಿದ ಸಂಜೆ' ಇಂತಹ ವಂಚನೆಗಳನ್ನು ಹೇಳಿದರೆ 'A Suicide Note'ನಲ್ಲಿ ಮರೆಮಾಚಿದ್ದ ಆಪ್ತ ಸಂಬಂಧಗಳನ್ನು ಒಪ್ಪಿಕೊಳ್ಳಲಾಗದೆ 'ಅಂಚಿನ ಚಿತ್ರಗಳು' ಗಂಡಿನ ಹುಸಿ ಪ್ರತಿಷ್ಠೆಯನ್ನು ಬಯಲಿಗೆಳೆಯುತ್ತದೆ."[೧೨]

'ಕೊನೆ' ಈ ಕಥೆಯಲ್ಲಿ ಉಜ್ಜನ ಕಾಮಕ್ಕೆ ಪಾರ್ವತಿ ಬಲಿಯಾಗುವುದು ಹಾಗೂ ಪದ್ಮಿನಿಯ ದಿಟ್ಟತನ ಈ ಕಥೆಯ ಪ್ರಮುಖ ವಸ್ತುವಾಗಿದೆ. ಕಥೆಯ ಕೊನೆಯಲ್ಲಿ ಉಜ್ಜ ಸಾಯುವ ನಿರ್ಣಯ ಮಾಡಿದ ಮೇಲೂ ಕಾಮದ ಹಿಂದೆ, ಸೆಕ್ಸಿನ ರೋಮಾಂಚನದ ಹಿಂದೆ ಓಡುತ್ತಾನೆ. ಜೊತೆಗೆ ವಿಧವೆ ವೀರಬಸವಿಯ ಮನೆಗೆ ಹೋಗಿ ಬರುವ ನಂಜಣ್ಣ ದುಡೀತಾನೆ, ಮಜಾ ಮಾಡ್ತಾನೆ ಎಂದುಕೊಂಡು ಅದನ್ನು ಒಪ್ಪಿಕೊಳ್ಳುವ ಮಗ ಉಜ್ಜ, ಗೌಡರ ಪಾರ್ವತಿಯ ಜೊತೆ ಬಾಸಿಂಗದ ಕನಸು, ಲೋಯರ್ ಸೆಕೆಂಡರಿಯಲ್ಲಿ ಶಾರದೆ ಕೊಟ್ಟ ಪುಸ್ತಕದ ನೆನಪು, ಪದ್ಮಿನಿಯ

---

೧೨ ಕೆ. ಮರುಳ ಸಿದ್ದಪ್ಪ, ಪಿ.ಲಂಕೇಶ್ ಪುಟ-೧೦೧, ೨೦೦೮

ಬಿಸಿಯಪ್ಪುಗೆ, ಸೆಕ್ಸಿನ ಅವಸರದಲ್ಲೂ ಕಂದನಿಗಾಗಿ ಓಡಿದ ಗಂಗೆ, ತನ್ನನ್ನು ಕುಂಸಿಯಲ್ಲಿ ಪೋಲಿಸು ಕಣ್ಣಪ್ಪ ಪ್ರೀತಿಯಿಂದ ನೋಡಿಕೊಂಡದ್ದು ಎಲ್ಲವೂ ಕಾಮ ಮತ್ತು ಪ್ರೇಮದ ಜೊತೆಯಲ್ಲಿ ಸಾಗಿ ಸಾವಿನ ಅಂಚಿಗೆ ಬಂದು ತಲುಪುವುದನ್ನು ಕಾಣಬಹುದು.

'ನಿವೃತ್ತರು' ಕಥೆಯಲ್ಲಿ ಟೈಪಿಸ್ಟ್ ಮೀರಾ ಬಾಸ್‌ನಿಂದ ಮಾನಭಂಗವಾಗುವಾಗ ಪ್ರತಿಭಟಿಸಿದ್ದರೆ, ಪ್ರಹ್ಲಾದರಾಯರ ಹೆಂಡತಿ ಮತ್ತು ಮಗಳು ಬಾಸ್‌ನ ಕಾಮಕ್ಕೆ ಬಲಿಯಾಗುವುದೇ ಕಥೆಯ ಮುಖ್ಯವಸ್ತು. ನರಸಿಂಹರಾಯ ಮೂವರು ಹೆಂಡಂದಿರನ್ನು ಕಳೆದುಕೊಂಡಿದ್ದನು ಮೀರಾಳನ್ನು ಆಫೀಸಿನಲ್ಲಿ ಶನಿ ತರ ಕಾಡಿದವನು ಕಾಮದ ಉತ್ತುಂಗ ಶಿಖರಕ್ಕೆ ಏರುವಂತೆ ವರ್ತಿಸುತ್ತಿದ್ದವನು ಬಾಸ್. 'ಕೊನೆ' ಕತೆಯಲ್ಲಿ ಪ್ರಾಯದ ಉಜ್ಜ ಕಾಮುಕನಾದರೆ, ಈ ಕತೆಯಲ್ಲಿ ಮುದುಕ (ಬಾಸ್) ಕಾಮುಕನಾಗಿದ್ದಾನೆ. 'ಕೊನೆ' ಕತೆಯಲ್ಲಿ ಪಾರ್ವತಿ ಉಜ್ಜನ ಕಾಮಕ್ಕೆ ಬಲಿಯಾದರೆ, ಇಲ್ಲಿ ಪ್ರಹ್ಲಾದರಾಯರ ಹೆಂಡತಿ ಮಗಳು ಬಲಿಯಾಗುತ್ತಾರೆ. 'ಸೆಪ್ಟೆಂಬರ್‌ನಲ್ಲಿ ಪ್ರಥಮ ರಾತ್ರಿ' ಈ ಕತೆಯಲ್ಲಿ ವೇಶ್ಯೆಯ ವೃತ್ತಿಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ ಲೇಖಕರು ಮುದುಕಿ ಮತ್ತು ಶಾಂತಾ ಈ ಕಥೆಯ ಪಾತ್ರಗಳು ಮುದುಕಿ ಮದ್ಯವರ್ತಿಯಾಗಿ ಕಾಣಿಸುತ್ತಾಳೆ. ಕುಟುಂಬದಾಚೆಗಿನ ಕಾಮ ಸಂಬಂಧಗಳನ್ನು ಈ ಕತೆಯೂ ಚಿತ್ರಿಸುತ್ತದೆ.

ಪಿ.ಲಂಕೇಶರ ಕಥನ ಸಾಹಿತ್ಯದಲ್ಲಿ ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮ ಮನುಷ್ಯ ಸಂಬಂಧಗಳು ಎಳೆಎಳೆಯಾಗಿ ಬಿಚ್ಚಿಕೊಳ್ಳುವಂತಹ ಘಟನೆಗಳನ್ನು ಕಾಣಬಹುದು. ಲಂಕೇಶ್ ತಮ್ಮ ಅಂತರಂಗದ ಕಣ್ಣುಗಳಿಂದ ಮನುಷ್ಯನ ಸಂಬಂಧಗಳನ್ನು ಗ್ರಹಿಸುವ ತಾವು ಕಂಡುಕೊಂಡ ಸತ್ಯಕ್ಕೆ ನಿಷ್ಠರಾಗಿರುವ ಘಟನೆಗಳನ್ನು ಬರೆಯುತ್ತಾ ಇನ್ನು ಹಲವು ಕತೆಗಳಲ್ಲಿ ಪ್ರೇಮ ಮತ್ತು ಕಾಮದ ಸಂಬಂಧಗಳ ಬಗೆಗೆ ಸೂಕ್ಷ್ಮವಾಗಿ ಬರೆದಿದ್ದಾರೆ. ಬಹಳ ಮುಖ್ಯವಾದ ಕಥೆಗಳಲ್ಲಿ ಬರುವ ಅಂಶಗಳನ್ನು ಸಂಶೋಧಿಸಲಾಗಿದೆ. ಸದ್ಯದ ಸಾಮಾಜಿಕ ಸಂಬಂಧಗಳೊಟ್ಟಿಗೆ ಮನುಷ್ಯ ಅವನ ನಡವಳಿಕೆ ಒತ್ತಡ ತೀವ್ರವಾಗಿ ಸ್ಪಂಧಿಸುವ ಗುಣಗಳನ್ನು ನಾವು ಕಂಡುಕೊಳ್ಳುವ ಸತ್ಯಕ್ಕೆ ನಿಷ್ಠರಾಗಿ ಲಂಕೇಶರ ಕಥನಸಾಹಿತ್ಯ ನಮಗೆ ಮುಖ್ಯವಾಗುತ್ತದೆ ಮತ್ತು ಪ್ರಸ್ತುತವಾಗುತ್ತದೆ.

### ೪.೨. ಜಾತಿ ಮತ್ತು ಲೈಂಗಿಕ ಸಂಬಂಧಗಳು

ಬದುಕಿನ ಸಂಕೀರ್ಣತೆಗಳನ್ನೆಲ್ಲಾ ದುಡಿಸಿಕೊಳ್ಳುವ ಲಂಕೇಶರ ಕಥನ ಸಾಹಿತ್ಯದಲ್ಲಿ ನಿರ್ದಿಷ್ಟ ವಸ್ತುವೊಂದನ್ನು ಚರ್ಚಿಸಲು ಸಾಧ್ಯವಾಗುವುದಿಲ್ಲ. ಅವರ ಹಲವಾರು ಚಿಂತನೆಗಳು ಏಕಕಾಲಕ್ಕೆ ಹಲವು ಕಥನಗಳಲ್ಲಿ ಪ್ರಾಪ್ತಿಗೊಳ್ಳುತ್ತವೆ. ಕಾರಣ ಅವರು ಗಾಂಧಿವಾದ, ಲೋಹಿಯಾವಾದ, ಜಯಪ್ರಕಾಶ ನಾರಾಯಣರ ಚಿಂತನೆಗಳಿಗೆ ಒಳಗಾಗಿ ಸಮತಾ ಸಮಾಜದ ಕನಸನ್ನು ಕಾಣುವ ನಿಟ್ಟಿನಲ್ಲಿ ಇವರೆಲ್ಲರ ತತ್ವ ಚಿಂತನೆಗಳು ಪ್ರಭಾವಿಸಿವೆ.

ಗಾಂಧೀಜಿ ಹಾಗೂ ಇನ್ನಿತರ ಸಮಾಜವಾದಿ ನಾಯಕರ ಸುಧಾರಣೆ ಹಾಗೂ ಅಸ್ಪೃಶ್ಯತೆಯ ನಿರಾಕರಣೆ ಜಾತಿಯ ವಿನಾಶ ಇವುಗಳ ಕನಸನ್ನು ಕಂಡವರು ಈ ನಿಟ್ಟಿನಲ್ಲಿ ಇವರ ಕಥನಗಳು ಮೂಡಿವೆ. ವ್ಯವಸ್ಥೆಯಲ್ಲಿ ಜಾತಿ–ಮತ ನಮಗೊಂದು ದೊಡ್ಡ ಬಂಧನವಾಗಿದೆ. ನಾಡಿನ ಶ್ರೇಯೋಭಿವೃದ್ಧಿಗೆ ಅಡ್ಡ ಗೋಡೆಯಾಗಿದೆ. ಆತ್ಮಶ್ರೀಯಿಂದ ನಿರಂಕುಶ ಮತಿಗಳಾಗಿ ಎಂದು ಹೇಳುತ್ತ, ಮೌಢ್ಯದ ವಿರುದ್ಧ ಸಿಡಿದೆದ್ದ ಗುಡಿಗೋಪುರಗಳನ್ನು ಅಲ್ಲಗಳೆದ ಎಡಪಂಥೀಯ ಧೋರಣೆಯ ಕುವೆಂಪು ಅವರ ಸಾಮಾಜಿಕ ವಿಚಾರಗಳು ಲಂಕೇಶರನ್ನು ವಿಶೇಷವಾಗಿ ಸೆಳೆಯುತ್ತವೆ. ಕುವೆಂಪುರವರ ಎರಡೂ ಕಾದಂಬರಿಗಳಲ್ಲಿ ಕಂಡು ಬರುವ ಸಮಗ್ರ ಬದುಕಿನ ನೋಟ, ಹಳ್ಳಿಯ ಪರಿಸರ ಹಾಗೂ ಆಚರಣೆಗಳು, ಪ್ರೇಮ ಪ್ರಕರಣಗಳು ಪಡೆದುಕೊಳ್ಳುವ ಸ್ವರೂಪ, ಮಲೆನಾಡಿನ ಮಣ್ಣಿನ ಕಮಟು, ಕಾಡಿನ ಭಾಗವಾಗಿರುವ ಜನರ ಜೀವನೋತ್ಸಾಹ ಮುಂತಾದ ಅಂಶಗಳು ಲಂಕೇಶರನ್ನು ಪ್ರಚೋದಿಸಿವೆ.

'ಮುಸ್ಸಂಜೆಯ ಕಥಾ ಪ್ರಸಂಗ' ಕಾದಂಬರಿಯಲ್ಲಿ ಜಾತಿ ಮತ್ತು ಲೈಂಗಿಕ ಸಂಬಂಧಗಳನ್ನು ಮನುಷ್ಯನ ಸಾಮಾಜಿಕ ಪ್ರಪಂಚದಲ್ಲಿ ನಡೆಯುವ ಎಲ್ಲಾ ಸಂಗತಿಗಳನ್ನು ತರುತ್ತಾರೆ. ಪಿ.ಲಂಕೇಶರು ಕಾದಂಬರಿಗೆ ಬರೆಯುವ ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ. " 'ಮುಸ್ಸಂಜೆಯ ಕಥಾ ಪ್ರಸಂಗ' ಎಂದು ಯಾಕೆ ಹೆಸರಿಟ್ಟೆ ಎಂದು ಕೇಳಿಕೊಳ್ಳುತ್ತೇನೆ. ಒಂದು ಹಳ್ಳಿಯಲ್ಲಿ ನಡೆದ ತಮಾಷೆ ಘಟನೆಗಳ ಆಳದ ಜಾತೀಯತೆ, ಲೈಂಗಿಕತೆ, ಹುಂಬತನ ಮತ್ತು ವಿಷಾದಕರ ವಂಚನೆಯಿಂದಾಗಿ ಈ ಹಳ್ಳಿ ತನ್ನ ವಿನಾಶದ ಅಂಚಿನಲ್ಲಿ ತನ್ನ ಬದುಕಿನ ಮುಸ್ಸಂಜೆಯಲ್ಲಿರುವಂತೆ ನನಗೆ ಭಾಸವಾಯಿತು. ಆದ್ದರಿಂದಲೇ ಈ ಹೆಸರಿಟ್ಟೆ"[೧೩] ಲಂಕೇಶರ ಮುಸ್ಸಂಜೆಯ ಕಥಾ ಪ್ರಸಂಗ ಒಂದು ಹೊಸದಾದ ಲೋಕವನ್ನೇ ನಮ್ಮ ಮುಂದಿಡುತ್ತದೆ. ಲಂಕೇಶರ ಸಾಹಿತ್ಯ ಪ್ರಜ್ಞೆಯ ಪ್ರಧಾನ ಆಶಯ ಮನುಷ್ಯ ಪ್ರೀತಿಯದ್ದಾಗಿದ್ದು, ಜಾತಿ, ವರ್ಗ, ಲೈಂಗಿಕತೆ, ಹಣ, ರಾಜಕೀಯ ಮುಂತಾದ ಎಲ್ಲವನ್ನು ಮೀರಿದ ಸ್ವರೂಪವನ್ನು ಕಟ್ಟಿಕೊಡುತ್ತದೆ. ಮಂಜ–ಸಾವಂತ್ರಿಯರ ಪ್ರೇಮ ವಿವಾಹ ಒಂದು ನಿರ್ಧಾರಕವಾದ ಘಟ್ಟವನ್ನು ತಲುಪುತ್ತದೆ. ಕಂಬಳ್ಳಿಯಲ್ಲಿ ಉಡುಪನ ರಾಜಕೀಯ ಲಾಭಗಳು ಯಾವುದೇ ಫಿಲೋಸಫಿಕಲ್ ಎಥಿಕ್ಸ್‌ನಿಂದ ಹುಟ್ಟಿದ ವಿಚಾರಗಳಲ್ಲ ಯಾವುದೇ ಸಾಮಾಜಿಕ ಬದ್ಧತೆಗಳಿಂದ ಪ್ರಣೀತವಾದ ಸತ್ಯಗಳಲ್ಲ. ಭರ್ಮಣ್ಣನಂಥಾ ಆಕ್ರಮಣಕಾರಿ ವ್ಯಕ್ತಿಗಳೇ ತಮ್ಮ ಸ್ವಪ್ರತಿಷ್ಠೆಯ ಬೇಳೆ ಬೇಯಿಸಿಕೊಳ್ಳಲು ಸಮಾಜ ಒಪ್ಪಿತ ಸಂಪ್ರದಾಯಗಳನ್ನು ತಮ್ಮ ತಮ್ಮ ಅನುಕೂಲಗಳಿಗೆ ತಿರುಗಿಸಿಕೊಳ್ಳ ಹೊರಟ ಹುನ್ನಾರಗಳು ರಂಗವ್ವನವರಂಥಹ ವ್ಯಕ್ತಿಗಳನ್ನು Target ಮಾಡುವ ಭರ್ಮಣ್ಣ ಅವರ ಜೊತೆ ಬಹಳ ಕಾಲದಿಂದಲೂ ಆರ್ಥಿಕ ವ್ಯವಹಾರದ ಜೊತೆ ಇದ್ದವನೆ. ಇದ್ದಕ್ಕಿದ್ದಂತೆ ಅವನಿಗೂ

---

೧೩. ಪಿ.ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ ಪುಟ, ಮುನ್ನುಡಿ ೧೯೮೦

ಅವಳಿಗೂ ಆರ್ಥಿಕ ವ್ಯವಹಾರ ಕುರಿತ ವ್ಯತ್ಯಾಸಗಳು ಶುರುವಾದ ಕೂಡಲೆ ಅವನ ಕಣ್ಣಿಗೆ ರಂಗವ್ವ ಲಿಂಗಾಯತ ಸಮಾಜದ ಧೂರ್ತೆಯಾಗಿ ಕಾಣಿಸತೊಡಗುತ್ತಾಳೆ. ಅರ್ಥಾತ್ ಹಾಗೆ ಕಾಣಿಸುವಂತೆ ಹೊಂಚು ಹಾಕಿ ಸಂಚು ರೂಪಿಸುವ ಭರ್ಮಣ್ಣ. ರಂಗವ್ವನ ಋಣದಲ್ಲಿರುವ ಲಿಂಗಾಯತರನ್ನೇ ಹುಡುಕಿ ಹುಡುಕಿ ಅವಳ 'ಜಾತಿಭ್ರಷ್ಟತೆ'ಯನ್ನು ಅವರ ಕಣ್ಣಿಗೆ ಢಾಳಾಗಿ ಕಾಣಿಸುವಂತೆ ಮಾಡಿ ಅವಳ ವಿರುದ್ಧ ಎತ್ತಿಕಟ್ಟುತ್ತಾನೆ. ತಾನು ಮಾತ್ರ ತನ್ನ ಸುತ್ತಲಿನ ಗೆಳೆಯರ ಪಡೆಯೊಂದನ್ನು ಕಟ್ಟಿಕೊಂಡು 'Safe Zone' ನಲ್ಲಿರುವಂತೆ ನೋಡಿಕೊಳ್ಳುತ್ತಾನೆ. ಲಿಂಗಾಯಿತೇತರರು ಅಂದರೆ ಅದರಲ್ಲಿ ಪ್ರಧಾನವಾಗಿ ಹರಿಜನರನ್ನು ರಂಗವ್ವನ ವಿರುದ್ಧ ಎತ್ತಿಕಟ್ಟುವ ಪ್ರಯತ್ನ ಮಾಡುತ್ತಾ ಹರಿಜನರ ಸಮುದಾಯದಲ್ಲೂ ರಂಗವ್ವನ ಋಣದಲ್ಲಿರುವ ಹರಿಜನರನ್ನು ಎತ್ತಿಕಟ್ಟುತ್ತಾ ಜಾತಿಯನ್ನು ತನಗೆ ಬೇಕಾದ ಜಾಗದಲ್ಲಿ ಬೇಕಾದ ವಿಷಯಕ್ಕೆ ತನಗೆ ಹೇಗೆ ಬೇಕೊ ಹಾಗೆ ತಿರುಚಿಕೊಳ್ಳುತ್ತಾನೆ. ಭರ್ಮಣ್ಣ. ಜೊತೆಗೆ ಶಿವಲಿಂಗ ಬೇರೆ ಮಾದಿಗರ ಹುಡುಗಿಯರ ಹತ್ತಿರ ಬಾನಗಡಿ ನಡೆಸಲು ಹೋಗಿ ಅಪ್ರಿಯತೆ ಗಳಿಸಿಕೊಂಡಿದ್ದ. ಹಣದ ಅಂತಸ್ತಿನ ದಬ್ಬಾಳಿಕೆಯಿಂದ ನಡೆಸಿದ ಶಿವಲಿಂಗನ ಅತ್ಯಾಚಾರದ ಪರಿಣಾಮ ಶ್ರೇಷ್ಠಿಯವರಿಗೆ ಗೊತ್ತಾಗುವಂತಿರಲಿಲ್ಲ. ಇದು ಸಂಶಯಕ್ಕೆ ಎಡೆ ಮಾಡಿಕೊಡುತ್ತದೆ. ಶ್ರೇಷ್ಠಿ ದುರುಗದೇವಿಯ ಜೊತೆ ಪರಾರಿಯಾಗುವ ಪ್ರಕರಣ ಕೂಡ ನೋಡಬಹುದು.

ಜಾತಿ ಮೀರಿದ ಪ್ರೀತಿಯು ಬ್ಯಾಡರ ಮಂಜನಿಗೂ ಮತ್ತು ಸಾವಂತ್ರಿಗೂ ಹುಟ್ಟಿದಾಗ ಲಿಂಗಾಯತ ಜಾತಿ ಕೆಡುತ್ತೆ ಇವನಿಂದ ಎಂದು ಚೀರುತ್ತಾನೆ. ಜೊತೆಗೆ ದೈಹಿಕ ತೀವ್ರತೆಯಿಂದ ತನ್ನ ಮೀಸೆ ತಿದ್ದಿಕೊಳ್ಳುತ್ತ ರಾಜ್ ಮತ್ತು ಬಸ್ಯರ ಕಡೆಗೆ ತೀಕ್ಷ್ಣ ನೋಟಬೀರಿ 'ಆ ಹಡಬೆ ಮುಂಡೆ ಸಾವಂತ್ರಿನ ಹೊತ್ಕೊಂಡು ಹೋಗಿ ಕುಲಗೆಡಿಸಿಬಿಡಬೇಕು ಕಣ್ರಲೇ–ಕುಲಗೆಟ್ಟೋಳು ಬೇಕಾದ್ರೆ ಬ್ಯಾಡ್ರನ್ನಾರ ಕಟ್ಟಿಕೊಂಡು ಹೋಗಲಿ, ಮಾದ್ರನ್ನಾರ ಕಟ್ಟಿಕೊಂಡು ಹೋಗ್ಲಿ' ಅಂದ. ಇದರ ಜೊತೆಗೆ ರಾಮಿ ಮತ್ತು ರಾಚರ ಲೈಂಗಿಕ ಸಂಬಂಧವನ್ನು ನೋಡಬಹುದು. ಭಗ್ನ ಪ್ರೇಮಿ ಶಿವನಂಜನು ಇದರಿಂದ ಹೊರತಲ್ಲ. ಮಂಜ ಮತ್ತು ಸಾವಂತ್ರಿ ಸರಸ ಸಲ್ಲಾಪದಲ್ಲಿ ಒಂದಾಗಿದ್ದಾಗ ಭರ್ಮಣ್ಣ ಮತ್ತು ಸಂಗಡಿಗರು ಅವರನ್ನು ಥಳಿಸಿ ಅಪಮಾನ ಮಾಡಿದ ಹಿನ್ನೆಲೆಗೆ ಬೇಸತ್ತ ತಾಯಿ ರಂಗವ್ವ ಮುನ್ನುಗ್ಗಿ ಅನ್ಯ ಜಾತಿ ವಿವಾಹ ಮಾಡುವುದನ್ನು ಕಾಣಬಹುದು. ಕುವೆಂಪುರವರು 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮೂಲಕ ಮಲೆನಾಡಿನ ಬದುಕಿನ ವಾಸ್ತವ ಚಿತ್ರಣವನ್ನು ನೀಡಿರುವಂತೆ 'ಮುಸ್ಸಂಜೆಯ ಕಥಾ ಪ್ರಸಂಗ'ವು ಮಲೆನಾಡಿನ ಅಂಚಿನ ಬಯಲು ಸೀಮೆಯ ಬದುಕನ್ನು ಕಟ್ಟಿಕೊಡುತ್ತದೆ. ಕುವೆಂಪು ಕಾದಂಬರಿಗಳು, ಸ್ವಾತಂತ್ರ್ಯ ಪೂರ್ವ ಸಾಮಾಜಿಕ ವಿವರಗಳನ್ನು ಒಳಗೊಂಡಿದ್ದರೆ. 'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಸ್ವಾತಂತ್ರ್ಯ ತರುವಾಯದ ಸಾಮಾಜಿಕ ಪರಿಸರದಲ್ಲಾದ ಬದಲಾವಣೆಯನ್ನು ಒಳಗೊಂಡಿದೆ. 'ಅಕ್ಕ' ಕಾದಂಬರಿಯ ಪ್ರಧಾನ ಪಾತ್ರ

'ದೇವೀರಿ'ಯೇ ಆದರೂ ಕ್ಯಾತನೇ ಇಲ್ಲಿ ನಾಯಕ. ನಿರೂಪಕ ಅವನ ಸ್ವಗತ ಲಹರಿಯಲ್ಲಿ ಬೆಳೆಯುವ ಕಥಾ ವಿಸ್ತಾರ ಕೊಳಗೇರಿಯ ಬದುಕು ಬೆಂಗಳೂರಿನ ಕೊಳಗೇರಿಯ ರಾಜಕಾರಣ ಹಿಕ್ಮತ್ತುಗಳ ನರಕ ದರ್ಶನವನ್ನು ಕೊಳಗೇರಿಯ ಮೂಲಕ ತಿಳಿಸುತ್ತಾನೆ. ಕ್ಯಾತ ತಾನು ವಾಸಿಸುವ ಕೊಳಗೇರಿ ಮತ್ತು ಅದನ್ನು ನಿಯಂತ್ರಿಸುವ ವ್ಯಕ್ತಿಗಳ ಬಗ್ಗೆ ಒಂದು ಮಟ್ಟದ ಅರಿಯನ್ನು ಸಂಪಾದಿಸಿದ್ದರೂ ಕೊಳಗೇರಿ ಮತ್ತು ಅದರಲ್ಲಿ ವಾಸಿಸುವ ಮನುಷ್ಯರ ಬಗ್ಗೆ ನಕರಾತ್ಮಕ ಧೋರಣೆ ಇಟ್ಟುಕೊಂಡಿಲ್ಲದಿರುವುದು ಅರ್ಥಪೂರ್ಣವಾಗಿದೆ. ದೇವೀರಿ, ಪದ್ದಿ, ಸಂಪೂರ್ಣಮ್ಮ, ರಂಗಚೆಟ್ಟಿ, ರಾಮಪ್ಪ ಹೀಗೆ ಹಲವು ಹತ್ತು ಮಂದಿ ಕ್ಯಾತನ ಕಣ್ಣಿಗೆ ಒಳ್ಳೆಯವರಾಗಿ ಕಾಣುವವರೂ ಕೊಳಗೇರಿಯಲ್ಲಿದ್ದಾರೆ. ಖಡವಾ, ನಾಗ್ರ, ಮೇಸ್ತ್ರಿಯರೇ ತುಂಬಿದ ಪ್ರಪಂಚದಲ್ಲಿ ಇವರಲ್ಲಿ ಒಂದು ಸ್ವಲ್ಪ ಸಮತೋಲನ ತರುತ್ತಾರೆ. ಲೇಖಕರು ಸಾಮಾನ್ಯ ವರ್ಗದ ಪ್ರಜ್ಞೆಯ ಭಾಗವೊಂದು ಗಟ್ಟಿ ಅನುಭವ ವಾಹಿನಿಯಾಗಿ ಮಾರ್ಪಾಡಾಗಿ ತಳಸ್ತರದ ಆಸಕ್ತಿಗಳನ್ನು ಸಂಘಟಿಸುವ ಯತ್ನದಲ್ಲಿ ಲಿಂಗ–ಜಾತಿ–ಧರ್ಮಗಳ ಕುರಿತಾಗಿ ನಡವಳಿಕೆಗಳ ನಡುವೆ ಡೆಮಾಕ್ರಟಿಕ್ ಸ್ಪೇಸ್ ಹೇಗೆ ಸೃಷ್ಠಿಯಾಯಿತೆಂದು ನವ್ಯ ಕಾದಂಬರಿಕಾರರೆಲ್ಲರೂ ಚರ್ಚಿಸಿದ್ದಾರೆ.

ಪಿ.ಲಂಕೇಶರು ಸಾರ್ವಕಾಲಿಕ ಮೌಲ್ಯಗಳನ್ನು ಪ್ರತಿಪಾದಿಸಲು ಕಥೆಗಳ ಮೂಲಕ ಪ್ರಯತ್ನಿಸಿದ್ದಾರೆ. ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಹಾಗೂ ಬಸವಣ್ಣನವರ ಅಸ್ಪಶ್ಯತಾ ನಿವಾರಣೆಯನ್ನು ಮುಖ್ಯ ವಸ್ತುವನ್ನಾಗಿಸಿದ್ದಾರೆ. ಆಧುನಿಕ ಶಿಕ್ಷಣದಿಂದಾಗಿ ನವ್ಯ ಲೇಖಕರು ಗ್ರಹಿಸಿದ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಮನುಷ್ಯನ ಮೂಲಭೂತ ಸ್ವಭಾವಗಳನ್ನು ಅರಿಯುವ ಸೂಕ್ಷ್ಮ ಸಂಬಂಧಗಳನ್ನು ಜಾತೀಯತೆ, ಲೈಂಗಿಕತೆ, ಇವುಗಳ ಸಂಕೀರ್ಣ ಶೋಧಕ್ಕೆ ಸಾಕ್ಷಿಯಾಗಿದ್ದಾರೆ. ಕಲ್ಲು ಕೂಡ ಕ್ರಮೇಣ ಸದ್ದಿಲ್ಲದೆ ನಿಶ್ಯಬ್ದವಾಗಿ ಕರಗುತ್ತದೆ ಹಾಗೇ ಕಲ್ಲು ಮನಸ್ಸಿನ ಮಲ್ಲಯ್ಯನ ಕ್ರೌರ್ಯ ತುಂಬಿದ ಮನಸ್ಸು ಜಾತಿಯ ನಿಷ್ಠುರತೆಯನ್ನು ಕರಗಿಸಿಕೊಳ್ಳುವ ವಿವರ 'ಕಲ್ಲು ಕರಗುವ ಸಮಯ'ದಲ್ಲಿದೆ. ಮೇಲ್ವರ್ಗದ ಲಿಂಗಾಯತರ ಹುಡುಗಿ ಸಂಪ್ರದಾಯಸ್ಥ ಹಳ್ಳಿಯಲ್ಲಿ ಬೇಡರ ಹುಡುಗನನ್ನು ಮದುವೆಯಾಗುವ ದೃಢತೆಯಲ್ಲಿದ್ದಾಳೆ. ಅಪ್ಪನ ಕತ್ತಿಯ ಕ್ರೌರ್ಯಕ್ಕೆ ಎದುರಾಗಿ ನಿರುದ್ವಿಗ್ನತೆಯ ತೀರ್ಮಾನ ನಿರ್ಣಾಯಕವಾದ ಅವಳ ಅಂತಃಶಕ್ತಿ ಕ್ರಿಯಾಶಕ್ತಿಯ ಪಕ್ವತೆ ಮಠದ ಸ್ವಾಮೀಜಿಯನ್ನು ಅಸಹಾಯಕನನ್ನಾಗಿಸುತ್ತದೆ. ಹಳ್ಳಿಯ ಪರಂಪರೆಯಲ್ಲಿನ ಸ್ಥಾಪಿತ ಮೌಲ್ಯ ಅಪ್ಪನ ಯಜಮಾನಿಕೆ ವರ್ಗ–ವರ್ಣ–ಲಿಂಗ ಅಸಮಾನತೆ ಈ ಎಲ್ಲವನ್ನು ಅಷ್ಟೇ ಅಲ್ಲದೆ ಸ್ವ ನಿರ್ಭಂಧಗಳನ್ನು ಮೀರುತ್ತಾಳೆ. ಏಕ ಕಾಲಕ್ಕೆ ವ್ಯವಸ್ಥೆಯ ಹಾಗೂ ವ್ಯಕ್ತಿತ್ವದ ನಿರ್ಭಂದಗಳಿಂದ ಮುಕ್ತಳಾಗುತ್ತಾಳೆ. ಅವಳ ಶಾಂತವಾದ ಅಹಿಂಸಾತ್ಮಕವಾದ ಕ್ರಾಂತಿ, ಕತ್ತಿ–ರಕ್ತ–ಕೊಲೆಗಳಿಂದ ಉತ್ತರ ಕಂಡುಕೊಳ್ಳುತ್ತಿದ್ದ ಮಲ್ಲಯ್ಯನಿಗೆ ಸವಾಲಾಗಿದೆ. ಬೇಡರ ಹುಡುಗ ತಿಪ್ಪಣ್ಣನ ಪ್ರೌಢವಾದ ಮೌನ, ಆರ್ದ್ರವಾದ ಮಾನವೀಯ ಪ್ರೀತಿಯ ವ್ಯಕ್ತಿತ್ವ ಅನಾವಶ್ಯಕವಾದ ಗಲಭೆಯನ್ನು ಮಾಯವಾಗಿಸಿದೆ. ಮಲ್ಲಯ್ಯನ ಸಾಂಸ್ಥಿಕ ಮೌಲ್ಯದ ದಾಷ್ಟಿಕತೆ

ತಣ್ಣನೆ ಕರಗಿದೆ. ಹಳ್ಳಿಯಲ್ಲಿನ ಗೃಹೀತ ಮೌಲ್ಯಕ್ಕೆ ಚಲನೆಯನ್ನು ನೀಡುವ ಕ್ರಿಯೆ ಈ ಕಥೆಯಲ್ಲಿ ನಿಧಾನವಾಗಿ ನಡೆದಿದೆ. ಜಾತಿ ಈ ಎಲ್ಲಾ ಕ್ರಿಯೆಗಳಿಗೂ ಕೊಂಡಿಯಾಗಿದೆ. ಜೊತೆಗೆ ಫ್ಯೂಡಲ್ ಸಾಮಾಜಿಕ ಪರಿಸರದ ಹಳ್ಳಿಯ ಮೇಲುಜಾತಿಯವರನ್ನು ಮತ್ತು ಕ್ರಾಂತಿಕಾರಕ ವೇದಿಕೆಯ ತರುಣರನ್ನು ಸಹ ಗೇಲಿಗೆ ಗುರಿ ಮಾಡಿರುವ ಕಥೆಗಾರರ ನಿರೂಪಣೆಯು ಆರಂಭದಲ್ಲಿ ವ್ಯಂಗ್ಯ, ಹಾಸ್ಯದ ನೆಲೆಯಲ್ಲಿದ್ದು ಶಿಖರಪ್ರಾಯ ಸನ್ನಿವೇಶವಾದ ಅಂತರ್ಜಾತಿ ವಿವಾಹ ಸಂದರ್ಭ ಹತ್ತಿರವಾದಂತೆ ಗಂಭೀರವಾಗುತ್ತದೆ.

ಲಂಕೇಶರು ಕಟ್ಟಿದ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆ ಪರಿಸರದ ಕಥೆಯಾಗಿ ಪ್ರೇಮ ಅರಳುವಂತೆ ಅನಾವರಣಗೊಳ್ಳುತ್ತದೆ. ಬೀದಿಯಲ್ಲಿ ಬಿದ್ದ ಅನಾಥ ಹೆಣದ ಬಗ್ಗೆ ವಿಪರೀತ ಕುತೂಹಲ ಮತ್ತು ಕಾಳಜಿ ಬೆಳೆಸಿಕೊಂಡ 'ನಾನಲ್ಲ' ಕಥೆಯ ನಾಯಕ ಮನುಷ್ಯ ಸಂಬಂಧದ ಕಟು ವಾಸ್ತವದ ಸತ್ಯಕ್ಕೆ ಹೊಂದಿಕೊಳ್ಳಲಾಗದೆ ವಾರಸುದಾರರಿಲ್ಲದ ಹೆಣಕ್ಕೆ ತನ್ನ ಕೈಯಲ್ಲಿ ಏನಾದರೊಂದನ್ನು ಮಾಡುವ ಹಂಬಲವಿದ್ದರೂ ಏನೂ ಮಾಡಲಾಗದ ಅನಾಥ ಪ್ರಜ್ಞೆಯಿಂದ ಬಳಲುತ್ತಾನೆ. ಮನುಷ್ಯ ಮನುಷ್ಯತ್ವದ ಬಯಕೆ ಜಾತಿಯೆಂಬ ಹೆಣವಾಗಿ ಮಾರ್ಪಡುತ್ತದೆ ಇದನ್ನು ಸೂಚ್ಯವಾಗಿ ಗಮನಿಸಬಹುದು.

ದಲಿತರ ಹುಡುಗ ನಾಗರಾಜನ ವಿದ್ಯೆ ಭವಿಷ್ಯತ್ತಿಗೆ ಸೂಕ್ತ ಮಾರ್ಗದರ್ಶನ ನೀಡುವ ಸಂದರ್ಭ ಪೂಜೆ-ಪುರಸ್ಕಾರ, ಜಪ-ನೇಮ, ವ್ರತಗಳನ್ನೂ ನಿಷ್ಠೆಯಿಂದ ಮಾಡುತ್ತಲೇ ಕೆಲಸಗಾರರನ್ನು ಅಂತಃಕರಣದಿಂದ ಪ್ರೀತಿಸುವ ಕೃಷ್ಣಸ್ವಾಮಿ ಅಧಿಕಾರಶಾಹಿ- ಪುರೋಹಿತಶಾಹಿ ವ್ಯಕ್ತಿತ್ವಗಳ ನಡುವಲ್ಲಿ ಭಿನ್ನರಾಗಿ ಉಳಿಯುತ್ತಾರೆ. ಅಹಿಂಸೆ, ತಣ್ಣಗಿನ ಮೌನ, ಸಾಮಾಜಿಕ ಪ್ರಗತಿ, ಸರಕಾರದ ಕಾನೂನಿಗೆ ಸಲ್ಲಬೇಕಾದ ಗೌರವ, ವರ್ಗ-ವರ್ಣ ಅಸಮಾನತೆಗಳ ನಿವಾರಣೆ ಈ ಬಗೆಯ ಮಾನವೀಯ ವಾದ ಧೋರಣೆಗಳನ್ನು ರೂಢಿಸಿಕೊಂಡ ಕೃಷ್ಣಸ್ವಾಮಿ, ನಾಗರಾಜನ ಪ್ರಜ್ಞೆಯಲ್ಲಿ ಆಶಾದಾಯಕ ವ್ಯಕ್ತಿಯಾಗಿದ್ದಾರೆ. ಇದು ಲಂಕೇಶರ ಪಕ್ವಗೊಂಡ ಮಾಗಿದ ಚಿಂತನೆಗೆ 'ಉಲ್ಲಂಘನೆ' ಕಥೆ ಸಾಕ್ಷಿಯಾಗಿದೆ.

ಗಾಂಧೀಜಿಯವರ ತತ್ವಾದರ್ಶ, ಸುಧಾರಣಾವಾದಿ ನೆಲೆಗಳು ಮನಃಪರಿವರ್ತನೆಯ ಅಂಶಗಳು ಲಂಕೇಶರನ್ನು ದಟ್ಟವಾಗಿ ಪ್ರಭಾವಿಸಿವೆ. ಲಂಕೇಶರ ಸಾಹಿತ್ಯದಲ್ಲಿ ಸಮಾಜವನ್ನು ಆರೋಗ್ಯಕರವಾಗಿ ಇಡಲಾರದ ಸಂಗತಿಗಳ ಬಗ್ಗೆ ಅಪಾರ ಸಿಟ್ಟಿದೆ. ಅದರ ಹಿನ್ನೆಲೆಯಲ್ಲಿ ಹುಟ್ಟಿ ಬಂದ ವಿಷಾದ ನೈತಿಕ ಸಿಟ್ಟಾಗಿ ಬಂಡಾಯವಾಗುತ್ತದೆ. 'ಸಹಪಾಠಿ' 'ಮುಟ್ಟಿಸಿಕೊಂಡವನು', 'ಕಲ್ಲು ಕರಗುವ ಸಮಯ' ಹಾಗೂ 'ಉಲ್ಲಂಘನೆ' ಎಂಬ ನಾಲ್ಕು ಕತೆಗಳಲ್ಲಿ ಪ್ರಮುಖವಾಗಿ ಜಾತಿ ಸಂಬಂಧಿತ, ಲೈಂಗಿಕತೆ ಆಧರಿತ ಶೋಧನೆಗಳು ಕಂಡು ಬರುತ್ತದೆ. 'ದಾಳಿ' ಕತೆಯ ವಿಧವೆ ಮಲ್ಲಿ ತನ್ನ ಆಸೆಯನ್ನು ಪೂರೈಸಿಕೊಳ್ಳಲು ದಾಳಿಕಾರ ಸಲೀಂನನ್ನು ಬಳಸಿಕೊಳ್ಳುವ ಪ್ರಸಂಗ

ಬರುತ್ತದೆ. “ಇದ್ದಕ್ಕಿದ್ದಂತೆ ಮುಚ್ಚಿದ ಮುಂಚೆ ಬಾಗಿಲು ಒದ್ದು ತೆರೆದಂತಾಯಿತು. ಕಗ್ಗತ್ತಲು, ಭಯದಿಂದ ನಡುಗುತ್ತ ನೋಡುತ್ತಾಳೆ. ಒಬ್ಬ ರಜಾಕಾರರ ಹುಡುಗ ದೊಂದಿಯೊಂದಿಗೆ ಬರುತ್ತಿದ್ದಾನೆ. ಅವನ ತೊಡೆ, ಎದೆಗೆ ಗಾಯವಾಗಿ ರಕ್ತ ಸುರಿಯುತ್ತಿದೆ. ಹೆದರಿಕೆಯಿಂದ ನೋಡಲಾಗದೆ, ಚೀರಲಾಗದೆ ಕಣ್ಣು ಮುಚ್ಚಿಕೊಂಡಳು – ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ನಿಂತಲ್ಲಿಯೇ ನಿಂತಳು. ಒಂದು ಕ್ಷಣ ಮೌನ ಏನೇನೂ ಸದ್ದಿಲ್ಲ. ಆದರೂ ಕಣ್ಣು ಬಿಡಲು ಹೆದರಿಕೆ. ಯಾರೋ ಕಾಲನ್ನು ಮುಟ್ಟಿದಂತಾಯಿತು – ಬೆಚ್ಚಿದಳು ಆದರೆ ಭಯಕ್ಕೆ ಕಾಲೆಳೆದುಕೊಳ್ಳುವ ಶಕ್ತಿಯು ಇರಲಿಲ್ಲ. ಕಣ್ಣು ಬಿಟ್ಟು ನೋಡಿದರೆ ಆ ಹುಡುಗಿ ಪಾದ ಹಿಡಿದುಕೊಂಡಿದ್ದ ರಕ್ತ ಸುರಿಯುತ್ತಿದ್ದ ಆತ ಅಡಿಯೊಂದನ್ನು ಬಿಟ್ಟು ಬೇರೇನನ್ನು ಮುಟ್ಟಲು ಯತ್ನಿಸದೆ ಮಲ್ಲಿಯನ್ನೇ ನೋಡುತ್ತಿದ್ದ. ದೂರದಲ್ಲಿಟ್ಟಿದ್ದ ದೊಂದಿಯ ಬೆಳಕಲ್ಲಿ ಮಲ್ಲಿ – ತುಂಬಿದ ನೀಳ ಕುತ್ತಿಗೆಯ ಮೋಹಕ ಮುಖದ ಕತ್ತಲೆಗೆ ಹುಚ್ಚು ಹಿಡಿಸುವ ಸ್ತನ, ತೊಡೆಗಳ ಮಲ್ಲಿ. ವಿಚಿತ್ರ ಜೀವ ಅವಳಿಂದ ಹರಿದು ಬರುವಂತಿದೆ. ಹುಡುಗನ ಕಣ್ಣು ವಿಶಾಲ.... ಘೋರ ತಪ್ಪು ಮಾಡಿದ ಪಶ್ಚಾತ್ತಾಪ ಕಣ್ಣುಗಳಲ್ಲಿ ಇದ್ದಕ್ಕಿದ್ದಂತೆ ಮಲ್ಲಿಯ ಭಯ ಹೊರಟು ಹೋಗಿ ಕೂತುಕೊಳ್ಳಬೇಕೆನ್ನಿಸಿತು. ಅವನು ತನ್ನನ್ನ ತೋರಿಸಿಕೊಂಡು ‘ಸಲೀಂ’ ಅಂದ. ಮಲ್ಲಿಗೆ ತನ್ನ ಹೆಸರು ಹೇಳಬೇಕೆನ್ನಿಸಿತು. ಹೇಳಲಿಲ್ಲ ಅವನ ಹೆಸರನ್ನು ಉಚ್ಚರಿಸಲಿಲ್ಲ ಅವನ ಮುಖ ಎಳೆದು ಎದೆಗವಚಿಕೊಂಡಳು. ಹಿಂಜರಿಯುತ್ತಲೇ ಅವನು ಅವಳ ತೊಡೆ. ಎದೆಗಳನ್ನು ಮುಕ್ತಗೊಳಿಸಿದ; ಧೀರ್ಘ ನಿಟ್ಟುಸಿರಿನಂತೆ ಇಡೀ ದೇಹವನ್ನು ಆವರಿಸಿದ.”[೧೪] ಈ ರೀತಿಯಾಗಿ ಜಾತಿ ಮೀರಿದ ಧರ್ಮ ಮೀರಿದ ಲೈಂಗಿಕತೆಯನ್ನು ಅವನೊಟ್ಟಿಗೆ ಬಳಸಿ ಸಮಾಜದ ಭಯಕ್ಕೆ ಅವನನ್ನು ಊರಿನವರ ಕೈಗೆ ಒಪ್ಪಿಸಿ ಅವನ ಸಾವಿಗೆ ಅವಳೆ ಕಾರಣಳಾಗುತ್ತಾಳೆ. ಅನೀತಿಯ ಕಾಮ ಅಸಹಜ ಸಾವುಗಳ ಈ ಕಥೆಯಲ್ಲಿ ಹೆಣ್ಣಿನ ನೈತಿಕತೆ ಹಾಗೂ ಮಾನವೀಯತೆಯನ್ನೇ ಪ್ರಶ್ನಿಸುವಂತಿದೆ. ರಜಾಕಾರರ ದಾಳಿಯಿಂದ ತನಗೆ ಸಾವು ಬರಬಹುದು ಎಂಬ ಭಯದಿಂದ ತತ್ತರಿಸಿದ್ದ ಮಲ್ಲಿ ಸಾವಿನ ಭಯ ಮರೆತು ದಾಳಿ ಮಾಡಲು ಬಂದವನನ್ನೇ ತನ್ನ ಕಾಮದಾಹಕ್ಕೆ ಬಳಸಿಕೊಳ್ಳುವುದು ವಿಪರ್ಯಾಸವಾಗಿದೆ.

‘ಜೊತೆಗಾರ’ ಕಥೆಯಲ್ಲಿನ ನಾಯಕ ಪ್ರಸಿದ್ಧ ಸಾಹಿತಿ ತನ್ನ ಮುದಿ ವಯಸ್ಸಿನಲ್ಲಿ ಹಳ್ಳಿಗೆ ಹೋಗಿ ಜೋಸಫೈನ್ ಎಂಬ ಹರೆಯದ ಹುಡುಗಿಯ ಜೊತೆ ಚೆಲ್ಲಾಟವಾಡುತ್ತಾನೆ. ಅದೇ ರೀತಿ ನಾಯಕರು ಕನ್ನಡ ಸಾಹಿತ್ಯದಲ್ಲಿ ಸ್ವತಃ ಅವರೇ ಸೃಜಿಸಿದ್ದ ಬೆಸ್ತರ ಚೆನ್ನಿ ಗಂಡನಿಂದ ಹೊಡೆಸಿಕೊಂಡು ತಾನು ಪ್ರೀತಿಸಿದ ಪ್ರಿಯನ ಹತ್ತಿರ ಹೋಗಿದ್ದ ದಿನದ ರಾತ್ರಿಯೇ ಪ್ರಾಣ ಕಳೆದುಕೊಳ್ಳುತ್ತಾಳೆ. ‘ಸಹಪಾಠಿ’ ಕಥೆಯಲ್ಲಿ ಬರುವ ಬಸವೇಗೌಡ ಜೋನಿಯ ಹೆಂಡತಿಯನ್ನು

---

೧೪. ಪಿ.ಲಂಕೇಶ್, ಸಮಗ್ರ ಕಥೆಗಳು ಪುಟ-೪೪೯, ೧೯೯೨

ಅತ್ಯಾಚಾರ ಮಾಡಿದ್ದನು. ಕೊನೆಯಲ್ಲಿ ಜೋನಿ ಹೆಂಡತಿ ಯಾರನ್ನೋ ಕಟ್ಟಿಕೊಂಡು ಹೊರಟು ಹೋಗಿದ್ದಳು. ಜೊತೆಗೆ ಬಸವೇಗೌಡ ಶಿವಪ್ಪನ ಹೆಂಡತಿಗೆ ಸೀರೆ ಬಿಚ್ಚಿ ಊರಿನಲ್ಲಿ ಮೆರವಣಿಗೆ ಮಾಡಿದ್ದನು. ಲಿಂಗಾಯತರ ಹುಡುಗಿ (ಬ್ಯಾಡರವನ್ನ) ಅಂತರ್ಜಾತಿ ವಿವಾಹವಾಗಿದ್ದಳು. ಈ ಹುಡುಗಿಗಾಗಿ ಜಗಳವಾಡಿ ಈ ಜಗಳ ಕೊಲೆಯಲ್ಲಿ ಅಂತ್ಯವಾಯಿತು. ಬಸವೇಗೌಡ ಈತನು ಸಿಕ್ಕ ಸಿಕ್ಕ ಅಂತರ್ಜಾತಿ ಹೆಣ್ಣುಗಳ ಜೊತೆಯಲ್ಲಿ ಭೋಗದಲ್ಲಿ ತೊಡಗಿಕೊಂಡು ನಿರಂಕುಶ ಮತಿಯಾಗಿ ತನ್ನ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳುತ್ತಾನೆ. ಇಂತಹ ಹೇಯ ಕೃತ್ಯಗಳನ್ನು ಖಂಡಿಸುತ್ತಾ ಕರಿಮನುಷ್ಯರು ಕನಸ್ಸಿನಲ್ಲಿ ಹೊಡೆದಂತೆ; ಚುಚ್ಚಿದಂತೆ, ಹಿಂಸಿಸುವಂತೆ ಕನಸುಗಳು ಬಿದ್ದು ಇಪ್ಪತ್ತು ದಿನಗಳ ಕಾಲ ನಿದ್ರೆ ಮಾಡದೆ ಬಳಲಿ ಹೆಣದಂತಾಗುತ್ತಾನೆ. ನಿದ್ರಾಹೀನತೆಯಿಂದ ಬಳಲಿ ತನ್ನಷ್ಟಕ್ಕೆ ತಾನೆ ಅಳುತ್ತಾನೆ. ಮುಕ್ತಿಗಾಗಿ ಹೊಲೆಯ ಶಿಕ್ಷಕನ ಕಾಲು ತೊಳೆದು ಪೂಜಿಸಿ ಸಾಂಕೇತಿಕವಾಗಿ ತಾನು ಮಾಡಿದ ಪಾಪ ಕಾರ್ಯಗಳನ್ನು ಒಪ್ಪಿಕೊಂಡು ಮರುಕ್ಷಣವೇ ಸಾವನ್ನಪ್ಪುತ್ತಾನೆ.

'ಉರಿದ ಊರಿನವರು' ಈ ಕಥೆಯ ಮುಖ್ಯ ವಸ್ತುವೆಂದರೆ ವಿಧವೆ ಚೆಲುವಮ್ಮ ಈಕೆ ವಿದ್ಯಾವಂತೆ, ಜೊತೆಗೆ ಧೈರ್ಯವಂತೆ. ಗಿರಿಜ ತುಂಬಾ ಸುಂದರವಾಗಿದ್ದಳು ಚೆಲುವಮ್ಮ ತನ್ನ ಊರಿನವರಾದ ಕರಿಸಿದ್ದ ಮತ್ತು ಚಿಕ್ಕಲಿಂಗ ತನ್ನ ಮನೆಗೆ ನುಗ್ಗಿ ಗಿರಿಜಾಳನ್ನು ಒಬ್ಬ ಬಾಯಿ ಹಿಡಿದು ಇನ್ನೊಬ್ಬ ಕಾಲು ಹಿಡಿದು ಹೊತ್ತೊಯ್ಯಲು ವಂಚಿಸಿದ್ದರು. ಆ ಸಂದರ್ಭದಲ್ಲಿ ಆಕೆ ಕಿರುಚಿದಳು. ಧ್ವನಿ ಕೇಳಿ ಕೆಂಚಜ್ಜಿ ಇವರ ಮನೆ ಬಳಿ ಬಂದಿದ್ದನು. ಚೆಲುವಮ್ಮ ಈತನಿಂದ ಸಾಕ್ಷಿಗೆ ಸಹಿ ಹಾಕಿಸಿ ಪೋಲಿಸ್ ಸ್ಟೇಷನ್‌ಗೆ ಹೋಗಿ ಸರ್ಕಲ್ ಇನ್ಸ್‌ಪೆಕ್ಟರ್ ರುದ್ರಯ್ಯನಿಗೆ ದೂರು ಕೊಟ್ಟಿದ್ದಳು. ಜೊತೆಗೆ ಅತ್ಯಾಚಾರಕ್ಕೆ ಪ್ರಯತ್ನಿಸಿದವರಿಗೆ ಶಿಕ್ಷೆ ನೀಡಬೇಕು ಇಲ್ಲಂದ್ರೆ ನಾನು ನನ್ನ ಮಗ ಮತ್ತು ತಂಗಿ ಮೂವರು ಆತ್ಮ ಹತ್ಯೆ ಮಾಡಿಕೊಳ್ಳುತ್ತೇವೆ ಎಂದು ಹೇಳಿದ್ದಳು. ರುದ್ರಯ್ಯ, ಚಿಕ್ಕಲಿಂಗ ಮತ್ತು ಕರಿಸಿದ್ದರನ್ನು ತನಿಖೆ ಮಾಡಿದಾಗ ಇವರು ನಾವು ಚೆಲುವಮ್ಮನ ತೋಟದಲ್ಲಿ ಕಾಯಿ ಕದ್ದಿದ್ದೇ ಹೊರತು ಅತ್ಯಾಚಾರಕ್ಕೆ ಪ್ರಯತ್ನ ಪಟ್ಟಿಲ್ಲ. ಈ ಕೆಲಸ ಮಾಡಿರುವವರು ಬೇರೆಯವರು ಎಂದು ಹೇಳಿದ್ದರು.

ಚೆಲುವಮ್ಮನಿಗೆ ರುದ್ರಯ್ಯ ಇವರು ಕಾಯಿ ಕದ್ದಿದ್ದು ಅತ್ಯಾಚಾರಕ್ಕೆ ಪ್ರಯತ್ನಿಸಿಲ್ಲ ಎಂದು ಹೇಳಿದ್ದರೂ, ಚೆಲುವಮ್ಮ ತುಮಕೂರಿಗೆ ಹೋಗಿ ಜಿಲ್ಲಾ ಪೋಲಿಸ್ ಅಧಿಕಾರಿಗೆ ದೂರು ಕೊಟ್ಟಿದ್ದಳು. ತುಮಕೂರಿನಿಂದ ಚೆಲುವಮ್ಮ ಮನೆಗೆ ಬಂದಳು. ಅಲ್ಲಿ ಗಿರಿಜ ಇರಲಿಲ್ಲ. ಹುಡುಕಲು ಹೋದಾಗ ಪೋಲಿ ಕೃಷ್ಣನ ಜೊತೆ ಗಿರಿಜ ಅಪ್ಪಿಕೊಂಡು ಮಲಗಿದ್ದುದನ್ನು ನೋಡಿ ಚೆಲುವಮ್ಮ ಮನೆಗೆ ಬಂದಳು. ಸಹಾಯಕ್ಕೆ ನಿಂತಿದ್ದ ಭೈರವಪ್ಪ ಚೆಲುವಮ್ಮಳನ್ನು ರಮಿಸಿ ಪ್ರೇಮಿಸಿದ್ದ. ಕೆಂಚಜ್ಜ, ಚೆಲುವಮ್ಮ ಮತ್ತು ಭೈರಪ್ಪರನ್ನು ಕುರಿತು ಸರ್ವಜ್ಞನ ವಚನಗಳನ್ನು ಕಟ್ಟಿ

ಹಾಡತೊಡಗಿದ್ದನು. ಭೈರಪ್ಪನ ಹೆಂಡತಿಗೆ ಗೊತ್ತಾಗಿ ತನ್ನ ಗಂಡನನ್ನು ಪ್ರಶ್ನಿಸುವ ಧೈರ್ಯ ಬರಲಿಲ್ಲ.

ಜೀವನದಲ್ಲಿ ಯಾವುದೇ ಗುರಿಯಿಲ್ಲದೆ, ಉದ್ದೇಶವಿಲ್ಲದೆ ವ್ಯಕ್ತಿಯ ಅಸ್ತಿತ್ವ ಯಾವ ಸ್ತರದಲ್ಲಿ ಮುಂದುವರೆಯಬಹುದು ಎಂಬ ಘಟನೆಯನ್ನು 'ಕೊನೆ' ಕಥೆಯು ದಾಖಲಿಸುತ್ತದೆ. ಉಂಡಾಡಿಯಾಗಿದ್ದ ಉಜ್ಜ ಅಪ್ಪನ ಅವಮಾನಕ್ಕೆ ಒಳಗಾಗಿ ಸಾಯಲು ಹೋಗುತ್ತಾನೆ. ಇಲ್ಲಿಂದ ಅವನಿಗೆ ಸಂಬಂಧಿಸಿದ ಚಿತ್ರಣ ಸಾಹಸ ಗಾಥೆಯಾಗಿ ಮೂಡಿ ಬಂದಿದೆ. ಅವನ ಜೀವನದ ಮೊತ್ತ ಮೊದಲ ಮತ್ತು ಕೊನೆಯ ನಿರ್ಧಾರ – ಸಾಯುವುದು ಜೀವನದ ಕೊನೆಯ ಈ ನಿರ್ಧಾರವು ಎದುರಿಗೆ ಸಿಕ್ಕಿದ್ದನ್ನು ತನ್ನದನ್ನಾಗಿ ಮಾಡಿಕೊಳ್ಳುವ, ಗೆಲ್ಲುವ ಹುಮ್ಮಸ್ಸನ್ನು ಅವನಲ್ಲಿ ಉದ್ಭವಿಸುತ್ತದೆ. ಆದ್ದರಿಂದ ಹಾಲಕ್ಕನನ್ನೂ ಲೈಂಗಿಕವಾಗಿ ಚುಡಾಯಿಸುತ್ತಾನೆ. ಗೌಡರ ಮಗಳು ಪಾರ್ವತಿಯನ್ನು ಅಪ್ಪುತ್ತಾನೆ. ಮುತ್ತಿಕ್ಕುತ್ತಾನೆ. ಗೌಡರು ಮತ್ತು ಕೂಲಿಗಳನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ ಪ್ರತಿಭಟಿಸಿ ಹಿಮ್ಮೆಟ್ಟಿಸುತ್ತಾನೆ. ಜೀವನದ ಅಂತಿಮ ನಿರ್ಧಾರ ಅವನನ್ನು ರಾಕ್ಷಸನನ್ನಾಗಿಸಿದೆ.

ಜಾತಿಯ ಲೆಕ್ಕಾಚಾರದಲ್ಲಿ ಕಿರಿಕಿರಿ ಅನುಭವಿಸುವ ಮಾನಸಿಕವಾಗಿ ಕುಗ್ಗುವ, ಕೊರಗುವ ಪ್ರಶ್ನಿಸುವ ಧೈರ್ಯವಿಲ್ಲದೆ ಅಂತ್ಯಕಾಣುವ ಮನಸ್ಸಿನಲ್ಲಿಯೇ ಪ್ರತಿರೋಧವನ್ನು ಒಡ್ಡುವ ಇವುಗಳಲ್ಲಿ ಕಾಲಹರಣ ಮಾಡುವ ಜಾತಿ ಕೆಡಿಸಲು ಅತ್ಯಾಚಾರ ಮಾಡುವ, ಲೈಂಗಿಕ ಸಂಬಂಧಗಳನ್ನು ಹಾಳು ಮಾಡುವ ಹುನ್ನಾರಗಳ ಬದಲು ಜೀವನ ಪ್ರೀತಿಯನ್ನು ಸವಿಯುವ ಕೆಲಸ ಹಾಗಬೇಕು ಜೀವನ ಪ್ರೀತಿಯನ್ನು ಒಳ್ಳೆಯ ಮಾರ್ಗದಲ್ಲಿ ಪಡೆಯಬೇಕು 'ಜಯಂತ್‌ನ ಸ್ವಗತ' ಕಥೆಯಲ್ಲಿ ತಂದೆ ಮತ್ತು ಮಗನ ಜೀವನ ಪ್ರೀತಿಗಳು ತದ್ವಿರುದ್ಧವಾದಂತಹವು. ಯಾಕೆಂದರೆ ತಂದೆ ಯಜಮಾನಿಕೆಯ ಸಂಕೇತವಾಗಿ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದರೆ. ಮಗ ಆ ಸ್ವಾತಂತ್ರ್ಯದ ಕಾರಣದಿಂದ ಪರಾಧೀನತೆಯನ್ನು ಅನುಭವಿಸುತ್ತಿರುತ್ತಾನೆ. ಇದು ಕೇವಲ ಜಯಂತನ ಕುಟುಂಬಕ್ಕೆ ಸಂಬಂಧಿಸಿದ್ದು ಮಾತ್ರವಲ್ಲ ಎಲ್ಲಾ ಮಧ್ಯಮ ವರ್ಗಗಳ ಸ್ಥಿತಿಯೂ ಕೂಡ ಅದೇ ಆಗಿದೆ ಎಂಬಂತಹ ವಾತಾವರಣ ಇರುತ್ತದೆ. ಜಯಂತನ ಅಪ್ಪನಲ್ಲಿ ಹೊಸ ಪೀಳಿಗೆಯ ಯುವಕರಲ್ಲಿ ಇರಬಹುದಾದ ಲವಲವಿಕೆ, ಜೀವನ ಪ್ರೀತಿಗಳು ಉಕ್ಕಿ ಅರಿಯುತ್ತಿರುತ್ತವೆ. ಆತ ಕ್ರಿಯಾಶೀಲನಾಗಿ ಜೀವನವನ್ನು ಅನುಭವಿಸುತ್ತಿದ್ದರೆ ಜಯಂತನು ಮಾತ್ರ ಡ್ರಗ್, ಗಾಂಜಾಗಳಿಗೆ ಬಲಿಯಾಗಿ ಹೋಗುತ್ತಿರುವ ಬಗ್ಗೆ ಕಥೆಯಲ್ಲಿ ಅನುಮಾನಗಳಿವೆ. ಆಧುನಿಕ ಬದುಕಿನಲ್ಲಿ ಕಂಡು ಬರುವ ಕೌಟುಂಬಿಕ ಅಸ್ವಸ್ಥತೆ, ಅನುಮಾನ ಇವು ಕಂಡು ಬರುತ್ತವೆ.

ಜಾತೀಯತೆಗೆ ಸಂಬಂಧಿಸಿದಂತೆ ಸಮಾಜದಲ್ಲಿ ವರ್ಣಾಶ್ರಮ ಭಾವನೆ ಇದ್ದು ಅದು ಇತರೆ ಎಲ್ಲಾ ಸಮಸ್ಯೆಗಳಂತೆ ಇದೂ ಒಂದು ಎಂಬಂತೆ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಜಾತೀವಾದದಿಂದ ಉಂಟಾಗುತ್ತಿದ್ದ ಅನಾಹುತಗಳನ್ನು ಅವರು ತೋರಿಸಿದುದನ್ನು ಕಡೆಗಣಿಸಲಿಲ್ಲ. ಇತರೆ ಸಾಮಾಜಿಕ ಸಮಸ್ಯೆಗಳಿಂದ ಉದ್ಭವಿಸಬಹುದಾದ ಜಾತೀಯತೆ ಎಂಬ ಕ್ರೂರ ಪಿಡುಗಿನಿಂದ ಸಂಭವಿಸುವ ನಷ್ಟ ಜಾತೀಯತೆಗೆ ಸಂಬಂಧಿಸಿದ ವಿಚಾರಗಳು ಬದಲಾಗುತ್ತಿರುವ ಪರಿಸ್ಥಿತಿಗನುಗುಣವಾಗಿ ಹೊಂದಿಕೊಂಡು ಹೋಗದಿದ್ದರೆ ಜಾತಿ ಎಂಬ ಪೆಡಂಭೂತ ಜಾತಿವಾದಿಗಳನ್ನೇ ದಿಗಂತದೆಡೆಗೆ ಕೊಂಡೊಯ್ಯುತ್ತದೆ. ಎಂಬ ಸಂದೇಶವನ್ನು ಕೊಡುವಂಥ ಕಥೆಗಳನ್ನು ಬರೆದರು. ಜಾತಿ ಧರ್ಮ ಇನ್ನಿತರೆ ಯಾವುದೇ ಪ್ರತಿಷ್ಠೆಯಿಂದ ಬದುಕು ನಿರ್ಧರಿಸಲು ಸಾಧ್ಯವಿಲ್ಲ ಈ ಎಲ್ಲಾ ಪ್ರತಿಷ್ಠೆಗಳನ್ನೂ ಬಿಟ್ಟು ಮಾನವ ಸಹಜ ಸಂಬಂಧಗಳನ್ನು ಬೆಳೆಸಿಕೊಂಡಾಗ ಮಾತ್ರ ಮನುಷ್ಯ ನಿಜವಾದ ಮನುಷ್ಯತ್ವ ಕಂಡುಕೊಳ್ಳಲು ಸಾಧ್ಯ! ಎಂಬುದನ್ನು ತಮ್ಮ ಕಥಾ ಪ್ರಪಂಚದ ಪಾತ್ರಗಳ ಮುಖೇನ ಹೇಳಿಸುವ ಪ್ರಯತ್ನ ಮಾಡಿದರು.

ಈ ಅಂಶ ಇಲ್ಲಿನ 'ಕಲ್ಲು ಕರಗುವ ಸಮಯ', 'ಸಹಪಾಠಿ', 'ಮುಸ್ಸಂಜೆಯ ಕಥಾ ಪ್ರಸಂಗ', 'ಅಕ್ಕ', 'ಕೆರೆಯ ನೀರನು ಕೆರೆಗೆ ಚೆಲ್ಲಿ', 'ದಾಳಿ', 'ಕೊನೆ' ಇನ್ನು ಮುಂತಾದ ಕಥೆಗಳಲ್ಲಿ ಸ್ಪಷ್ಟವಾಗುತ್ತದೆ. ನವ್ಯ, ದಲಿತ–ಬಂಡಾಯ, ಸ್ತ್ರೀವಾದಿ ಚಳವಳಿಗಳಿಂದ ಲಂಕೇಶರು ಭಿನ್ನರಾಗುವುದು ಇಂತಹ ರಚನೆಗಳಲ್ಲಿಯೇ. ಜಾತಿ ಸಂಬಂಧ ಹಾಗೂ ಹೆಣ್ಣು ಗಂಡಿನ ಸಂಬಂಧ ಕುರಿತ ಕನ್ನಡ ಸಾಹಿತ್ಯ ಪರಂಪರೆಗೆ ಹೊಸ ಸ್ಥಾನಗಳನ್ನು ಸೇರಿಸುವಲ್ಲಿ ಕಥೆಗಳ ವೈಶಿಷ್ಟ್ಯವಿದೆ. ಹೀಗೆ ಕಥೆಯಿಂದ ಕಥೆಗೆ ಬೆಳೆದ ಲಂಕೇಶರು ನಮ್ಮ ಕಥನ ಸಾಹಿತ್ಯದ ಸಮೃದ್ಧತೆಗೆ ಹೊಸ ಹೊಸ ಕಾಳಜಿಗಳನ್ನು ಜೋಡಿಸಿದ್ದು ಮಾತ್ರವಲ್ಲ ಕನ್ನಡ ಕಥನ ಸಾಹಿತ್ಯವನ್ನೇ ಶ್ರೀಮಂತಗೊಳಿಸಿದವರ ಸಾಲಿನಲ್ಲಿ ಗಮನಾರ್ಹವಾಗಿ ನಿಲ್ಲುತ್ತಾರೆ.

### ೪.೩. ವೃತ್ತಿಗಳು ಮತ್ತು ಲೈಂಗಿಕ ಸಂಬಂಧಗಳು

ಆಧುನಿಕತೆಗೆ ಒಳಗಾದ ಮನುಷ್ಯ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಮತ್ತು ಧಾರ್ಮಿಕವಾಗಿ ಬದಲಾವಣೆಗೆ ಒಳಗಾಗುವ ಮೂಲಕ ಮನುಷ್ಯ–ಮನುಷ್ಯನ ನಡುವಿನ ಸಂಬಂಧಗಳು ಸಂಕುಚಿತಗೊಳ್ಳುವ ಮೂಲಕ ಹುಟ್ಟು ಹಾಕಿದ ಸಮಸ್ಯೆಗಳು ಅಸಂಖ್ಯ. ಈ ಸಂಬಂಧ ಸ್ವರೂಪಗಳು ಸಮಾಜ ಕೇಂದ್ರಿತವಾಗಿ ರೂಪುಗೊಳ್ಳುತ್ತಲೇ ಶೋಧಿಸಲಾಗಿದೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಈ ಸಂಬಂಧದ ಗ್ರಹಿಕೆಯಲ್ಲಿ ಆದ ಬದಲಾವಣೆಗಳನ್ನು ಕಾಣಬಹುದು. ಆಧುನಿಕ ಮನುಷ್ಯ ಎದುರಿಸಿದ ಮೊದಲ ಹಾಗೂ ಅತ್ಯಂತ ಪ್ರಮುಖ ಸಮಸ್ಯೆ ಎಂದರೆ 'ಒಂಟಿತನ' ಇದು ಅವನ ಅಸ್ತಿತ್ವದ ಸಮಸ್ಯೆಯಾಗಿ ಕಾಡಲಾರಂಭಿಸಿತು. ಬದಲಾದ ಜೀವನ ಕ್ರಮವು ವ್ಯಕ್ತಿ ಮತ್ತು ಸಮಾಜದ ನಡುವೆ ಉಂಟು ಮಾಡಿದ ಕಂದಕ ವ್ಯಕ್ತಿಯನ್ನು ಒಂಟಿಯಾಗಿಸಿತು. ಈ ಒಂಟಿತನವನ್ನೂ ಅನಿವಾರ್ಯವಾಗಿ

ಎದುರಿಸಬೇಕಾಗಿ ಬಂದ ಸ್ಥಿತಿಯಲ್ಲಿ ವ್ಯಕ್ತಿ ಆ ಅನುಭವವನ್ನು ಪಡೆದುಕೊಂಡ ಹಾಗೂ ಎದುರಿಸಿದ ಪರಿ ವಿಶಿಷ್ಟವಾದದ್ದು.

ಸಾಂಪ್ರದಾಯಿಕ ಸಮಾಜದಲ್ಲಿದ್ದ ಜಾತಿ–ವರ್ಗಗಳಿಗೆ ಆಧುನಿಕತೆಯು ಹೊಸ ಆಯಾಮವನ್ನೂ ತಂದುಕೊಟ್ಟಿತು ಮನುಷ್ಯ ಸ್ವತಂತ್ರವಾಗಬೇಕೆಂದು ಯೋಚಿಸಿದ ಸ್ವತಂತ್ರ್ಯ ಸಮಾನತೆಗಳಿಗೆ ಅಡ್ಡಿಯಾಗಿರುವ ಅಂಶಗಳನ್ನು ಕಂಡುಕೊಳ್ಳಬೇಕೆಂದು ತಿಳಿದುಕೊಂಡಾಗ ಮಾತ್ರ ಆರ್ಥಿಕ ಸಬಲರಾಗಲು ಸಾಧ್ಯ ಆ ಮೂಲಕ ಸ್ವಾತಂತ್ರ್ಯದ ಕನಸು ಮನುಷ್ಯನ ಬದುಕು ಹಸನಾಗಲು ಸಾಧ್ಯ ಎಂಬುದನ್ನು ತಿಳಿದುಕೊಂಡ ಆ ಮೂಲಕ ಸಾಮಾಜಿಕ ಪಿಡುಗುಗಳ ಬಗೆಗೆ ಎಚ್ಚರ ಕಂಡುಕೊಂಡ ಜೊತೆಗೆ ಮನುಷ್ಯ ಬದುಕಿನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ತುಳಿದ ಹಾದಿಗಳು ಬೇರೆ–ಬೇರೆಯಾದವು ಇವುಗಳನ್ನು ಅಭ್ಯಸಿಸುವುದರ ಮೂಲಕ ಆ ಕಾಲದ ಪ್ರಭಾವದ ವಿವಿಧ ಆಶಯಗಳನ್ನು ಸೃಜನಶೀಲ ಕೃತಿಗಳು ಆ ಕಾಲದಲ್ಲಿ ಬಂದಂತ ಕಥನ ಸಾಹಿತ್ಯ ತಿಳಿಸುತ್ತದೆ. ವಿಶೇಷವಾಗಿ ಪಿ.ಲಂಕೇಶರ ಕೃತಿಗಳು ಈ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಂಡು ಪರಿಹಾರ ಕಟ್ಟಿಕೊಟ್ಟ ಪಾತ್ರಗಳು ಅನನ್ಯವಾಗಿವೆ. ಈ ಮೂಲಕ ಅವರು ಹಿಡಿದಿಟ್ಟ ಸಂಕೀರ್ಣ ಬದುಕಿನ ಮಾದರಿಯನ್ನು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಲಂಕೇಶರು ಸಮಾಜವನ್ನು, ಮನುಷ್ಯನ ಅಂತರಂಗವನ್ನು ಗ್ರಹಿಸಿದ ರೀತಿ ತೀಕ್ಷ್ಣವಾದುದಾಗಿದೆ. ತಾವು ಅಂದುಕೊಂಡದ್ದನ್ನು ಹೇಳಬೇಕಾದದ್ದನ್ನು ಎಲ್ಲಿಯೂ ಅಳುಕದೆ, ಅಂಜದೇ, ಮುಜುಗರ ಪಡದೆ ನೇರವಾದ ರೀತಿಯಲ್ಲಿ ಹೇಳುವ ವ್ಯಕ್ತಿತ್ವ ಅವರಲ್ಲಿದ್ದು ಅದನ್ನು ಅವರು ಸಾಹಿತ್ಯ ಅಭಿವ್ಯಕ್ತಿಯಲ್ಲಿ ಗುರುತಿಸಬಹುದಾಗಿದೆ. ಈ ನೆಲೆಯಲ್ಲಿ ಮನುಷ್ಯನ ಸಣ್ಣತನಗಳನ್ನು ಅದರ ವಿವಿಧ ಸ್ತರಗಳಿಂದ ನಿರೂಪಿಸುವ ಯತ್ನವನ್ನು ಲೇಖಕರು ಮಾಡುತ್ತಾರೆ. ನಮಗೆ ತಿಳಿಯದಿರುವ ನಮ್ಮೊಳಗಿನ ಲೋಪದೋಷಗಳು, ಗೋಸುಂಬೆತನಗಳು, ನಾವರಿಯದಿದ್ದರೂ ನಮ್ಮ ಅಂತರಂಗದಲ್ಲಿ ಹುದುಗಿರುವ ಕಾಮಪ್ರಜ್ಞೆ, ವ್ಯಕ್ತಿ ಮತ್ತು ಸಮಾಜ, ವೃತ್ತಿ ಮತ್ತು ಬದುಕು ಹಾಗೂ ಅನುಭವದ ಪಕ್ವತೆಯೊಡನೆ ನಮ್ಮ ಅರಿವಿಗೆ ಬರುವ ಸತ್ಯ – ಮುಂತಾದ ಅಂಶಗಳನ್ನು ಹುಡುಕುವ, ಗ್ರಹಿಸುವ ಮತ್ತು ತಿಳಿಸುವ ಪ್ರಯತ್ನವನ್ನು ಲಂಕೇಶರು ತಮ್ಮ ಕಥನದ ಮೂಲಕ ನಿರೂಪಿಸಿರುವುದನ್ನು ಕಾಣಬಹುದು.

'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಆಧುನಿಕತೆಯ ಸ್ಪರ್ಶವಿಲ್ಲದೆ ಹಳ್ಳಿಯಲ್ಲಿ ಬದುಕಲು ಹಲವಾರು ವೃತ್ತಿಗಳನ್ನು ಕೈಗೊಂಡಿದ್ದ ಕುಟುಂಬದಲ್ಲಿ, ಒಟ್ಟಿಗೆ ದುಡಿಯುವ ಜನ ಇದ್ದಾರೆ. ಜೊತೆಗೆ ಕುಟುಂಬದ ಆಚೆ ನಗರೀಕರಣದ ಪ್ರಭಾವದಿಂದ ಹುಟ್ಟಿದ ಕಾಯಿಲೆಗಳಲ್ಲಿ ದುಡಿಯುವ ಜನರನ್ನು ಕಾಣಬಹುದು. ಕಾದಂಬರಿಯ ಪ್ರಾರಂಭದಲ್ಲೇ ಲೇಖಕರು ಕಾದಂಬರಿಯ ರಚನೆ ಮತ್ತು ಉದ್ದೇಶವನ್ನು ಕುರಿತು ಪ್ರಸ್ತಾಪ ಮಾಡುತ್ತಾರೆ. ಪ್ರಾರಂಭದ ಕಾದಂಬರಿಯ ನಿರೂಪಣೆ

ಸಾಂಪ್ರದಾಯಿಕ ರೀತಿಯಲ್ಲಿದೆ ಎನ್ನುವ ಭಾವನೆ ಮೂಡಿ ಬರುತ್ತದೆ. ಉದಾಹರಣೆಗೆ "ವಾಚಕ ಮಹಾಶಯರಿಗೆ ಆನಂದದಾಯಕವಾಗಬಲ್ಲ ಕಥಾ ವಸ್ತುಗಳಿಂದ ಹಣ, ವಿದ್ಯೆ, ಜಾತಿ, ಕುಸ್ತಿ ಮತ್ತು ಪ್ರೇಮವನ್ನು ಕುರಿತ ಈ ವೃತ್ತಾಂತ ನಡೆದದ್ದು ಕಂಬಳ್ಳಿ ಎಂಬ ಗ್ರಾಮದಲ್ಲಿ ಕುಂಸಿಯಿಂದ ಐದಾರು ಮೈಲಿ ಈಚೆಗೆ ಶಿವಮೊಗ್ಗೆಯಿಂದ ಹತ್ತಾರು ಮೈಲಿ ಆಚೆಗೆ ಕಾಡಿನ ನಡುವೆ ಶೋಭಿಸುತ್ತಿರುವ ಈ ಕಂಬಳ್ಳಿ ಗ್ರಾಮದಲ್ಲಿ ಮುಖ್ಯವಾಗಿ ಹಣ ಮತ್ತು ಪ್ರೇಮದಿಂದಾಗಿ ನಡೆದ ಕೆಲವು ಘಟನೆಗಳು ಮತ್ತು ಕೆಲವು ಬದಲಾವಣೆಗಳನ್ನು ಆದಷ್ಟೂ ಸಂಗ್ರಹವಾಗಿ ದಾಖಲೆಗೊಳಿಸುವುದು ಈ ಲೇಖನದ ಉದ್ದೇಶ. ಬರೆಯುತ್ತ ಹೋದಂತೆ ಕೆಲವೊಮ್ಮೆ ವಾತಾವರಣ ಮತ್ತು ಪಾತ್ರಗಳ ಒತ್ತಾಯದಿಂದ ಲೇಖಕ ನುಚ್ಚು ನೂರಾಗುವ ಅಪಾಯಗಳಿಗೆ ಸಿಕ್ಕಿಕೊಂಡಿದ್ದಾನೆ. ಅನೇಕ ಜನ ಮನುಷ್ಯರಿರುವ ಈ ಹಳ್ಳಿಯನ್ನು ಕೆಲವೇ ಪಾತ್ರಗಳಿಗೆ ಇಳಿಸುವುದಾಗಲೀ, ಕೇಂದ್ರದ ಪಾತ್ರವೆನ್ನಿಸಿಕೊಳ್ಳುವ ಒಬ್ಬ ನಾಯಕ ನಾಯಕಿಯ ಹಂಗಿಗೆ ಒಳಗಾಗಿ ಅವನ ಅಥವಾ ಅವಳ ಸುತ್ತ ಮಿಕ್ಕದ್ದನ್ನೂ ಹೆಣೆಯುವುದಾಗಲಿ ಕಂಬಳ್ಳಿಯ ಒಟ್ಟಾರೆ ಗುಣಕ್ಕೆ ಅನ್ಯಾಯ ಮಾಡಿತು ಎಂಬ ನಂಬಿಕೆಯಿಂದ ಹಲವಾರು ಜನ ಮನುಷ್ಯರ ಕ್ರಿಯೆಗಳನ್ನು, ವೃತ್ತಿಗಳನ್ನು ಕ್ರಿಯಾಶಾಲಿಗಳಿಲ್ಲದ ಮನುಷ್ಯರ ಅನಿಸಿಕೆಗಳನ್ನು ಮುಂದೆ ಕೊಡಲಾಗಿದೆ."[೧೫] ಈ ಕಾದಂಬರಿಯಲ್ಲಿ ಗಟ್ಟಿಯಾದ ವ್ಯಕ್ತಿತ್ವದಿಂದ ಕೂಡಿರುವ, ಬದುಕಲು, ಬದುಕಿಗಾಗಿ ಹೋರಾಟ ನಡೆಸುತ್ತಿರುವ ಬದುಕಿನಿಂದ ಸಾಧ್ಯವಾದಷ್ಟು ದಕ್ಕಿಸಿಕೊಳ್ಳಲು ಪ್ರಯತ್ನಿಸಿ ಕ್ರಿಯಾಶೀಲರಾಗಿರುವ ಮನುಷ್ಯರ ಚಿತ್ರಣ ಒಂದೆಡೆಯಿದ್ದರೆ ಕ್ರಿಯಾಶೀಲತೆಯಿಲ್ಲದ ಸ್ವಾರ್ಥಪ್ರೇರಿತ ಜೀವನ ನಡೆಸುತ್ತಿರುವ ಮನುಷ್ಯರು ಮತ್ತೊಂದೆಡೆ ಇವೆರಡರ ಸಂಘರ್ಷವೇ 'ಮುಸ್ಸಂಜೆಯ ಕಥಾ ಪ್ರಸಂಗ'ವಾಗಿದೆ. ಸಂಕ್ರಮಣ ಕಾಲದ ಅಥವಾ ಸ್ಥಿತ್ಯಂತರಗೊಳ್ಳುತ್ತಿರುವ ಸಮಾಜ ಚಿತ್ರಣ ಈ ಕಾದಂಬರಿಯ ಉದ್ದೇಶವಾಗಿದೆ.

ಮೇಲ್ನೋಟಕ್ಕೆ ಈ ಕಾದಂಬರಿಗೆ ನಾಯಕ ನಾಯಕಿ ಇಲ್ಲವೆಂದು ಲೇಖಕರು ಹೇಳಿದರೂ ಕೇಂದ್ರ ಪ್ರಜ್ಞೆಯೊಂದು ಇಲ್ಲಿ ಕೆಲಸ ಮಾಡುತ್ತದೆ. ರಂಗಮ್ಮ ಇಲ್ಲಿನ ಕೇಂದ್ರ ಪ್ರಜ್ಞೆಯೆನ್ನಬಹುದು. ಆಣೆ ಬಡ್ಡಿ ವ್ಯವಹಾರದೊಂದಿಗೆ ಹಾಲು ಮಾರಿ ಜೀವನ ನಿರ್ವಹಿಸುತ್ತಿದ್ದ ರಂಗವ್ವ ಯಾವುದಕ್ಕೂ ಜಗ್ಗದ ಗಂಡೆದೆಯ ಹೆಣ್ಣು. ರಂಗವ್ವನ ಆಣೆಬಡ್ಡಿ ವ್ಯವಹಾರವೇ ಊರಲ್ಲಿ ಹಲವಾರು ಸಮಸ್ಯೆಗಳನ್ನು ಸೃಷ್ಟಿಸುತ್ತವೆ. ಮಿಷನ್‌ಭರ್ಮಣ್ಣ, ಬೂಸಿಬಸ್ಯ, ಕ್ಯಾತವಳ್ಳಿಯ ರಾಚನಂತಹವರಿಂದಲೂ ಹೆದರದೆ ಸಾಲ ವಾಪಸ್ಸು ಪಡೆಯುವ ಎದೆಗಾರಿಕೆಯ ಹೆಣ್ಣು ಇಂತವಳ ಮನೋಸ್ಥೈರ್ಯ ಮುರಿಯಲು ಭರ್ಮಣ್ಣ ಉಪಾಯ ಹೂಡುತ್ತಾನೆ. ಇವರಿಬ್ಬರ ಸಂಘರ್ಷವೇ ಕಾದಂಬರಿಯ ಬೆಳವಣಿಗೆ. ರಂಗವ್ವನಿಗೆ ಹಣ ಪಡೆದವರೆಲ್ಲ ಮರುಪಾವತಿ ಮಾಡದ ಹಾಗೆ ಅವರನ್ನು

---

೧೫. ಪಿ.ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ, ಪುಟ ೦೧, ೧೯೯೦

ಹುರಿದುಂಬಿಸುವುದು. ಅವಳ ಮಗಳು ಸಾವಂತ್ರಿ ಬ್ಯಾಡರ ಮಂಜನೊಂದಿಗೆ ಸಂಬಂಧವೊಂದುವುದರಿಂದ ಅವಳ ಶೀಲ ಹಾಳು ಮಾಡುವುದು, ವೀರಶೈವ ಮಠದ ಸ್ವಾಮೀಜಿಗಳನ್ನು ಕಂಬಳ್ಳಿಗೆ ಆಮಂತ್ರಿಸಿ ರಂಗಮ್ಮನಿಗೆ ಛೀಮಾರಿ ಮಾಡಿಸಿ ಬಹಿಷ್ಕಾರ ಹಾಕಿಸುವುದು ರಂಗವ್ವನನ್ನು ಬಗ್ಗಿಸಲು ಭರ್ಮಣ್ಣ ಹೂಡಿದ ಈ ಮೂರು ಕೆಲಸಗಳು (ಆತ ಇವುಗಳನ್ನೇ ವೃತ್ತಿ ಮಾಡಿಕೊಂಡಿದ್ದ) ಹಾಳಾಗಿ, ರಂಗವ್ವನ ಮುಂದೆ ಭರ್ಮಣ್ಣ ವಿನಯವಾಗಿ ಸೋಲೊಪ್ಪಿಕೊಳ್ಳುತ್ತಾನೆ. ಇಂತಹ ವಿರೋಧಿ ಘಟನೆಗಳೇ ರಂಗವ್ವನನ್ನು ಮತ್ತಷ್ಟು ಗಟ್ಟಿಗೊಳಿಸಿ ಹೊಸ ನೆಲೆಯಲ್ಲಿ ಆಕೆ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಾಳೆ. ತಮ್ಮ ಶಿವನಂಜ. ಭರ್ಮಣ್ಣ ಮೊದಲಾದವರು ತೋಪಿನ ಬಳಿಯಿದ್ದ ಜೀವ ಸಾವಿತ್ರಿಯನ್ನು ಹೆಡೆಮುರಿ ಕಟ್ಟಿ ಗಾಡಿಯ ಮೇಲೆ ತಂದಾಗ ವಿಚಲಿತಗೊಳ್ಳದ ರಂಗವ್ವ ತನ್ನ ಕತ್ತಿನ ತಾಳಿಯನ್ನೇ ತಂದು ಅವರಿಬ್ಬರ ಮದುವೆ ಮಾಡುತ್ತಾಳೆ. ಬಹಿಷ್ಕಾರ ಉದ್ದೇಶದಿಂದ ಬಂದ ಸ್ವಾಮೀಜಿ ತಮ್ಮ ಮನಸ್ಥೈರ್ಯ ಕಳೆದುಕೊಳ್ಳಲು ಭಯದಿಂದ ಹಿಂತಿರುಗುತ್ತಾರೆ. ಇದರಿಂದಾಗಿ ಸಾಮಾಜಿಕ ಬಹಿಷ್ಕಾರ ಹಾಕಿಸಬೇಕೆಂದಿದ್ದ ಭರ್ಮಣ್ಣ ನಿರಾಶನಾಗಿ ರಂಗವ್ವನನ್ನು ಹೆದರಿಸಲು ಮತ್ತೊಂದು ತಂತ್ರ ಹೂಡುತ್ತಾನೆ. ಶಿವಾಜಿ–ಸಿದ್ದರ ನಡುವೆ ಮೋಸದ ಕುಸ್ತಿ ಏರ್ಪಡಿಸಿ ಶಿವಾಜಿ ಗೆಲ್ಲುವ ಹಾಗೆ ಮಾಡುವುದರ ಮೂಲಕ ರಂಗವ್ವನನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾನೆ. ಶಿವಾಜಿ ಸೋತು ಮತ್ತೆ ಭರ್ಮಣ್ಣ ನಿರ್ವೀರ್ಯನಾಗುತ್ತಾನೆ. ಜೊತೆಗೆ ಕೌಟುಂಬಿಕ ನೆಲೆಯಲ್ಲೂ ಅತೃಪ್ತಿಯಿಂದಾಗಿ ವಿಚಲಿತ ಸ್ಥಿತಿಯನ್ನೆದುರಿಸುವ ಸಂದರ್ಭ ರೂಪುಗೊಳ್ಳುತ್ತದೆ. ಪರಿಣಾಮವಾಗಿ ಎರಡನೇ ಹೆಂಡತಿ ರಾಮಿ ಶಿವಾಜಿಯೊಂದಿಗೆ ಓಡಿ ಹೋಗುತ್ತಾಳೆ. ಮರ್ಯಾದೆಯ ದೃಷ್ಟಿಯಿಂದ ಮತ್ತೆ ಅವಳನ್ನು ಕರೆತರುತ್ತಾನೆ. ಬದಲಾದ ರಾಮಿಯಿಂದ ಭರ್ಮಣ್ಣ ಪ್ರತಿಷ್ಠೆ ಹೆಚ್ಚಿಸಿಕೊಂಡರು ಸಾವಂತ್ರಿ ಇಕ್ಬಾಲರಂಥವರ ದೃಷ್ಟಿಯಲ್ಲಿ ಅಪಹಾಸ್ಯಕ್ಕೊಳಗಾಗುತ್ತಾನೆ. ಹೀಗೆ ಯಾವ ಘಟನೆಗಳಿಂದಲೂ ರಂಗಮ್ಮನ ಮನಸ್ಥೈರ್ಯವನ್ನು ಕುಗ್ಗಿಸಲಾಗದೆ ಪರಿತಪಿಸುತ್ತಾನೆ. ಬದಲಾದ ಸಾಂದರ್ಭಿಕ ಒತ್ತಡಗಳಿಂದ ರಂಗಮ್ಮ ಪಕ್ವಳಾಗಿ ಮಂಜನನ್ನು ತನ್ನ ಅಳಿಯನನ್ನಾಗಿ ತುಂಬು ಮನಸ್ಸಿನಿಂದ ಒಪ್ಪಿಕೊಳ್ಳುತ್ತಾಳೆ.

ರಂಗಮ್ಮನ ಮಗಳು ಸಾವಂತ್ರಿಯಂತೂ ಹಳ್ಳಿಯಲ್ಲಿ ಅಪರೂಪದ ಹೆಣ್ಣಾಗಿ ಕಂಡು ಬರುತ್ತಾಳೆ. ಇವಳ ಪ್ರಾರಂಭದ ವರ್ತನೆ ಮಾಮೂಲಿಯ ಹೆಣ್ಣು ಮಗಳಂತೆಯೇ ಇದ್ದರೂ ಅವಳ ಅದಮ್ಯ ಉತ್ಸಾಹ ಜೀವಂತಿಕೆ, ಲವಲವಿಕೆ ಅವನ ವ್ಯಕ್ತಿತ್ವಕ್ಕೆ ವಿಶಿಷ್ಟವಾದದ್ದು. ತಾರುಣ್ಯ ಸಹಜವಾದ ಭಾವನೆಗಳಿಂದ ಮಾವ ಶಿವನಂಜನನ್ನು ವಿರೋಧಿಸಿ ಮಂಜನನ್ನು ಒಪ್ಪಿಕೊಳ್ಳುವ ಸಾವಂತ್ರಿ ಮಂಜನೊಡನೆ ತನ್ನ ಮದುವೆ ಜಾತಿಯ ಕಾರಣದಿಂದ ಆಗಲಾರದು ಎಂದು ತಿಳಿದಿದ್ದರೂ ಮುಂದುವರೆಯುತ್ತಾಳೆ. ಪಕ್ಕದ ಮನೆಯ ನಂದ್ಯಪ್ಪರ ಸಂಸಾರವನ್ನೇ ಅವರ ಏರಿಳಿತವಿಲ್ಲದ ಇದ್ದುದರಲ್ಲಿಯೇ ತೃಪ್ತಿಪಡುವ ಅವರ ಸಂಸಾರದ ಸುಖ, ನಿರ್ಲಿಪ್ತತೆ ಇವಳಲ್ಲಿ

ಅಸೂಯೆ ಹುಟ್ಟಿಸುತ್ತದೆ. ಇಂತಹ ಸುಖಕ್ಕಾಗಿ ಹಾತೊರೆದರೂ ಸಾಹಸದ ನೆಲೆಯಲ್ಲಿ ಮಂಜನನ್ನು ಪ್ರೇಮಿಸುತ್ತಾಳೆ.

ಮಳೆ ಬೆಳೆಗಳ ಗತಿಯನ್ನನುಸರಿಸಿ ಪ್ರಶಾಂತವಾಗಿ ಸಾಗುತ್ತಿದ್ದ ನಂದ್ಯಪ್ಪನ ನೆಮ್ಮದಿಯ ಬದುಕು ರಂಗವ್ವನಿಗೆ ಸಾಧ್ಯವಾಗುವುದಿಲ್ಲ. ಹೋರಾಟವಿಲ್ಲದ ಬದುಕು ಶಿವಿಗೆ ಸಾಧ್ಯವಿಲ್ಲ ಕಾರಣ ಆಕೆ ಕಾಯಿಲೆಗೆ ತುತ್ತಾಗುವುದು. ಕರಿಯನಂತ ಮುಗ್ಧ ಹುಡುಗ, ಸಣ್ಣೀರಪ್ಪ ಮೇಷ್ಟ್ರ ಅವನ ಕರ್ತವ್ಯ ಮಾಡದೆ ಊರ ಉಸಾಬರಿಗಳಲ್ಲಿ ಸಿಕ್ಕಿಸಿಕೊಳ್ಳುವುದು, ಗುತ್ಯವ್ವ, ಹನುಮಕ್ಕ ಇವರೆಲ್ಲ ಅವರವರ ವೃತ್ತಿಗಳಲ್ಲಿ ದಿನಗಳೆಯುತ್ತಾ ಕಂಬಳ್ಳಿಯಿಂದ ಪ್ರತಿಘಟನೆಯಲ್ಲೂ ಭಾಗಿಯಾಗುತ್ತಿದ್ದರು. ಶ್ರೇಣಿಕೃತ ವ್ಯವಸ್ಥೆಯಲ್ಲಿ ಮೇಲ್ವರ್ಗದವರು ಅವರ ವೃತ್ತಿ ಬದುಕು ಚೆನ್ನಾಗಿರಲು ಕೆಳವರ್ಗದವರನ್ನು ದಮನಕಾರಿ ರೀತಿಯಲ್ಲಿ ಶೋಷಿಸುತ್ತಾರೆ. ಅದೆಲ್ಲ ಲೈಂಗಿಕ ಶೋಷಣೆಯೇ ಮೇಲುಗೈ ಸಾಧಿಸುತ್ತದೆ. ಶೋಷಣೆಗೊಳಗಾದ ಮಂದಿ ಇದನ್ನು ಪ್ರತಿಭಟಿಸಲು ಅಸಹಾಯಕರಾಗುತ್ತಾರೆ. ಇವರ ನಿಸ್ಸಹಾಯಕತೆಗಳನ್ನೂ ಬಂಡವಾಳ ಮಾಡಿಕೊಂಡ ಶೋಷಕ ವರ್ಗ ಶೋಷಿತರನ್ನು ಸರ್ವ ರೀತಿಯಲ್ಲಿಯೂ ಹಿಂಸಿಸಿ ತಮ್ಮ ಮೇಲೇರುತ್ತಾರೆ. ಕಾಲ ಸರಿದಂತೆ ವ್ಯವಸ್ಥೆ ಬದಲಾದಾಗ ಅನಿವಾರ್ಯವಾಗಿ ವಾಸ್ತವವನ್ನೊಪ್ಪಿಕೊಂಡು ಕೆಳಗಿಳಿಯಲೇಬೇಕಾಗುತ್ತದೆ. ಕಂಬಳ್ಳಿಯಲ್ಲಿ ಪ್ರತಿಷ್ಠಿತ ಮನೆತನದ ಶ್ರೇಷ್ಠಿ. ಜಮೀನ್ದಾರಿ ಪದ್ದತಿಯ ಅಂತ್ಯದೊಂದಿಗೆ ಇವರ ಪ್ರತಿಷ್ಠಿತ ಮನೆತನದ ಪ್ರಭಾವ ಕಡಿಮೆಯಾಗಿ ಅವನತಿಯತ್ತ ಸಾಗುತ್ತದೆ. ಶ್ರೇಷ್ಠಿಯವರ ಮಗ ಶಿವಲಿಂಗ ದುಶ್ಚಟಗಳಿಗೆ ದಾಸನಾಗಿ ಅವರ ಮನೆತನಕ್ಕಷ್ಟೇ ಅಲ್ಲದೇ ಸಮಾಜಕ್ಕೆ ಕಂಟಕಕಾರಿಯಾಗುತ್ತಾನೆ.

'ಅಕ್ಕ' ಕಾದಂಬರಿಯಲ್ಲಿ ಕೊಳಚೆ ಪ್ರದೇಶದ ದೇವೀರಿ ಲೈಂಗಿಕವಾಗಿ ಶೋಷಣೆಗೀಡಾದ ಹೆಣ್ಣು. ಜಗತ್ತಿನ ಕ್ರೌರ್ಯವು ಹೆಣ್ಣಾದ ಅವಳನ್ನು ಲೈಂಗಿಕವಾಗಿ ಹಿಂಸಿಸುತ್ತದೆ. ಪದ್ದಿಯಲ್ಲಿ ಬಣ್ಣ ಬಣ್ಣದ ಕನಸುಗಳನ್ನು ತುಂಬುವ, ಸಿನಿಮಾ ಕ್ಷೇತ್ರದಲ್ಲಿ ವೃತ್ತಿಗಾಗಿ ಅವಕಾಶ ನೀಡುವ ನೆಪದಿಂದ ಅವಳ ಮೇಲೆ ಅತ್ಯಾಚಾರವೆಸಗುತ್ತದೆ. ಇಂತಹ ಲೈಂಗಿಕ ಅತ್ಯಾಚಾರವನ್ನು ಪದ್ದಿ ಮತ್ತು ದೇವೀರಿ ಪ್ರತಿಭಟಿಸಲು ಸಾಧ್ಯವಾಗದೆ ಅಸಹಾಯಕತೆಯಿಂದ ನೋವನ್ನನುಭವಿಸುತ್ತಾರೆ. ಕೊಳಗೇರಿಯಲ್ಲಿ ಸ್ವತಃ ಬದುಕಿದ ಕ್ಯಾತ ತಾನು ಕಂಡಿದ್ದು, ಅನುಭವಿಸಿದ್ದನ್ನು ನಮ್ಮೆದುರಿಗೆ ಬಿಚ್ಚಿಡುತ್ತಾನೆ. ಅವನು ಕಾದಂಬರಿಯನ್ನು ಬರೆಯುತ್ತಿರುವ ಅಂದರೆ ನಮಗೆ ತನ್ನ ಕಥೆ ಹೇಳಿಕೊಳ್ಳುತ್ತಿರುವ ಈ ಹೊತ್ತಿನಲ್ಲಿ ಅವನು ಕೊಳಗೇರಿಯಲ್ಲಿ ವಾಸಿಸುತ್ತಿಲ್ಲ ಅನಾಥಾಶ್ರಮವೊಂದರಲ್ಲಿ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದಾನೆ.

'ಅಕ್ಕ' ಕಾದಂಬರಿಯಲ್ಲಿ ಕಥೆ ಬೆಂಗಳೂರಿನ ಮಹಾನಗರದ ಹೊಸ ನಾಗರೀಕತೆ ಸೃಷ್ಟಿಸಿದ ಕೊಳಗೇರಿಯೊಂದರಲ್ಲಿ ತಂದೆ-ತಾಯಿಗಳನ್ನು ಕಳೆದುಕೊಂಡ ಅಕ್ಕ ತಮ್ಮ (ದೇವೀರಿ – ಕ್ಯಾತ)

ಬದುಕಿದ್ದಾರೆ. ಇವರಿಬ್ಬರ ಜೀವನದ ಸಂಬಂಧಗಳ ಮೂಲಕ ಕಾದಂಬರಿ ಮನುಷ್ಯ ಸಂಬಂಧಗಳ ಸತ್ಯವನ್ನು ಹೊಸ ಸಾಮಾಜಿಕ, ರಾಜಕೀಯ, ಆರ್ಥಿಕ, ಔದ್ಯೋಗಿಕ ಸತ್ಯಗಳನ್ನು ಅದರ ಹಿಂದಿನ ಮರ್ಮಗಳನ್ನು ತಿಳಿಸುತ್ತದೆ. 'ಅಕ್ಕ' ಬರೇ ಕ್ಯಾತನ ಕಥೆಯಾಗುವುದಿಲ್ಲ. ಆತನ ಅಕ್ಕ ದೇವೀರಿಯ ಕಥೆಯಷ್ಟೇ ಆಗುವುದಿಲ್ಲ ಅದು ಸಂಪೂರ್ಣಮ್ಮನ ರಂಗಜೆಟ್ಟಿಯ ವೃತ್ತಿ ಬದುಕು ಕಂಡು ಬರುತ್ತದೆ. ಉದಾಹರಣೆಗೆ "ಇಪ್ಪತ್ತು ರೂಪೈ ಕೊಡೇ ಅಂದ್ರೆ ಅದೂ ಇಲ್ಲ ಅಂತೀ, ಒಂದು ರಾತ್ರಿ ಮಟ್ಟಿಗೆ ಮೂಗು ಬೊಟ್ಟು ಕೊಡು ಅಂದ್ರೆ ಧಿಮಾಕು ಮಾಡ್ತಿ – ನಾನ್ಯಾಕೆ ಈ ಮನೆಯಾಗೆ ಇರ್ಲಿ! ನಾನಂದ್ರೆ ನಿನಗೆ ಕಸಕ್ಕಿಂತ ಕಡೆ. ನಾನಿನ್ನೂ ಬರ್ತೇನಿ. ಮಹಮದ್‌ಖಾನ್ ಹೈದ್ರಾಬಾದಿಗೆ ಬಾ. ಸನ್‌ರೈನ್ಸ್ ಕದುರೇನ ನೋಡ್ಕೋ ಅಂತ ಕೇಳ್ತಿದಾರೆ ನಾನು ಹೊಂಟೋಗ್ತಿನಿ ಅಂತಾನೆ ರಂಗಜಟ್ಟಿ.

"ಇದೆಲ್ಲಾ ಏನು ಅಂತ ಗೊತ್ತಲ್ಲ ಸಾರ್. ಈ ನನ್ಮಗ ಜೆಟ್ಟಿ ಅವತ್ತು ರೇಸ್‌ಗೆ ಹೋಗಿ ಕುದುರೆ ಬಾಲಕ್ಕೆ ಕಾಸು ಕಟ್ಟಬೇಕೂಂತ ಪ್ಲಾನ್ ಹಾಕಿದ್ದ. ಸಂಪೂರ್ಣಮ್ಮ ಒಪ್ಪಿರಲಿಲ್ಲ. ಬೆಳಗ್ಗೇನೆ ಎದ್ದು ಲಾಯಕ್ಕೆ ಹೋಗಿ ಕುದುರೆ ಮೇಯಿಸಿ ತಿಕ ಮುಚ್ಕಂಡು ಇರೋದು ಬಿಟ್ಟು ಬೆಳಗ್ಗೆನಿಂದ ಜಪ ಮಾಡ್ತಾ ಕುಂತಿದ್ದ. ಸ್ಕೂಲಿಗೆ ಚಕ್ಕರ್ ಕೊಟ್ಟಿದ್ದ ಕ್ಯಾತನಿಗೆ ಈ ರಂಗಜೆಟ್ಟಿಯ ಮೂತಿ ನೋಡಿ ಅಯ್ಯೋ ಪಾಪ ಅನ್ನಿಸ್ತು. ಪದ್ದಿಗೆ ಸಿನಿಮಾ ಇದ್ದಂಗೆ ಈ ಜೆಟ್ಟಿಗೆ ಕುದುರೆ ಸಾವಾಸ ಅಂತ ಗೊತ್ತಿತ್ತು. ಕ್ಯಾತ ನನ್ಮಗ ಏಳ್ತಾನೆ ಮೆಲ್ಲಗೆ ಬಾಗಿಲ ಹತ್ರ ಹೋಗ್ತಾನೆ ಒಂಚೂರು ಇಣುಕಿ ನೋಡ್ತಾನೆ"[೧೬] 'ಅಕ್ಕ' ಪದ್ದಿ–ಅವಳಪ್ಪ ನಾಗ್ರಾಜ ನಾಯ್ಡುನ, ಮೇಸ್ತ್ರಿ, ರಾಮಪ್ಪ, ಖಡವಾ, ನಾಗ್ರ, ಸುಧೀರ, ಸತ್ಯನಾರಾಯಣ ಎಲ್ಲ ವೃತ್ತಿಗಳ ಕಥೆಯಾಗುತ್ತದೆ.

'ಬಿರುಕು ಕಾದಂಬರಿಯಲ್ಲಿ ಬರುವ ರಂಗಯ್ಯ ಪ್ರೊಫೆಸರ್, ಶಾಂತ, ಸುವರ್ಣ, ಬಸವರಾಜು, ಆನಂದು, ಪರಮ ಇವರೆಲ್ಲರು ನಿರತರಾಗುತ್ತಾ ತಮ್ಮ ತಮ್ಮ ಪಾತ್ರಗಳಲ್ಲಿ ಚಲನನಶೀಲರಾಗುತ್ತಾರೆ. ಬಸವರಾಜುವಿಗೆ ರಾಜಭವನಕ್ಕೂ ತನ್ನ ಪರಿಸರಕ್ಕೂ ಇರುವ ಸಂಬಂಧದ ಅರಿವು ಬಸವರಾಜುವಿಗೆ ಆಗತೊಡಗುತ್ತದೆ. ಈ ಸಂದರ್ಭದಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಬಸವರಾಜು ನಾಯಕನಿಗೆ ತನ್ನ ಹಳ್ಳಿಯ ಅನುಭವದ ಬಗ್ಗೆ ರಂಗಯ್ಯನಿಗೆ ಹೇಳುವುದಕ್ಕಿಂತ ಆತ್ಮೀಯವಾಗಿ ಹೇಳುವುದು. ಆದರೆ ರಂಗಯ್ಯ 'ತಿಮಿಂಗಿಲ', ಶಾಂತ ಮತ್ತು ಚಂದ್ರಕಾಂತ ಬಸವರಾಜುವಿನ ಅನುಭವದ ಬಗ್ಗೆ ತೋರಿಸುವ ಆಸಕ್ತಿಯನ್ನು ನಾಯಕ ತೋರುವುದಿಲ್ಲ. ಬಸವರಾಜು ಕಾದಂಬರಿಯ ಉದ್ದಕ್ಕೂ ತನ್ನ ಸುತ್ತಮುತ್ತಲಿದ್ದವರೊಡನೆ ಸಂಬಂಧ ಕಲ್ಪಿಸಿಕೊಳ್ಳಲು ಮಾಡುವ ವ್ಯರ್ಥ ಪ್ರಯತ್ನಗಳ ವಿಕೃತ ರೂಪು ಇದು. ನಾಯಕ ನಿನ್ನ ಕಂತೆ ಮುಚ್ಚು ಎನ್ನುವಾಗ ಅವನ ಪ್ರತಿಕ್ರಿಯೆಯಲ್ಲಿ ಇರುವ ಸ್ಪಷ್ಟನೆ ಬಸವರಾಜುವಿನ ಹಳ್ಳಿಯ

---

೧೬. ಪಿ.ಲಂಕೇಶ್, ಅಕ್ಕ, ಪುಟ ೫೪, ೨೦೧೧

ಅನುಭವಕ್ಕೆ ಇತರರು ತೋರಿಸುವ ಪ್ರತಿಕ್ರಿಯೆಗಳಿಗಿಂತ ಭಿನ್ನ. ಇದರಿಂದಾಗಿ ರಾಜ ಭವನದಲ್ಲಿ ಆಗುವ ಅನುಭವಗಳು ಬಸವರಾಜುವಿನ ಸಂವೇದನೆಗೆ ಸ್ಪಷ್ಟತೆ ಕೊಡಲು ಸಾಧ್ಯವಾಗುತ್ತದೆ. ಶಾಂತಾ ಬಸವರಾಜುವಿನ ಮೇಲೆ ಲೈಂಗಿಕ ಆಕ್ರಮಣ ಮಾಡುವುದು ಅವನು ಇನ್ನೊಂದು ರೀತಿಯಲ್ಲಿ ತಿಮಿಂಗಿಲದ ಥರ ಎಂದುಕೊಳ್ಳುವುದನ್ನು ಸಮರ್ಥಿಸಿದರೂ ಕಥೆಯ ಕೊನೆಗೆ 'ತಿಮಿಂಗಿಲ' ಬಸವರಾಜುವಿನ ಮೇಲೆ ಆಕ್ರಮಣ ಮಾಡುವುದನ್ನು ಸೂಚಿಸಿದರು. ಅವಳು ಪಾತ್ರ ಚಿತ್ರಣದ ದೃಷ್ಟಿಯಿಂದಾಗಲಿ, ಸಾಂಕೇತಿಕವಾಗಿಯಾಗಲಿ ಲೇಖಕರ ಈ ಆಶಯಕ್ಕೆ ಅಭಿವ್ಯಕ್ತಿ ಕೊಡುವಷ್ಟು ಬೆಳೆಯುವುದಿಲ್ಲ. ಆದ್ದರಿಂದ ಆಕೆ ಒಗಟಾಗಿ ಉಳಿಯುತ್ತಾಳೆ.

'ಕೆರೆಯ ನೀರನು ಕರೆಗೆ ಚೆಲ್ಲಿ' ಹಾಗೂ 'ಕುರುಡ ಕಾಂಚಾಣ' ಕಥೆಗಳಲ್ಲಿ ಬರುವ ವೃತ್ತಿಗಳು ಅವುಗಳನ್ನು ನಿಭಾಯಿಸುವ ಪಾತ್ರಗಳನ್ನು ಕಾಣಬಹುದು. ಎರಡೂ ಕಥೆಗಳಲ್ಲಿ ಬರುವ ಪಾತ್ರಗಳನ್ನು ನೋಡುವುದಾದರೆ ಗೌರಿ, ಶಿವರುದ್ರ ತಮ್ಮ ಪರಿಸರದಲ್ಲಿ ನಿಜವಾಗಿ ಕಂಡಂತೆ ಪರಮೇಶ ನಿಜವಾಗಿ ಕಾಣುವುದಿಲ್ಲ. ಅವನ ಇಂಗ್ಲೀಷ್ ಮಾತುಗಳು, ಅವನ ಚೀಪ್‌ರೋಮಾನ್ಸ್, ಸ್ನಾಬಿಸಂ – ತೀರ ಕೃತ್ರಿಮವಾಗಿ ಕತೆಯಲ್ಲಿ ಬರುತ್ತವೆ. ಗ್ರಾಮೀಣ ಸಂವೇದನೆಯನ್ನು ವಿಜೃಂಭಿಸುವ ಭರದಲ್ಲಿ ಕತೆ ನಾಗರಿಕ ಸಂಸ್ಕೃತಿಯ ಆ ಭಾಸವನ್ನು ಸೃಷ್ಟಿಸುತ್ತದೆ. ಆದರೆ 'ಕುರುಡು ಕಾಂಚಾಣ'ದಲ್ಲಿ ಸಂಸ್ಕೃತಿಯ ಭ್ರಮೆಯಲ್ಲಿ ಮನುಷ್ಯ ಹಾಕಿಕೊಳ್ಳುವ ಮುಖವಾಡಗಳು ಹಾಗೂ ಅವನ ನಿಜವಾದ ಪ್ರವೃತ್ತಿಗಳು ಇವುಗಳ ನಡುವಿನ ಬಿರುಕನ್ನು ಈ ಕತೆ ಅತ್ಯಂತ ವಸ್ತುನಿಷ್ಠವಾಗಿ ತೋರಿಸುತ್ತದೆ. ಈ ಕತೆಯ ನಿರೂಪಕ ಒಬ್ಬ ಕಾಲೇಜು ಶಿಕ್ಷಕ. ಅವನ ಓದಿನ ಪರಿಣಾಮವಾಗಿ ಮನಸ್ಸಿನ ವೈಶಾಲ್ಯತೆ ಇಂಥ ಕಲ್ಪನೆಗಳನ್ನು ಅವನು ಬೆಳೆಸಿಕೊಂಡಿದ್ದಾನೆ. ಆದರೆ ಈ ಆದರ್ಶಗಳ ಭಾರವನ್ನು ಹೊರುವ ಸಾಮರ್ಥ್ಯ ಅವನಲ್ಲಿಲ್ಲ. ಹೆಚ್ಚು ಮಾತಾಡದ, ಸರಳ ಸ್ವಭಾವದ, ಮುಗ್ಧಹಜಾಮ ಕಾಳನೆದುರು ಅವನು ತನ್ನ ಯುಕ್ತಿ, ಮೋಸ, ಚಿಲ್ಲರೆತನಗಳಿಂದಾಗಿ ಸಣ್ಣವನಾಗುತ್ತಾನೆ.

ಭಾರತೀಯ ಸಮಾಜದಲ್ಲಿನ ಹೆಣ್ಣಿನ ಮೇಲಾಗುವ ಕೌಟುಂಬಿಕ ದೌರ್ಜನ್ಯಗಳು ನಾಲ್ಕು ಗೋಡೆಯ ನಡುವೆ ಅಡಗಿ ಹೋಗುತ್ತದೆ. ಮನೆಯೊಳಗಿನ ದೌರ್ಜನ್ಯಗಳೊಂದಿಗೆ ಉದ್ಯೋಗಸ್ಥೆಯಾದ ಹೆಣ್ಣು ದುಡಿಮೆಯ ಸ್ಥಳದಲ್ಲೂ ಅನುಭವಿಸುವ ನೋವುಗಳು ಬೆಳಕಿಗೆ ಬಾರದೇ ಹೋಗುತ್ತದೆ. ಹೆಣ್ಣು–ವಿದ್ಯೆ ಪಡೆದು ಉದ್ಯೋಗ ಗಳಿಸಿ ಆರ್ಥಿಕ ಗಳಿಕೆಯಲ್ಲಿದ್ದರೂ ಎರಡು ಕಡೆಯಲ್ಲಿ ಗಂಡಿನ ಲೈಂಗಿಕ ಕ್ರೌರ್ಯಗಳಿಗೆ ತುತ್ತಾಗುತ್ತಿದ್ದಾಳೆ. ಇಂತಹ ಸಂದಿಗ್ದತೆಗೆ ಸಿಲುಕಿ ಅದರೊಂದಿಗೆ ರಾಜಿಯಾಗಿ ಬದುಕಿದ ವನಜಾ 'ವಾಸ್ತವ' ಕಥೆಯ ನಾಯಕಿಯಾಗಿ ವೃತ್ತಿಗಳ ಹಿನ್ನೆಲೆಯಲ್ಲಿ ಲೈಂಗಿಕ ದೌರ್ಜನ್ಯಗಳು ನಡೆಯುವುದನ್ನು ಕಾಣಬಹುದು.

ವನಜಾಳ ಬಾಸ್ ಸಮಾಜಕ್ಕೆ ಸುಸಂಸ್ಕೃತ ವ್ಯಕ್ತಿ. ಆದರೆ ಆತ ತನ್ನ ಸಹೋದ್ಯೋಗಿಯನ್ನು ಪತ್ನಿಯ ಮೂಲಕ ತನ್ನ ಭೋಗಾಸಕ್ತಿಗೆ ಆಹ್ವಾನಿಸುವುದರ ಮೂಲಕ ಏಕ ಕಾಲಕ್ಕೆ ಇಬ್ಬರೂ ಹೆಣ್ಣು ಮಕ್ಕಳನ್ನು ಕ್ರೌರ್ಯಕ್ಕೆ ಈಡು ಮಾಡಿದ್ದಾನೆ. ಹೆಂಡತಿಯ ಮನಸ್ಸಿಗೆ – ಬದುಕಿಗೆ ನೀಡಿದ ಆಘಾತವನ್ನೇ ವನಜಾಗೂ ನೀಡಿದ್ದಾನೆ. ಗೋಮುಖ ವ್ಯಾಘ್ರನಂತಹ ಬಾಸ್‌ನ ಕಿರುಕುಳಕ್ಕೆ ಬೇಸತ್ತು ವನಜಾ ವೈಯಕ್ತಿಕ ಹಾಗೂ ಸಾಮಾಜಿಕ ಭದ್ರತೆಗಾಗಿ ವಯಸ್ಸಾದ ವ್ಯಾಪಾರಿಯೊಬ್ಬನ ಎರಡನೇ ಪತ್ನಿಯಾಗಿ ಪಡಬಾರದ ಪಾಡನ್ನು ಪಟ್ಟರೂ ಗಂಡನ ಲೈಂಗಿಕ ಕಿರುಕುಳ, ದೌರ್ಜನ್ಯಕ್ಕೆ ಬೇಸತ್ತು ಪ್ರತಿಭಟಿಸಲಾಗದೆ, ಪ್ರತಿರೋಧಿಸದೆ ಇದ್ದರು ಲೈಂಗಿಕತೆಯಲ್ಲಿ ಭಾಗಿಯಾಗುತ್ತಾಳೆ.

'ಗುತ್ತಿ ಗೀತಾ ಆದದ್ದು' ಕತೆಯಲ್ಲಿ ಗುತ್ತಿ ಗೀತಾ ಆಗುವ ಸಂದರ್ಭದಲ್ಲಿ ಕಥಾ ನಾಯಕಿ ಗ್ರಾಮಪ್ರಜ್ಞೆಯ ಮುಗ್ಧತೆಯಿಂದ ನಾಗರಿಕ ಸಮಾಜದ ಮುಖವಾಡ ಸಂಸ್ಕೃತಿಗೆ ಪರಿವರ್ತಿತಳಾಗಿದ್ದಾಳೆ. ಅಷ್ಟೇ ಅಲ್ಲದೆ ತೊಡೆ ಮುದುರಿ, ಮೈನಡುಗಿ ಸಂಕೋಚದಿಂದ ಮೂಲೆಯಲ್ಲಿ ನಿಂತಿರುತ್ತಿದ್ದ ಹೆಣ್ಣು, ತನ್ನನ್ನು ನಗರ ಸಮಾಜದ ಮುಖ್ಯವಾಹಿನಿಯಲ್ಲಿ ಸೂಳೆಯನ್ನಾಗಿಸಿದ ಪ್ರತಿಷ್ಠಿತರೊಂದಿಗೆ ರಾತ್ರಿ ಹೊತ್ತಿನ ಪಾರ್ಟಿಯಲ್ಲಿ 'ಚಿಯರ್ಸ್' ಎನ್ನುವ ಪಲ್ಲಟಕ್ಕೆ ಸ್ಥಾಪಿತಳಾಗಿದ್ದಾಳೆ. ವ್ಯವಸ್ಥೆಯೊಂದು ಅವ್ಯವಸ್ಥೆಯಾದಾದ ಆ ಅವ್ಯವಸ್ಥೆಯಲ್ಲೇ ಗಟ್ಟಿಯಾಗಿ ನೆಲೆಯೂರಿ ಬದುಕು ಸಾಗಿಸುವ ಸ್ಥೈರ್ಯ ಗೀತಾಗೆ ಬಂದಿದೆ. ನಗರಸಮಾಜ ಮುಗ್ಧತೆಯನ್ನು ಕಳಚುವುದರೊಂದಿಗೆ ಹೊರ ಜಗತ್ತಿಗೆ ತನ್ನನ್ನು ತೆರೆದುಕೊಳ್ಳುವ ಪಾಠವನ್ನು ಕಲಿಸಿದೆ. ಗೀತಾ ತನ್ನನ್ನು ವೇಶ್ಯೆಯನ್ನಾಗಿಸಿದ ಸಮಾಜಕ್ಕೆ ಪ್ರತೀಕಾರವನ್ನು ತೀರಿಸುವವಳಂತೆ ವರ್ತಿಸುವ ಹಿನ್ನೆಲೆಯಲ್ಲಿ ಅವಳ ಗಟ್ಟಿತನ ಸ್ಪಷ್ಟಗೊಂಡಿದೆ.

ಬದಲಾದ ಭಾರತೀಯ ಸಾಮಾಜಿಕ ಪ್ರಕ್ರಿಯೆಗಳಲ್ಲಿ ದಾಂಪತ್ಯ ಹಾಗೂ ಕಾಮ ತೀರಾ ಖಾಸಗಿಯಾಗಿ ಉಳಿದಿಲ್ಲ. ವ್ಯಕ್ತಿಗತವಾದ 'ಸೆಕ್ಸ್'ನ್ನು ಸಾರ್ವಜನಿಕಗೊಳಿಸುತ್ತಾ ಬಂದಿರುವ ಈ ಸಂದರ್ಭದಲ್ಲಿ ಹೆಣ್ಣು ಕೂಡ ತನ್ನ ಖಾಸಗಿ ಮೌಲ್ಯಗಳಿಗೆ ಚಲನಶೀಲತೆಯನ್ನು ಕೊಟ್ಟಿದ್ದಾಳೆ. 'ದೇವಿ' ಕಥೆಯ ದೇವೀರಿ ಸಾಮಾಜಿಕ ಪಲ್ಲಟಗಳನ್ನು ಒಪ್ಪಿಕೊಂಡು ಆ ಹಾದಿಯಲ್ಲಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾಳೆ. ಲೈಂಗಿಕತೆಯ ಮುಖೇನವೇ ಹೆಣ್ಣಿನ ಸಾಮರ್ಥ್ಯವನ್ನು ಪರೀಕ್ಷಿಸುವುದು ಲಂಕೇಶರ ವಿಶೇಷತೆಯಾಗಿದೆ. ಈ ಹಿನ್ನೆಲೆಯಲ್ಲಿ ಹಳ್ಳಿಯಿಂದ ಬಂದ ದೇವೀರಿ ನಗರ ಸಂಸ್ಕೃತಿಯ 'ತಾಶೀಲ್ದಾರ್' ವೃತ್ತಿಯಲ್ಲಿ ಎತ್ತರೆತ್ತರಕ್ಕೆ ಏರುತ್ತಾ ಮಾನಸಿಕವಾಗಿ ಕೆಳಕ್ಕಿಳಿಯುತ್ತಾ ಬರುವ ಚಂದ್ರಪ್ಪನೊಂದಿಗೆ ಗೊಂದಲ, ತಲ್ಲಣ, ದ್ವಂದ್ವಗಳಿಲ್ಲದೆ ನಿರಾತಂಕವಾಗಿದ್ದಾಳೆ. ತಾನು ಲೈಂಗಿಕ ಸಖ್ಯ ಬೆಳೆಸಿದ ಹೆಣ್ಣುಗಳ ವಿವರಗಳನ್ನು ಸಾರ್ವಜನಿಕ ಪಾರ್ಟಿಗಳಲ್ಲಿ ಹೇಳಿಕೊಳ್ಳುತ್ತಾ ಅದೇ ತನ್ನ ಹೆಚ್ಚುಗಾರಿಕೆ ಎಂಬಂತೆ ವರ್ತಿಸುವ ಚಂದ್ರಪ್ಪನ

ಲಂಪಟತನವನ್ನು ತಣ್ಣಗೆ ಸ್ವೀಕರಿಸುತ್ತಾ ತನ್ನ ಬದುಕಿಗೆ ಪ್ರವೇಶಿಸಿದ ಗಂಡಸರನು ಅಂತರದಲ್ಲೇ ಇರಿಸುತ್ತಾ ನಕ್ಕು ಬದುಕು ಸಾಗಿಸುವ ದೇವೀರಿಯ ಮಾನಸಿಕ ಸ್ಥೈರ್ಯ ಅಚ್ಚರಿ ಮೂಡಿಸುತ್ತದೆ.

ಹಣ ಹೆಚ್ಚಾದಂತೆ ಹಾಗೂ ವೃತ್ತಿಯಲ್ಲಿ ಮೇಲೇರಿದಂತೆ ಚಂದ್ರಪ್ಪನಲ್ಲಿ ನೈತಿಕ ಮೌಲ್ಯಗಳು ಕೆಳಕ್ಕಿಳಿಯುತ್ತಾ ಹೋಗಿದೆ. ದೇವೀರಿಯ ತಿಳುವಳಿಕೆಯು ಬದಲಾಗುತ್ತಾ ಹೋಗುತ್ತದೆ. ತನ್ನ ಮಗಳ ಮೊದಲ ರಾತ್ರಿಯ ದಿನ ಗಂಡನ ಬಾಹಿರ ಸಂಬಂಧಗಳನ್ನು ನೆನಪಿಸಿಕೊಳ್ಳುತ್ತಾ ಸಾಗುವ ದೇವೀರಿ. ತಾನು ಮಾತ್ರ ಇಂತಹ ಸಂಬಂಧಗಳಿಂದ ದೂರ ಉಳಿಯುತ್ತಾ ಗಂಡನನ್ನು ಉದಾರವಾಗಿ ಕ್ಷಮಿಸುತ್ತಾ ತನ್ನದೇ ಮೌಲ್ಯಗಳಿಗೆ ಬದ್ಧಳಾಗಿದ್ದಾಳೆ. ದೇವಿ ಉದಾರಿ, ನಿದ್ರೆ, ಮೈಥುನ ಎಲ್ಲವನ್ನು ಕುರಿತು ಉದಾರಿ ದೇವಿ ಗಂಡನ ಸಾಮಾಜಿಕ ನಡವಳಿಕೆಯಲ್ಲಿನ ಅಬದ್ಧತೆ ತರ್ಕ ಬೆಳೆಸದೆ ತನ್ನ ದಾಂಪತ್ಯವನ್ನು ಕಾಪಾಡುವಲ್ಲಿ ಯಶಸ್ವಿಯಾಗಿದ್ದಾಳೆ. ಅವಳ ನಿರ್ಲಿಪ್ತ ಹಾಗೂ ಉದಾರತೆ ಗಂಡನನ್ನು ಮಗುವಂತೆ ಮಾಡುತ್ತದೆ. ದೇವಿಯ ಶಕ್ತಿ ಇದು.

ಲಂಕೇಶರು ಚಿತ್ರಿಸಿರುವ ವೃತ್ತಿಯ ಹಿನ್ನೆಲೆಯಲ್ಲಿ ಮಹಿಳೆ ಸಬಲಳಾಗುವ ಸಂದರ್ಭಗಳು ಬಹಳ ಮುಖ್ಯವಾಗುತ್ತವೆ. 'ವೃಕ್ಷದ ವೃತ್ತಿ'ಯ ಪಾರ್ವತಜ್ಜಿ ಜಗತ್ತಿನ ಹೆಣ್ತನದ ಪ್ರೀತಿ, ಔದಾರ್ಯ, ಕೋಮಲತೆಯೊಂದಿಗೆ ಶಕ್ತಿ ಸಾಮರ್ಥ್ಯವನ್ನು ಬಿಂಬಿಸುವಲ್ಲಿ ಸಶಕ್ತವಾಗಿದೆ. 'ಬೆಳದಿಂಗಳ ದಾಹ' ಕತೆಯಲ್ಲಿ ಪಾರು ಚಿಕ್ಕಮ್ಮ ತನ್ನೊಳಗೆ ಹಲವು ದಾಹಗಳನ್ನು ಕಾಯ್ದುಕೊಂಡವಳು ಸಾಂಪ್ರಾದಾಯಿಕ ನೆಲೆಯನ್ನೇ ಸ್ವೀಕರಿಸಿ ಜೀವನೋತ್ಸಾಹದಿಂದ ಬದುಕಿರುವ ಹೆಣ್ಣು ಕೂಡ ಸುಪ್ತವಾಗಿ ಪರ ಪುರುಷನ ಸಂಬಂಧಕ್ಕೆ ಹಾತೊರೆಯುವ ವಿಲಕ್ಷಣ ಮನಸ್ಸಿನ ವ್ಯಕ್ತಿತ್ವವೊಂದನ್ನು ಈ ಕತೆಯಲ್ಲಿ ಚಿತ್ರಿಸಿದ್ದಾರೆ. ಸಂಪ್ರದಾಯ, ಮಡಿ–ನೇಮ, ಆಚರಣೆ, ಪೂಜೆ, ಸೌಂದರ್ಯಗಳೆಂದು ಸಾಂಪ್ರದಾಯಿಕ ನೆಲೆಯನ್ನೇ ತನ್ನ ಜೀವನೋತ್ಸಾಹ ಎಂದುಕೊಂಡ ಪಾರು ಚಿಕ್ಕಮ್ಮ ತನ್ನೊಳಗಿನ ಗುಪ್ತ ಹಾಗೂ ಸುಪ್ತ ಆಕಾಂಕ್ಷೆಗಳಿಂದ ಬಳಲುತ್ತಾಳೆ. ತನ್ನ ಪ್ರಾಚಾರ್ಯರೊಂದಿಗೆ ದೈಹಿಕ ಸಂಪರ್ಕವಿರಿಸಿಕೊಂಡ ಈಕೆ ಸಂಪ್ರದಾಯಸ್ಥ ಹೆಣ್ಣಿನ ವ್ಯಕ್ತಿತ್ವದ ಭಾವಕೋಶದಲ್ಲೂ 'ಬಾಹಿರ' ಸಂಬಂಧಗಳ ಆಕಾಂಕ್ಷೆಗಳಿರುವುದನ್ನು ಸಾಬೀತು ಪಡಿಸಿದ್ದಾಳೆ.

ಲಂಕೇಶರ ಸೃಜನಶೀಲ ಸಾಹಿತ್ಯದಲ್ಲಿ ಪ್ರಧಾನ ಸಂವೇದನೆಯಾಗಿ ಕಂಡು ಬರುವ ಅದಮ್ಯವಾದ ಸಂವೇದನೆಯೇ ಸ್ವತಂತ್ರವಾಗುವಿಕೆ, ಛಲ, ಹೆಣ್ಣಿನ ಪ್ರೀತಿ, ಶಕ್ತಿ, ದೌರ್ಬಲ್ಯ, ಆಕಾರ–ವಿಕಾರ, ದಾಷ್ಟ್ಯ, ಕ್ರೌರ್ಯ ಸಮಯಸಾಧಕತೆ, ಲೈಂಗಿಕತೆ ಈ ಎಲ್ಲವುಗಳು ವಿಭಿನ್ನ ನೆಲೆಯಲ್ಲಿ ಚಿತ್ರಿತಗೊಂಡಿರುವುದು ವಿಶಿಷ್ಟ ಸಂಗತಿಯೇ ಆಗಿದೆ ಎನಿಸುತ್ತದೆ. ಜೊತೆಗೆ ಹೆಣ್ಣು ವೃತ್ತಿಗಳನ್ನು ಮಾಡಿ ಸ್ವತಂತ್ರವಾಗಿ ಬದುಕಿ ಅಬಲೆಯಲ್ಲ ಸಬಲೆ ಎಂದು ತೋರಿಸಲು ಹೋಗುವಾಗ ಲೈಂಗಿಕ ತುಡಿತ ಮತ್ತು ದೌರ್ಜನ್ಯಕ್ಕೆ ಒಳಗಾಗುವುದನ್ನು ಲಂಕೇಶರ ಕಥನ ಸಾಹಿತ್ಯದಲ್ಲಿ ಶೋಧಿಸಬಹುದು.

## ೪.೪. ಲೈಂಗಿಕತೆ ಮತ್ತು ಗಂಡಿನ ನೆನಪುಗಳು

ಬಿ.ಸಿ.ರಾಮಚಂದ್ರಶರ್ಮ, ಎ.ಕೆ.ರಾಮಾನುಜನ್, ಯಶವಂತಚಿತ್ತಾಲ, ಕೆ.ಸದಾಶಿವ, ಪಿ.ಲಂಕೇಶ್, ಶ್ರೀಕೃಷ್ಣ ಆಲನಹಳ್ಳಿ ಇತ್ಯಾದಿ ನವ್ಯ ಲೇಖಕರು ನೆನಪುಗಳು ಹಾಗೂ ಕನಸುಗಳನ್ನು ತಮ್ಮ ತಮ್ಮ ಕಥೆಗಳಲ್ಲಿ ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಲಂಕೇಶರ ಕಥನ ಸಾಹಿತ್ಯವು ಗಂಡಿನ ನೆನಪುಗಳು ಮತ್ತು ಲೈಂಗಿಕತೆಯನ್ನು ಮನುಷ್ಯ ಸಂಬಂಧಗಳ ವಲಯದಲ್ಲಿಟ್ಟು ಚರ್ಚಿಸಬೇಕಾದ ವರ್ತಮಾನದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಏಕೆಂದರೆ ಮೂರು ಕಾದಂಬರಿಗಳಲ್ಲಿ ತಮ್ಮ ಕಥಾ ಹಂದರದ ಪಾತಳಿಯಲ್ಲಿ ಸಾಮಾಜಿಕ ಕಳಕಳಿಯನ್ನು ಮನುಷ್ಯನ ಸಂಬಂಧಗಳ ಸ್ಪಂದನೆಯನ್ನು ಆರಂಭದಿಂದಲೂ ಬೆಳೆಸಿಕೊಂಡು ಬರುತ್ತವೆ. ನೆನಪುಗಳು ಮನುಷ್ಯನ ಸ್ಮೃತಿಯಲ್ಲಿ ನೆಲೆಗೊಳ್ಳುತ್ತವೆ.

ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ'ಯ ಹೂವಯ್ಯನ ಭಾವ ಪ್ರಪಂಚ, ಸೀತೆಯೊಂದಿಗಿನ ಸಂವಾದ, ಕಾರಂತರ 'ಮೂಕಜ್ಜಿಯ ಕನಸು'ಗಳ ಅತೀಂದ್ರಿಯ ಅನುಭವ ಕ್ಷಣಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಗುತ್ತಿ-ತಿಮ್ಮಿಯರು ಬೆಟ್ಟದ ನೆತ್ತಿಯ ಮೇಲೆ ಕಳೆಯುವ ರಾತ್ರಿ, ಐತ-ಪೀಂಚಲುವಿನ ಪ್ರಣಯ ದಾಂಪತ್ಯ, ಭೈರಪ್ಪನವರ ಪರ್ವ, 'ಮುಸ್ಸಂಜೆಯ ಕಥಾಪ್ರಸಂಗ'ದ ಮಂಜ-ಸಾವಂತ್ರಿಯರ ಪ್ರಣಯ ಪ್ರಸಂಗ, ಶಿವಾಜಿ ರಾಮಿಯರ ಪ್ರಸಂಗಗಳು ಹೀಗೆ ಕನ್ನಡ ಕಾದಂಬರಿ ವಲಯ ಕಟ್ಟಿಕೊಡುವ ಗಂಡುಹೆಣ್ಣಿನ ಸಂಬಂಧದ ನೆಲೆಗಳನ್ನು ನೋಡಬಹುದು. ಕುವೆಂಪು ಸೃಷ್ಟಿಸಿದ ಹೂವಯ್ಯ ಚಿನ್ನಮ್ಮ, ಕಾರಂತರು ಸೃಷ್ಟಿಸಿದ ತಮ್ಮ ಪಾತ್ರ ಪ್ರಪಂಚದ ವೃದ್ದೆಯರು ಗೋಕಾಕರ ನರಹರಿ ಇವರೆಲ್ಲಾ ಕನ್ನಡ ಜನರ ಮಾಧರಿಗಳೇ. ಆದರೆ ಅವರಿಗೆ ದೃಷ್ಟಿ ಬೊಟ್ಟಿಟ್ಟಂತೆ ನೈಜವಾಗಿಯೇ ಚಿತ್ರಿತವಾಗಿರುವ ಕ್ಯಾತ, ಸಹಜವಾಗೇ ರಭಸಗೊಳ್ಳುವ ರಂಗವ್ವ ಸಿನಿಕನಾಗಿಯೇ ಬಡಬಡಿಸುವ ಬಸವರಾಜ ಕೂಡ ಮತ್ತೆ ಮತ್ತೆ ನೆನಪಾಗುವ ಪಾತ್ರಗಳೇ.

'ಬಿರುಕು' ಕಾದಂಬರಿಯಲ್ಲಿ ಬದುಕಿನ ಯಾಂತ್ರಿಕತೆ, ಅಪರಿಪೂರ್ಣತೆ, ಕ್ಲೇಶಗಳಿಂದ ಬಿಡುಗಡೆ ಪಡೆಯಲು ಬಸವರಾಜ ರಾಜಭವನ ಪ್ರವೇಶಿಸುತ್ತಾನೆ. ಇದು ಫ್ಯಾಂಟಸಿತಂತ್ರ ಭೂತಕಾಲದ ಮರೆಯಲಾಗದ ನೆನಪುಗಳು. ಕನಸುಗಳು ವರ್ತಮಾನದ ಗೊಂದಲ ಮತ್ತು ಭವಿಷ್ಯದ ಅನಿಶ್ಚಿತಗಳಿಂದ ಬಿಡುಗಡೆಯಾಗಲು ಕನಸಿನ ಲೋಕಕ್ಕೆ ಹೋಗುವುದು ಫ್ಯಾಂಟಸಿಯ ಒಂದು ಮುಖ. "ಕಾದಂಬರಿಯ ಮೊದಲನೆಯ ನಾಲ್ಕು ಭಾಗಗಳ ಶುರುವಿನಲ್ಲಿ ಮತ್ತು ಕೊನೆಯಲ್ಲಿ ಬಸವರಾಜು ಒಂಟಿಯಾಗಿರುತ್ತಾನೆ. ಕೊನೆಯ ಎರಡು ಭಾಗಗಳಲ್ಲಿ ಅವನ ಜೊತೆ ಶಾಂತಾ ಇರುತ್ತಾಳೆ. ಇದು ಬಹುಶಃ ಕಾದಂಬರಿಯ ಆಶಯವನ್ನು ಸೂಚಿಸುತ್ತದೆ. "ಇದರಿಂದಾಗಿ ಬಸವರಾಜು ಕಾದಂಬರಿಯುದ್ದಕ್ಕೂ ತನಗೆ ತೃಪ್ತಿ ಕೊಡುವಂತಹ

ಸಂಬಂಧವೊಂದನ್ನು ಹುಡುಕುತ್ತಿದ್ದಾನೆ ಎಂದು ಹೇಳಬಹುದು. ಈ ಎಲ್ಲ ಭಾಗಗಳಲ್ಲೂ ಗಮನ ಸೆಳೆಯುವ ಮತ್ತೊಂದು ವಿಷಯ ಕಾದಂಬರಿಯಲ್ಲಿ ತೀವ್ರ ಅನುಭವಗಳು ವಹಿಸುವ ಪಾತ್ರ ಕಾದಂಬರಿಯ ಮೊದಲಿಂದ ಕೊನೆಯವರೆಗೂ ಅನುಭವ ತೀವ್ರತೆ ಒಂದೇ ಮಟ್ಟದಲ್ಲಿ ಆದ್ದರಿಂದ 'ನೆನಪು' ಮತ್ತು 'ಕನಸು', ನೆನಪುಗಳು ಎಂದು ತೋರುವ ಅನುಭವಗಳಿಗೆ ಇರುವ ಸಂಬಂಧಕ್ಕೆ ಕೊಂಚ ಗಮನ ಕೊಟ್ಟರೆ ಬಹುಶಃ ಕಾದಂಬರಿ ಬೆಳೆಯುವ ರೀತಿಯನ್ನು ಅರ್ಥಮಾಡಿಕೊಳ್ಳಬಹುದು."[೧೭] ಬಿರುಕುವಿನ ನಾಯಕ ಬಸವರಾಜನ ಆಲೋಚನೆ, ನೆನಪು ನಿರೀಕ್ಷೆಗಳು, ಅವನ ಪ್ರಜ್ಞೆಯ ಸ್ವರೂಪವನ್ನು ಅರ್ಥ ಮಾಡಿಸಲು ಲಂಕೇಶರು ಪ್ರಜ್ಞಾಪ್ರವಾಹ ತಂತ್ರವನ್ನು ತಂದಿದ್ದಾರೆ. ಇದು ಮಾನಸಿಕ ಕ್ರಿಯೆಗಳನ್ನು ಭಾಷೆಯಲ್ಲಿ ಹಿಡಿದಿಡುವ ಒಂದು ಪ್ರಯತ್ನವೇ ಆಗಿದೆ. ಈ ಮೂಲಕ ಮನುಷ್ಯನ ವಿಶಿಷ್ಟವಾದ ವ್ಯಕ್ತಿತ್ವವನ್ನು ವಾಚ್ಯವಾಗಿ ಚಿತ್ರಿಸಿರುವುದಕ್ಕಿಂತ ಧ್ವನಿಪೂರ್ಣವಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

'ಬಿರುಕು' ಕಾದಂಬರಿಯಲ್ಲಿ ವಾಸ್ತವ ಮತ್ತು ಭ್ರಮೆಗಳ ನಡುವೆ ತೇಲಾಡುವ ನಾಯಕ ಪಾತ್ರದ ಕೇಂದ್ರಕ್ಕೆ ಕಥೆಯ ಅಂತಃಸತ್ವಕ್ಕಿಂತ ತಂತ್ರಗಾರಿಕೆಯ ಚಮತ್ಕಾರವೇ ಕೇಂದ್ರಬಿಂದುವಿನಂತೆ ಕಾಣಿಸುತ್ತಾ ಇಲ್ಲಿ ಕನಸಾವುದು? ನನಸಾವುದು? ಎಂಬ ಸತ್ಯ ಓದುಗನನ್ನು ತಟ್ಟುವುದೇ ಇಲ್ಲಿ. ಕಥಾನಾಯಕನ ಮಾತುಕತೆ ಎಲ್ಲ ಕೇವಲ ಅವನನ್ನು ಅವನು ಸಮರ್ಥಿಸಿಕೊಳ್ಳುವುದಕ್ಕಾಗಿ ಕಲ್ಪಿಸಿಕೊಂಡಿವೆ. ಕಥನದ ಗಟ್ಟಿಪಾತ್ರವಾಗಿ ಹೊರಹೊಮ್ಮಿದ ಶಾಂತಾ ಎಂಬ ಪಾತ್ರ ಬಸವರಾಜನಿಗೆ ಅರ್ಥವಾಗದ ವ್ಯವಸ್ಥೆಯ ಕೃತಕತೆ ಆಕೆಗೆ ಗೊತ್ತಿದೆ. ಆದರೆ ಕಥೆಯ ನಾಯಕನಿಗೆ ಮತ್ತು ಲೇಖಕರಿಗೆ ಅದರ ಸ್ಪಷ್ಟತೆ ಎಲ್ಲಿ? ಯಾವಾಗ? ಎಷ್ಟು? ಎಂದು ಶೋಧಿಸಿದಷ್ಟೂ – ಸಮಸ್ಯೆ ಜಟಿಲವಾಗುತ್ತದೆ. ಇದು ಬಸವರಾಜುವಿಗೂ ಆ ಸಮಾಜಕ್ಕೂ ಇರುವ ವ್ಯಕ್ತಿತ್ವದ ನಡುವಿನ ನೆನಪುಗಳ ಬಿರುಕೇ? ಎಂಬುದನ್ನು ಶೋಧಿಸಬಹುದು.

ಇನ್ನು 'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ರಂಗವ್ವ ಚಿಕ್ಕ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡು ಅವನ ನೆನಪು ಮತ್ತೆ ಮತ್ತೆ ಕಾಡುತ್ತದೆ. ಅವಳಿಗೆ ಆ ನೆನಪಿನಲ್ಲಿಯೇ ತನ್ನ ಚಿಕ್ಕ ಮಗಳಾದ ಸಾವಂತ್ರಿಯನ್ನು ತನ್ನಂತೆಯೇ ಆತ್ಮ ವಿಶ್ವಾಸ ಉಳ್ಳವಳಾಗಿ ಬೆಳೆಸುತ್ತಾಳೆ. ಈ ಕಾದಂಬರಿಯಲ್ಲಿ ಆಧುನಿಕ ಮನಸ್ಸೊಂದು ಹಳ್ಳಿಯ ಬಾಲ್ಯದ ನೆನಪುಗಳನ್ನು ನಾಗರಿಕ ಸಮುದಾಯಕ್ಕೆ ನಿರೂಪಿಸುವ ವಿಧಾನವಾಗಿದೆ. ಲೈಂಗಿಕತೆ ಮತ್ತು ಗಂಡಿನ ನೆನಪಿನ ಚಿತ್ರಣ ಕಾದಂಬರಿಯಲ್ಲಿ ಸೈಕಲ್‌ನಲ್ಲಿ ಪ್ರಯಾಣಿಸುವ ಮಂಜ ಮತ್ತು ಸಾವಂತ್ರಿಯ ಸಂದರ್ಭದಲ್ಲಿ ಎದುರಾಗುತ್ತದೆ. ಸಿನಿಮಾಗೆ ಹೋಗುವ ಸಂದರ್ಭದಲ್ಲಿ ನಡೆಯುವ ಸಂದರ್ಭಗಳು ತುಂಟಾಟಗಳು ಎಲ್ಲವೂ ಮತ್ತೆ ಮತ್ತೆ ನೆನಪಾಗುತ್ತವೆ ಸಾವಂತ್ರಿಗೆ. ಒಂದು ಸಂದರ್ಭದಲ್ಲಿ

---

೧೭. ಡಾ. ಎಂ.ಜಿ.ಕೃಷ್ಣಮೂರ್ತಿ, ಆಧುನಿಕ ಭಾರತೀಯ ಸಾಹಿತ್ಯ, ಪುಟ ೨೩೧, ೧೯೭೦

ಸಾವಂತ್ರಿಯೇ ತನ್ನ ತಾಯಿಯನ್ನು ಅವಳ ಛಲವನ್ನು ಹೇಳುತ್ತಾಳೆ. 'ಅವ್ವ ಅದೇನನ್ನೂ ಗಾಢವಾಗಿ ಚಿಂತಿಸುವ ಹಾಗಿತ್ತು. ಸಾವಂತ್ರಿಗೆ ತಾನು ನೋಡದ ಅಪ್ಪ : ಆತ ಸತ್ತು ಹೋದ ಮೇಲೆ ಜೀವ ಉಳಿಸಿಕೊಳ್ಳಲು ಪಟ್ಟಪಾಡು ತನಗೆ ಯಾವುದಕ್ಕೂ ಕಡಿಮೆಯಿಲ್ಲದಂತೆ ನಡೆಸಿಕೊಂಡು ಬಂದ ಬಗೆ. ಅವಳನ್ನು ಕಿತ್ತು ತಿನ್ನಲು ಕಾದು ನಿಂತ ಊರ ಜನ ಎಲ್ಲವೂ ನೆನಪಾಗಿ, ಅವ್ವನ ಬಗ್ಗೆ ಅಪಾರ ಕರುಣೆ ಉಕ್ಕಿ ಬಂತು'. ಇಂತಹ ಛಲದ ಕಾರಣಗಳಿಂದಲೇ ಊರಿನ ಪ್ರಭಾವಿಗಳೆಲ್ಲರನ್ನು ಎದುರಿಸಿ, ಬಹಿಷ್ಕಾರದ ಹೆದರಿಕೆಗೂ ಬಗ್ಗದೆ ರಂಗವ್ವ ಸ್ವತಂತ್ರವಾಗಿ ಬದುಕುತ್ತಾಳೆ. ಒಂದು ನಿರ್ಣಾಯಕ ಘಟ್ಟದಲ್ಲಿ ರಕ್ತ ಚೆಲ್ಲಲೂ ಸಿದ್ದವಾಗಿರುವ ಗುಂಪನ್ನೆದುರಿಸಿ ತನ್ನ ಮಗಳಿಗೆ ಎಲ್ಲರೆದುರಿಗೆ ಅಂರ್ಜಾತಿಯ ವಿವಾಹವನ್ನು ನೆರವೇರಿಸಿ ಅದೇನಾಗುತ್ತೋ ನಾನೋಡ್ಕಂತಿನಿ ಸುಖವಾಗಿರು ನನ್ನ ಸುಡುಗಾಡು ಮಗಳೇ ಎಂದು ಅರ್ಧ ಬೈಯುತ್ತಾ ಅರ್ಧ ರೋಮಾಂಚನಗೊಳ್ಳುತ್ತಾ ಊರ ಹಲವರನ್ನು ತನ್ನ ಶಾಪದಿಂದ ಮಲಿನಗೊಳಿಸತೊಡಗಿದಳು. ಇದು ಬದುಕುವ ಛಲದ ರೋಮಂಚನಕಾರಿ ದೃಶ್ಯ ಇಂತಹ ಛಲವಿಲ್ಲದಿರುವುದರಿಂದಲೇ ಸ್ವಭಾವತಃ ಸಾತ್ವಿಕರೂ, ಸಜ್ಜನರೂ ಆದ ನಂದ್ಯಪ್ಪ – ನಿಂಗವ್ವ ಅವರ ಬದುಕು ದುಸ್ತರವಾಗುತ್ತದೆ ಮತ್ತು ಶಿವಿ ಅಸಹಾಯಕಳಾಗಿ ಸಾವನ್ನಪ್ಪಬೇಕಾಗುತ್ತದೆ. ಇಂತಹುದೇ ಘಟನೆ ಅಕ್ಕ ಕಾದಂಬರಿಯಲ್ಲಿ ಕ್ಯಾತ–ದೇವೀರಿ ಹಾಗೂ ಸಂಪೂರ್ಣಮ್ಮ ರಂಗಜೆಟ್ಟಿ ಇವರುಗಳಲ್ಲಿ ನಾವು ಕಾಣುತ್ತೇವೆ. ಛಲ–ಕ್ರೋಧ–ಹಠಗಳಿಲ್ಲದ ಒಳ್ಳೆಯತನ ಇವೆಲ್ಲವೂ ನೆನಪುಗಳಾಗೆಯೇ ಓದುಗರಲ್ಲಿಯೂ ಕಾಡುವಂತೆ ನಿರೂಪಕರು ಕಥೆಯನ್ನು ಎಣೆದಿದ್ದಾರೆ.

ಕರಿಯ ಕಂಡ ಪ್ರೇಮ ಪ್ರಕರಣದಲ್ಲಿ ರಂಗವ್ವಗೆ ಏನೋನೋ ನೆನಪುಗಳು ಕಾಡಿದವು "ರಂಗವ್ವ ಮಗಳ ಆಪಾದನೆಗೆ ತಬ್ಬಿಬ್ಬಾಗಿ ಕೂತಲ್ಲೇ ಕೂತಳು ಶಾಸ್ತ್ರಿಯನ್ನು ನೋಡಿ ಆಕೆಗೆ ಮಲಗುವ ಆಶೆ ಆಗೀಗ ಬಂದದ್ದು ನಿಜವಾದರೂ ಮನಸೊಪ್ಪಿ ಅವನ ಜೊತೆ ಮಲಗುವುದು ಮತ್ತು ಸತ್ತ ಗಂಡನ ನೆನಪಿಗೆ ಅವಮಾನ ಮಾಡುವುದು ಅವಳಿಗೆ ಸಾಧ್ಯವಿರಲಿಲ್ಲ. ಮಾಯಾಮಾಟ ಮಾಡಬಲ್ಲ ಶಾಸ್ತ್ರಿಯಗಳ ಮನಸ್ಸಿನಲ್ಲಿ ಈ ಅವಮಾನವನ್ನು ಬಿತ್ತಿರಬಹುದೆಂದು ಹೆದರಿಕೊಂಡಳು."[೧೮] ಈ ರೀತಿಯಲ್ಲಿ ಗಂಡಿನ ನೆನಪುಗಳು ರಂಗವ್ವನಿಗೆ ಕಾಡತೊಡಗಿದವು.

ಗಂಡು ದಿಕ್ಕಿಲ್ಲದ ತನ್ನ ಮನೆ ಹಣವನ್ನು ಕಾಯಲು ಕನಿಷ್ಠ ಪ್ರಾಮಾಣಿಕ ವಿಶ್ವಾಸವನ್ನು ತೋರಿಸುತ್ತಿದ್ದು ಸಾವಂತ್ರಿಗೂ ಪ್ರಿಯವಾಗಿದ್ದ ಮಂಜನಂಥವನೇ ಸರಿ ಎಂದು ಕಂಡು ಬಂದಿದ್ದರಿಂದ ರಂಗವ್ವ ಹಾಗೆ ಮಾಡಿದಳು ಎಂದು ಯೋಚಿಸಬಹುದಾದರೂ ನೈತಿಕವೆನ್ನಬಹುದಾದ ಬೆಳವಣಿಗೆಯನ್ನು ಇಲ್ಲಿ ಗುರುತಿಸಬಹುದು. "ಏಕೆಂದರೆ ರಂಗವ್ವನ ನಡವಳಿಕೆಯನ್ನು ಸಮಾಜದ ಕಟ್ಟಳೆ ಅಥವಾ ಮೌಲ್ಯ ಕಲ್ಪನೆಗಳ ಹಿನ್ನೆಲೆಯಲ್ಲಿ ಅಥವಾ ಸ್ವತಃ

---

೧೮. ಪಿ.ಲಂಕೇಶ್. ಮುಸ್ಸಂಜೆಯ ಕಥಾಪ್ರಸಂಗ, ಪುಟ, ೨೯, ೧೯೯೦

ಅವಳ ನೈತಿಕತೆಯ ಸಂಕೀರ್ಣತೆಯಲ್ಲಿ ಅರ್ಥ ಪಡೆಯುವಂಥದ್ದು ಆದರೂ ಅದು ವ್ಯವಸ್ಥೆಯ ಬಗ್ಗೆ ಬದುಕಿನ ಬಗ್ಗೆ ಬಹುಮುಖ್ಯ ಸ್ಪಂದನೆಯೊಂದನ್ನು ತೋರಿಸುತ್ತದೆ. ಇದರ ಜೊತೆಗೆ ಶಿವಿಯ ಸಾವಿನ ನಂತರ ಮತ್ತು ಭರ್ಮಣ್ಣ ಹಾಗೂ ಇತರರ ಕ್ರೌರ್ಯ ಹೆಚ್ಚುತ್ತಾ ಹೋದ ನಂತರ ಅವಳಲ್ಲಿ ಕಾಣುವ ಬದಲಾವಣೆಗಳು ಅವಳ ಈ ನಿರ್ಧಾರದ ಹಿನ್ನೆಲೆಯನ್ನು ಸೂಚಿಸುತ್ತದೆ. ಇಲ್ಲಿಯ ಇನ್ನೊಂದು ವಿಶೇಷತೆಯೆಂದರೆ ತನ್ನ ಕಾದಂಬರಿಯ ಇತರ ಶ್ರೇಷ್ಠ ಪಾತ್ರಗಳಲ್ಲಿಯಂತೆ ಅವಳಲ್ಲಿಯೂ ಅತ್ಯಂತ ತೀವ್ರವಾಗಿರುವುದು ಬದುಕಬೇಕೆನ್ನುವ ಪ್ರವೃತ್ತಿ. ಲಂಕೇಶರ ಈವರೆಗಿನ ಸಾಹಿತ್ಯದಲ್ಲಿಯೂ ಇದು ಒಂದು ಹೊಸ ಸಾಧ್ಯತೆಯನ್ನೂ ತೋರಿಸುತ್ತದೆ. ಬದುಕಿನ ಬಗ್ಗೆ ಇತ್ಯಾತ್ಮಕವಾದ ಸಮರ್ಥನೆ ಮತ್ತು ಅವರು ಇಟ್ಟ ಹೆಜ್ಜೆ ಇದಾಗಿದೆ."[೧೯] ಕಂಬಳ್ಳಿಯ ಸಮಸ್ತ ಜನರ ಬದುಕಿನ ಗುಣ ಸ್ವಭಾವಗಳು, ಘಟನಾವಳಿಗಳು ನೆನಪುಗಳ ಸರಮಾಲೆಯಾಗಿ ಉಳಿಯುತ್ತವೆ. ಗ್ರಾಮ ಭಾರತದ ಬದುಕನ್ನೇ ಕೇಂದ್ರವಾಗಿಸಿಕೊಂಡು ಕಥೆ ನಡೆದು ಇಡೀ ಹಳ್ಳಿಯನ್ನು ವಿಸ್ತರಿಸಿಕೊಂಡು ಘಟನಾವಳಿಗಳನ್ನು ಒಟ್ಟಂದದಲ್ಲಿ ಕಟ್ಟಿಕೊಡುವ ಕ್ರಮವನ್ನು ಇಲ್ಲಿ ಕಾಣಬಹುದು.

'ಅಕ್ಕ' ಕಾದಂಬರಿಯು ಕ್ಯಾತನ ಪ್ರಜ್ಞೆಯ ಮೂಲಕ ಅವನದೇ ಆದಂತಹ ಸರಳ ಭಾಷೆಯಲ್ಲಿ ಅವನ ಅನುಭವಗಳನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ನವ್ಯದ ಇತರ ಕಾದಂಬರಿಗಳಿಗಿಂತ ಭಿನ್ನವಾಗಿರುವ ಈ ಕೃತಿ ಅಕ್ಕ-ತಮ್ಮನ ಸಂಬಂಧದ ವಿಭಿನ್ನ ನೆಲೆಗಳನ್ನು ತೀರಾ ಸರಳವಾಗಿ ವಿಶಿಷ್ಟವಾಗಿ ತಮ್ಮ ಮುಂದಿಡುತ್ತದೆ. ಬಾಲ್ಯದ ಬೆಚ್ಚಗಿನ ಅನುಭವಗಳು ಮುಗ್ಧತೆ ದೂರವಾಗಿ ವ್ಯವಸ್ಥೆಯ ಕಪಿ ಮುಷ್ಠಿಗೆ ಸಿಲುಕಿ ಸಂಬಂಧಗಳನ್ನೇ ಕ್ರಮೇಣವಾಗಿ ಮರೆಯುವ ಸ್ಥಿತಿ ತಲುಪುತ್ತಾರೆ. ಹಾಗೆ ದೂರವಾಗಿ ವ್ಯವಸ್ಥೆಯು ಕಪಿಮುಷ್ಠಿಗೆ ಸಿಲುಕಿ ಸಂಬಂಧಗಳನ್ನು ಕ್ರಮೇಣವಾಗಿ ಮರೆಯುವ ಸ್ಥಿತಿ ತಲುಪುತ್ತಾರೆ. ಹಾಗೆ ತಲುಪಿದರೂ ಬದುಕನ್ನು ಪ್ರಾಮಾಣಿಕವಾಗಿ ಎದುರಿಸಿ ಪ್ರೀತಿ ಪೂರ್ವಕವಾಗಿ ಅದನ್ನು ಒಪ್ಪಿಕೊಳ್ಳುವ ಮನಸ್ಥಿತಿ ಪಡೆಯುತ್ತಾರೆ ಎಂಬುದಕ್ಕೆ 'ಅಕ್ಕ' ಕೃತಿ ನಿದರ್ಶನವಾಗಿದೆ. "ಖಡವಾ ನಾಗ್ರಗಳೆಲ್ಲ ರಕ್ತ ಸುರಿಸಿ ಹೋದ ಮೇಲೆ ದೇವೀರಿ ಒಂದೆರಡು ದಿನ ಎಲ್ಲೂ ಹೋಗಿಲ್ಲ ಸೋಮಾರಿ ರೌಡಿ ಹಂಗೆ ಮೈ ತೊಳಕೊಳ್ಳದೆ ಹಲ್ಲು ಉಜ್ಜಿಕೊಳ್ಳದೆ ಬಟ್ಟೆ ಸೈತ ಸರಿಯಾಗಿ ಹಾಕಿಕೊಳ್ಳದೆ ಮಲಗಿರ್ತಿದ್ಲು. ಇಲ್ಲದಿದ್ರೆ ಪುಸ್ತಕದ ಗೊಂಬೆ ನೋಡ್ತಾ ಹಾಡುಗುಣುಗ್ತಾ ಕುಂತಿರ್ತಿದ್ಲು".[೨೦] ದೇವೀರಿಗೆ ಅವಳದೇ ಆದ ಜಗತ್ತಿನಲ್ಲಿ ತಾನು ಹೇಗಿರಬೇಕು? ತನ್ನ ತನವೇನು? ಎಂಬುದನ್ನು ಕೊಳಗೇರಿಯಲ್ಲಿ ಬದುಕಿನ ಎಲ್ಲಾ ಮಗ್ಗಲುಗಳಲ್ಲಿ ಆಲೋಚನೆ ಮಾಡುತ್ತಾಳೆ. ಅವರಿಗೆ ಪದೇ ಪದೇ ಕಾಡುವ ಅಂಶಗಳೆಂದರೆ ಖಡವಾನಾಗ್ರಗಳ ಜೊತೆಗಿನ ನೆನಪುಗಳು ದೇವೀರಿಯ ಮಾನಸಿಕ ಸ್ಥಿತಿಯನ್ನು

---

೧೯. ರಾಜೇಂದ್ರ ಚೆನ್ನಿ, ಸಾಹಿತ್ಯ ವಿಮರ್ಶೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೧೯೮, ೧೯೮೭

೨೦. ಪಿ.ಲಂಕೇಶ್, ಅಕ್ಕ, ಪುಟ ೫೨, ೨೦೧೧

ಲೇಖಕರು ಕ್ಯಾತನ ಮೂಲಕ ನಿರೂಪಿಸುತ್ತಾರೆ. ಒಮ್ಮೆ "ದೇವೀರಿ ದೀಪ ಆರಿಸಿದಳು ಅದು ಕ್ಯಾತನಿಗೆ ಸುಮ್ಮನೆ ಮಲಗಲು ಸೂಚನೆಯಾಗಿತ್ತು ದೀಪ ಆರಿಸಿ ತನ್ನ ಸೀರೆ ಕುಪ್ಪಸ ಸಡಿಲ ಮಾಡಿಕೊಂಡ ಸದ್ದು ಕೂಡ ಕ್ಯಾತನಿಗೆ ಕೇಳಿಸುತ್ತಿತ್ತು ಇನ್ನೊಂದೇನು ಗೊತ್ತ. ದೀಪ ಆರಿಸಿದ ಕೂಡ್ಲೆ ಒಂತರಾ ವಾಸನೆ ಮೂಗನ್ನು ಮುತ್ತಿಕೊಳ್ತು ಅದು ದೇವೀರಿಯ ಮೈ ವಾಸನೆ, ಚರಂಡಿಯ ಗಲೀಜಿನ ವಾಸನೆ, ಪದ್ದಿಯ ಸೆಂಟಿನ ನೆನಪಿನ ವಾಸನೆ– ಕ್ಯಾತನ ಹೆದರಿಕೆಗಳೆಲ್ಲದರ ಮೊತ್ತದ ವಾಸನೆ ಯಾವುದಾದರೂ ಆಗಿರಬಹುದಿತ್ತು. ಕ್ಯಾತ ಅಕ್ಕನ ಹತ್ತಿರ ಮಲಗಲು ಯತ್ನಿಸಲಿಲ್ಲ ಅವನನ್ನು ತುಂಬಿಕೊಂಡಿದ್ದ ಭಯ. ಪ್ರಶ್ನೆ ನೋವುಗಳಲ್ಲಿ ಅವನನ್ನು ದೂರ ಇಟ್ಟಿದ್ದಂಗೆ ಅನ್ನಿಸ್ತು"[೨೧] ಇಲ್ಲಿ ಕ್ಯಾತನ ಮಾತಿನ ಮೂಲಕ ದೇವೀರಿಯ ಲೈಂಗಿಕತೆಯ ಹಪಹಪಿಕೆ, ಗಂಡಿನ ನೆನಪುಗಳ ಚಿತ್ರಣವನ್ನು ಹೇಳಲು ಹೊರಟಿದ್ದಾರೆ ಲೇಖಕರು ಮುಂದುವರೆದು ನೋಡಿದಾಗ "ನಾನೊಬ್ಬನೇ ಕೂತು ಅಳ್ತಿದ್ದೆ. ಅತ್ತೂ ಅತ್ತೂ ಪದ್ದೀನೂ ಇಲ್ವಲ್ಲ ಅಂತ ಕತ್ತೆತ್ತಿ ನೋಡ್ತೇನೆ ಪದ್ದಿ ನಿಂತಿದ್ದಾಳೆ! ನನ್ನ ಮುಖವೆಲ್ಲ ಕಣ್ಣೀರಾದದ್ದು ನೋಡಿ ಪದ್ದಿ ನನ್ನ – ಅಂದರೆ ಈ ಪ್ಯಾದೆ ಕ್ಯಾತನ ಕೂದಲಲ್ಲಿ ಕೈ ಹಾಕಿ ಕತ್ತು ಮುಕಾನೆಲ್ಲ ಸವರಿ 'ಏಲೋಕ್ಯಾತ' ಅಂತಾಳೆ. ನನ್ನ 'ಜಾಣ ಕೃಷ್ಣ' ಅಂತಾಳೆ. ಕೃಷ್ಣ ಅಂದ ಕೂಡ್ಲೆ ನನಗೆ ಬೇಜಾನ್ ಸಂತೋಸ ಅಂತ ಹೇಳಿದೆನಲ್ಲ ಸಾರ್. ಪದ್ದಿ ಏನು ಕೇಳಿದ್ರೂ ಕೊಟ್ಟೇನು ಅಂತ ಎದ್ದೆ ಅವಳು ನನ್ನ ಕೈ ಹಿಡಿಕೊಂಡ್ಳು 'ಐಸ್ ಕ್ರೀಂ ಕೊಡಿಸ್ತಿನಿ ಬಾ' ಅಂದ್ಲು. ಇದ ಸಾರ್ ನಂಗೆ ವಿಸ್ನು, ಸ್ರೀನಾತ್, ಶಂಕರನಾರಾಯಣ, ರಮೇಶ್ – ಇವರೆಲ್ಲರ ಜೊತೆ ರಾಣಿ ಹಂಗೆ ಓಡಾಡಬಹುದಾದ ಪದ್ದಿ ನನ್ನ ಹಚ್ಕೊಂಡ್ ಪ್ರಾಣ ತಿಂತಿದ್ಲು"[೨೨]

ಇಲ್ಲಿ ಕ್ಯಾತ ಲೈಂಗಿಕವಾಗಿ ಪ್ರೇರೆಪಿತನಾಗ ಹೊರಟು ತನ್ನಲ್ಲೆ ತಾನು ಬೀಗುತ್ತಾನೆ. ಪದ್ದಿಗೂ ಕೂಡ ಇಡೀ ಕಾದಂಬರಿಯಲ್ಲಿ ಗಂಡಿನ ನೆನಪುಗಳು ಕಾಡತೊಡಗಿವೆ. ಇವೆಲ್ಲವನ್ನು ಸ್ನೇಹಿತೆ ಪದ್ದಿಯ ಜೊತೆಗಿನ ಸಹವಾಸದಲ್ಲಿ ಮರೆಯುತ್ತಾನೆ. ಅಕ್ಕನ ನೀತಿಗೆಟ್ಟ ಜೀವನವನ್ನು ವಿರೋಧಿಸುವ ಈತ ಮುಂದಾಗುವ ಸಾಧ್ಯತೆಗಳನ್ನು ಎದುರುಗೊಳ್ಳಲು ಸಿದ್ದನಾಗುತ್ತಾನೆ. ದೇವೀರಿಯ ಶಿಸ್ತು ಮತ್ತು ಕಟ್ಟುಪಾಡುಗಳಿಲ್ಲದ ಜೀವನ ಅವಳನ್ನು ತಪ್ಪು ದಾರಿಯಲ್ಲಿ ಕರದೊಯ್ಯಲು ನಿರ್ಣಯಿಸುತ್ತದೆ ಏಳಿಕೇಳಿ ಕೊಳಗೇರಿಯ ಜೀವನ ತಾನೆ ಕ್ಯಾತನಿಗೆ ಇವೆಲ್ಲದರ ಅರಿವು ಬರದಿರಲೆಂದು ಅವನಿಗೆ ಪ್ರೀತಿ–ಸಿಟ್ಟು ಎಲ್ಲವನ್ನು ತೋರಿಸಿ ಮೇನೇಜ್ ಮಾಡುತ್ತಾಳೆ.

ಹಸಿವು, ನೀರಡಿಕೆ, ನಿದ್ರೆಗಳಂತೆ ಮೈಥುನ ಕೂಡ ಮಾನವನ ಪ್ರಾಥಮಿಕ ಅವಶ್ಯಕತೆಗಳಲ್ಲಿ ಒಂದಾಗಿದೆ. ಹಸಿವು, ನಿದ್ರೆ, ನಗು–ಅಳುಗಳನ್ನು ಬಲವಂತವಾಗಿ ನಿಯಂತ್ರಿಸಿದರೆ ಶರೀರ ಹಾಗೂ

---

೨೧. ಪಿ.ಲಂಕೇಶ್, ಅಕ್ಕ, ಪುಟ ೭೧, ೨೦೧೧
೨೨. ಪಿ.ಲಂಕೇಶ್, ಅಕ್ಕ, ಪುಟ ೧೦೮, ೨೦೧೧

ಮನಸ್ಸುಗಳ ಮೇಲೆ ವ್ಯತಿರಿಕ್ತವಾದ ಪರಿಣಾಮ ಉಂಟಾಗುತ್ತದೆ. ಕಾಮವು ಇದಕ್ಕೆ ಹೊರತಾದುದಲ್ಲ ವಯೋಸಹಜ ಕಾಮನೆಗಳು ಸಂತೃಪ್ತಗೊಂಡಾಗ ಶಾರೀರಿಕ ಹಾಗೂ ಮಾನಸಿಕ ಆರೋಗ್ಯ ಹೆಚ್ಚುತ್ತದೆ. 'ಸುಭದ್ರ' ಕಥೆಯ ನಾಯಕಿ ಯಜಮಾನ ಸಂಸ್ಕೃತಿಯ ಕಟ್ಟುಪಾಡುಗಳಿಗೆ ಬದ್ಧವಾಗಿ – ತನ್ನ ವೈಯಕ್ತಿಕ ಆಸೆ–ಆಕಾಂಕ್ಷೆಯನ್ನು ಹತ್ತಿಕ್ಕುತ್ತಾಳೆ. ಮದುವೆಯಾದ ಹೊಸತರಲ್ಲೇ ಪತಿಯನ್ನು ಕಳೆದುಕೊಂಡು ಗಂಡನನ್ನು ನೆನಪಿಸಿಕೊಂಡೇ ಶಾರೀರಿಕವಾಗಿ ಹಾಗೂ ಮಾನಸಿಕವಾಗಿ ತನ್ನ ಬಯಕೆಗಳನ್ನು ಬಲವಂತವಾಗಿ ನಿಯಂತ್ರಿಸುತ್ತಾಳೆ. ಸಾಮಾಜಿಕ ಪ್ರತಿಷ್ಠೆಗಾಗಿ ವಿಧವೆಯ ಪಟ್ಟ ಒಂದು ಕಡೆಯಾದರೆ ದೈಹಿಕ ಕಾಮನೆ ಮತ್ತೊಂದು ಕಡೆ. ಹಗಲು ರಾತ್ರಿಗಳು ಈ ದೃಶ್ಯದಿಂದ ನರಳುತ್ತಾಳೆ. ಮನಸ್ಸು ಹಾಗೂ ಸಮಾಜದ ನೀತಿ ನಿಯಮಗಳ ಸಂಘರ್ಷ ಅವಳಲ್ಲೊಂದು ಒಡಕು ವ್ಯಕ್ತಿತ್ವವನ್ನು ಸೃಷ್ಟಿಸುತ್ತದೆ. ನಿದ್ದೆಯೇ ತನ್ನ ಉಡುಪು, ಕಾಂಡೋಮ್ ಹಾಗೂ ಸಾರಾಯಿ ಬಾಟ್ಲಿಗಳನ್ನು ಬಿಸಿಲ ಮಚ್ಚಿನ ಮೇಲೆ ತಾನೇ ಎಸೆದು ನೆರೆಮನೆಯವರು ಇದನ್ನು ಎಸೆದಿದ್ದಾರೆ ಎಂದು ಪತ್ರಕರ್ತ ಗೆಳೆಯ ಹೆಗಡೆಯಲ್ಲಿ ಆರೋಪಿಸಿದ್ದಾಳೆ. ಅವಳು ಎಸೆದ ವಸ್ತುಗಳು ಅವಳ ಪುರಷ ಸಾಂಗತ್ಯದ ಬಯಕೆಯನ್ನು ಸೂಚಿಸುತ್ತವೆ. ತನ್ನ ಒಡಕು ವ್ಯಕ್ತಿತ್ವದ ವಿವರಗಳ ಅರಿವಿಲ್ಲದೆ ನರಳುವ ಸುಭದ್ರೆಗೆ ಹೆಗಡೆಯ ಪತ್ತೇದಾರಿಕೆ ಬಿಡುಗಡೆಯನ್ನು ನೀಡುತ್ತದೆ. ಅತೃಪ್ತ ಬಯಕೆ, ಗಂಡಿನ ನೆನಪು, ಸಮಾಜದ ಭಯ ಒತ್ತಡ ಸುಭದ್ರೆಯ ನಿಜ ಜೀವನದಲ್ಲಿ ಅಡ್ಡಿ–ಆತಂಕಗಳನ್ನು ಸೃಷ್ಟಿಸಿತ್ತು. ಆದ್ದರಿಂದ ಈ ಎಲ್ಲಾ ದ್ವಂದ್ವ ಗೊಂದಲಗಳ ಸೂಕ್ತ ಕಾಲದಲ್ಲಿ ಹೊರಹಾಕಲ್ಪಟ್ಟದ್ದರಿಂದ ಶರೀರ ಹಾಗೂ ಮನಸ್ಸು ಒತ್ತಡ ಕಳೆದು ನಿರಾತಂಕವಾಗುತ್ತದೆ ಎಂಬ ವೈಜ್ಞಾನಿಕ ವಿವರವನ್ನು 'ಸುಭದ್ರ' ಕಥೆಯ ನಾಯಕಿ ಕಟ್ಟಿಕೊಡುತ್ತಾಳೆ.

ಕಥೆಗಾರರು ತಮ್ಮ ಆತ್ಮಕಥನದಲ್ಲಿ ನಿಷ್ಠೆ ಹಾಗೂ ವಾಂಛಲ್ಯಗಳ ಏಕಕಾಲದ ಸಾಂಗತ್ಯದಲ್ಲಿ ಬದುಕುವುದು ವ್ಯಕ್ತಿಯ ಪಾಲಿಗೆ ದುರಂತವೇ ಸರಿ ಎಂಬ ಭಾವವನ್ನು ವ್ಯಕ್ತಪಡಿಸುತ್ತಾರೆ. ಇಂತಹ ದುರಂತಕ್ಕೆ ಈಡಾಗುವವಳು 'A Sucidenote' ಕಥೆಯ ಮೀನಾ. ಮನೆಯಲ್ಲಿನ ಅಸಾಯಕತೆಯಿಂದಾಗಿ ವಿಧುರನೊಬ್ಬನನ್ನು ಮದುವೆಯಾದರೂ ಮದುವೆಗೆ ಮೊದಲು ಗೆಳೆಯನಾಗಿದ್ದ. ವಿಶ್ವನಾಥನ ಜೊತೆ ಸಂಪರ್ಕವಿರಿಸಿಕೊಳ್ಳುತ್ತಾಳೆ. ಪತಿಯ ಪ್ರೀತಿಗೆ ನಿಷ್ಠೆ ತೋರಿಸುತ್ತಲೇ ಜಗ್ಗುವಿನತ್ತ ತನ್ನಿಚ್ಛೆ ತೋರುತ್ತಾಳೆ. ಪತಿಗೆ ತನ್ನಿಂದ ಬಂದ ಅಪ ಖ್ಯಾತಿಯಿಂದಾಗಿ 'Death Note' ಬರೆದಿಟ್ಟು ಸಾಯುತ್ತಾಳೆ. ವಿವಾಹಬಾಹಿರ ಸಂಬಂಧ ತಪ್ಪೆಸಗಿದಾಗ ಪಶ್ಚಾತ್ತಾಪದಿಂದ ಸಾವಿನತ್ತ ಪಲಾಯನ ಮಾಡುತ್ತಾಳೆ. ಆತ್ಮ ಸಾಕ್ಷಿಯ ಮುಂದೆ ವಂಚನೆಗೆ ಸೋಲು ಖಚಿತ ಎಂಬುದು ಕತೆಗಾರನ ನಿಲುವಾಗಿದೆ.

'ಜೊತೆಗಾರ' ಕತೆಯ ನಾಯಕ ಪ್ರಸಿದ್ಧ ಸಾಹಿತಿ ತನ್ನ ಮುದಿ ವಯಸ್ಸಿನಲ್ಲಿ ಹಳ್ಳಿಗೆ ಹೋಗಿ ಜೋಸೆಫೈನ್ ಎಂಬ ಹರೆಯದ ಹುಡುಗಿಯೊಂದಿಗೆ ಚೆಲ್ಲಾಟವಾಡುತ್ತಾನೆ. "ಜೋಸಫೈನ್

೧೪-೧೫ರ ಹುಡುಗಿ ಡೆಲಿವರ್ ಮಿ ಅನ್ನುವಷ್ಟರಲ್ಲೇ ಅವಳ ನಾಲಿಗೆ ಕುಂಟುತ್ತಿತ್ತು. 'ಜೋಸಿ ಜೊಸಿ' ಎಂದು ಬಿಳಿಯ ಕೂದಲಲ್ಲಿ ತಮ್ಮ ಬೆರಳು ತೂರಿಸಿಕೊಂಡು ರೋಸಿದ ಮುಖ ಮುದ್ರೆಯಲ್ಲಿ ತಾವು ಕೂತಲ್ಲಿಂದ ಎದ್ದು ಆಕೆಯ ಹತ್ತಿರ ಹೋಗಿ "ನೋಡು ನನ್ನ ನಾಲಿಗೆ ನೋಡು ಅದು ಹ್ಯಾಗೆ ಹೊರಳುತ್ತೆ ನೋಡು ಹಾಗೆ ಹೇಳಬೇಕು" ಎಂದು ನಾಯಕರು ಅವಳ ಭುಜಕ್ಕೆ ಕೈಯಿಟ್ಟರು ಅವಳು ನಂಗೆ ಹೇಳಾಕೆ ಆಗಾಕಿಲ್ಲ ದಣ್ಯಾರ – ಆ ಫಾದರ್ ಬೈದರೆ ಬೈಲಿ ಬಿಡ್ರಿ ಅಂದಳು. ನಾಯಕರು ತಮ್ಮ ಕೈ ಹಿಂದಕ್ಕೆ ತೆಗೆದುಕೊಂಡು ಅದನ್ನು ನಾಳೆ ಕೊಚ್ಚಿದರಾಗ್ತದೆ ಬಿಡೇ ಜೋಸಿ ಬಾ. ಕುತ್ಕೊ ನಿಮ್ಮ ಫಾದರ್ ಏನು ತಿಳ್ಕೋತಾರೆ ನೋಡು ನಾನವಳಿಗೆ ಕಲಿಸ್ತೇನೆ ಅಂದಿದ್ದೇನೆ. ಚರ್ಚಿಗೆ ಹತ್ತು ಸಾವಿರ ಕೊಟ್ಟಿದ್ದೇನೆ. ನಿನ್ನ ಮ್ಯಾಲೆ ಹಣ ಚೆಲ್ಲಿದ್ದೇನೆ."[೨೩] ಲೈಂಗಿಕತೆಯ ಮೂಲಕ ಕಾಮವನ್ನು ಈ ಕಥೆಯಲ್ಲಿ ನಕಾರಾತ್ಮಕವಾಗಿ ಲೇಖಕರು ಚಿತ್ರಿಸಿದ್ದಾರೆ. ಜೊತೆ ನೆನಪುಗಳು ಪದೆ ಪದೇ ಕಾಡುವ ಚಿತ್ರಣವನ್ನು ಇಲ್ಲಿ ತರುತ್ತಾರೆ.

ನಾನೆಂಬ ಅಹಂನಲ್ಲಿ ಮೆರೆಯುವ ಎಂ.ಎಲ್. ಗೋವಿಂದರಾಜು ತೀವ್ರ ಅನಾರೋಗ್ಯದ ಕಾರಣಕ್ಕೆ ಆಸ್ಪತ್ರೆಗೆ ಸೇರುತ್ತಾನೆ. ಆಸ್ಪತ್ರೆಯಲ್ಲಿ ತನ್ನ ಮಂಚಕ್ಕೆ ತೂಗುಹಾಕಿದ್ದ ಕಾಯಿಲೆಯ ಫಲಕದಲ್ಲಿ ತನ್ನ ಇನ್ಸಿಯಲ್ ಬಿಟ್ಟು ಹೋಗಿದ್ದಕ್ಕೆ ನರ್ಸ್ ಜೊತೆಗೆ ಜಗಳವಾಡಿ ವೈದ್ಯರಿಗೆ ಸಹರೋಗಿಗಳಿಗೆ ತೊಂದರೆ ಕೊಡುತ್ತಾನೆ. ಒಣ ಪ್ರತಿಷ್ಠೆಯೊಂದಿಗೆ ದರ್ಪದಿಂದ ವರ್ತಿಸುವ ಗೋವಿಂದರಾಜು ಅದೇ ದಿವಸ ಹೃದಯಾಘಾತದಿಂದ ಸಾವನ್ನು ಅಪ್ಪುತ್ತಾನೆ. ತನ್ನ ಕಾಯಿಲೆಯ ತೀವ್ರತೆಯ ಬಗ್ಗೆ ತಿಳಿದಿದ್ದರೂ ಸಾವಿನ ಸಾಮಿಪ್ಯವನ್ನು ಅರಿತಿದ್ದರು ಅದರ ಅರಿವನ್ನು ಮರೆತಂತೆ ಅಸಂಗತವಾಗಿ ವರ್ತಿಸುವುದು ಮನುಷ್ಯನ ಸಹಜ ಸ್ವಭಾವ. ಪ್ರತಿವ್ಯಕ್ತಿಯ ಈ ಅಸಂಗತ ಸ್ವಭಾವ ನವ್ಯ ಸಾಹಿತ್ಯದ ವಸ್ತುವಾಗಿದೆ. ಅಹಂಕಾರದಿಂದ ವರ್ತಿಸಿ ತನ್ನೆದುರೇ ಸತ್ತ ಗೋವಿಂದರಾಜುವಿನ ಉದಾಹರಣೆ ಎದುರಿಗಿದ್ದರೂ ನಿರೂಪಕ ನರ್ಸ್ ಸರೋಜಾಳ. ಸಾಂಗತ್ಯಕ್ಕಾಗಿ ರೋಗವನ್ನು ಬಯಸಿ ಆಸ್ಪತ್ರೆಯಲ್ಲಿ ದಾಖಲಾಗಲು ಬಯಸುತ್ತಾನೆ. "ನನ್ನ ಹತ್ತಿರ ನರ್ಸ್ ಒಬ್ಬಳು ಬಂದಳು ಎತ್ತರವಾಗಿ, ಆರೋಗ್ಯವಾಗಿ, ಸುಂದರವಾಗಿದ್ದಳು. ಆಸ್ಪತ್ರೆ ಡಾಕ್ಟರುಗಳ ಬಗ್ಗೆ ಪ್ರಶ್ನೆ ಹಾಕಿ ನನ್ನ ಕುತೂಹಲ ನೀಗಿಕೊಂಡೆ. ಅವಳು ತುಂಬ ಒಳ್ಳೆಯವಳ ಹಾಗಿದ್ದಳು. ಅವಳ ಹಲ್ಲು ಮೋಹಕವಾಗಿದ್ದವು ಮತ್ತೆ ಕೆಲವು ಪ್ರಶ್ನೆ ಕೇಳಿದೆ. ಬೇಸರವಿಲ್ಲದೆ ಉತ್ತರಿಸಿದಳು. ನನ್ನ ಅಂಗೈ ಮೇಲೆ ಅಂಗೈ ಇಟ್ಟು ಹೆಚ್ಚು ಮಾತನಾಡಬೇಡಿ ಆಯಾಸವಾಗುತ್ತೆ ಎಂದಳು. ನಾನು ಅವಳಿಗೆ ಕೃತಜ್ಞತೆ ಸೂಚಿಸಿ ಸುಮ್ಮನಾದೆ. ನನಗೆ ಬೇಸರವಾಗದಿರಲೆಂದು ಅವಳು ನನ್ನ ಕಾಯಿಲೆಯ ಬಗ್ಗೆ ಮಾತನಾಡಿದಳು. ನನ್ನ ಹೃದಯ ದುರ್ಬಲವಂತೆ, ಕರುಳು ಕಟ್ಟಿದೆಯಂತೆ, ಆ ವರ್ಣನೆ ಕೇಳಿ ದಿಗಿಲುಗೊಂಡೆ. ಅದನ್ನು ಗಮನಿಸಿದರೆ ಆಕೆ ಇನ್ನೂ ಕೆಲವು ಮಾತಾಡಿ ತನ್ನ ಹೆಸರು ಸರೋಜ

---

೨೩. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ ೨೦೬, ೧೯೯೨

ಎಂದು ಹೇಳಿದಳು. ತನ್ನ ಕೈಲಾದುದನ್ನೆಲ್ಲಾ ಮಾಡುವುದಾಗಿ ಭರವಸೆ ಕೊಟ್ಟಳು. ಅವಳ ನಸುಗಪ್ಪು ಬಣ್ಣ ಚಕಚಕ ಹೊಳೆದು ಜೀವ ಉಕ್ಕಿಸುತ್ತಿತ್ತು.[೨೪] ಶಾಶ್ವತವಲ್ಲದ ಬದುಕಿನ ಅರಿವಿದ್ದೂ ಕ್ಷಣಿಕ ಸುಖಕ್ಕಾಗಿ ಬಯಸುವ ಮನಸ್ಸಿನ ಅಸಂಗತ ತತ್ವವನ್ನು ಮತ್ತು ಹೆಣ್ಣು-ಗಂಡುಗಳ ನೆನಪುಗಳನ್ನು 'ಜೀರ್ಣೋದ್ಭವ' ಕತೆ ತಿಳಿಸುತ್ತದೆ.

'ಕೊನೆ' ಕತೆಯಲ್ಲಿ ಗಂಡಿನ ನೆನಪುಗಳು ಮತ್ತೆ ಮತ್ತೆ ಅನುರಣಿಸುತ್ತವೆ. ವಿಧವೆ ವೀರಬಸವಿಯ ಮನೆಗೆ ಹೋಗಿ ಬರುವ ನಂಜಣ್ಣ ದುಡೀತಾನೆ, ಮಜಾ ಮಾಡ್ತಾನೆ ಎಂದುಕೊಂಡು ಅದನ್ನು ಒಪ್ಪಿಕೊಳ್ಳುವ ಮಗ ಉಜ್ಜ, ಗೌಡರ ಪಾರ್ವತಿಯ ಜೊತೆ ಬಾಸಿಂಗದ ಕನಸು, ಲೋಯರ್ ಸೆಕೆಂಡರಿಯಲ್ಲಿ ಶಾರದೆ ಕೊಟ್ಟ ಪುಸ್ತಕದ ನೆನಪು, ಪದ್ಮಿನಿಯ ಬಿಸಿಯಪ್ಪುಗೆ, ಸೆಕ್ಸಿನ ಅವಸರದಲ್ಲೂ ಕಂದನಿಗಾಗಿ ಓಡಿದ ಗಂಗೆ, ತನ್ನನ್ನು ಕುಂಸಿಯಲ್ಲಿ ಪೋಲೀಸು ಕಣ್ಣಪ್ಪ ಪ್ರೀತಿಯಿಂದ ನೋಡಿಕೊಂಡದ್ದು ಎಲ್ಲವೂ ಸಾವಿನಂಚಿನಲ್ಲಿ ನೆನಪಾಗುವ ಕಥಾ ವಿಧಾನ ತಾಂತ್ರಿಕವಾಗಿ ವಿಶೇಷ ಎನಿಸಿದೆ. 'ಎಂಟು ಮೂವತ್ತು ಐವತ್ತು' ಕಥೆ ವಯೋಮಾನದ ಅಂತರಗಳಲ್ಲಿ ಜರುಗುವ ಭಾವತೀವ್ರತೆಗಳನ್ನು ದಾಖಲಿಸುತ್ತದೆ. ಮೂವತ್ತು ವರ್ಷದ ಕಥಾನಾಯಕನಿಗೆ ಎಂಟು ವರ್ಷದ ಗೌರಿ ಅರ್ಥವಾಗುವುದಿಲ್ಲ. ಪರಸ್ಪರರು ಒಂದೇ ಪರಿಸರದಲ್ಲಿ ವಾಸವಿದ್ದರೂ ಯಾರಿಗೆ ಯಾರೂ ಅರ್ಥವಾಗದೆ ವ್ಯರ್ಥ ವ್ಯವಹಾರಿಕ ಜಗತ್ತಿನಲ್ಲಿ ವಿಹರಿಸುವ ಮನುಷ್ಯ ಸಂಬಂಧದ ಜೀವನ ಪ್ರೀತಿಯ ಸೆಳೆತಗಳು ವಯೋಮಾನ ಮತ್ತು ಜಾಯಮಾನಗಳ ಮೇಲೆ ತೀವ್ರಕರವಾಗಿ ಕೆಲಸ ಮಾಡುತ್ತಿರುತ್ತವೆ ಎಂಬುದನ್ನು ಕಥೆ ಇಲ್ಲಿ ಧ್ವನಿಸುತ್ತದೆ. ಮುಗ್ಧ ಗೌರಿಯ ಎಳೆಯ ಮನಸ್ಸಿನ ಮುಂದೆ ಮೂವ್ವತ್ತರ ಸಿಡುಕಿನ ವಯಸ್ಸು ಆತ್ಯಂತಿಕವಾಗಿ ಸೋತುಬಿಡುವ ಕಥೆಯ ಎಳೆ ನವ್ಯ ಕಾಲದ ಕಥೆಗಾರರಿಗೆ ವಸ್ತುವಾಗಿ ಕಾಣುತ್ತದೆ.

ಗೌರಿ ಮತ್ತು ಪರಮೇಶ್ವರನ ಮದುವೆ ನಿಶ್ಚಯವಾಗಿ ಗೌರಿ ಮತ್ತು ಪರಮೇಶರ ಸಂಬಂಧಗಳು ಅಷ್ಟು ಚೆನ್ನಾಗಿರಲು ಸಾಧ್ಯವಿಲ್ಲದ ಸೂಚನೆ ತಿಳಿಯುತ್ತದೆ. ಶಿವರುದ್ರ ಗೌರಿಗೆ ನೆನಪಿಗೆ ಬರುತ್ತಾನೆ. ಅವನೊಟ್ಟಿಗೆ ಬದುಕಿನ ಜೀವನವನ್ನು ಪಡೆಯಬೇಕೆಂಬ ಆಸೆ ಉಂಟಾಗುತ್ತದೆ. ತನ್ನ ಶ್ರಮವಿತ್ತು ಬೆವರಿನ ಸಂಸ್ಕೃತಿಯ ಶಿವರುದ್ರ ಇದ್ಯಾವ ಆಕರ್ಷಣೆ ಇಲ್ಲದಿದ್ದರೂ ತನ್ನ ಮನಸ್ಸಿನಲ್ಲಿ ನೆಲೆಯೂರುತ್ತಾನೆ. ಅರವತ್ತು ಎಪ್ಪತ್ತರ ದಶಕದಲ್ಲಿ ಕರ್ನಾಟಕದ ದೇಸಿ ಚಿಂತನೆಯ ಬದುಕು ಹೇಗೆ ತನ್ನತನದ ಅಸ್ತಿತ್ವದಲ್ಲಿ ಪ್ರೀತಿ, ಪ್ರೇಮದಂಥ ನವಿರಾದ ಭಾವನೆಗಳನ್ನು ಸೂಕ್ಷ್ಮವಾಗಿ ಕಟ್ಟಿಕೊಂಡಿತ್ತು ಎನ್ನುವ ಸಾಮಾಜಿಕ ಸ್ವರೂಪವನ್ನು ಕಥೆ ಹೇಳುತ್ತದೆ. ಮಣ್ಣಿನ ಮಗ ಎನ್ನುವ ಮಾತಿಗೆ ಸಂವಾದಿಯಾಗಿ ಮಣ್ಣಿನ ಮಗಳು ಗೌರಿ ತನ್ನ ಪ್ರೇಮವನ್ನು ಉಲ್ಲಾಸದಿಂದಲೇ ಧಾರೆಯಾಗಿಸಿಕೊಂಡು ಪುಸ್ತಕ ಮರೆತು ಹೊರಟ ಪರಮೇಶನ ಕೈಗೆ ನೆನಪಿಸಿ

---

೨೪. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ ೧೧೩, ೧೯೯೨

ವಾಪಸ್ಸು ಕೊಟ್ಟು ತುಂಟನಗೆ ಚೆಲ್ಲುವ ಗೌರಿ ಗ್ರಾಮೀಣ ಪರಿಸರದ ಉತ್ಸಾಹದ ಕಥಾ ನಾಯಕಿಯಂತೆ ಕಂಗೊಳಿಸುತ್ತಾಳೆ.

'ನಗರದ ಜೊತೆಗಾತಿ' ಕಥೆಯಲ್ಲಿ ಪಟ್ಟಣಕ್ಕೆ ಬಂದ ಓರ್ವ ಭೋಗವಿಲಾಸಿ ರಾತ್ರಿ ಹೆಣ್ಣೊಬ್ಬಳೊಂದಿಗೆ ವರ್ಣರಂಜಿತವಾಗಿ ಒಡನಾಡಲು ನಿರ್ಧರಿಸಿ ತನಗೆ ಸಂಬಂಧ ಪಟ್ಟವರ ಪ್ರತಿಷ್ಠಿತರ ಎಲ್ಲ ಹೆಣ್ಣುಗಳ ಮನೆಗಳಿಗೂ ಪೋನಾಯಿಸಿ ನಕಾರಾತ್ಮಕ ಉತ್ತರ ಪಡೆಯುತ್ತಾನೆ. ಗೆಳೆಯನ ಸಲಹೆಯ ಮೇರೆಗೆ ಹುಡುಗಿಯೊಬ್ಬಳನ್ನು ಆಹ್ವಾನಿಸಿ ಅವಳಿಂದ ಹೊಂದಿದ ಅಪರಿಮಿತ ತೊಂದರೆಯೇ ಇಲ್ಲಿ ಕಾಣುವ ವಿಷಯ ಅದು ನೆನಪುಗಳಲ್ಲಿ ಮತ್ತೆ ಮತ್ತೆ ರಿಂಗಣಿಸುತ್ತದೆ.

ಲಂಕೇಶ ಸಮಗ್ರ ಕಥನ ಸಾಹಿತ್ಯವನ್ನು ಅವಲೋಕಿಸಿದಾಗ ಅವರು ಕಥೆಯಿಂದ ಕಥೆಗೆ, ಕಾದಂಬರಿಯಿಂದ-ಕಾದಂಬರಿಗೆ ಸಂಕಲನಗಳಿಂದ ಸಂಕಲನಕ್ಕೆ ಬೆಳೆಯುತ್ತಿರುವ ಹೆಜ್ಜೆಗಳು ಸ್ಪಷ್ಟವಾಗುತ್ತದೆ. ಪಿ.ಲಂಕೇಶರ ಬೇರೆ ಸಾಹಿತ್ಯ ಪ್ರಕಾರಕ್ಕೆ ಹೋಲಿಸಿದರೆ ಅವರ ಕಥನಪ್ರಕಾರ ಸಮೃದ್ಧವೂ, ವಿಶಾಲವೂ, ವಿಶಿಷ್ಟವೂ ಆಗಿರುವುದು ಕಂಡು ಬರುತ್ತದೆ. ಜೀವನದ ಬಹುಮುಖ್ಯ ಘಟ್ಟಗಳನ್ನೂ ಯಾವ ಮೂಲಾಜಿಗೂ ಒಳಪಡದೆ ಕಾಣಿಸಿರುವುದು ಈ ಕಥನ ಪ್ರಕಾರದಲ್ಲಿಯೇ. ಮನುಷ್ಯ ಸಂಬಂಧಗಳ ಮೂಲಕ ತಮ್ಮ ಮೌಲ್ಯಾದರ್ಶನವನ್ನು ಪಿ.ಲಂಕೇಶರ ಕಥನಸಾಹಿತ್ಯ ಮೂಡಿಸುತ್ತದೆ. ಹಾಗೆಯೇ ಮನುಷ್ಯ ಕೇಂದ್ರದ ಸ್ವಭಾವಗಳು ತಮ್ಮ ಸಾಂದರ್ಭಿಕ ಪ್ರತಿಕ್ರಿಯೆಗಳನ್ನು ಅನುಭವಿಸುತ್ತದೆ. ಮೂರ್ತವಾಗುವ ಕಥನ ಕೇಂದ್ರಿತ ನೆಲೆಗಳನ್ನು ಶೋಧಿಸಿಕೊಳ್ಳುತ್ತದೆ. ಅಂತರಂಗದ ಕಂಪನಗಳನ್ನು ದಾಖಲಿಸುತ್ತಾ ಮನುಷ್ಯ ಬದುಕಿನ ಮನಸ್ಥಿತಿಗಳು ವ್ಯವಸ್ಥೆಯ ಸಾಮಾಜಿಕ ಪ್ರಜ್ಞೆ ಮತ್ತು ಪರಿಸರದ ಭಾಗವಾಗಿ ಆವಿರ್ಭವಿಸುವ ಚಹರೆಗಳನ್ನು ಗುರುತಿಸಿಕೊಳ್ಳುತ್ತವೆ.

*****

## ಅಧ್ಯಾಯ ಐದು

# ಹಸಿವು ಮತ್ತು ದೌರ್ಜನ್ಯ : ಮನುಷ್ಯ ಸಂಬಂಧಗಳ ಸ್ವರೂಪ

ಪ್ರಸ್ತುತ ಸಮಕಾಲೀನ ಭಾರತೀಯ ಸಮಾಜಕ್ಕೆ ಜಾಗತಿಕ ಹಿನ್ನೆಲೆಯಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಅದು ವೈವಿಧ್ಯತೆ, ಏಕತೆ, ಸಂಪ್ರದಾಯ ಶರಣತೆ, ಆಧುನಿಕತೆ, ಬಡತನ, ಹಸಿವು, ದೌರ್ಜನ್ಯ, ಸಾಕ್ಷರತೆ, ಅನಕ್ಷರತೆ, ಕೊಳ್ಳುಬಾಕ ಸಂಸ್ಕೃತಿ ಇವೆಲ್ಲವುಗಳ ಸಮ್ಮಿಶ್ರಣವನ್ನು ನಿರಂತರವಾಗಿ ಕಂಡಿದೆ. ಸಾಮಾನ್ಯ ಭಾರತೀಯರ ಜೀವನಕ್ರಮ ಬಹಳ ಸರಳವಾಗಿದ್ದರೂ ಭಾರತೀಯ ಸಮಾಜದ ರಚನೆಯಲ್ಲಿ ಮನುಷ್ಯ ಸಂಬಂಧಗಳು ಮಾತ್ರ ಸಂಕೀರ್ಣವಾದುದಾಗಿವೆ. ವಸಾಹತು ಪೂರ್ವ ಭಾರತೀಯ ಸಮಾಜದ ರಚನಾ ವಿಧಾನದ ಮೇಲೆ ವಸಾಹತೋತ್ತರ ಆಧುನಿಕ ವಿವೇಚನೆಗಳು ಭಾರತೀಯ ಸಮಾಜದ ಇತರೆ ದೇಶ ವಾಸಿಗಳಾದ ಅನ್ಯರಾಜ್ಯಗಳ ಜನಜೀವನ ಹಾಗೂ ಸಂಸ್ಕೃತಿಯನ್ನು ಹೇಗೆ ನಿಯಂತ್ರಿಸಿತೆಂಬುದನ್ನು ಗುರುತಿಸಲು ಸಮಾಜಶಾಸ್ತ್ರದ ಅಧ್ಯಯನಕಾರರೂ ಕೂಡ ಸಾಹಿತ್ಯ ಕೃತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಹಾಗೆ ಒಪ್ಪಂದದ ಪ್ರೇರಣೆ, ಪ್ರಭಾವ, ಬದಲಾದ ಸಂಸ್ಕೃತಿ, ಸಾಮಾಜಿಕ ಚಿಂತನೆಗಳಿಂದ ಆದಂತಹ ಭಿನ್ನವಾದ ಆಲೋಚನೆ ಈ ಎಲ್ಲದರ ವಿವರಣೆಗಳು ಲಂಕೇಶರ ಕಥೆ ಕಾದಂಬರಿಗಳಲ್ಲಿ ತಾತ್ವಿಕವಾಗಿ ಹೇಗೆ ವ್ಯಕ್ತವಾಗಿದೆ ಎಂಬುದರ ಹುಡುಕಾಟವೇ ಮನುಷ್ಯ ಸಂಬಂಧಗಳ ಶೋಧನೆಯಾಗಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯದ ಪಂಥಗಳಲ್ಲಿಯೂ ಮನುಷ್ಯ ಸಂಬಂಧಗಳು ಸಾಮಾಜಿಕ ಸಂದರ್ಭದಲ್ಲಿ ವ್ಯವಹರಿಸುವ ಭಿನ್ನ ಧೋರಣೆಗಳನ್ನು ಈ ಸಾಹಿತ್ಯ ಕೃತಿಗಳಲ್ಲಿಯೆ ಕಾಣಬಹುದು.

ಕುವೆಂಪು, ಬೇಂದ್ರೆ, ಪು.ತಿ.ನ, ಕಾರಂತ, ಮಾಸ್ತಿ, ವಿ.ಕೃ ಗೋಕಾಕ್, ಗೋಪಾಲಕೃಷ್ಣ ಅಡಿಗ, ಯು.ಆರ್.ಅನಂತಮೂರ್ತಿ ಶಾಂತಿನಾಥ ದೇಸಾಯಿ, ಚದುರಂಗ, ಬೆಸಗರಹಳ್ಳಿ ರಾಮಣ್ಣ, ಪೂರ್ಣಚಂದ್ರ ತೇಜಸ್ವಿ, ದೇವನೂರ ಮಹಾದೇವ, ವೀಣಾಶಾಂತೇಶ್ವರ, ಗೀತಾನಾಗಭೂಷಣ ಈ ರೀತಿಯಾಗಿ ಸಾಹಿತಿಗಳ ಹೆಸರೇ ದೊಡ್ಡ ಪಟ್ಟಿಯಾಗುತ್ತದೆ. ಇವರೆಲ್ಲರು ತಮ್ಮ–ತಮ್ಮ ಸಾಹಿತ್ಯದಲ್ಲಿ ಹಸಿವು ಮತ್ತು ದೌರ್ಜನ್ಯದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಮುಟ್ಟಿದರೆ ರಕ್ತ ತೊಟ್ಟಿಕ್ಕುವ ಪಾತ್ರಗಳ ಮುಖೇನ ಚಿತ್ರಿಸಿದ್ದಾರೆ. ಮನುಷ್ಯನ ಸಣ್ಣತನ, ಸ್ವಾರ್ಥ, ಜಾತಿ, ಹಣಬಲ, ತೋಳ್ಬಲಗಳ ವ್ಯಕ್ತಿಗತ ಸಂಗತಿಗಳು ಭಾರತದ ಗ್ರಾಮ ಮತ್ತು ಪಟ್ಟಣಗಳ ಸ್ವಾತಂತ್ರ್ಯ ನಂತರದ ಬದುಕಿನ ಮೇಲೆ ತೀವ್ರತರವಾದ ಪರಿಣಾಮ ಉಂಟುಮಾಡಿದವು. ಮೌಲ್ಯಗಳ ಜಾಗದಲ್ಲಿ ಅಸ್ತಿತ್ವದ ಹುಡುಕಾಟ ಶೋಷಣೆಯನ್ನು ತಡೆಗಟ್ಟುವ ಸಂದರ್ಭಗಳು ಇವೆಲ್ಲವೂ ಶುರುವಾದವು. ಧರ್ಮಾಧಾರಿತ, ವರ್ಗ ಸಾಮರಸ್ಯಗಳ ಜಾಗದಲ್ಲಿ ಜಾತಿಯಾಧಾರಿತ ಅನುಭವ ಧರ್ಮಾಧಾರಿತ, ಸಾಂಸ್ಕೃತಿಕ ಸನ್ನಿವೇಶಗಳೆಂಬಂತೆ ವಿವರಿಸಲಾಯಿತು. ಮನುಷ್ಯ ವಿಕಸನದ ಆಂತರಿಕ

ಜಿಜ್ಞಾಸೆಯಾಗಿ ಒಡಮೂಡಿತು ಕನ್ನಡದ ಸಾಹಿತ್ಯದ ಸಂದರ್ಭದಲ್ಲಿ ವರ್ತಮಾನದ ತರ್ಕಗಳಿಗೆ ಸ್ಪಂದಿಸುವ ಜಾಯಮಾನದವರೆಲ್ಲರೂ ಮನುಷ್ಯನ ನಾಡಿ ಬಡಿತವನ್ನು ಅರಿತು ಅವರಿಗೆ ಒದಗಿದ ನೋವು, ಯಾತನೆ, ಹಸಿವು, ಎಲ್ಲವನ್ನು ತಿಳಿದು ಅದಕ್ಕೆ ಜೀವ ತುಂಬುವ ಕೆಲಸವನ್ನು ಸಾಹಿತ್ಯದ ಮುಖೇನ ಮಾಡತೊಡಗಿದವು. ಮನುಷ್ಯನ ವೈಯಕ್ತಿಕ ನೆಲೆಯಲ್ಲಿ ಸಾಮುದಾಯಿಕ ಜವಾಬ್ದಾರಿಗಳ ಹೊಣೆಗಾರಿಕೆಯ ತುಡಿತಗಳನ್ನು ನಿರ್ಮಿಸುವಲ್ಲಿ ಪ್ರೇರೇಪಣೆಯನ್ನು ಪಡೆಯುತ್ತಿದ್ದರು. ಲಂಕೇಶರು ಸೃಜಿಸಿದ ನವ್ಯ ಮಾರ್ಗದ ಸಾಹಿತ್ಯ ಸಂವೇದನೆಯ ಹೊಸ ತಿಳುವಳಿಕೆಗಳ ತಾಂತ್ರಿಕ ಶ್ರೀಮಂತಿಕೆಗಳು ಹೊಸದಾದ ಮನುಷ್ಯ ಚಿಂತನೆಗಳನ್ನು ಹುಟ್ಟುಹಾಕಿದವು. ಇದಕ್ಕೆ ಕಾರಣ ಇಂಗ್ಲೀಷ್ ಸಾಹಿತ್ಯದ ಹಿನ್ನೆಲೆಯಲ್ಲಿ ಬಂದಂತ ವಾದಗಳು ಉದಾಹರಣೆಗೆ – ಮನೋವೈಜ್ಞಾನಿಕವಾದ, ಅಸ್ತಿತ್ವವಾದ, ಅಸಂಗತವಾದ, ಸಂರಚನಾವಾದ, ಇನ್ನೂ ಹಲವು ವಾದಗಳು ಬರಹಗಾರರಿಗೆ ಹೊಸ ಚುರುಕನ್ನು ತಂದುಕೊಟ್ಟವು.

ಕನ್ನಡ ಸಂಸ್ಕೃತಿಯ ವಿಭಿನ್ನ ಪರಿಸರದಲ್ಲಿ ನಡೆದ ಬದುಕಿನ ನಿಷ್ಠುರ ನೈಜ ಅನುಭವಗಳನ್ನು ತಮ್ಮ ಕಥೆ–ಕಾದಂಬರಿ, ಲೇಖನ, ಕವಿತೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕಟ್ಟಿಕೊಡುವ ಸಮಕಾಲೀನ ಪ್ರಯೋಗಗಳು ಕಂಡು ಬಂದವು. ಸದಾ ಸತ್ಯ, ನಿಷ್ಠುರ, ಜೀವನ ಪ್ರೀತಿಗಳಿಂದ ಸಾಂಸ್ಕೃತಿಕ ಶೋಧನೆಗಳ ಹುಡುಕಾಟದಲ್ಲಿಯೇ ತಲ್ಲೀನರಾದ ಪಾಳ್ಯದ ಲಂಕೇಶರು ಸಮಕಾಲೀನ ಸಂವೇದನೆಯ ಜೀವನಾನುಭಗಳನ್ನು ಬದಲಾಗುತ್ತಿರುವ ವೃತ್ತಿ ಸಮಾಜದ ನಡುವಿನ ಸಾಮಾಜಿಕ ಸಂದರ್ಭಗಳನ್ನು ತಮ್ಮ ಕಥನಗಳ ಮೂಲಕ ಸೃಜನಶೀಲತೆಯ ನೆಲೆಯಲ್ಲಿ ವಿವೇಚಿಸಿದರು. ಪಿ.ಲಂಕೇಶರ ಕಥನ ಸಾಹಿತ್ಯ : ಮನುಷ್ಯ ಸಂಬಂಧಗಳು ಕುಟುಂಬ–ಜಾತಿ–ಪ್ರೇಮ, ಕಾಮ, ಹಸಿವು–ದೌರ್ಜನ್ಯ, ಮುಖವಾಡ ಭೋಳೇತನ, ಮಡಿವಂತಿಕೆ ಹೀಗೆ ಮಾನವನ ಮನಸ್ಸಿನ ಆಂತರ್ಯದ ಶೋಧಗಳು. ಅದರಲ್ಲೂ ಹಸಿವು ಮತ್ತು ದೌರ್ಜನ್ಯದ ಹಿನ್ನೆಲೆಯನ್ನು ನೋಡುವುದಾದರೆ ಲಂಕೇಶರು ಬರವಣಿಗೆಗೆ ತೊಡಗಿದ್ದ ಕಾಲಘಟ್ಟ ಸುಮಾರು ಮುನ್ನೂರು ವರ್ಷಗಳ ಪರಕೀಯರ ಆಳ್ವಿಕೆಯಿಂದ ಬದಲಾಗಿದ್ದ ಭಾರತದ ಚೇತರಿಕೆಯ ಸಂದರ್ಭ, ಅಂತಹ ಸಂದರ್ಭದಲ್ಲಿ ಬರವಣಿಗೆಯಲ್ಲಿ ತೊಡಗಿದ್ದ ಲಂಕೇಶರು ಸಮಾಜದ ಎಲ್ಲಾ ಸಮಸ್ಯೆಗಳನ್ನು ತನ್ನ ಸಾಹಿತ್ಯ ಪರಿಧಿಗೆ ತಂದುಕೊಳ್ಳುತ್ತಾರೆ. ಅದುವರೆಗೂ ಇರದಿದ್ದ ಒಂದು ಹೊಸ ಆಯಾಮವನ್ನು ಹಸಿವು ಮತ್ತು ಬಡತನಕ್ಕೆ ನೀಡುತ್ತಾರೆ. ನಿಜವಾಗಿಯೂ ಆತ್ಮಸಾಕ್ಷಿಯಿಂದ ಸ್ವಂತವಾಗಿ ದೃಢನಿರ್ಧಾರ ಕೈಗೊಳ್ಳುವವನಾಗಿ ಬದುಕಿದರೆ ಅದು ನಿಜವಾದಂತಹ ಸಿರಿತನ ಎಂದೆನಿಸುತ್ತದೆ. ಲಂಕೇಶರಿಗೆ ಬಡವರ ಬಗ್ಗೆ ಅನುಕಂಪವಿದೆ. ಜೊತೆಗೆ ಅವರ ಸೋಮಾರಿತನದ ಮತ್ತು ಅವರೆಲ್ಲರ ಸಣ್ಣತನಗಳ ಬಗ್ಗೆ ಸಿಟ್ಟಿದೆ. ಲಂಕೇಶರು ಚಿತ್ರಿಸುವ ಹಸಿವು ದೈಹಿಕ ಹಸಿವು, ಮಾನಸಿಕ ಹಸಿವು, ಬೌದ್ಧಿಕ ಹಸಿವೂ ಕೂಡ ಆಗಿದೆ. ಅವರ ಸೂಕ್ಷ್ಮಸಂವೇದನಾ ಮನಸ್ಸು ಪ್ರತಿಯೊಂದು ಹಂತದಲ್ಲೂ ಸಮಾಜದ ಒಳಗಣ್ಣನ್ನು ಪ್ರವೇಶಿಸುವ ಅವನ್ನು ಪ್ರವೇಶಿಸಿದ ಕೂಡಲೇ ಆ

ಸಮಾಜಕ್ಕೆ ಚಿಕಿತ್ಸಕ ಮನೋಧೋರಣೆಯನ್ನು ಬರವಣಿಗೆಯ ಮೂಲಕ ನೀಡುವ ಗುಣವನ್ನು ಲಂಕೇಶರು ಹೊಂದಿದ್ದಾರೆ.

ಹಸಿವು ಮತ್ತು ದೌರ್ಜನ್ಯದ ಸಂಬಂಧವನ್ನು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ–ಬಂಡಾಯ ಪಂಥದಲ್ಲಿ ಚಿತ್ರಿಸಿರುವ ಬಹುತೇಕ ಬರಹಗಳಲ್ಲಿ ಕಾಣಬಹುದು. ದೇವನೂರ ಮಹಾದೇವರ ಒಡಲಾಳ ಹೆಸರೇ ಹೇಳುವಹಾಗೆ ಹಸಿವಿನ ಆಳ, ಮೊಗಳ್ಳಿ ಗಣೇಶರ ಬಹುಪಾಲು ಕಥೆಗಳು, ಈ ಹಿನ್ನೆಲೆಯೊಂದಿಗೆ ರಚಿತವಾಗಿರುವುದನ್ನು ಕಾಣಬಹುದು. ದಲಿತ ಬಂಡಾಯದ ಬರಹಗಾರರ ಮುಖ್ಯವಸ್ತುವೇ ಈ ಪರಿಕಲ್ಪನೆಯಾಗಿತ್ತು. ನೊಂದವರ, ಶೋಷಿತರಪರ ಸಾಹಿತ್ಯವನ್ನು ರಚಿಸಿ ಸಾಮಾಜಿಕ ಹೆಚ್ಚರವನ್ನು ವರದಿಮಾಡುವುದು. ಜೊತೆಗೆ ಸಜೀವ ಭಾಷೆಯ ಮೂಲಕ ಅನುಭವವನ್ನು ಓದುಗರಿಗೆ ತೋರ್ಪಡಿಸಿದವರು. ಶೋಷಣೆಯಂಥ ವಸ್ತುವನ್ನು ಆಯ್ಕೆಮಾಡಿಕೊಂಡರೂ ಎಲ್ಲಿಯೂ ಚೀರಾಟದ ಆರ್ಭಟ ಕಂಡುಬರುವುದಿಲ್ಲ. ಮೂರ್ತವಾದ ಅನುಭವ ಪ್ರಪಂಚವೊಂದು ತನ್ನೆಲ್ಲಾ ಸಾಮಾಜಿಕ ವಾಸ್ತವತೆಗಳೊಡನೆ ಈ ಕಥನಗಳಲ್ಲಿ ಆಕೃತಿ ಪಡೆಯುವ ರೀತಿ ಮತ್ತು ಬಹುತೇಕ ಕಾಳಜಿ ವ್ಯಕ್ತವಾಗುವ ಕ್ರಮಗಳು ಮುಖ್ಯವಾಗುತ್ತವೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಈ ಕಥನಸಾಹಿತ್ಯವನ್ನು ಸೃಜಿಸಿದ ಮನಸ್ಸುಗಳು ಒಂದಲ್ಲ ಒಂದು ರೀತಿಯಿಂದ ಶೋಷಣೆಗೊಳಗಾದ ಜನಾಂಗದಿಂದ, ಸಮಾಜದಿಂದ ಬಂದವರೆಂಬುದು, ಇವರ ಕಥನಸಾಹಿತ್ಯವು ಕನ್ನಡದ ಮನಸ್ಸುಗಳಿಗೆ, ಓದುಗರಿಗೆ ಹೊಸ ತಿರುವನ್ನು ತಂದುಕೊಟ್ಟವುಗಳೇ. ಈ ಸಂದರ್ಭದಲ್ಲಿ ಪ್ರಚಲಿತ ಸಮಸ್ಯೆಗಳ ಬಗ್ಗೆ ಯೋಚಿಸಬೇಕು, ಶೋಷಕರನ್ನು, ಪಟ್ಟಭದ್ರರನ್ನು ಚಿಕಿತ್ಸಕ ದೃಷ್ಟಿಕೋನದಲ್ಲಿ ಅವರಿಗೆ ತಿಳಿವನ್ನು ಉಂಟುಮಾಡಬೇಕು ಎಂಬುದೇ ಕಥನಸಾಹಿತ್ಯದ ಮೂಲಉದ್ದೇಶ. ಕನ್ನಡ ಸಾಹಿತ್ಯಲೋಕವು ಕಂಡ ಅಪರೂಪದ ಪ್ರತಿಭಾವಂತ ಬರಹಗಾರರಲ್ಲಿ ಒಬ್ಬರಾದ ಲಂಕೇಶರು ನವ್ಯಯುಗದಲ್ಲಿ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಅದರ ವೈವಿಧ್ಯತೆಗೆ ಹಾಗೂ ಪ್ರಾತಿನಿಧಿಕತೆಗೆ ಕಾರಣರಾದ ಶಕ್ತಿಶಾಲಿ ಲೇಖಕರೆಂದು ಪ್ರಸಿದ್ಧಿಪಡೆದವರು. ಇವರ ಮಾಗಿದ ಮನಸ್ಸು ಸೃಜಿಸುವ ಸಂದರ್ಭಗಳು ಮನುಷ್ಯ ಸಂಬಂಧಗಳ ಸ್ವರೂಪವನ್ನು ಅವನ ನಿಜ ದರ್ಶನವನ್ನು ಮೂಡಿಸುವಲ್ಲಿ ಪ್ರಮುಖರಾಗಿದ್ದಾರೆ. ಲಂಕೇಶರಲ್ಲಿ ಇದರ ಹಿಂದೆ ಸಾಮಾಜಿಕ, ರಾಜಕೀಯ, ಕೌಟುಂಬಿಕ ಕಾರಣಗಳ ಪ್ರಭಾವವು ಮೂಲಶಕ್ತಿಯಾಗಿರುವುದನ್ನು ಕಾಣಬಹುದು.

**೫.೧. ಹಸಿವು ಮತ್ತು ನೈತಿಕ ಸಂಘರ್ಷದ ಸಂಬಂಧಗಳು**

ಕಾದಂಬರಿಯ ನಿಜವಾದ ಉದ್ದೇಶ ಬದುಕಿನ ತುಡಿತಗಳನ್ನು ದಾಖಲಿಸುವುದು. ಆದರೆ 'ಮುಸ್ಸಂಜೆಯ ಕಥಾಪ್ರಸಂಗ'ದಲ್ಲಿ ಹಾಗೆ ದಾಖಲಿಸುತ್ತಾ ನೈತಿಕ ಸಂಘರ್ಷದ ಸಿದ್ಧಸೂತ್ರಗಳಿಗೆ ಪ್ರಸ್ತುತ ಜೀವನ ವಿಧಾನದ ಅಣುಕು ಪ್ರದರ್ಶನವೊಂದು ಮುಖಾಮುಖಿಯಾಗಿ

ರೂಪಿಸುತ್ತಿರುವುದು ಇಲ್ಲಿ ಕಾಣುತ್ತದೆ. ಕಂಬಳ್ಳಿಯ ದೊಡ್ಡ ಜಮೀನ್ದಾರರಾದ ಶ್ರೇಷ್ಠಿಯವರು ಮನೆತನದ ವಿಷಯದಲ್ಲಿ ಪ್ರತಿಷ್ಠಿತ ಮನೆತನ ಅವರ ಜಮೀನಿನಲ್ಲಿ ಕೆಲಸ ಮಾಡುತ್ತಿದ್ದ ಕೆಳಸ್ಥರದ ಜನಕ್ರಮೇಣ ಅವರಿಗೆ ಗೇಣಿ ಕೊಡುವುದನ್ನು ನಿಲ್ಲಿಸುತ್ತಾರೆ. ಮಗಳು ದೇವಿ ದಲಿತ ಹುಡುಗನೊಂದಿಗೆ ಓಡಿಹೋಗುತ್ತಾಳೆ. ಫ್ಯೂಡಲ್ ಸಮಾಜವೊಂದರ ಪ್ರತಿನಿಧಿಯಂತಿದ್ದ ಶ್ರೇಷ್ಠಿ ಕಾದಂಬರಿಯ ಕೊನೆಗೆ ಗೇಣಿದಾರರಿಗೆ ತನ್ನ ಸ್ವಂತ ಒಪ್ಪಿಗೆಯಿಂದ ಗೇಣಿ ಬಿಟ್ಟುಕೊಡುವ ಸಂದರ್ಭವನ್ನು ನೋಡಬಹುದು. ಇಲ್ಲಿ ಮುಖ್ಯವಾಗಿ ಆಹಾರವನ್ನು ಬೆಳೆಯೋದು ಹಸಿವನ್ನು ನೀಗಿಸಿಕೊಳ್ಳಲು.

ಇಲ್ಲಿ ನಾವು ಗಮನಿಸಬೇಕಾದ ಅಂಶಗಳಲ್ಲಿ ಪ್ರಮುಖವಾಗಿ ಸಾಮಾನ್ಯವರ್ಗದ ನೈತಿಕಪ್ರಜ್ಞೆಯ ಭಾಗವೊಂದು ಗಟ್ಟಿ ಅನುಭವದ ವಾಹಿನಿಯಾಗಿ ಮಾರ್ಪಾಡಾಗಿ ತಳಸ್ತರದ ಆಸಕ್ತಿಗಳನ್ನು ಸಂಘಟಿಸುವ ಯತ್ನದಲ್ಲಿ ಹಸಿವು – ದೌರ್ಜನ್ಯ, ಲಿಂಗ–ಜಾತಿ–ಧರ್ಮ ಇವುಗಳ ಕುರಿತಾಗಿ ನಡವಳಿಕೆಗಳ ನಡುವೆ ಡೆಮಾಕ್ರಟಿಕ್ ಸ್ಪೇಸ್ ಹೇಗೆ ಸೃಷ್ಟಿಯಾಯಿತೆಂಬುದು ಮುಸ್ಸಂಜೆಯ ಸೂತ್ರ. ಈಗಾಗಲೇ ನವ್ಯ ಕಾದಂಬರಿಕಾರರೆಲ್ಲರೂ ಚರ್ಚಿಸಿದಂತೆ ವ್ಯಕ್ತಿಕೇಂದ್ರಿತ ಚಿಂತನೆ ಮತ್ತು ನಿರೂಪಣೆಗಳಿಂದ ಸಮಷ್ಠಿ ಕೇಂದ್ರದ ಜೊತೆ ಸಮೀಕರಿಸುವ ಆ ಮೂಲಕ ಕಾದಂಬರಿಯ ಸಿದ್ಧಸೂತ್ರದ ಜಾಡನ್ನು ಬಿಟ್ಟು ಹೊಸ ನಿರೂಪಣೆಯಲ್ಲಿ ಮತ್ತು ಹೊಸ ಮಾದರಿಯಲ್ಲಿ ಸಾಗಿದವರು ಪಿ. ಲಂಕೇಶರು. ಉದಾಹರಣೆಗೆ ಶ್ರೀಕೃಷ್ಣ ಆಲನಹಳ್ಳಿ ಅವರ 'ಕಾಡು', 'ಭುಜಂಗಯ್ಯನ ದಶಾವತಾರಗಳು', ಶಾಂತಿನಾಥದೇಸಾಯಿಯವರ 'ಮುಕ್ತಿ' ಮತ್ತು 'ಓಂಣಮೋ' ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಅವಸ್ಥೆ'ಗಳು ಹಾಗೆಯೇ ಲಂಕೇಶರ 'ಬಿರುಕು' ಮತ್ತು 'ಮುಸ್ಸಂಜೆಯ ಕಥಾಪ್ರಸಂಗ'ಗಳು ಬದಲಾದ ಚಿಂತನಾಕ್ರಮದ ಹೊಸ ಉಯಿಲನ್ನು ಬರೆದ ಕಾದಂಬರಿಗಳು ಹಾಗಾಗಿಯೇ ದೊಡ್ಡದೊಂದು ಸಾಮಾಜಿಕ ಪ್ರಜ್ಞೆ ಇಲ್ಲಿ ಟಿಸಿಲೊಡೆಯುವ ಅವಕಾಶ ಪಡೆಯುತ್ತವೆ.

"ಕಂಬಳ್ಳಿಯ ಜೀವನ ಮೌಲ್ಯಗಳು, ಆಧುನಿಕತೆಗಳ ನಡುವೆ ಕಾಮ, ಪ್ರೇಮ, ಆಸೆ, ಅಸೂಯೆ, ಜೂಜು, ಕಳ್ಳಭಟ್ಟಿ ಇತ್ಯಾದಿ ಸಂಗತಿಗಳು ಸಂಘರ್ಷಕ್ಕೆ ಎಡೆಮಾಡಿ ಕೊಟ್ಟಿರುವುದನ್ನು ಬದುಕಿನ ಬಿಕ್ಕಟ್ಟುಗಳನ್ನು ಈ ಕಾದಂಬರಿ ಹೇಳುತ್ತದೆ. ಈ ಕಾದಂಬರಿಯಲ್ಲಿ ಬರುವ ಯಾವ ಪಾತ್ರಗಳೂ ಸಂತೃಪ್ತ ಬದುಕನ್ನು ನಡೆಸುತ್ತಿಲ್ಲ. ಕಂಬಳ್ಳಿಯ ಸಾಮಾಜಿಕ ಚೌಕಟ್ಟಿನಲ್ಲಿ ಏರ್ಪಟ್ಟಿರುವ ನೋವು, ವಿಷಾದ, ದುಗುಡಗಳು ರಂಗವ್ವ – ಸಾವಂತ್ರಿ, ಮಂಜ, ಬಸ್ಯ, ರಾಚ, ಶಿವನಂಜ, ಕರಿಯ, ಸಣ್ಣೀರಪ್ಪ, ಇಕ್ಬಾಲ – ಹೀಗೆ ಎಲ್ಲರ ಖಾಸಗಿ ಬದುಕಿನಲ್ಲೂ ಅತೃಪ್ತಿಗಳನ್ನುಂಟು ಮಾಡಿರುವುದನ್ನು ಚಿತ್ರಿಸುವುದೇ ಕಾದಂಬರಿಕಾರರ ಉದ್ದೇಶವಾಗಿದೆ"[೧]

---

೧. ಡಾ. ಹಾಲತಿ ಸೋಮಶೇಖರ್, ಪಿ. ಲಂಕೇಶ್, ಪುಟ. ೪೭, ೨೦೦೮.

ಕಂಬಳ್ಳಿಯ ಅವಸಾನದ ಘಟಕಗಳು ಹಲವಾರು ವಿವರಗಳಲ್ಲಿ ಚದುರಿಹೋಗಿದೆ. ಈ ಎಲ್ಲ ವಿವರಗಳನ್ನು ಒಂದು ಕೇಂದ್ರಕ್ಕೆ ತಂದುಹೇಳಲು ಪ್ರಯತ್ನಿಸುವ ಲಂಕೇಶರ ಆಶಯವು ಕಂಬಳ್ಳಿಯ ವೈವಿಧ್ಯತೆಯಂತೆಯೇ ಬಹುರೂಪಿ ನೆಲೆಗಳಲ್ಲಿ ಯಶಸ್ವಿಯಾಗಿದೆ. ಈ ಹಳ್ಳಿಯ ಸಾಂಸ್ಕೃತಿಕ ಗ್ರಹಿಕೆಗಳು ಯಾವುದೇ ಒಂದು ಘಟ್ಟದಲ್ಲಿ ಕೇಂದ್ರೀಕೃತವಾಗದಂತೆ ನೋಡಿಕೊಂಡಿರುವುದು ಕೃತಿಯ ಸಂಕೀರ್ಣತೆಗೆ ಹೆಚ್ಚು ಸಹಾಯಕವಾಗಿದೆ. ಕಂಬಳ್ಳಿಯು ಪ್ರತಿನಿಧಿಸುವ ಮೌಲ್ಯಗಳನ್ನು ಗಮನಿಸಿದರೆ, ರಂಗವ್ವನ ಮನೆ ಇಡೀ ಆಗುಹೋಗುಗಳನ್ನು ಬೆಳೆಸಿದೆ ಮತ್ತು ನಿಯಂತ್ರಿಸಿದೆ. ಈ ರೀತಿಯಾಗಿ ನೈತಿಕ ಸಂಘರ್ಷದ ಸಂಬಂಧಗಳು ಮುಸ್ಸಂಜೆಯ ಕಥಾಪ್ರಸಂಗದಲ್ಲಿ ಕಂಡುಬರುತ್ತದೆ.

'ಅಕ್ಕ' ಕಾದಂಬರಿಯಲ್ಲಿ ಹಸಿವು ಮತ್ತು ನೈತಿಕ ಸಂಘರ್ಷದ ಸಂಬಂಧವನ್ನು ಶೋಧಿಸುವ ನಿಟ್ಟಿನಲ್ಲಿ ಕ್ಯಾತ ತುಂಬಾ ದೈಹಿಕ ಹಸಿವಿನಿಂದ ಬಳಲಿಬೆಂಡಾಗುತ್ತಾನೆ. ಹೇಳಿಕೇಳಿ ಕೊಳಗೇರಿ ಬದುಕು ಕ್ಯಾತನಲ್ಲಿ ವ್ಯಕ್ತವಾಗುವ ಕೊಳಗೇರಿಯ ಪರಿಸರ. ಇದನ್ನು ಹೊರತುಪಡಿಸಿದ ಸಮಾಜದ ದೃಷ್ಟಿಯಿಂದ ಸ್ವಲ್ಪಮಟ್ಟಿಗೆ ಭಿನ್ನವಾಗಿಯೇ ಇದೆ. ಅದು ತೋರಿಕೆಯದಾಗಿದ್ದು ಇಲ್ಲಿಯೂ ಶೋಷಣೆ ಅವ್ಯಾಹತವಾಗಿ ಮುಂದುವರೆಯುತ್ತದೆ. ಕೊಳಗೇರಿಯಲ್ಲಿ ಅನ್ನಕ್ಕಾಗಿ (ಹಸಿವಿನಿಂದ) ಒದ್ದಾಡುವ ಜನರಿಂದ ಹಿಡಿದು ರಂಗುರಂಗಿನ ಬಣ್ಣಬಣ್ಣದ ಬದುಕಿನಲ್ಲಿಯೂ ತಮ್ಮನ್ನು ಗುರುತಿಸಿಕೊಳ್ಳುವ ಜನರಿದ್ದಾರೆ. ಪದ್ದಿಯ ತಂದೆ ನಾಗರಾಜ ನಾಯ್ಡು ಹಣಕ್ಕಾಗಿ ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಸಿನಿಮಾದವರಿಗೆ ಮಾರಲೂ ತಯಾರಾಗಿರುವನು. ಕ್ರೌರ್ಯದ ಪ್ರತಿರೂಪಗಳಂತಿರುವ ಖಡವಾ, ನಾಗ್ರ, ನರಸಿಂಹಮೇಸ್ತ್ರೀ ಇವರೆಲ್ಲ ತಮ್ಮ ಸ್ವಾರ್ಥಕ್ಕಾಗಿ ಕೊಳಗೇರಿ ಪರಿಸರವನ್ನು ಬಳಸಿಕೊಳ್ಳುವವರು. ಇದೆಲ್ಲದರ ಮಧ್ಯೆಯೂ ಮಾನವೀಯತೆಯ ಸಿಂಚನವನ್ನು ಸಿಂಪಡಿಸುವ ಸಂಪೂರ್ಣಮ್ಮ ಕೊಳಗೇರಿಯಲ್ಲಿ ಇದ್ದುಕೊಂಡೇ ತನ್ನ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ಕೊಡುತ್ತಾ ಬೇರೆ ಕಡೆ ಮನೆ ಕಟ್ಟಿಸಿ ಆ ಪರಿಸರದಲ್ಲಿ ಸಹಜವಾಗಿ ವಾಸಿಸಲು ಸಾಧ್ಯವಾಗದೆ ಮತ್ತೆ ಹಿಂತಿರುಗಿಬಂದು ಕೊಳಗೇರಿಯ ಬದುಕಿನಿಂದ ಹೊರತಾಗಿದ್ದರೂ ಇವರೆಲ್ಲರಿಗಿಂತ ಹಸಿವಿನಿಂದ ದೂರ ನಿಲ್ಲುತ್ತಾಳೆ.

ಕ್ಯಾತನಿಗೆ ಸಂಪೂರ್ಣಮ್ಮ ತಿನ್ನಲು ಏನಾದರೂ ಕೊಡುತ್ತಿದ್ದಳು ಅವನ ದೃಷ್ಟಿಯಲ್ಲಿ ಅವಳು ಅನ್ನದಾತೆ. ಒಂದು ದಿನ "ಇವತ್ತು ಸಂಪೂರ್ಣಮ್ಮ ತಿನ್ನು ಅಂತ ಹೇಳ್ತಿಲ್ಲ ಬಂದಾಗಲೆಲ್ಲ ಏನಾದ್ರೂ ತಿಂಡಿ ಇಟ್ಟರು ತಿನ್ನೋತನಕ ಪ್ರಾಣ ತಿನ್ನುತ್ತಿದ್ದ ಸಂಪೂರ್ಣಮ್ಮ ಹಸಿದುಕೊಂಡು ಸಾಯ್ತಿದ್ದಾಗಲೇ ಕ್ಯಾತನತ್ತಕಣ್ಣು ಹಾಯಿಸಲಿಲ್ಲ. ಅದೇನು ಬ್ಯಾನೆಯೋ ಏನೋ, ಕೆಮ್ಮುತ್ತ ಮುಸುಮುಸು ಅನ್ನುತ್ತ ಸಂಪೂರ್ಣಮ್ಮ ಒಲೆ ಎದುರು ಕುಂತು ಕೆಲಸಮಾಡ್ತಾನೇ ಇದ್ಲು. ರಂಗಜೆಟ್ಟಿಯು ಹೇಳಿದ ಮೇಲೆ ಕ್ಯಾತ ಹೇಳುವುದೇನೂ ಇರಲಿಲ್ಲ. ರಂಗಜೆಟ್ಟಿ ಮಾತು

ನಿಲ್ಲಿಸಿದರೆ ಸಾಕಾಗಿತ್ತು. ಆತನ ಮೊಳೆ ಹೊಡೆಯುವ ಕೆಲಸ ಆದೊಡನೆ ಸಂಪೂರ್ಣಮ್ಮ ತಿನ್ನಿಸುವ, ಉಪಚರಿಸುವ ಗುಣವನ್ನು ಉದ್ದೀಪಿಸಲು ಕ್ಯಾತ ಅವಳ ಹತ್ತಿರ ಹೋದ. ಹೊಟ್ಟೆ ಖಾಲಿ ಇತ್ತು".[೨] ಕ್ಯಾತನ ಸ್ಮೃತಿಯಲ್ಲಿ ತುಂಬಿದ ನೆನಪು ನಿರೂಪಣೆಯತ್ತ ಸಂಪೂರ್ಣಮ್ಮ ಏಕೆ ಇವತ್ತು ಹಸಿವಿನಲ್ಲಿರಿಸಿದಳು ಎಂದು ಸಂಘರ್ಷಕ್ಕೆ ಒಳಗಾಗುತ್ತಾನೆ. ಹಸಿವಿನಿಂದ ಬಳಲುತ್ತಿದ್ದಾಗ ಪದ್ದಿ ಸಿನಿಮಾದ ಕಥೆಯನ್ನು ಶುರುಮಾಡಿದಳು ಕ್ಯಾತನ ಬದುಕು ಮತ್ತು ಗ್ರಹಿಕೆ ವಿಶಿಷ್ಟವಾದುದು. ಅಕ್ಕನ ಬದುಕನ್ನು ಸೂಕ್ಷ್ಮವಾಗಿ ಗಮನಿಸುವಂತೆ ಪರಿಸರದ ಬದುಕನ್ನು ಅರಿಯಲು ಪ್ರಯತ್ನಿಸುತ್ತಾನೆ. ಅವನ ಮೂಲಕವೇ ಕೊಳಗೇರಿಯ ಬದುಕನ್ನು ಎದುರುಗೊಳ್ಳುತ್ತಿರುವುದರಿಂದ ಅಲ್ಲಿ ಸಾಂಸ್ಕೃತಿಕ ಪರಿಭಾಷೆಗಳ ಹಿನ್ನೆಲೆಯಲ್ಲಿ ಆತ ತನ್ನ ಬದುಕನ್ನು ಅರಸತೊಡಗುತ್ತಾನೆ. ಅವನ ಮಹತ್ವಾಕಾಂಕ್ಷೆಗಳಾದರೂ ಎಂಥವೆಂದರೆ ಕೊಳಗೇರಿಯ ಕೆಟ್ಟ ಮನಸ್ಸುಗಳಿಂದ ದೂರ ಇದ್ದು ಬದುಕಬೇಕು ತನ್ನನ್ನು ಎಂದಿನಂತೆ ಪ್ರೀತಿಸುತ್ತಲೇ ಬೈಯ್ಯಬೇಕು ಹೊಡೆಯಬೇಕು ಅವರಿವರು ತಂದುಕೊಡುವ ತಿಂಡಿಗಿಂತ ತಂಗಳನ್ನವೇ ಸಿಗಬೇಕು ಎನ್ನಿಸುತ್ತದೆ.

ಅಕ್ಕ ಅಲ್ಲಿ ಇಲ್ಲಿ ಹೋಗದೇ ಇಟ್ಟಿಗೆ ಹೊತ್ತದ್ದರಿಂದ ಬಂದ ಪ್ರತಿಫಲದಲ್ಲಿ ನಾನು ಉಣ್ಣಬೇಕು ಎಂದು ಕ್ಯಾತ ಕನಸುಕಾಣುತ್ತಾನೆ. ಇದು ಒಂದು ಆತ್ಯಂತಿಕ ದೃಷ್ಟಿಕೋನ. ಪದ್ದಿಯ ಜೊತೆಗೆ ನಡೆಯುವ ಸಂಭಾಷಣೆಯಲ್ಲಿ ಮಾನಸಿಕ ಹಸಿವನ್ನು ಅನುಭವಿಸುತ್ತಾನೆ. "ಪದ್ದಿ ಹಂಗೆ ತನ್ನ ಕತೆ ಹೇಳಾಕೆ ಹತ್ತಿದ ಕೂಡಲೇ ಕ್ಯಾತನ ಹಸಿವೆ ಒಂಚೂರು ಕಮ್ಮಿಯಾಯಿತು. ಪದ್ದಿ ಅವನ ಕೈನಿಂದ ಬಾಚಣಿಕೆ ಇಸಿದುಕೊಂಡು ಎರಡು ತೋಳನ್ನು ಮ್ಯಾಲಕ್ಕೆತ್ತಿ ಮೊಲೆಪೂರ್ತಿ ಉಚಾಯಿಸಿಕೊಂಡು ಕ್ಯಾತನ್ನ ಅಣಕಿಸೋ ಹಂಗೆ ರಟ್ಟೆಗಳನ್ನು ಹಿಂದಕ್ಕೆ ತಗೊಂಡು ತುರುಬುಕಟ್ಟಿಕೊಂಡ್ಳು; ಅಷ್ಟರಲ್ಲಿ ಅವಳ ಏರ್‌ಪಿನ್ನುಗಳು ಅವಳ ಹಲ್ಲಿನ ನಡುವೆ ಇದ್ದವು. ಅವಳು ಮಾತಾಡೋ ಹಂಗಿರಲಿಲ್ಲ. ಮಜಾ ಅನ್ನುಸ್ತು ಸಾರ್. ಹಸಿವು ಮರೆತುಹೋತು. ಕ್ಯಾತ ತನ್ನನ್ನು ನೋಡೋದು ಪದ್ದಿಗೆ ಗೊತ್ತಿತ್ತೋ ಇಲ್ಲವೋ ಹ್ಯಂಗೆ ಹೇಳಲಿ ಕ್ಯಾತನ ತಲೇಲಿ ಮೋಲೆಗಿಲೆ ಕುತ್ತಿಗೆ ಗಲ್ಲ ವಗೈರೆಗಳೆಲ್ಲ ತಮ್ಮ ಸಿಡಿಲು ಗುಡುಗು ಹುಟ್ಟಿಸ್ತಿವೆ ಅನ್ನೋದು ಆಕೆಗೆ ಗೊತ್ತಿತ್ತು ಅನ್ನೋದು ನಂಗೆ ಹ್ಯಂಗೆ ಗೊತ್ತು".[೩] ಕೊಳಗೇರಿಯ ಬಡತನದ ಬದುಕು ಹಸಿವು ಮತ್ತು ಸಂಘರ್ಷ ವ್ಯಕ್ತವಾಗುವುದನ್ನು ಮೇಲಿನ ನಿದರ್ಶನದ ರೀತಿಯಲ್ಲಿ ಕಾಣಬಹುದು. ಕ್ಯಾತನಿಗೆ ತನ್ನ ಬದುಕಿನ ವಿವರಗಳನ್ನು ಹೇಳಿಕೊಳ್ಳುವ ಉತ್ಸಾಹ ಜೀವನ ಮೌಲ್ಯಗಳ ಬಗೆಗೆ ಅವನಿಗೆ ಯಾವುದೇ ತಹತಹಿಕೆಗಳಿಲ್ಲ. ಅವನಿಗೆ ನಿಡಿದಾದ ಆತ್ಮವಿಶ್ವಾಸವಿಲ್ಲ. ತಂದೆ-ತಾಯಿ ಹಿನ್ನೆಲೆಯ ಪ್ರೀತಿವಾತ್ಸಲ್ಯಗಳಿಲ್ಲ. ಅಕ್ಕ ಇದ್ದರೂ ಅವಳು ತಾಯ್ತನದ ಮಮಕಾರವನ್ನಾಗಲೀ ತಾಯ್ತನದ ಆಪ್ತತೆಗಳನ್ನಾಗಲೀ ತೋರಿಸುವ ಪರಿಸ್ಥಿತಿಯಲ್ಲಿ

---

೨. ಪಿ. ಲಂಕೇಶ್, ಅಕ್ಕ, ಪುಟ. ೮೭, ೨೦೧೧.

೩. ಡಾ. ಎಂ.ಜಿ.ಕೃಷ್ಣಮೂರ್ತಿ, ಆಧುನಿಕ ಭಾರತೀಯ ಸಾಹಿತ್ಯ, ಪುಟ. ೩೧೬

ಅವಳಿಲ್ಲ. ಅಸಹಾಯಕ ಸ್ಥಿತಿಯ ಮನೋಕ್ಷೋಭೆಯಲ್ಲಿ ಬಳಲುವ ದೇವೀರಿ ತಮ್ಮನ ಮೇಲೆ ಕಾಳಜಿಯನ್ನು, ಜವಾಬ್ದಾರಿಯನ್ನು, ತೋರಿಸುತ್ತಾಳೋ ಎಂಬ ಭರದಲ್ಲಿ ಕ್ಯಾತನಲ್ಲಿ ಹಲವು ಅನುಮಾನಗಳಿಗೆ ಕಾರಣಳಾಗುತ್ತಾಳೆ. ಸದಾ ಬೇಸರದಲ್ಲೇ ಕಾಲ ಕಳೆಯುವ ಕ್ಯಾತ ಇತರ ಹುಡುಗರಂತೆ ಬಾಲ್ಯದ ನಿಸರ್ಗ ಸಹಜ ಚಟುವಟಿಕೆಗಳನ್ನು ಗ್ರಹಿಸುವ ಬದಲು ವ್ಯವಸ್ಥೆಯ ಅಸಮಾನತೆ, ಅಪಮಾನಗಳನ್ನು ಸೂಕ್ಷ್ಮವಾಗಿ ಗಮನಿಸುವಂತೆ ಕಾಣುತ್ತಾನೆ. ಖಡವಾ, ನಾಗ್ರರನ್ನು ಸೃಷ್ಟಿಸಿದ ಲಂಕೇಶರು ಕ್ಯಾತನಂತ ವಿಲಕ್ಷಣ ಮನುಷ್ಯ ಮಾದರಿಗಳನ್ನು ಸೃಷ್ಟಿಸುತ್ತಾ ಅವನು ವಾಸ್ತವದಲ್ಲಿ ದೊರೆತ ಪಾತ್ರವೆಂಬುದನ್ನು ಕಥೆಯ ಆರಂಭದಲ್ಲೇ ಉಲ್ಲೇಖಿಸುವುದರ ಮೂಲಕ ಕ್ಯಾತನನ್ನು 'ಅಕ್ಕ'ದ ಸಾಕ್ಷಿ ಪ್ರಜ್ಞೆಯಂತೆ ಪ್ರತಿನಿಧಿಸುತ್ತಾರೆ.

ಸಿ.ಎನ್.ರಾಮಚಂದ್ರನ್ ಅವರು ಹಸಿವು ಮತ್ತು ನೈತಿಕ ಸಂಘರ್ಷವನ್ನು ಕುರಿತು ಈ ರೀತಿಯಾಗಿ ದಾಖಲಿಸುತ್ತಾರೆ. "ಒಂದು ಸಂದರ್ಭದಲ್ಲಿ ನಿರೂಪಕ ಕ್ಯಾತ ತನ್ನ ಓದುಗರನ್ನು ಉದ್ದೇಶಿಸಿ ಹೀಗೆ ಹೇಳಿಕೊಳ್ಳುತ್ತಾರೆ. ನೀವು ದೊಡ್ಡೋರು ಇದೆಲ್ಲಾ ಕೇಳಿ ನಗ್ತಿರಬಹುದು. ಕೊಳಗೇರಿ ಹಟ್ಟಿ ಅಂದರೆ ನರಕ ಅಂತ ತಿಳ್ಕಂಡಿದ್ದೀರಿ–ಹಂಗೇನಿಲ್ಲ ಸಾರ್. ಈ ಕೃತಿಯುದ್ದಕ್ಕೂ ಕ್ಯಾತ ಮಾಡುವುದು ಇದನ್ನೇ ಹೇಗೆ ಅಲ್ಲಿಯ ಗುಡಿಸಲುಗಳಲ್ಲಿಯೂ ಬದುಕಿನ ತುಡಿತ ವಿವಿಧ ಲಯಗಳಲ್ಲಿ ಕೇಳಿಬರುತ್ತದೆ ಎಂಬುದನ್ನು ದಾಖಲಿಸುವುದು, ಅಲ್ಲಿಯೂ ಸಂಭ್ರಮ ಉಲ್ಲಾಸಗಳಿವೆ, ಋತುಮತಿಯಾದ ಕನ್ಯೆಗೆ ಎಲ್ಲರೂ ಸೇರಿ ಆರತಿ ಎತ್ತಿ ಉತ್ಸವ ಮಾಡುತ್ತಾರೆ ಕ್ಯಾತ–ಪದ್ದಿಯಂತಹ ಗಂಡು ಹೆಣ್ಣುಗಳು ಪರಸ್ಪರ ಆಕರ್ಷಿತರಾಗಿ ತಮ್ಮ ಸುಮ್ಮಾನವನ್ನು ಹಂಚಿಕೊಳ್ಳುತ್ತಾರೆ. ನಗುತ್ತಾರೆ, ಅಳುತ್ತಾರೆ, ಪ್ರೀತಿಸುತ್ತಾರೆ. ರೇಸ್‌ನಲ್ಲಿ ಹಣಕಟ್ಟಿ ಅಥವಾ ಸಿನಿಮಾದಲ್ಲಿ ನಾಯಿಕೆಯಾಗಿ ಅಥವಾ ಕಾರ್ಮೆಂಟ್ ಸ್ಕೂಲ್ ಸೇರಿ ಇಂಗ್ಲೀಷ್ ಕಲಿತು ಸಮಾಜದಲ್ಲಿ ಮೇಲೇರುವ ಕನಸು ಕಾಣುತ್ತಾರೆ. ಇಂತಹ ಬದುಕಿನ ತುಡಿತವನ್ನು ಕಥನದಲ್ಲಿ ಅದ್ಭುತವಾಗಿ ಲೇಖಕರು ಸೆರೆ ಹಿಡಿದಿದ್ದಾರೆ. ಇದು ಸಾಧ್ಯವಾಗಿರುವುದು ಸೀಮಿತ ಪ್ರಜ್ಞೆಯ ಮುಖ್ಯಪಾತ್ರವೇ ನಿರೂಪಕನಾಗಿರುವುದರಿಂದ".[೪] ಕ್ಯಾತ ಈ ಕಾದಂಬರಿಯಲ್ಲಿ ನೈತಿಕವಾಗಿ, ಆದರ್ಶವಾಗಿ, ಪ್ರಕಟಗೊಳ್ಳುತ್ತಾನೆ. ಕೊಳಗೇರಿಯಲ್ಲಿ ಬದುಕುತ್ತಿರುವ ಅನೇಕ ಜನರು ಕೆಲವರು ಸಹಿಷ್ಣುತೆಯಲ್ಲಿ ಕೆಲವರು ವಿಲಕ್ಷಣತೆಯಲ್ಲಿ ದೈನಿಕತೆಯನ್ನು ಮೀರುವ ಸಾಮರ್ಥ್ಯವನ್ನು ತೋರುತ್ತಾರೆ. ಆದರೆ ಕಾದಂಬರಿ ಇದನ್ನು ಆದರ್ಶಿಕರಿಸುವುದಿಲ್ಲ ಬದಲಿಗೆ ಕೊಳಗೇರಿಯ ಸ್ಥಿತಿಯ ಸದ್ಯದ ದುರಂತವನ್ನು ಬದಲಾವಣೆಯ ನಾಳಿನ ಕನಸಿನಲ್ಲಿ ತಿಳುಗೊಳಿಸುವುದಿಲ್ಲ. ದೇವೀರಿ, ಪದ್ದಿ ತಮ್ಮ ಸ್ಥಿತಿಯನ್ನು ಮೀರುತ್ತಿದ್ದಾರೆ. ಆದರೆ ಹೀಗೆ ಮೀರುವ ಕ್ರಮದಲ್ಲಿ ನಿಜವಾಗಿ

---

೪. ಸಿ.ಎನ್. ರಾಮಚಂದ್ರನ್, ಪರಂಪರೆ – ಪ್ರತಿರೋಧ, ಪು. ೧೩೫.

ಶೋಷಣೆಗೆ, ಅಪಮಾನಕ್ಕೆ ಒಳಗಾಗುತ್ತಿದ್ದಾರೋ ಹೇಗೆ ಎಂಬ ಕ್ಯಾತನ ದುಗುಡ ಈ ಪ್ರಕ್ರಿಯೆಗೆ ತುಂಬಾ ಸಂಕೀರ್ಣವಾದ ನೈತಿಕ ಆಯಾಮವೊಂದನ್ನು ನೀಡುತ್ತದೆ.

ಆದರೂ ಕ್ಯಾತ ಮತ್ತು ಪದ್ದಿಯರ ಆಂತರಿಕ ಸಂಬಂಧದ ಹಸಿವು ತುಂಬಾ ಪ್ರಕಾಶಮಾನವಾಗದೇ ಗೋಚರಿಸುತ್ತದೆ. ಪದ್ದಿಯ ಅಂತರಂಗದಲ್ಲಿ ಕ್ಯಾತನ ಪ್ರಪಂಚವಿದೆ ಕ್ಯಾತನ ಮನಸ್ಸಿನಲ್ಲಿ ಪದ್ದಿಯ ನೋಟವಿದೆ. "ಏನಾಗಿತ್ತು ಅಂದ್ರೆ, ಈ ಸುಡುಗಾಡು ನನ್ಮಗ ಕ್ಯಾತ ಪದ್ದಿಯ ಎದುರಿಂದ ಹೋದಕೂಡ್ಳ ಹಸಿವೆಲ್ಲ ಮುತ್ಕೊಂಡು ಸತ್ತೋಗಬಹುದು ಅನ್ಸಿತ್ತು. ಬಲೆ ಹಲ್ಕಾ ಮನಸ್ಸು ಸಾರ್, ಕ್ಯಾತ ಒಂದೊಂದು ಸಲ ಯೋಚನೆ ಮಾಡತಾನೆ. ಯಾವಾಗಿಂದ ಇಂತ ದರವೇಸಿ ಬುದ್ಧಿ ಸುರುವಾತು ಅಂತ ಯೋಚನೆ ಮಾಡಿದಾನೆ ಹೇಳೋಣ ಅಂದ್ರೆ ಒಂದಾ, ಎರಡಾ ಸಾರ್, ಕ್ಯಾತ ಬಲೆ ಚಿಕ್ಕವನಾಗಿದ್ದಾಗ, ಚೋಟುದ್ದ ತರಲೆ ನನ್ಮಗ ಆಗಿದ್ದಾಗ ದೇವೀರಿ ಮೈ ತೊಳಕೊಳ್ಳುವಾಗ ಏನೇನೋ ತಲೆಗೆ ಬಂದು ಕಣ್ಣುಮುಚ್ಕೊಂಡಿದ್ದ ಕ್ಯಾತ"[೫] ಕ್ಯಾತನಿಗೆ ಬಾಲ್ಯದ ಅನುಭವಗಳು ಹಸಿ ಹಸಿಯಾಗೆ ಮನಸ್ಸಿನಲ್ಲಿ ಉಳಿದುಕೊಂಡು ಮತ್ತೆ ಮತ್ತೆ ಪುನರಾವರ್ತನೆಯಾಗುತ್ತವೆ. ಮನುಷ್ಯ ಸಂಬಂಧಗಳು ಯಾಕೆ ಈ ರೀತಿಯಾಗಿ ಕಾಡಿವೆ ಎಂಬುದನ್ನು ಲಂಕೇಶರ ಕೃತಿಗಳಿಗೆ ಒರೆ ಹಚ್ಚಿದರೆ ತಿಳಿಯುತ್ತದೆ. ಅವರ ಬೌದ್ಧಿಕ ಸ್ಥಿತಿ. ಲಂಕೇಶ್ ವೈಯಕ್ತಿಕವಾದ ಮತ್ತು ವ್ಯಕ್ತಿ ವಾದವನ್ನು ಒಂದು ಸಾಂಸ್ಥೀಕರಣದಂತೆ ಬಿಂಬಿಸುವ ಲೇಖಕ. ದೇವೀರಿಯ ಸಿನಿಮಾ ಜಗತ್ತು ರಾಮಪ್ಪನ ರಾಜಕಾರಣ, ಖಡವಾನಾಗ್ರರ ಹಿಕ್ಮತ್ತು ಮತ್ತು ಈ ಎಲ್ಲಾ ಕಡೆಗಳಲ್ಲೂ ವೈಯಕ್ತಿಕ ಲಾಲಸೆಗಳೇ ಪ್ರಧಾನವಾಗುತ್ತದೆ ಎಂದು ಗುರುತಿಸಬಹುದು. ಇಷ್ಟಾದರೂ ಇವುಗಳಿಂದ ತಪ್ಪಿಸಿಕೊಂಡ ಕ್ಯಾತ ಬೇಸರಾಗಿ ನುಗ್ಗುವ ಕನ್ನಡ ಚಳವಳಿಯ ಜಗತ್ತು. ಭೂಗತ ಜಗತ್ತು ಖಡವ ನಾಗ್ರರ ನಡವಳಿಕೆಗಳನ್ನು ಸಮಷ್ಟೀಕರಣವೆಂಬಂತೆ ಪುಷ್ಟೀಕರಿಸುವ ಲಂಕೇಶ್ ವೈಯಕ್ತಿಕವಾದವೆಲ್ಲವನ್ನು ಸಂಘರ್ಷದ ಹಿನ್ನಲೆಯಲ್ಲಿ ಸಾಂಸ್ಥೀಕರಣಗೊಳಿಸುವಂತೆ ಭಾಸವಾಗುತ್ತದೆ. ಕ್ಯಾತ ರಾಜಕೀಯದಿಂದ ಮುಕ್ತವಾಗದ ಸಮಾಜದ ಸಾಮಾಜಿಕ ಪರಿಧಿಯನ್ನು ಸ್ಪರ್ಶಿಸುತ್ತಾನೆ. ಹಾಗಾಗಿ ಲಂಕೇಶರು ಇಡೀ ಕಥೆಯ ಹೂರಣವನ್ನು ವೈಯಕ್ತಿಕ ಬದುಕಿನಿಂದ ಸಾಮಾಜಿಕ ಚೌಕಟ್ಟಿನ ಪ್ರಜ್ಞೆಯಲ್ಲಿ ಕಾಣುತ್ತಾರೆ. ಹಾಗೇ ಕಟ್ಟುವುದರಲ್ಲಿಯೇ ವಿಶೇಷತೆಯನ್ನು ಕಟ್ಟಿಕೊಟ್ಟಿದ್ದಾರೆ. ಇವುಗಳಿಂದ ಲಂಕೇಶರು ಮನುಷ್ಯನ ಸಂಬಂಧಗಳನ್ನು ಹುಡುಕುವ ನೈತಿಕ ಪ್ರಜ್ಞೆಯಲ್ಲಿ ಸಂಘರ್ಷದ ನೆಲೆಗಳನ್ನು ಗುರುತಿಸುವ ಶೋಧನೆಗಳಾಗಿವೆ.

'ಬಿರುಕು' ಕಾದಂಬರಿಯ ನಾಯಕ ಬಸವರಾಜುವಿಗೆ ತಾನು ಕಾಣುವ ಸಮಾಜ ಅತ್ಯಂತ ವಿಲಕ್ಷಣವೂ, ವಿಕ್ಷಿಪ್ತವೂ ಆದುದು. ಅಂದರೆ ಅವನ ದೃಷ್ಟಿಯಲ್ಲಿ ತೀರಾ ಅಸ್ವಭಾವಿಕವೂ,

---

೫. ಪಿ.ಲಂಕೇಶ್, 'ಅಕ್ಕ', ೨೦೧೧, ಪು. ೮೯.

ಕೃತಕವೂ ಆದ ಸತ್ಯರಹಿತ ಸಮಾಜ ಇಲ್ಲಿ ತನ್ನ ತನವನ್ನು ಉಳಿಸಿಕೊಳ್ಳಲು ಹೋರಾಡುತ್ತಿರುವ ಯುವಕ ಆತ ಎಂಬುದು ಭ್ರಮೆ. ಇಂಥಾ ಸಾಮಾಜಿಕ ಸ್ಥಿತಿ ಸ್ಥಿರೀಕರಣಗೊಳ್ಳದ ಕೃತಕ ಸಂವೇದನೆಗಳನ್ನು ತಾನು ಅರಗಿಸಿಕೊಳ್ಳಲಾಗದೆ. ಅಜೀರ್ಣದಲ್ಲಿ ತೊಳಲಾಡುವ ಬಸವರಾಜ ವ್ಯವಸ್ಥೆಯೊಡನೆ ರಾಜಿಯಾಗದೆ ರಾಡಿಯಾಗುತ್ತಾನೆ. ಹೋರಾಟವೆಂದರೆ ಭೌತಕವಾದ ಚಳವಳಿ ಎಂಬ ಹಸಿವೊಂದೇ ಅಲ್ಲ. ಅದು ಆತ್ಮ ಕೇಂದ್ರಿತವೂ ಹೌದು, ವ್ಯಕ್ತಿ ಕೇಂದ್ರಿತವೂ ಹೌದು ಎಂಬುದಾಗಿ ನಂಬುವ ತನ್ಮೂಲಕ ಆತ್ಮ ಕೋಲಾಹಲಕ್ಕೆ ಒಳಗಾಗುವ ಎಲ್ಲ ಆಧುನಿಕ ನಾಯಕನಂತೆ ತಾನೂ ಒಳಗಾಗುತ್ತಾನೆ. ಬಸವರಾಜ ಇಲ್ಲಿ ಅಪರಿಚಿತ ಪರಕೀಯತೆ, ಅನಾಥಪ್ರಜ್ಞೆಗಳನ್ನು ಅನುಭವಿಸುತ್ತಾನೆ. ತನ್ನ ಸುತ್ತಲಿನ ಸಮಾಜದ ಜೀವನ ಮೌಲ್ಯಗಳು ಪೊಳ್ಳು ಎಂದು ತಿಳಿದು ಸಿಡಿಮಿಡಿಗೊಳ್ಳುತ್ತಾನೆ. ಆರ್ಥಿಕವಾಗಿ ತೀರಾ ಸಂಕಷ್ಟದಲ್ಲಿದ್ದರೂ ಮನೆಯ ಮಾಲೀಕ ರಂಗಪ್ಪನ ಮಗಳಿಗೆ ಪಾಠ ಹೇಳಿಕೊಡಲು ಅವನು ತಯಾರಿಲ್ಲ. ಅವನ ಬೂರ್ಜ್ವಾ ಮೌಲ್ಯಗಳನ್ನು ಕಂಡರೆ ಇವನಿಗೆ ಸಹಿಸಲಾಗುವುದಿಲ್ಲ.

ಪ್ರೊಫೆಸರ್ ರಂಗಯ್ಯ ಅಲ್ಪ ಹೊಗಳಿಕೆಗೆ ಹಿಗ್ಗುವ ಸ್ವಭಾವದಿಂದ ಸಣ್ಣತನವನ್ನು ಬಯಲು ಮಾಡಿಕೊಳ್ಳುತ್ತಾನೆ. ಅವನ ಬಗ್ಗೆ ಬಸವರಾಜ್ ಸಂಪೂರ್ಣ ತಿರಸ್ಕಾರವನ್ನು ಬೆಳೆಸಿಕೊಳ್ಳುತ್ತಾನೆ, ಕೆರಳುತ್ತಾನೆ. ತಿಮಿಂಗಲ ಮತ್ತು ಸುವರ್ಣ ಈ ಸಮಾಜದ ಗಂಡಾಂತರಕಾರಿ ಶಕ್ತಿಗಳಾಗಿ ಕಾಣಿಸುತ್ತಾರೆ. ಹಾಗೆಯೇ ಅವನನ್ನು ತಮ್ಮ ಬಲೆಯಲ್ಲಿ ಬೀಳಿಸಲು ಯತ್ನಿಸುತ್ತಾರೆ. ವಿಶ್ವವಿದ್ಯಾಲಯದ ಆವರಣದಲ್ಲಿರುವ ಆಪ್ತತೆ ಆಫೀಸಿನಲ್ಲಿರುವುದಿಲ್ಲ. ವಿಶ್ವವಿದ್ಯಾನಿಲಯದ ಆಫೀಸು ಮತ್ತು ಯಾಂತ್ರಿಕತೆ ಅತೀವ ಔದಾಸೀನದಿಂದ ಬಸವರಾಜುವನ್ನು ದೂರವಿಡುತ್ತಾರೆ. ಚಂದ್ರಕಾಂತರೊಡನೆ ಅವನಿಗಿದ್ದ ಸಲುಗೆಯನ್ನು ಬಳಸಿಕೊಂಡು ತನ್ನದೊಂದು ಪುಟ್ಟ ಕೆಲಸವನ್ನು ಮಾಡಿಕೊಳ್ಳುವುದೂ ಅವನಿಗೆ ಮಾನಸಿಕವಾಗಿ ಸಾಧ್ಯವಾಗುವುದಿಲ್ಲ. ಒಟ್ಟಾರೆ ಬಸವರಾಜುವಿಗೆ ತನ್ನ ಹೊರತಾದ ಸಮಾಜದಲ್ಲಿ ಬದುಕುತ್ತಿರುವಂತೆ ಭಾಸವಾಗುತ್ತದೆ. ಇದು ಅವನಿಗೆ ತಾನು ನುಗ್ಗಲಾರದ ಕಾಡು ಎಂದೆನಿಸುತ್ತದೆ. ಇದು ನೈತಿಕ ಸಂಘರ್ಷವಾಗಿ ಏರ್ಪಡುತ್ತದೆ ತನ್ನೊಳಗೆ ತನ್ನ ತಲೆಯಲ್ಲಿ ಓಡಾಡುವ ತಿಮಿಂಗಲದ ಅನುಭವವಾಗುತ್ತದೆ. ಇದನ್ನು ಕಾದಂಬರಿಯಲ್ಲಿ ಅವನೇ ಹೇಳಿಕೊಂಡಿದ್ದಾನೆ. ಅವನಿಗೆ ಸಮಾಜದ ಎಲ್ಲ ಶಕ್ತಿಗಳು ಒಂದಾಗಿ ಅವನನ್ನು ಹಿಡಿದೆಳೆದು ಹತ್ತರಲ್ಲಿ ಹನ್ನೊಂದಾಗಿ ಸೇರಿಸಿಕೊಳ್ಳಲು ಯತ್ನಿಸುತ್ತವೆ. ಅದಕ್ಕಾಗಿ ಹತ್ತಾರು ಆಮಿಷಗಳನ್ನು ಒಡ್ಡುತ್ತವೆ. ಹಾಗಾಗಿಯೇ ಅವನು ಸಂಯಮ ಕಳೆದುಕೊಳ್ಳುತ್ತಿರುತ್ತಾನೆ. ರಾಜೀವ್ಯಾಪಾರ ಅವನಿಂದ ಸಾಧ್ಯವಿಲ್ಲ. ಇಂಥ ಸಮಾಜದ ಮೇಲೆ ಅವನು ಬೆಳೆಸಿಕೊಳ್ಳುವ ತಿರಸ್ಕಾರ ತೀರಾ ಪ್ರಾಮಾಣಿಕವೆಂದೇ ತೋರುತ್ತದೆ. ಕಾರಣ ಈ ಸಮಾಜದ ಅಸಂಖ್ಯ ವ್ಯಕ್ತಿಗಳೊಡನೆ ವ್ಯವಹರಿಸುವಾಗಲೆಲ್ಲ ಅವನು ಸಹಜ ನಡೆಯ ಸ್ವಾಭಾವಿಕನಂತೆ ತೋರದೆ ಎಡವುತ್ತಾರೆ. ತೀವ್ರವಾಗಿ ಪ್ರತಿಭಟಿಸುತ್ತಾನೆ. ಸಹಜವಾಗಿಯೇ

ವ್ಯವಸ್ಥೆಯ ಕೇಂದ್ರಿತ ಪಾತ್ರಗಳ ಮೇಲೆ ಆತನ ಪ್ರಕಾರ ಸಕಾರಣ ದ್ವೇಷ, ಅಸೂಯೆ ಬೆಳೆಸಿಕೊಳ್ಳುತ್ತಾನೆ. ಚಂದ್ರಕಾಂತರ ಮನೆಯಲ್ಲಿ ನೆರೆದ ಅತಿಥಿಗಳ ಮುಂದೆ ಅವರ ಕವನದ ಬಗ್ಗೆ ಮಾತಾಡುತ್ತಾ ಅವನಿಗೆ ಗೊತ್ತಿಲ್ಲದಂತೆ ಅವನ ಮನಸ್ಸು ಪ್ರಕಟವಾಗುವ ರೀತಿ ಮೂಡಿಬರುತ್ತದೆ.

"ಆತ ತುಂಬ ಕರಪ್ಟ್" ಅಂದೆ. 'ಅಂಥ ಜನರ ಸಹವಾಸ ತಮಗೆ ಒಳ್ಳೆಯದಲ್ಲ ಅಂತ....'

"ಬಾಯಮುಚ್ಚು, ನನಗೆ ಇಂಥವರೇ ಸ್ನೇಹಿತರಾಗಬೇಕು ಅಂತ ನೀನು ತೀರ್ಮಾನಿಸಿರೋ ಹಾಗೆ ಕಾಣುತ್ತೆ. ಯಾಕೋ ಬಹಳ ತಮಾಷೆಯಾಗಿ ನಡಕೊಳ್ತಿದ್ದೀ. ನನಗೆ ನಿನ್ನ ಸರ್ಕಾರ ಕೊಟ್ಟಿರೋದು ಅಷ್ಟರಲ್ಲೇ ಇದೆ. ಅವರು ಕೊಡ್ತಿರೋ ಸಂಬಳದ ಹತ್ತರಷ್ಟನ್ನು ಒಬ್ಬ ಮಾಂಸದಂಗಡಿಯ ಕಟುಕ ಗಳಿಸ್ತಾನೆ. ನಿನಗೆ ಅಸೂಯೆ ಇದ್ರೆ ಅದನ್ನೆಲ್ಲ ಬಿಟ್ಟುಬಿಡು. ಈ ವಯಸ್ಸಿಗೆ ಅದೆಲ್ಲ ಒಳ್ಳೆಯದಲ್ಲ" ಅಂದ.

ಶಾಂತ ಅಷ್ಟರಲ್ಲಿ ಒಂದು ಲೋಟ ತಂದು ಇಟ್ಟಿದ್ದಳು ನಾನು ಆತನ ಬುದ್ಧಿವಾದ ಕೇಳುತ್ತಾ ಕುಂತೆ, ಹಣೆಯ ಮೇಲೆಲ್ಲಾ ಬೆವರು, ಅವನಿಗೆ ಕಂಡು ನಿನ್ನ ಪ್ರತಿಕ್ರಿಯೆ ಏನು ಬರಬಹುದು ಅಂತ ಆತಂಕವಾಗಿರಬೇಕು. ಕೊಂಚ ಕಾಲ ಮಾತಾಡದೆ ಕೂತ, ಆತ ನಗುತ್ತಿರಬಹುದೇ, ರೇಗುತ್ತಿರಬಹುದೇ, ಸುಮ್ಮನೆ ಯೋಚಿಸುತ್ತಿರಬಹುದೇ...... ಅಂತ ನೋಡಿದೆ."[೬] ಆದರೆ ಬಸವರಾಜ್ ಕಂಡ ಈ ಸಮಾಜ ಎಷ್ಟರಮಟ್ಟಿಗೆ ಸ್ವಾಭಾವಿಕ ಎಂಬುದನ್ನು ವಿಶ್ಲೇಷಿಸಬೇಕಾದ ಅಂಶ. ಗಂಗಪ್ಪ, ರಂಗಯ್ಯ ತಿಮಿಂಗಿಲ ಕೊನೆಗೆ ಆನಂದು, ಪರಮ ಎಲ್ಲರೂ ಬಸವರಾಜನ ವ್ಯಂಗ್ಯ ದೃಷ್ಟಿಯಲ್ಲಿ ಕಪ್ಪು ಕಪ್ಪಾಗಿ ಮುಸುಕು ಮುಸುಕಾದ ನೆಗೆಟಿವ್ ರೂಪಗಳಾಗಿ ಪರಿವರ್ತಿತವಾಗುವುದರಿಂದ ಈ ಪಾತ್ರಗಳ ನಿಜವಾದ ವ್ಯಕ್ತಿತ್ವ ಎಲ್ಲಿ ಮರೆಮಾಚಲ್ಪಟ್ಟಿದೆಯೋ ಅಥವಾ ಅವುಗಳ ವ್ಯಕ್ತಿತ್ವವೇ ಆಗಿರುವ ಕಾಲ್ಪನಿಕ ಕಥಾ ಚಿತ್ರವೋ ಅಥವಾ ಕಾಲಘಟ್ಟದಲ್ಲಿ ಬದಲಾದ ಜೀವನ ವಿಧಾನದಲ್ಲಿ ಕಾಣಿಸಿಕೊಂಡ ವ್ಯಕ್ತಿಗಳು ಇರಬಹುದೋ ಏನೋ ಎಂಬ ಸಂದೇಹಗಳೂ ಅನುಮಾನಗಳು ಹುಟ್ಟಿಕೊಳ್ಳುತ್ತವೆ. ಅವರು ಪ್ರತಿನಿಧಿಸುವ ಸಮಾಜ ಕೂಡ ವರ್ಣರಂಜಿತವೂ, ಅತಿರಂಜಿತವೂ ಆದುದಾಗಿದೆ. ಅದು ಸ್ವಾಭಾವಿಕವಾದುದಲ್ಲ ಎಂಬುದು ಬಸವರಾಜು ಬೇಕಂತಲೇ ಆರಿಸಿಕೊಡುವ ವಿವರಗಳಿಂದಲೇ ಗೊತ್ತಾಗುತ್ತದೆ. ಗಂಗಪ್ಪನ ಮಗಳು ಇಂದಿರಾಳನ್ನು ಮೋಟು ಜಡೆಯ ಇದ್ದಿಲಿನ ತುಣುಕು ಎಂದು ಕರೆಯುತ್ತಾರೆ. ರಂಗಯ್ಯನ ಹೆಂಡತಿಗೆ ತಿಮಿಂಗಿಲ ಎಂದು ಹೆಸರಿಡುತ್ತಾರೆ. ಅಂದರೆ ಅವಳ ಸ್ವಭಾವ ಹಾಗೂ ಅವಳ ದೇಹದ ಆಕಾರ ಇದಕ್ಕೆ ಕಾರಣ ಆಫೀಸಿನ ಹೆಡ್ ಕ್ಲಾರ್ಕ್ ಬಾಯೊಳಗೆ ಬೆರಳು ಹೆಟ್ಟಿ ಕಸ ತೆಗೆಯುತ್ತ ಕುಳಿತುದರ ಮೇಲೆ ಒತ್ತು ಕೊಡುತ್ತಾನೆ.

---

೬. ಪಿ.ಲಂಕೇಶ್, 'ಬಿರುಕು', ೨೦೦೯, ಪು. ೭೪.

ರಂಗಯ್ಯನ ವಿದ್ಯಾರ್ಥಿನಿ ಪ್ರೊ.ಬುಳ್ಳಪ್ಪನವರ ಕೆಟ್ಟ ಇಂಗ್ಲೀಷ್. ಇಂಥವುಗಳನ್ನೆಲ್ಲಾ ಎತ್ತಿ ತೋರಿಸುತ್ತಾನೆ. ಈ ವಿಕೃತ ವಿವರಗಳು ಅವರು ಪ್ರತಿನಿಧಿಸುವ ಸಮಾಜವೂ ಒಂದಕ್ಕೊಂದು ಸಂಬಂಧದ ಬಂಧದಂತೆ ಕಾಣಸಿಗುವುದಿಲ್ಲ. ಆದರೂ ಬಸವರಾಜ ತಾನು ಭಾಗಿಯಾಗುವ ಎಲ್ಲ ವ್ಯಕ್ತಿ ಹಾಗೂ ಸಮಯ ಸಂದರ್ಭಗಳಲ್ಲಿ ಇಂಥಾ ವಿಕೃತ ವಿವರಗಳನ್ನೇ ಪಟ್ಟಿಮಾಡುತ್ತಾನೆ. ವ್ಯಂಗ್ಯ ಮಿಶ್ರಿತ ಧಾಟಿಯಲ್ಲೇ ಅವಕ್ಕೆ ಪ್ರತಿಕ್ರಿಯಿಸುತ್ತಾನೆ. ವಿನೋದದ ಹೆಸರಲ್ಲಿ ಮತ್ತಿನ್ನೇನನ್ನೋ ಸೃಷ್ಟಿಸುತ್ತಾನೆ. ಹೀಗೆ ಮುಂದುವರೆಯುವ ಅವನ ಮನಸ್ಥಿತಿಗೆ ಕಾರಣವಾದರೂ ಏನು? ಇದು ಸಮಕೇಂದ್ರಿತ ವ್ಯವಸ್ಥೆಯೇ? ಅಥವಾ ಬಸವರಾಜನ ವಿಕೃತ ಮನಸ್ಸಿನ ಹುಡುಕಾಟವೇ ಹೇಗೆ? ಎಂಬಂತೆ ಅನುಮಾನ ಮೂಡುತ್ತದೆ. ಒಮ್ಮೊಮ್ಮೆ ಈ ಬಸವರಾಜ ತನ್ನ ಮನಸ್ಥಿತಿಗೆ ಒಗ್ಗುವಂಥಾ ಸಮಾಜದ ಒಂದು ಫ್ಯಾಂಟಸಿಯನ್ನೇ ತನ್ನ ಸುತ್ತಾ ರಚಿಸಿಕೊಂಡು ರೇಷ್ಮೆ ಹುಳುವಿನಂತೆ ತಾನೇ ಅದರಿಂದ ಹೊರಬರಲಾರದೆ ಒದ್ದಾಡುತ್ತಾನೇನೋ ಎಂಬಂತೆ ಭಾಸವಾಗುತ್ತದೆ. ಹಾಗೆ ನೋಡಿದರೆ ಸಮಕಾಲೀನ ಸಮಾಜವನ್ನು ಸತ್ವಹೀನ ಎಂದು ಒಡೆಯುವ ಬಸವರಾಜ ಹೋಗಲಿ ತಾನು ಸಂರಚಿಸಿಕೊಂಡ ಅಥವಾ ಕಲ್ಪಿಸಿಕೊಂಡ ಕಾಲ್ಪನಿಕ ಸಮಾಜವಾದರೂ ಸಕಾರಾತ್ಮಕವಾಗಿದೆಯೇ? ಹೇಗೇ? ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ಹುಡುಕಾಡಿದರೆ ಅದು ಕೂಡ ಮೌಲ್ಯರಹಿತ ಸಮಾಜದ ರೂಪವೆಂಬಂತೆ ಗೋಚರಿಸುತ್ತದೆ. ನಿಜವಾದ ಪ್ರಶ್ನೆ ಉದ್ಭವಿಸುವುದೇ ಇಲ್ಲ. ಈ ಸಾಮಾಜಿಕ ರಚನೆಯಿಂದ ವಾಸ್ತವಿಕ ಜಗತ್ತಿನಿಂದಲೂ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಸಮಕಾಲೀನ ವಾಸ್ತವವನ್ನು ಎದುರಿಸುವುದು ಅವನಿಂದಾಗದು. ಹೀಗೆ ಒಂದು ವ್ಯವಸ್ಥೆಯಿಂದ ಮತ್ತೊಂದು ವ್ಯವಸ್ಥೆಗೆ ತಲೆತಪ್ಪಿಸಿಕೊಂಡು ಓಡುವ ಕಥಾನಾಯಕ ಅದಕ್ಕೆ ಸರಿಯಾದ ಸಕಾರಣವನ್ನು ಕೊಡುವುದಿಲ್ಲ. ಬದಲಿಗೆ ಬೇಜವಾಬ್ದಾರಿಯ ಕನಸನ್ನು ಕಟ್ಟುತ್ತಾನೆ. ಸುಳ್ಳಿನ ಬಲೆ ಎಣಿಯುತ್ತಾನೆ. 'ರಾಜಭವನ' ಎಂದರೆ ನಾಯಕನೇ ಕಟ್ಟಿಸಿಕೊಂಡಿರುವ 'ಬಸವರಾಜಭವನ' ಇಲ್ಲಿ ನಡೆಯುವ ವಿದ್ಯಮಾನವೆಲ್ಲ ವಾಸ್ತವದಿಂದ ತಪ್ಪಿಸಿಕೊಂಡು ಕನಸಿನ ಪ್ರಪಂಚದಲ್ಲಿ ಅಡಗಿಕೊಳ್ಳುವ ಒಂದು ಪ್ರಯತ್ನ ಹೋಗಲಿ ಅಲ್ಲಾದರೂ ಅವನು ಸುಖಿಯೇ? ಅಲ್ಲೂ ಅವನು ಸುಖಿಯಲ್ಲಾ. ಕನಸಿನ ಲೋಕದಲ್ಲಿ ಸಣ್ಣ ಬಿಕ್ಕಟ್ಟುಗಳನ್ನು ಅವನು ಎದುರಿಸಲಾರ, ವಾಸ್ತವದಲ್ಲಿ ಹೇಗೋ, ಭ್ರಮಾಲೋಕದಲ್ಲೂ ಮತ್ತದೇ ಪುನರಾವರ್ತನೆ, ಶಾಂತಾಳನ್ನು ಮುಕ್ತಗೊಳಿಸಲು ಸಿದ್ಧನಾಗಿ ಹೋರಾಟಕ್ಕಿಳಿದಾಗ ಅವನು ತನ್ನ ಎದುರಾಳಿಯನ್ನು ನೋಡಿಯೇ ಮೂರ್ಛೆ ಹೋಗುತ್ತಾನೆ.

ವಾಸ್ತವ ಜಗತ್ತಿನಲ್ಲಿ ಕಾಣುವ ಕನಸು ಮತ್ತು ತಾಯಿಯ ಕಥೆ. ಶಾಂತ ರಂಗಯ್ಯ, ತಿಮಿಂಗಿಲ ಇವರೆಲ್ಲರ ಪ್ರಸಂಗಗಳಲ್ಲಿ ಬಸವರಾಜ ಗಾಂಭೀರ್ಯವನ್ನು ಅನುಭವಿಸುತ್ತಿದ್ದಾನೆ ಎನಿಸುತ್ತದೆ. ನೈತಿಕ ಸಂಘರ್ಷದಲ್ಲಿ ಏರ್ಪಡುವ ಏರಿಳಿತವಾಗಿ ಕಾಣುತ್ತದೆ. ಬೌದ್ಧಿಕ ಪಾತಳಿಯಲ್ಲಿ ಆಲೋಚಿಸುವ ಬಸವರಾಜ ತನ್ನ ಆತ್ಮ ಸಾಕ್ಷಾತ್ಕಾರಕ್ಕೆ ತನ್ನನ್ನು ತಾನು

ಒಪ್ಪಿಕೊಳ್ಳುವುದಕ್ಕೆ ಕೊನೆಗೂ ತನ್ನಲ್ಲೇ ಅರ್ಥವನ್ನು ಕಂಡುಕೊಳ್ಳುವುದಕ್ಕೆ ಅವಲಂಭಿಸುವಂತೆ ಕಾಣಿಸುತ್ತಾನೆ. ಕೊನೆಯಲ್ಲಿ ಎಲ್ಲ ಭ್ರಾಂತಿಯನ್ನು ಕಳಚಿಕೊಂಡು ಏನನ್ನೋ ಕಳೆದುಕೊಂಡಂತೆ, ಏನನ್ನೋ ಗೆದ್ದಂತೆ ಅನಿಸುವುದು ಅವನ ಬೌದ್ಧಿಕ ಹಸಿವಿನ ನೈತಿಕ ಸಂಘರ್ಷವೇ. ಬಸವರಾಜ ಕಾದಂಬರಿಯ ಆರಂಭದಿಂದಲೂ ಸಿದ್ಧ ಮೌಲ್ಯಗಳ ಸಮಕಾಲೀನ ಸಮಾಜವನ್ನು ನಿರಾಕರಿಸುತ್ತಾ ಹೋಗುತ್ತಾನೆ. ಬದಲಾಗಿ ಗಟ್ಟಿಯಾಗಿ ನಿಂತು ವ್ಯವಸ್ಥೆಯ ವಿರುದ್ಧ ಹೋರಾಡುವುದೂ ಇಲ್ಲ. ಮೊದಲಿನಿಂದ ಕೊನೆಯವರೆಗೂ ಓಡಿ ಹೋಗುವ ಇಲ್ಲಯೇ ತಪ್ಪಿಸಿಕೊಳ್ಳುವ ಪ್ರವೃತ್ತಿಯವನು. ಆದ್ದರಿಂದ ಇವನಿಗೆ ಹೋರಾಟದ ಪರಿಕಲ್ಪನೆಯೇ ಇಲ್ಲಿ ಹೋರಾಟದ ಹೆಸರಿನಲ್ಲಿ ತನ್ನದೇ ಭ್ರಾಂತಿಯಿಂದ ಬಳಲುವ ಇವನು ಹೋರಾಟದ ದಿಕ್ಕು ದೆಸೆಗಳನ್ನು ಮುಟ್ಟುವುದು ಇಲ್ಲ. ತನಗೆ ತಾನೇ ಗುರಿಯೊಂದನ್ನು ನಿರ್ಧರಿಸಿಕೊಳ್ಳುವುದೂ ಇಲ್ಲ. ಸಮಾಜ ಎಲ್ಲ ಗೊಂದಲಗಳನ್ನು ಬೊಟ್ಟು ತೋರಿಸಿ ವಿಡಂಬಿಸುವ ಬಸವರಾಜ ಸತ್ಯ ರಹಿತ ಸಮಾಜವೊಂದರ ಸತ್ಯಪೂರ್ಣತೆಗೆ ಅದರದ್ದೇ ಆದಂತ ಸಾಮಾಜಿಕ ಚಿಂತನೆ ಈ ಎಲ್ಲಾ ಗೊಂದಲಗಳಿಗೆ ಕಾರಣವಾಗುತ್ತದೆ. ಸಾಮಾಜಿಕ ಮೌಲ್ಯಕ್ಕೂ ಅವನ ಆದರ್ಶ ಸಮಾಜಕ್ಕೂ ನಡುವೆ ಸಂಘರ್ಷವೇರ್ಪಟ್ಟು ಅದು ಸಕಾರಾತ್ಮಕವಾಗಿಯೋ, ನಕರಾತ್ಮಕವಾಗಿಯೋ ಅಂತ್ಯ ಕಂಡಿದ್ದರೆ ಅದರ ಪ್ರತಿಫಲಿತ ಅಂಶಗಳು ಆಶಾದಾಯಕವಾಗಿರುತ್ತಿದ್ದವೇನೋ, ಆದರೆ ಕೈಕಾಲು ಕಟ್ಟಿಕೊಂಡು ಕುಸ್ತಿಗೆ ಬಿದ ಜಟ್ಟಿಯೊಬ್ಬ ಮಣ್ಣು ಮುಕ್ಕಿದಂತೆ ಸತ್ಯರಹಿತ ಸಮಾಜವೆಂಬ ಅವನ ಪರಿಕಲ್ಪನೆಯ ವಾಸ್ತವದೊಂದಿಗೆ ಸೆಣಸಾಡುತ್ತಲೇ ಓಡಿಹೋಗುತ್ತಾನೆ. ಈ ನೆಲೆಗಟ್ಟು ಬೌದ್ಧಿಕ ಹಸಿವು ನೈತಿಕ ಸಂಘರ್ಷದೆಡೆಗೆ ಬಿರುಕು ಕಾದಂಬರಿ ಮನುಷ್ಯ ಸಂಬಂಧದ ಪಾತಳಿಯಲ್ಲಿ ನೆಲೆಗೊಳ್ಳುತ್ತದೆ.

ಪಿ.ಲಂಕೇಶರ 'ನಾನಲ್ಲ' ಕಥಾ ಸಂಕಲನದ ಅತ್ಯಂತ ಸಶಕ್ತ ಕಥೆಯಾಗಿ ಹೊರಹೊಮ್ಮಿದ್ದು 'ರೊಟ್ಟಿ' ಕಥೆ. ಈ ಕಥೆಯಲ್ಲಿ "ಲೇಖಕರು ತಮ್ಮ ಕೃತಿ ಜೀವನದ ಇನ್ನೊಂದು ಹಂತವನ್ನೇರುತ್ತಿರುವುದು ಸ್ಪಷ್ಟ ಸೂಚನೆ ಇದೆ. ಬಡತನ, ಹಸಿವು, ಉಳ್ಳವರು, ಇಲ್ಲದವರು, ಕ್ರಾಂತಿ ಮುಂತಾದವುಗಳ ಬಗ್ಗೆ ಬರೆದಿರುವ ಕಥೆಗಳ ಜೊತೆಗೆ ಈ ಕಥೆಯನ್ನು ಹೋಲಿಸಿ ನೋಡಿದರೆ ನಮ್ಮ ಗದ್ಯ ಸಾಹಿತ್ಯದಲ್ಲಿ ನೈತಿಕಸಂಘರ್ಷದ ನೆಲೆಗಟ್ಟು ಪಸರಿಸುವುದನ್ನು ಕಾಣಬಹುದು. ಇಲ್ಲಿಯ ವಸ್ತುವು ಒಂದೇ ರೀತಿಯಿಂದ ಕೂಡಿದೆ ಆದರೂ ಇಲ್ಲಿ ಮೂಡುವ ನಮ್ಮ ಸಮಕಾಲೀನ ಸಮಾಜ ಜೀವನದ ಚಿತ್ರ ಹೇಗೆ ಸಂಕೀರ್ಣವಾಗಿ ಸೇರಿದೆ. ಆದಕಾರಣ ಸತ್ಯ ಮತ್ತು ಸತ್ವಪೂರ್ಣವಾಗಿ ಮೂಡಿದೆ ಎಂಬುದನ್ನು ನಾವು ಗಮನಿಸಬೇಕು. ಪೂರ್ವಗ್ರಹೀತವಾದೊಂದು ಸಿದ್ಧಾಂತಕ್ಕೆ ಕಟ್ಟು ಬೀಳದೆ ಬದುಕನ್ನು ನೋಡುವ ಕಲೆಗಾರನ ಪೂರ್ಣ ದೃಷ್ಟಿಯ ನೋಟಕ್ಕೆ ಈ ಕಥೆ ಉತ್ತಮ ಉದಾಹರಣೆಯಾಗಿದೆ."[೭] ಎಂದು ಹೇಳುವ

೭. ಪಿ.ಲಂಕೇಶ್, ಸಮಗ್ರ ಕಥೆಗಳು, ಪು. ೮೩.

ಗೋಪಾಲಕೃಷ್ಣ ಅಡಿಗರು ಸಾಮಾಜಿಕ ಸತ್ಯವನ್ನು ಇಷ್ಟು ಚೆನ್ನಾಗಿ ಚಿತ್ರಿಸುವ ಈ ಕಥೆ ಕನ್ನಡ ಸಾಹಿತ್ಯದಲ್ಲೇ ಒಂದು ಅತ್ಯುತ್ತಮ ಸಣ್ಣಕಥೆ ಎಂದಿದ್ದಾರೆ. ಅನ್ನದ ಹಸಿವು ಸೃಷ್ಟಿಸಿರುವ ಅಗಾಧ ಅಸಮಾನತೆಯು ಸೃಷ್ಟಿಸುವ ಅಶಾಂತಿಯನ್ನು ರೊಟ್ಟಿ ಕಥೆ ಅರ್ಥಪೂರ್ಣವಾಗಿ ಚಿತ್ರಿಸಿದೆ.

ಉಳ್ಳವರು ಇಲ್ಲದವರ ನಡುವಿನ ನೈತಿಕ ಸಂಘರ್ಷವನ್ನು ಈ ಕಥೆ ಚಿತ್ರಿಸುತ್ತಿದ್ದರೂ ಹಸಿವಿನ ತೀವ್ರತೆಯನ್ನು ಸಾಮಾಜಿಕ ಪ್ರಜ್ಞೆಯಲ್ಲಿ ನಮ್ಮ ಗಮನಕ್ಕೆ ತಂದುಕೊಡುತ್ತದೆ. ಹಳ್ಳಿಯಿಂದ ನಗರಕ್ಕೆ ತನ್ನ ಮಗಳ ಬಾಣಂತನಕ್ಕಾಗಿ ಬಂದು ಹೊರಡುವಾಗ ರೈಲ್ವೆ ಸ್ಟೇಷನ್ನಿನಲ್ಲಿ ನಡೆಯುವ ಘಟನೆ ಒಬ್ಬಂಟಿ ಮುದುಕಿಗೆ ಆಗುವ ಅನುಭವವನ್ನು ಓದುಗನ ಆಲೋಚನೆಗೆ ಪಕ್ಕಾಗಿಸಿ ಒಂದು ಸಾಮಾಜಿಕ ಸಂದರ್ಭ ಮತ್ತು ವ್ಯಕ್ತಿಯ ಅಸಹಾಯಕತೆ ತುಂಬಾ ಪರಿಣಾಮಕಾರಿಯಾದುದು. 'ರೊಟ್ಟಿ' ಎಂಬ ಹೆಸರೇ ಕತೆಯ ಆಶಯ ಮತ್ತು ಆ ಕೃತಿಗಳೆರಡನ್ನು ಬಹು ಸಮರ್ಥವಾಗಿ ಸಂಕೇತಿಸುತ್ತದೆ. ವ್ಯಕ್ತಿಯ ಮಾತು ಕೃತಿ ಆಶಯಗಳನ್ನು ಮೀರಿದ ಪರಿಸರ ಜಡವಾಗಿದೆ. ವ್ಯವಸ್ಥೆ ಕ್ರೂರವಾಗಿವೆ. ವ್ಯಕ್ತಿಗೆ ಇಂತಹ ಪರಿಸರ ಮತ್ತು ವ್ಯವಸ್ಥೆಯೊಂದಿಗೆ ಸಂವಾದ ಸಾಧ್ಯವಾಗದೆ ಅಸಹಾಯಕನಾಗುವ ಸಂದರ್ಭವನ್ನು ನೈತಿಕ ಸಂಘರ್ಷದ ಹಿನ್ನಲೆಯಲ್ಲಿ ನಡೆದ ಜಗಳದಲ್ಲಿ ಪ್ರತಿಪಾದಿಸಲಾಗುತ್ತದೆ. ಲಂಕೇಶರು ಹಸಿವು, ಬಡತನ ಇವುಗಳನ್ನು ಮೀರಿದ ಮಾನವೀಯ ಜಗತ್ತೊಂದನ್ನು ಸೃಷ್ಟಿಸಿದ್ದಾರೆ. ಅಸಹಾಯಕ ಬಡ ಹೆಂಗಸಿನ ಮೇಲೆ ಹಾಗೂ ಭಿಕ್ಷುಕನ ಸ್ಥಿತಿಗೆ ಮರುಗಿ ಆ ಹೆಣ್ಣಿನ ಮಾನವೀಯ ಗುಣವನ್ನೇ ಶಂಕಿಸುತ್ತಾರೆ. ಕಿತ್ತು ತಿಂದ ರೊಟ್ಟಿಯೇ ಆ ಬಡ ಹೆಂಗಸಿನ ಅಂದಿನ ಆಹಾರ. ಆ ಭಿಕ್ಷುಕನಿಗೆ ಬೇಡಿ ತಿನ್ನುವ ಸಾಕಷ್ಟು ಅವಕಾಶಗಳಿದ್ದವು ಈ ಸಣ್ಣ ಘಟನೆ ಅಷ್ಟೊಂದು ಭೀಕರತೆ ಪಡೆದುಕೊಳ್ಳಲು ಆ ಹೆಣ್ಣಿನ ಅಸಹಾಯಕ ಸ್ಥಿತಿಯನ್ನು ಅರ್ಥಮಾಡಿಕೊಳ್ಳದ ಸಮಾಜ ಬಡವಿ ಮತ್ತು ಭಿಕ್ಷುಕರ ನಡುವೆ ನಡೆದ ಈ ಘಟನೆಗೆ ತಾದಾತ್ಮ್ಯ ಕಲ್ಪಿಸುತ್ತದೆ. ಈ ಸಮಾಜದಲ್ಲಿ ಬಡವ ಮತ್ತು ಭಿಕ್ಷುಕ ಎರಡು ಸಮಾನ ಎಂಬ ಪರಿಕಲ್ಪನೆಗಳನ್ನು ಸೃಷ್ಟಿಸುತ್ತದೆ.

'ಒಂದು ಬಾಗಿಲು' ಕಥೆ ಕಡುಬಡವರನ್ನು ಮಧ್ಯಮವರ್ಗ ಮತ್ತು ಉಳ್ಳವರು ಹೇಗೆ ನಡೆಸಿಕೊಳ್ಳುತ್ತಾರೆ ಎಂಬುದರ ಮೇಲೆ ಇದು ಕೇಂದ್ರೀಕೃತವಾಗಿದೆ. ನಿರೂಪಕರ ಮನೆಕಟ್ಟುವ ಕೂಲಿ ಆಳುಗಳಲ್ಲಿ ಒಬ್ಬಳಾದ ಚಿನ್ನಮ್ಮ ತನ್ನ ಗುಡಿಸಲಿಗೆ ಬಾಗಿಲಾಗಿ ಹಲಗೆ ಬಳಸಿಕೊಳ್ಳಲು ನಿರೂಪಕರನ್ನು ಕೇಳಿದ್ದಳು. ನಿರೂಪಕರು ಹಲಗೆ ಅಲ್ಲ ಬಾಗಿಲೇ ಮಾಡಿಸಿಕೊಡು ಎಂದು ಮುನಿರಾಜನಿಗೆ ವಹಿಸಿದ್ದರು. ಹಾಗೂ ವೃದ್ಧಾಪ್ಯವೇತನ ಮಾಡಿಸಿಕೊಡಲು ಪ್ರಯತ್ನಿಸಿದನು. ಮುನಿರಾಜು ಚಿನ್ನಮ್ಮನಿಗೆ ಬಾಗಿಲು ಮಾಡಿಸಿಕೊಟ್ಟು ತಾನೇ ಆ ಬಾಗಿಲನ್ನು ಕದ್ದಿದ್ದನು.

ಚಿನ್ನಮ್ಮ ಬಾಗಿಲು ಕಳುವು ಆದ ವಿಚಾರವನ್ನು ಪೊಲೀಸ್ ಸ್ಟೇಷನ್‌ಗೆ ತಿಳಿಸಿದ್ದಳು. ಏನೂ ಪ್ರಯೋಜನವಾಗಲಿಲ್ಲ. ಮುನಿರಾಜು ಆದಿಯಾಗಿ ಎಲ್ಲರೂ ಚಿನ್ನಮ್ಮಳೇ ಕದ್ದಿರುವುದು

ಎಂದು ಆರೋಪಿಸಿದರು. ಆದರೆ ನಿರೂಪಕರು ದಾಸ್ ಸೇರಿದಂತೆ ಮುನಿರಾಜನೇ ಕದ್ದಿರುವುದು ಎಂದು ಪತ್ತೆ ಹಚ್ಚಿ ಬಾಗಿಲು ಹಿಂತಿರುಗಿಸಬೇಕೆಂದು ಹೇಳಿದ್ದರು. ಬಡವಿಗೆ ನೆರವಾದ ನಿರೂಪಕರು ನೈತಿಕ ಸಂಘರ್ಷದ ನೆಲೆಯಲ್ಲಿ ಒಳಿತನ್ನು ಮಾಡುವುದು ಮುಖ್ಯವಾಗುತ್ತದೆ.

'ವೃಕ್ಷದ ವೃತ್ತಿ' ಕಥೆಯಲ್ಲಿ ಪಾರ್ವತಮ್ಮನ ಸ್ವಾವಲಂಬಿ ಬದುಕು, ವೃತ್ತಿ, ನಿಷ್ಠೆ, ಬದುಕು, ಆದರ್ಶ ಮತ್ತು ತಾನು ಅಂದುಕೊಂಡದ್ದನ್ನು ಸಾಧಿಸಿದ್ದ ಗೆಲುವು ಈ ಕತೆಯಲ್ಲಿ ಮುಖ್ಯವಸ್ತುವಾಗಿದೆ. ಅಂದರೆ ಪಾರ್ವತಮ್ಮ ತನ್ನ ಹೊಟ್ಟೆ ಹೊರೆಯಲು ಉದ್ಯೋಗಕ್ಕೆ ಅಲೆದಾಡುವ ಚಿತ್ರಣ ಬರುತ್ತದೆ. ಈಕೆ ಎಂ.ಎ. ಪಾಸ್ ಮಾಡಿದ ವಿದ್ಯಾವಂತೆ. ತನ್ನ ಗೆಳೆಯ–ಗೆಳತಿಯರಿಗೆ ಉದ್ಯೋಗ ಪಡೆಯುವಾಗ ಸಂಭವಿಸಿದ ಕಹಿ ಘಟನೆಗಳನ್ನು ಅರಿತಿದ್ದಳು. ಗೆಳೆಯ–ಗೆಳತಿಯರು ಸತ್ತಿದ್ದ ವಿಚಾರ, ತಾನೇ ಉದ್ಯೋಗಕ್ಕೆ ಹೋದಾಗ ಮನಸ್ಸಿಗೆ ಕಷ್ಟವಾಗುವಂಥ ಕೆಲಸಗಳಿಗೆ ಬೇಸತ್ತಿದ್ದಳು. ಕೊನೆಗೆ ಅಪ್ಪನಿಂದ ತೆಂಗಿನ ಮರಗಳನ್ನು ಪಡೆದುಕೊಂಡು ಪ್ರೀತಿಯಿಂದ ಜವಾಬ್ದಾರಿಯುತವಾಗಿ ಸಾಕಿದ್ದಳು. ತೆಂಗಿನಮರಗಳಲ್ಲಿ ಹೆಚ್ಚಿನ ಫಲ ಕಂಡಿದ್ದಳು. ತನ್ನ ಬೇಕುಬೇಡಗಳನ್ನು ತೆಂಗಿನಕಾಯಿ ಮಾರಿ ಪಡೆಯುತ್ತಿದ್ದಳು. ಪಾರ್ವತಮ್ಮ ತನ್ನ ಹಸಿವನ್ನು ನೀಗಿಸಿಕೊಳ್ಳಲು ತನ್ನ ಬೇಕು ಬೇಡಗಳನ್ನು ಪೂರೈಸಿ ಕೊಳ್ಳಲು ಸ್ವಾವಲಂಬಿ ಬದುಕನ್ನು ಪ್ರೀತಿಸುವ ಈಕೆ ತನ್ನ ಸುತ್ತಣ ಪರಿಸರವನ್ನು ಪ್ರೀತಿಸುವುದನ್ನು ಕಾಣಬಹುದು.

'ಕಲ್ಲು ಕರಗುವ ಸಮಯ' ಕಥೆಯಲ್ಲಿ ಬಂಡಾಯವೆಂಬ ಹಸಿವು ಸೂಕ್ಷ್ಮವಾಗಿ ಕಥೆಯೊಳಗೆ ಹೆಣೆದುಕೊಂಡಿದೆ. ಮನುಷ್ಯ ಸಂಬಂಧಗಳು ಜಾತಿನಿಷ್ಠ ಮತ್ತು ವ್ಯಕ್ತಿನಿಷ್ಠವಾದಾಗ ನೈತಿಕ ಸಂಘರ್ಷ ವೇರ್ಪಡುವ ಬಗೆಯನ್ನು ಲಂಕೇಶರು ತುಂಬಾ ಸೂಕ್ಷ್ಮವಾಗಿ ಹಿಡಿದಿಟ್ಟಿದ್ದಾರೆ. 'ಅಮೃತಾಂಬುಧಿ' ಎಂಬ ಊರು ಮತ್ತು ಕೆರೆ ಜಾತಿನಿಷ್ಟವಾಗಿರುವ ನಿರ್ಭಯವಾಗಿರುವ ಸಾಂಪ್ರದಾಯಿಕ ಪರಿಸರದೊಳಗೆ ಜಾತಿಮೀರಿದವರ ಕೊಲೆಗಳನ್ನು ಮಾಡಿ ವಿಜೃಂಭಿಸಿದ ಊರು ಇವುಗಳನ್ನು ಕೇಳಲು ಕ್ರಾಂತಿವೇದಿಕೆ ರುದ್ರ ಮತ್ತು ಮಲ್ಲೇಶಿ ಮುಂಚೂಣಿಯಲ್ಲಿರುತ್ತಾರೆ. ವ್ಯವಸ್ಥೆಯನ್ನು ಪ್ರಶ್ನಿಸಲು ಅಂಜುತ್ತಾರೆ– ಕಾರಣ ಯಾರನ್ನು ಬೇಕಾದರೂ ಕೊಲ್ಲುವ ಸಂದರ್ಭವೇರ್ಪಡುತ್ತದೆ. ಇಲ್ಲಿ ಐತಿಹಾಸಿಕವಲ್ಲದ ಸಮಾನತೆಯ ಸಂಗತಿ ಸಾಮಾನ್ಯವಾಗಿ ಪತ್ರಿಕೋದ್ಯಮ ಬೀಜ ಬಿತ್ತುತ್ತೆ. ಇದು ಶ್ಯಾಮಲೆಯಲ್ಲಿಯೂ ಕಂಡುಬರುತ್ತೆ. ಈ ಮೂಲಕ ಪ್ರೀತಿಯ ಮೊಳಕೆ ಹೊಡೆಯುತ್ತೆ. ಇಡೀ ಊರು ನಿರೀಕ್ಷೆಯನ್ನು ಕೊಲೆ ಮಾಡಲ್ಲ ಬದಲಾಗಿ ಗಟ್ಟಿತನ ಅಧೀರ ನಿಲುವು ಇಲ್ಲಿ ನೇರವಾಗಿ ಮನೆಗೆ ಹೋಗಿ ಮದುವೆಯಾಗೋದು ಬಂಡಾಯ ಮಲ್ಲಯ್ಯನವರ ಅಪ್ಪನ ಬಿಗಿಯಾದ ಯಜಮಾನಿಕೆ ಊರಿನ ವ್ಯವಸ್ಥೆಯ ಸಂಕೇತವಾಗಿದೆ. ತಿಪ್ಪಣ್ಣ ಮತ್ತು ಶ್ಯಾಮಲೆಯರ ವಿವಾಹ ಒಂದು ಸಾಮಾಜಿಕ ಸ್ಥರವನ್ನು ಮೀರಿ ಹೊಸ ಆಯಾಮವನ್ನು ಕಂಡುಕೊಳ್ಳುವುದೇ ಆಗಿದೆ.

ಲಂಕೇಶರು ಬಹುತೇಕ ಕಥನ ಮಾದರಿಯಲ್ಲಿ ಬದುಕನ್ನು ಬಗೆಯುವ ಕ್ರಮ ಮನುಷ್ಯ ಸಂಬಂಧದ ಆಳಗಳನ್ನು ಜಂಜಾಟಗಳನ್ನು ನಮ್ಮ ಸಹಜ ಸಂವೇದನೆಗೆ ತರುವ ಪ್ರಯತ್ನದಲ್ಲಿ ಅವರ ಕಥೆಗಳು ಯಶಸ್ಸನ್ನು ಕಂಡುಕೊಂಡಿವೆ. ಮಾನವನ ಸ್ವಭಾವದ ಬಗ್ಗೆ ಅಥವಾ ಮಾನವೀಯ ಅವಸ್ಥೆಯ ಬಗ್ಗೆ ಅವಾಸ್ತವವಾದ ನಿಲುವುಗಳು ಲಂಕೇಶರ ಸತ್ಯನಿಷ್ಠೆಗೆ ಅಸಂಗತವಾದವುಗಳಾಗಿವೆ. ಅವರು ಯತಾರ್ಥ ಚಿತ್ರಣವನ್ನೇ ನಮ್ಮ ಕಣ್ಣೆದರು ತೆರೆದಿಡುತ್ತಾರೆ. ಇಂದಿನ ಸಮಾಜದ ವ್ಯವಸ್ಥೆಗೆ ತೀವ್ರವಾಗಿ ಪ್ರತಿಸ್ಪಂದಿಸುವ ಇವರ ಕಥನಸಾಹಿತ್ಯ ವ್ಯಕ್ತಿಯ ನಂಬಿಕೆ, ವಿಶ್ವಾಸ ಇವುಗಳ ಶೋಧನೆಯನ್ನು ಹಿಡಿಯುವುದು ಪ್ರಧಾನವಾಗಿ ಕಂಡುಬರುತ್ತದೆ. ಆದ್ದರಿಂದ ಲಂಕೇಶರು ವಾಸ್ತವದ ನೆಲೆಯಲ್ಲಿಯೇ ಬದುಕಿನ ನಿಗೂಢತೆಯನ್ನು ಗುರುತಿಸುತ್ತಾ ಹೋಗುತ್ತಾರೆ. ಅತ್ಯಂತ ವಾಸ್ತವಿಕವಾಗಿ ಅವುಗಳ ಸಾಧ್ಯತೆಗಳನ್ನು ಶೋಧಿಸುತ್ತಾರೆ. ಇವುಗಳು ಅವರ ಕಥನ ಸಾಹಿತ್ಯದಲ್ಲಿ ಎದ್ದು ಕಾಣುವ ನೈತಿಕ ಸಂಘರ್ಷದ ನಿಲುವುಗಳು.

### ೫.೨. ಹಸಿವು ಮತ್ತು ಮಹಿಳಾ ಶೋಷಣೆಯ ಸಂಬಂಧಗಳು

ಭಾರತೀಯ ಸಮಾಜ ಮಹಿಳೆಯನ್ನು ಹಲವಾರು ನಿಯಂತ್ರಣಗಳ ಅಡಿಯಲ್ಲಿ ನಡೆಸಿಕೊಂಡಿದೆ. ಇಲ್ಲಿನ ಸಮಾಜ ಎಂದರೆ ಮೂಲಭೂತವಾಗಿ ಗಂಡಿನ ಮೇಲ್ಮೈಯನ್ನು ಸ್ಥಾಪಿಸುವಂಥದ್ದೇ ಆಗಿದ್ದರಿಂದ ಸಹಜವಾಗಿ ಆತನ ಆಶಯಗಳು ಚಾಲನೆಗೊಂಡು ಹೆಣ್ಣಿನ ಅನ್ಯತ್ವವು ಮೂಲೆ ಗುಂಪಾಗುತ್ತದೆ. ವೈಯಕ್ತಿಕ, ಕೌಟುಂಬಿಕ ಮತ್ತು ಸಮಾಜ ನೆಲೆಯ ಮೂರು ಗ್ರಹಿಕೆಗಳು ಗಂಡಿನ ಇಚ್ಛೆಯಂತೆ ಆಧರಿಸಿ ರಚನೆಯಾಗಿದೆ. ಮನುಷ್ಯ ಬದುಕಿನ ಎಲ್ಲ ನಡವಳಿಕೆಗಳು ಗಂಡಿನ ಗ್ರಹಿಕೆಗಳ ನಿರ್ದೇಶನದಲ್ಲಿ ಹೆಣ್ಣಿನ ಪರವಾದ ನಡವಳಿಕೆಯಾಗಿಯೂ ನೆಲೆಯೂರುತ್ತದೆ. ಆಕೆ ಅಂಥ ಸ್ಥಿತಿಯನ್ನು ಯಾವ ವಿರೋಧವೂ ಇಲ್ಲದೆ ಒಪ್ಪಿಕೊಳ್ಳುವಾಗ ಸಲೀಸಾಗಿ ನಡೆದುಬಿಡುತ್ತದೆ. ಬಾಲ್ಯದಲ್ಲಿ ತಾಯಿತಂದೆಯರ ಅಡಿಯಲ್ಲಿ, ಯೌವ್ವನದಲ್ಲಿ ಗಂಡನ ನಿಯಂತ್ರಣದಲ್ಲಿ, ಇಳಿಗಾಲದಲ್ಲಿ ಮಕ್ಕಳ ಅಸ್ತಿತ್ವದ ಹಿನ್ನೆಲೆಯಲ್ಲಿ ತನ್ನ ಬದುಕಿನ ಗುರಿಗಳನ್ನು ಗುರುತಿಸಿಕೊಳ್ಳುತ್ತಾಳೆ. ಬದುಕನ್ನು ತನಗಾಗಿ ರೂಪಿಸಿಕೊಳ್ಳುವುದಕ್ಕಿಂತ ಎರಡನೆಯವರಿಗಾಗಿ ಉದ್ದಕ್ಕೂ ಮೀಸಲಿಡಬೇಕಾಗುತ್ತದೆ. ಈ ರೀತಿಯಾಗಿ ಮಹಿಳೆಯು ತ್ಯಾಗಮಯಿಯಾಗಿದ್ದಾಳೆ. ಇದರ ಜೊತೆಗೆ ಬದುಕಿನ ಹಲವು ಸಂದರ್ಭಗಳಲ್ಲಿ ಶೋಷಣೆಗೆ ಒಳಗಾಗುತ್ತಾಳೆ. ಅದು ತನ್ನ ಒಡಲನ್ನು ತುಂಬಿಸಿಕೊಳ್ಳುವ ಸಂದರ್ಭ ಇರಬಹುದು. ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಮೇಲೆ ಬರುವ ಸಂದರ್ಭದಲ್ಲಿ ಇರಬಹುದು. ಈ ರೀತಿಯಾಗಿ ಹಲವು ಸಂದರ್ಭಗಳಿಗೆ ಮಹಿಳೆ ಶೋಷಣೆಗೆ ಒಳಗಾಗುತ್ತಾಳೆ.

ಮನುಷ್ಯ ಸಂಬಂಧಗಳ ಹಿನ್ನಲೆಯನ್ನು ಚರ್ಚಿಸುತ್ತಾ ಪಿ.ಲಂಕೇಶರು ಅವರ ಕಥನಸಾಹಿತ್ಯದಲ್ಲಿ ಹಸಿವು ಮತ್ತು ಶೋಷಣಾ ನೆಲೆಗಳನ್ನು ಗುರುತಿಸುವಲ್ಲಿ ಸಫಲರಾಗಿದ್ದಾರೆ.

'ಮುಸ್ಸಂಜೆಯ ಕಥಾ ಪ್ರಸಂಗ', 'ಅಕ್ಕ', 'ಬಿರುಕು' ಇವರ ಕಾದಂಬರಿಗಳು. ಇಲ್ಲಿ ಮನುಷ್ಯತ್ವದ ಸಂಬಂಧ ಮತ್ತು ಅಂತರಗಳೆರಡು ಇವೆ. ವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ರಚನೆಯಾಗಿರುವ 'ಬಿರುಕು'ವಿನಲ್ಲಿ ನಾಯಕ ಬಸವರಾಜ ಹಳ್ಳಿಯಿಂದ ನಗರಕ್ಕೆ ಬಂದು ವ್ಯವಸ್ಥೆಯ ಸಣ್ಣತನ, ಸ್ವಾರ್ಥ ಹಿಂಬಾಗಿಲಿನಿಂದ ಮೇಲೇರುವ ಪ್ರಕ್ರಿಯೆಗಳಿಂದ ಬೇಸತ್ತು ಬದುಕಲು ಸಂದರ್ಭಾನುಸಾರಿಯಾಗಿ ಬದಲಾಗಿ ಸಮಾಜದ ಜೊತೆ ಸಂಘರ್ಷಕ್ಕಿಳಿದ ಕತೆಯಿದ್ದರೆ, ಸಾಮಾಜಿಕನೆಲೆಯಲ್ಲಿ ರಚನೆಯಾಗಿರುವ 'ಮುಸ್ಸಂಜೆಯ ಕಥಾಪ್ರಸಂಗ'ವು ಕೂಡ ಆಧುನಿಕತೆಯ ಸ್ಪರ್ಶವಿಲ್ಲದೆ ಹಳ್ಳಿಯಲ್ಲಿ ಬದುಕಿಗಾಗಿ ವ್ಯವಸ್ಥೆಯ ವಿರುದ್ಧ ಸಂಘರ್ಷಕ್ಕಿಳಿದ ಜನ ಸಮೂಹ ಕಥೆಯನ್ನೊಳಗೊಂಡಿದೆ. ಇಲ್ಲಿ ಬರುವ ರಂಗಮ್ಮ, ಸಾವಿತ್ರಿ ತಮಗೆ ವಿರೋಧಿ ನೆಲೆಯಲ್ಲಿ ಎದುರಾದ ಘಟನೆಗಳ ಹಿನ್ನಲೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಗಟ್ಟಿಗೊಳಿಸುತ್ತಾರೆ. ಮನುಷ್ಯ ಮನುಷ್ಯರ ಸಂಬಂಧಗಳು, ಅವು ಪಡೆದುಕೊಳ್ಳುವ ತಿರುವುಗಳು, ರಾಜಕೀಯ ಸ್ವಾರ್ಥ, ಧರ್ಮ ಮೊದಲಾದವುಗಳ ಹಿನ್ನಲೆಯಲ್ಲಿ ಮನುಷ್ಯನ ವ್ಯಕ್ತಿತ್ವ ಮತ್ತು ಮೌಲ್ಯಗಳು ರೂಪುಗೊಳ್ಳುತ್ತವೆ. ಇವುಗಳೇ ಕಥನದ ಬೆಳವಣಿಗೆಯನ್ನು ನಿರ್ಧರಿಸುತ್ತ ಹೋಗುತ್ತವೆ.

ರಂಗವ್ವ, ಸಾವಂತ್ರಿಯರ ಪ್ರಸಂಗಗಳಿಗೆ ರಂಗವ್ವನ ದಿಟ್ಟತನ ಆಕೆಯ ಎದೆಗಾರಿಕೆ ಭರ್ಮಣ್ಣನನ್ನು ಎದುರಿಸುವ ರಂಗವ್ವ ಸಬಲೆಯಾಗುವ ರೀತಿಯನ್ನು ಕಾಣಬಹುದು. ಆಣೆ ಬಡ್ಡಿಯ ವ್ಯವಹಾರದ ಮೂಲಕ ತನ್ನ ಬದುಕಿನ ನಿವಾರಣೆಯನ್ನು ಮಾಡಿಕೊಳ್ಳಲು ಕೊಡುತ್ತಿದ್ದ ಬಡ್ಡಿಹಣ ಇದನ್ನು ತಡೆಯಲು ಮುಂದಾಗುತ್ತಿದ್ದ ಭರ್ಮಣ್ಣ ಇವನ ವಿರುದ್ಧ ಸೆಟೆದು ನಿಲ್ಲುವ (ಮಾನಸಿಕವಾಗಿ) ಗಟ್ಟಿಗಿತ್ತಿ ರಂಗವ್ವ. ಸಾವಂತ್ರಿಯ ಪ್ರೇಮಪ್ರಕರಣದಲ್ಲಿ ಭರ್ಮಣ್ಣ ರಂಗವ್ವನ ಮತ್ತು ಸಾವಂತ್ರಿಯ ಮೇಲೆ ಶೋಷಣೆಗೆ ಮುಂದಾಗುತ್ತಾನೆ. ಕಾರಣ ಸಾವಂತ್ರಿಯ ಪ್ರೇಮಪ್ರಕರಣ. ಮುಸ್ಸಂಜೆಯ ಕಥಾ ಪ್ರಸಂಗದಲ್ಲಿ ಕಾದಂಬರಿಯ ಉದ್ದಕ್ಕೂ ಹೆಣ್ತನದ ಮನಸ್ಸೊಂದು ಮನನೊಂದು ಬಂಡಾಯದ ದನಿಯಾಗಿ ಪರಿವರ್ತನೆಯಾಗುವ ರೀತಿ ಆ ಕಾಲಕ್ಕೆ ಕಾದಂಬರಿಯ ಕಥಾ ಹಂದರಕ್ಕೆ ಹೊಸದು. ಭರ್ಮಣ್ಣನ ಹೆಂಡತಿ ರಾಮಿ, ರಂಗವ್ವನ ಮಗಳು ಸಾವಂತ್ರಿ, ಶ್ರೇಷ್ಠಿಯ ಮಗಳು ದೇವಿ ಇವರೆಲ್ಲ ತಮ್ಮ ತಮ್ಮ ಜೀವನ ಕಲಿಸಿದ ಅನುಭವದಿಂದಷ್ಟೇ ತಿಳುವಳಿಕೆ ಪಡೆದವರು. ಜೊತೆಗೆ ಎಷ್ಟೋ ಸಂದರ್ಭಗಳಲ್ಲಿ ಶೋಷಣೆಗೆ ಒಳಗಾದವರು ಮತ್ತು ರಾಜಿಯನ್ನು ಮಾಡಿಕೊಂಡವರು.

ರಂಗವ್ವನ ನೆರೆಹೊರೆಯಲ್ಲಿದ್ದ ನಂದ್ಯಪ್ಪ ನಿಂಗವ್ವನ ಕುಟುಂಬದಲ್ಲಿ ಜೀವ ಸಂವೇದನೆಯ ಎಲ್ಲಾ ಆಶಯಗಳಿಗೆ ಪೆಟ್ಟು ಬೀಳುವಂಥ ಘಟನೆಗಳೇ ನಡೆಯುತ್ತವೆ. ನಂದ್ಯಪ್ಪನ ಮಗಳು ಶಿವಿ ವಿದ್ಯಾವಂತೆ, ತಿಳುವಳಿಕೆ ಇದ್ದವಳು. ಓದಿದ ಹುಡುಗನಿಗೆ ಅವಳನ್ನು ಮದುವೆ ಮಾಡಬೇಕೆಂಬ ನಿರ್ಣಯಕ್ಕೆ ಬಂದ ಕುಟುಂಬ ಅವಳಿಗಾಗಿ ಶಿವಮೊಗ್ಗದ ಹುಡುಗನನ್ನು ಒಪ್ಪಿಕೊಳ್ಳುತ್ತಾರೆ.

ಅವರಪ್ಪ ಕೇಳಿದ ವರದಕ್ಷಿಣೆಯನ್ನು ಕೊಡಲು ಸಿದ್ಧರಾಗುತ್ತಾರೆ. ಜ್ವರದ ಅನಾರೋಗ್ಯದಿಂದ ಬಳಲುತ್ತಿದ್ದ ಶಿವಿಯನ್ನು ಆಕೆಯ ಆರೋಗ್ಯದ ಹಾರೈಕೆಗಿಂತ ಹುಡುಗನಿಗೆ ಹೆಣ್ಣು ತೋರಿಸುವುದನ್ನೇ ಪ್ರಥಮ ಆದ್ಯತೆಯಾಗಿ ಪರಿಗಣಿಸಿದ ಕುಟುಂಬ ಕಂಬಳ್ಳಿಗೆ ವಾಪಸ್ಸು ಬರುವುದೇ ಇಲ್ಲ ಅಂದರೆ ಸ್ವಾಭಾವಿಕವಾಗಿ ನೈಸರ್ಗಿಕ ನಿಯಮಗಳನ್ನು ಗಾಳಿಗೆ ತೂರಿ ನಮ್ಮ ನಮ್ಮ ಪರಂಪರೆಯ ರೂಢಿ ವ್ಯವಸ್ಥೆಯೇ ಅಂತಿಮ ಎಂದು ಪ್ರಯೋಗ ಮಾಡಲು ಹೊರಟ ಕುಟುಂಬಕ್ಕೆ ಶಿವಿಯ ಸಾವು ನಂತರದ ಸೂಚ್ಯಂಕವಾಗುತ್ತದೆ. ಮಹಿಳಾ ಶೋಷಣೆ ಎಂಬುದು ಇಲ್ಲಿ ಪ್ರಕಟವಾಗುತ್ತದೆ. ಆರೋಗ್ಯ ಸರಿಪಡಿಸುವತ್ತ ಗಮನ ಹರಿಸುವ ಬದಲು ಮದುವೆಗಾಗಿ ಹುಡುಕುವ ಕೆಲಸದಲ್ಲಿ ಆಕೆಯ ಶೋಷಣೆಯನ್ನು ಮಾಡುವ ನೆಲೆಯನ್ನು ಗುರುತಿಸಬಹುದು. ಶ್ರೇಷ್ಠಿಯ ಮಗಳು ದೇವಿ ಶೋಷಣೆಯನ್ನು ಅನುಭವಿಸಿದ ಹೆಣ್ಣುಗಳಲ್ಲಿ ಒಬ್ಬಳು. ಕಾದಂಬರಿಯು ಇಡೀ ಘಟನೆಗಳ ಬೆಳವಣಿಗೆಯನ್ನು ರಂಗವ್ವನ ಮನೆಯ ಆಗುಹೋಗುಗಳಿಂದ ಕಥೆಯನ್ನು ಇಡಿಯಾಗಿ ಬೆಳೆಸಿದೆ ಮತ್ತು ನಿಯಂತ್ರಿಸಿದೆ. ರಂಗವ್ವ, ಸಾವಂತ್ರಿ, ರಾಮಿ, ಶಿವಿ, ದೇವಿ ಮುಂತಾದವರೆಲ್ಲ ಒಂದಲ್ಲಾ ಒಂದು ರೀತಿಯಾಗಿ ಶೋಷಣೆಗೆ ಒಳಗಾದ ಸ್ತ್ರೀ ಪಾತ್ರಗಳೇ.

ಶೋಷಣೆಯ ವಿವಿಧ ಮುಖಗಳು ಹಾಸುಹೊಕ್ಕಾಗಿರುವುದು 'ಅಕ್ಕ' ಕಾದಂಬರಿಯ ಕೊಳಗೇರಿಯಲ್ಲಿ. ರಾಮಪ್ಪನಂತಹ ಪುಢಾರಿಗಳ ಒಳ್ಳೆಯತನದ ಹಿಂದೆ ಇರುವ ಸ್ವಾರ್ಥ ಮತ್ತು ಚುನಾವಣಾ ರಾಜಕೀಯ, ಸಿನಿಮಾ ಹೆಸರಿನಲ್ಲಿ ಕೊಳಗೇರಿಯ ಹೆಣ್ಣುಮಕ್ಕಳ ಮೇಲಾಗುವ ಲೈಂಗಿಕ ಶೋಷಣೆ ಡಿಸಿಲ್ವಾ, ಖಡವಾ, ನಾಗ್ರ ಮುಂತಾದವರ ರೌಡಿಗಳ ಸ್ಪರ್ಧೆಯಲ್ಲಿ ಇವರುಗಳು ಬಲಿಪಶುಗಳಾಗುವುದು. ಪದ್ದಿ, ದೇವೀರಿ ಕೊಳಗೇರಿಯವರೆಲ್ಲರಿಂದ ಶೋಷಣೆಗೊಳಗಾದ ಹೆಣ್ಣುಗಳಲ್ಲಿ ಅತಿ ಮುಖ್ಯರು. ಒಮ್ಮೆ "ಈ ನಿಮ್ಮ ಕ್ಯಾತನ ಬಗ್ಗೆ ಬಹಳ ದಿನದ ಅಭಿಪ್ರಾಯ ಹೇಳ್ತಿದ್ದಂಗೇನೇ ಮೇಸ್ತ್ರಿ ಎಲ್ಲಿಗೆ ಹೋದ ಅಂತ ನೋಡಾಕೆ ರಾಮಪ್ಪನೋರೇ ಹೊರಗೆ ಬಂದ್ರು. ದೇವೀರಿ ಅವರ್‍ನ ಕಂಡಕೂಡ್ಲೆ ಸರಕ್ಕನೆ ಹೋಗಿ ಕಾಲಿಗೆ ಬಿದ್ಲು ಹಂಗೆ ಕಾಲಿಗೆ ಬಿದ್ದವಳೇ ಕ್ಯಾತನರಟ್ಟೆ ಹಿಡಿದು ಅವರ ಕಾಲಿಗೆ ಎಸೆದ್ಲು. ಬಲೆ ಅಸಕ್ಯ ಆತು ಸಾರ್, ಬೀದೀಲಿ ಈ ಜನಕ್ಕೆಲ್ಲಾ ಕಾಲಿಗೆ ಬೀಳೋದು ಅಂದ್ರೆ ಬಲೆ ಅಸಕ್ಯ ಸಾರ್, ರಾಮಪ್ಪ ಎಸ್ಟು ಒಳ್ಳೆರಿದ್ರೂ ಇದು ಬಲೆ ಕಂತ್ರಿ ಕೆಲಸ"[೮] ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯನ್ನು ಹತ್ತಿಕ್ಕಿರುವ ರೀತಿ ಆಕೆಯನ್ನು ನಡೆಸಿಕೊಳ್ಳುವ ಬಗೆ ಜನರ ಮಾನಸಿಕ ರೋಗ ಇತ್ಯಾದಿಯನ್ನು ಶೋಧಿಸಲಾಗುವುದು. ಕೊಳಗೇರಿಯಲ್ಲಿ "ಸಿನಿಮಾ ಸಂಸ್ಕೃತಿ ಪದ್ದಿಯಂಥವರ ಮೈಮಾಂಸಗಳನ್ನು ತಿಂದು ಹೇಸಿಗೆ ರೀತಿಯಲ್ಲಿ ಬೆಳೆಯುತ್ತಿರುವುದರ ಚಿತ್ರಣ ಅತ್ಯಂತ ಸಮರ್ಪಕವಾಗಿ ಮೂಡಿಬಂದಿದೆ. ಡೈರೆಕ್ಟರುಗಳ ಎಡೆಬಿಡಂಗಿತನಗಳು ನಗೆ ತರಿಸುತ್ತವೆ.

---

೮. ಪಿ.ಲಂಕೇಶ್, 'ಅಕ್ಕ, ಪು. ೨೨.

ಇಂಥ ಸಿನೆಮಾಗಳ ಉದ್ಯಮ ಸ್ವತಃ ತಾನೇ philistine ಆಗುವುದರ ಜೊತೆಗೆ ಮಾನಸಿಕ ಹಸಿವಿನಿಂದ ಬಳಲುತ್ತಿರುವ ಬಡಪ್ರೇಕ್ಷಕರಿಗೆ ಹಳಸಲು ಉಣಬಡಿಸಿ ಅವರನ್ನು Philistinism ಆವರಿಸಿಕೊಳ್ಳುವಂತೆ ಮಾಡುವುದರ ಪ್ರಕ್ರಿಯೆ ಸಮರ್ಪಕವಾಗಿ ಚಿತ್ರಣವಾಗಿದೆ. ಅದೇ ಸಂದರ್ಭದಲ್ಲಿ ಇದು ಬದುಕಿನ ಜೀವಂತಿಕೆಯ ಜನ ಕಲೆಗಳನ್ನು ಅದು ಹೇಗೆ ನುಂಗಿ ನೀರು ಕುಡಿಯುತ್ತದೆಂದೂ ಹೇಳುತ್ತದೆ."[೯] ಸಿನಿಮಾದ ಹೆಸರಲ್ಲಿ ಪದ್ದಿಯ ಶೋಷಣೆ ವಿಪರೀತವಾಗುತ್ತದೆ. ಆಕೆ ಮುಗ್ಧ ಮನಸ್ಸಿನ ಹೆಣ್ಣಾಗಿ ಕಾದಂಬರಿಯಲ್ಲಿ ಚಿತ್ರಿತಳಾಗಿದ್ದಾಳೆ ಎಲ್ಲವನ್ನು, ಎಲ್ಲರನ್ನು ಬಹಳ ಬೇಗ ನಂಬುವ ಹೆಣ್ಣಾಗಿ ಮೋಸ ಹೋಗುವ ಸಂದರ್ಭ ಮಹಿಳಾ ಶೋಷಣೆಯ ನೆಲೆಯಲ್ಲಿ ಕಾಣಬಹುದು. ಪದ್ದಿ ಶಂಕರನಾರಾಯಣ, ಸತ್ಯನಾರಾಯಣ, ರಾಮಪ್ಪ ಇವರೆಲ್ಲರಿಂದ ಶೋಷಣೆಗೆ ಒಳಗಾದ ಹೆಣ್ಣು. ಹಸಿವಿನಿಂದ ಬಳಲಿ ಪದ್ದಿಯ ಕಥೆಯ ನಿರೂಪಣೆಯನ್ನು ಕ್ಯಾತ ಮಾಡುವುದು ಮತ್ತೊಂದು ಸಂಗತಿಯಾಗಿದೆ. ಇದು ಲೇಖಕರು ಕಥನಕ್ರಮವನ್ನು ಎಣೆಯುವ ಸೂಕ್ಷ್ಮತೆ ಕೂಡ.

ಶೋಷಣೆ ವ್ಯಾಪಕವಾಗಿ ನಡೆಯುತ್ತಿರುವ ಇಂದಿನ ಶ್ರೇಣೀಕೃತ ಸಮಾಜದಲ್ಲಿ ಎಲ್ಲೆಡೆ ಇದು ವ್ಯಾಪಿಸಿದ್ದರೂ ಆ ಶೋಷಣೆಗೆ ನೇರವಾಗಿ ಒಳಗಾಗುವುದು ಸಾಮಾಜಿಕವಾಗಿ, ಆರ್ಥಿಕವಾಗಿ, ಹಿಂದುಳಿದಿರುವ ಜನ ಮಾತ್ರ ಇಲ್ಲೆಲ್ಲಾ ಶೋಷಣೆ ಎನ್ನುವಂತಹದು ತನ್ನ ಕಬಂಧ ಬಾಹುಗಳನ್ನು ಚಾಚಿ ತನ್ನೆಡೆಗೆ ಎಳೆದುಕೊಂಡು ಮನುಷ್ಯರನ್ನು ನಿಸ್ಸತ್ವರನ್ನಾಗಿಸುತ್ತದೆ. ಮೇಲಿಂದ ಮೇಲೆ ಆಕ್ಟೋಪಸ್ ಹಿಡಿತ ಇಂಥವರ ಮೇಲೆ ಬಾಗಿಯಾಗುತ್ತ ಹೋಗುತ್ತದೆ. ಪದ್ದಿ, ದೇವೀರಿ, ಕ್ಯಾತನಂಥವರೂ ಇದಕ್ಕೆ ಹೊರತಲ್ಲ. ಇಂತಹ ವ್ಯವಸ್ಥೆಯಲ್ಲಿ ಪದ್ದಿ ದೇವೀರಿಯಂಥವರೂ ಬದುಕಲು ಮೇಲೇರಲು ಹೆಣ್ತನ ಬಳಸಿಕೊಂಡರೆ ಕ್ಯಾತನಂಥವರೂ ಹಲವಾರು ಅಪಮಾನಗಳಿಗೆ ಗುರಿಯಾಗಬೇಕಾಗುತ್ತದೆ. ಕಾಸನ್ನೇ ಕಾಣದವನು ಇದ್ದಕ್ಕಿದ್ದಂತೆ ಐವತು ರೂಪಾಯಿಯ ಒಡೆಯನಾದಾಗ ಅದನ್ನು ಖರ್ಚು ಮಾಡುವುದು ಹೇಗೆ ಎಂಬ ಪ್ರಶ್ನೆಯು ಧುತ್ತೆಂದು ಎದುರು ನಿಂತಾಗ ಸೃಷ್ಟಿಯಾಗುವ ಸಂದರ್ಭ ಕ್ಯಾತನಿಗೆ ಅಸಹ್ಯವನ್ನುಂಟು ಮಾಡುತ್ತದೆ. ಜೊತೆಗೆ ಸಮಾಜದಲ್ಲಿ ಅವನ ಅಸ್ತಿತ್ವವನ್ನು ನಿರಾಕರಿಸುತ್ತದೆ. ಇದರಿಂದಲೇ ಅವನಿಗೆ ನಿರ್ಲಕ್ಷ್ಯ ಉಂಟಾಗುತ್ತದೆ.

ಕೊಳಗೇರಿಯಲ್ಲಿ ಕೊನೆಗೆ ದೇವೀರಿ ನಾಪತ್ತೆಯಾಗುತ್ತಾಳೆ. ಆದರೆ ದೇವೀರಿಯ ನಾಪತ್ತೆಯ ವಿಷಯ ಮುಖ್ಯವೇನಲ್ಲ ಎನ್ನುವಂತೆ ಅವಳನ್ನು ಮರೆಯುವುದರ ಮೂಲಕ ಅವಳ ಅಸ್ತಿತ್ವವನ್ನು ನಿರಾಕರಿಸಿಬಿಡುತ್ತದೆ. ಅವಳು ಏನಾದಳು ಎಂಬ ಬಗ್ಗೆ ಯಾರೂ ಚಕಾರ ಎತ್ತುವುದಿಲ್ಲ. ತಲೆ ಕೆಡಿಸಿಕೊಳ್ಳುವುದಿಲ್ಲ. ದೇವೀರಿಯಂತಹ ಅಸಹಾಯಕ ಹೆಣ್ಣನ್ನು ಸಮಾಜದ

---

೯. ಗಂಗಾಧರ ಕುಷ್ಟಗಿ, ತಲೆಮಾರಿನ ತಳಮಳ, ೧೯೯೭, ಪು. ೨೨೩.

ಒಂದು ಮುಖವಾದ ಕ್ರೌರ್ಯ ತನ್ನ ತೆಕ್ಕೆಯೊಳಗೆ ಎಳೆದುಕೊಂಡು ಮುಗುಮ್ಮಾದರೆ ಅದೇ ಸಮಾಜ ಕ್ಯಾತನಂತೆ ಬದುಕನ್ನು ಹೋರಾಟಯುತವಾಗಿ ತೆಗೆದುಕೊಳ್ಳುವ ವ್ಯಕ್ತಿಗಳನ್ನು ರೂಪಿಸುತ್ತದೆ. ಇದನ್ನೇ ವ್ಯವಸ್ಥೆಯ ವಿಪರ್ಯಾಸವೆನ್ನಬಹುದು.

ಹೀಗೆ ಇಂಥ ಕಾರ್ಯದಲ್ಲಿಯೂ ಬದುಕು ಅರಳುವುದನ್ನು ಕ್ರೌರ್ಯದ ಹಿನ್ನೆಲೆಯಲ್ಲಿ ಜೀವನವನ್ನು ರೂಪಿಸಿಕೊಳ್ಳುವ ಸಾಧ್ಯತೆಯನ್ನು ಮಾನವೀಯ ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಕಂಡುಕೊಂಡು ಅರ್ಥಪೂರ್ಣವಾಗಿ ಬದುಕುವ ಪ್ರಗತಿಗಾಮಿ ಧೋರಣೆಯನ್ನು ತಳೆಯುವುದರಿಂದಲೇ ಉಳಿದ ಲೇಖಕರಿಗಿಂತ ಲಂಕೇಶರು ಭಿನ್ನರಾಗಿ ನಿಲ್ಲುತ್ತಾರೆ.

'ರೊಟ್ಟಿ' ಕಥೆಯ ಮೂಲಕ ಲಂಕೇಶರು ಹಸಿವಿನ ತೀವ್ರತೆಯನ್ನು ಹೆಣ್ಣಿನ ಮಾನವೀಯ ಗುಣವನ್ನು ಚಿತ್ರಿಸುತ್ತಾರೆ. ಭಿಕ್ಷುಕ ರೊಟ್ಟಿಯನ್ನು ಕಿತ್ತು ತಿಂದ ರೊಟ್ಟಿಯೇ ಆ ಬಡ ಹೆಂಗಸಿನ ಅಂದಿನ ಆಹಾರ, ಆ ಭಿಕ್ಷುಕನಿಗೆ ಇದ್ದ ಹಸಿವಿನ ತೀರ್ವತೆಯನ್ನು ಕಥೆಯ ಮೂಲಕ ತೆರೆದಿಡುತ್ತಾರೆ. ರೊಟ್ಟಿ ಕಥೆಯನ್ನು ಕುರಿತು "ನಾನಲ್ಲ ಕೃತಿಗೆ ಮುನ್ನುಡಿ ಬರೆದ ಗೋಪಾಲ ಕೃಷ್ಣ ಅಡಿಗರು 'ರೊಟ್ಟಿ'ಯನ್ನು ಕನ್ನಡ ಸಾಹಿತ್ಯದಲ್ಲಿಯೇ ಅತ್ಯುತ್ತಮ ಕಥೆ" (ಲಂಕೇಶ್, ೧೯೯೨–೯೩) ಎಂದು ಕರೆದರು. ನಂತರ ಓದುಗರೂ ಅವರ ಈ ನಿರ್ಣಯವನ್ನು ದೃಢಪಡಿಸಿದ್ದು ಹಸಿವು ಬಡತನಗಳನ್ನು ಪ್ರಗತಿಶೀಲ ಲೇಖಕರು ತಮ್ಮ ಕಥೆಗಳ ವಸ್ತುವಾಗಿ ಬಳಸಿಕೊಂಡಿದ್ದರು. ಆದರೆ ಸ್ವತಃ ಲಂಕೇಶರೇ ಕಟ್ಟಿಮನಿಯವರ 'ಬೂಟ್‌ಪಾಲಿಷ್' ಹಾಗೂ ಭಾರತೀಪ್ರಿಯ ಅವರ 'ಮೋಚಿ'ಗಳನ್ನು ವಿಶ್ಲೇಷಿಸುತ್ತ ಹೇಳಿದ ಹಾಗೆ ಈ ಕತೆಗಳು ಗಟ್ಟಿ ತಿಳಿವಳಿಕೆಯ ಅಭಾವದಿಂದಾಗಿ 'ಮಾನವೀಯತೆಯ ಭಾವಾಡಂಬರಕ್ಕಿಳಿದವು' (ಶಿವರುದ್ರಪ್ಪ, ೧೯೭೧:೯೫) ಅವರ ರೊಟ್ಟಿಯಲ್ಲಿ ಇಂಥ ದೋಷಗಳಿಲ್ಲವಾದುದರಿಂದ ಅದು ತನ್ನ ವಸ್ತುವನ್ನು ಸಮರ್ಥವಾಗಿ ನಿರ್ವಹಿಸುತ್ತದೆ. ಸಿಂಗಾರ ಪೇಟೆಯ ಸ್ಟೇಷನ್ನಿನ ದೃಶ್ಯದ ವರ್ಣನೆಯಿಂದ ಕತೆಯ ಪ್ರಾರಂಭವಾಗುತ್ತದೆ."[೧೦] ಈ ಕತೆಯಲ್ಲಿ ಹೆಂಗಸು ಮತ್ತು ಹಸಿದ ವ್ಯಕ್ತಿಯು ಕೇಂದ್ರ ಪಾತಳಿಯಲ್ಲಿ ಮುಖಾಮುಖಿಯಾಗುತ್ತಾರೆ. ಹೆಂಗಸಿಗೆ ರೈಲುನಿಲ್ದಾಣದ ಆವರಣ ಅಪರಿಚಿತವಾದುದರಿಂದ ಎಲ್ಲರೆದುರು ರೊಟ್ಟಿಯನ್ನು ಹೊರಕ್ಕೆ ತೆಗೆದು ತಿನ್ನಲು ಸ್ವಲ್ಪ ಸಂಕೋಚವಿದೆ. ಹಾಗಾಗಿ ರೊಟ್ಟಿಯನ್ನು ತೆಗೆದು ಇಡುವಾಗ ಭಿಕ್ಷುಕ ಕದಿಯುತ್ತಾನೆ. ಆ ಸಂದರ್ಭದಲ್ಲಿ ನಡೆಯುವ ಘಟನೆ. "ಮೆಲ್ಲಗೆ ಬ್ಯಾಗು ತೆರೆದು ರೊಟ್ಟಿಗಳನ್ನು ಎಳೆದುಕೊಂಡಳು. ಅವುಗಳಲ್ಲಿ ಎರಡನ್ನಾದರೂ ಚಿಕ್ಕಮಗುವಿಗೆ ಇಟ್ಟುಕೊಳ್ಳಬೇಕೆಂದು ಪ್ಯಾಕೆಟ್ಟು ಬಿಚ್ಚಿ ತೊಡೆಯ ಮೇಲೆ ಇಟ್ಟುಕೊಂಡಳು. ಒಂದನ್ನು ಪಕ್ಕಕ್ಕೆ ಇಟ್ಟುಕೊಂಡಳು. ಇನ್ನೊಂದನ್ನು ಪಕ್ಕಕ್ಕೆ ಇಟ್ಟು ಮಿಕ್ಕದನ್ನೂ ಕಾಗದದಲ್ಲಿ ಮುದರುತ್ತಿದ್ದಾಗ.... ಉದ್ದ ಕೂದಲಿನ ವ್ಯಕ್ತಿ ನಾಲ್ಕೇ ಗಜದೂರದಲ್ಲಿ ನಿಂತು ಇಷ್ಟಗಲ ಕಣ್ಣು ತೆರೆದು ನೋಡುತ್ತಿದ್ದ.

---

೧೦. ಜಿ.ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ೨೦೧೨, ಪು. ೨೯೦.

ಅವನ ಕಣ್ಣಲ್ಲಿದ್ದುದು ಜ್ವರವಲ್ಲ, ಬೇಸರವಲ್ಲ, ಹಸಿವೆಯೆಂದು ತಿಳಿಯಿತು. ಅವನಿಗೊಂದು ರೊಟ್ಟಿ ಕೊಡೋಣವೇ ಎಂದು ನೋಡಿದಳು. ಕೊಡುವುದರ ಮೂಲಕ ಆ ಅಪಾಯದ ವ್ಯಕ್ತಿಯ ಅನ್ಯೋನ್ಯತೆ ಗಳಿಸಲು ಇಷ್ಟವಿರಲಿಲ್ಲ. ಸಂಶಯ, ಭಯ, ಆದ್ದರಿಂದ ಬೇಗ ರೊಟ್ಟಿಯನ್ನು ಕಟ್ಟುತ್ತಿದ್ದಾಗ ಆತ ನೇರವಾಗಿ ಅವಳ ಕಡೆಗೆ ಜಿಗಿದು ಎಲ್ಲಾ ರೊಟ್ಟಿಗಳನ್ನು ಕಸಿದುಕೊಂಡು ತಿನ್ನಹತ್ತಿದ. ಕ್ಷಣದಲ್ಲಿ ನಡೆದು ಹೋದ ಸಂಗತಿಗೆ ಬೆಚ್ಚಿ ಆಕೆ ಎದ್ದಳು. "ಹೋ... ಕಳ್ಳ! ಕಳ್ಳ! ಅಂತ ಚೀರಿದಳು."[೧೧] ಸಿಂಗಾರಪೇಟೆಯ ಸ್ಟೇಷನ್ನಿನಲ್ಲಿ ನಡೆದ ದೃಶ್ಯಕ್ಕೆ ಹಸಿವಿನ ತೀವ್ರತೆ ತಟ್ಟಿ ರೊಟ್ಟಿ ಕಿತ್ತುಕೊಂಡ ವ್ಯಕ್ತಿ ಅಸಹಾಯಕ ಮುದುಕಿ ಅಪಾರ ಜನಸ್ತೋಮದ ನಡುವೆ ಸಿಲುಕಿಕೊಂಡು ಬಡಪಾಯಿಯಂತೆ ನಿಲ್ಲುವ ಪೋಲೀಸ್ ಇವರೆಲ್ಲಾ ಅನುಕಂಪ ಮೂಡಿಸುತ್ತಾರೆ. ಸಮಯ-ಸಂದರ್ಭಗಳ ವಿವೇಚನೆಯೇ ಇಲ್ಲದೆ ತಾನು ರಕ್ಷಿಸಬೇಕಾದ ಹೆಣ್ಣನ್ನು ಶೋಷಣೆಗೆ ಒಳಗು ಮಾಡುವ ಪೋಲೀಸ್ "ರಿಸರ್ವ್‌ಪಡೆ ಜನರ ಮೇಲೆ ಎರಗಿತು.

ಪೋಲಿಸಿನವನು "ನೋಡಿ ಈ ಜನರ ತರಲೆ ಯಾವಾಗಲೂ ಇದ್ದದ್ದೇ ಬನ್ನಿ ಈಗ ಎಲ್ರೂ ತೊಲಗ್ತಾರೆ" ಅಂತ ಅವಳ ರಟ್ಟೆ ಹಿಡಿದು ಎಳೆದ ತೋಳನ್ನು ಸುತ್ತಿ ಬೆನ್ನನ್ನು ಹಾದು ಮೊಲೆಗಳನ್ನು ನೇವರಿಸುವ ಆ ಪೋಲೀಸ್ ಕೈ. ಅವನಿಂದ ಬಿಡಿಸಿಕೊಳ್ಳಲು ಯತ್ನಿಸಿದಳು. "ಅವರು ಯಾಕೆ ಜನಕ್ಕೆ ಹೊಡೀತಿದ್ದಾರೆ? ಬೇಡಿ, ಹೊಡೀಬೇಡಿ. ನಾನು ಬರೋಲ್ಲ. ನೀವು ಹೋಗಿ ನನ್ನಷ್ಟಕ್ಕೆ ನನ್ನ ಬಿಡಿ" ಅಂದಳು. ಆದರೆ ಆತ ಬಿಡಲಿಲ್ಲ. ಬೆವೆತ ಎದೆಯನ್ನು ಒತ್ತಿದ ಅವನ ಖಾಕಿ ಎದೆ, "ನಿನಗೇನು ತಲೆ ಸಮವಿಲ್ವ ಬಾಕಿ ಮಾಯ್ತಿ – ನಮ್ಮ ಪ್ರಾಣಕ್ಕೆ ಬರುತ್ತೆ, ಸುಮ್ಮನೆ ಬಾ ಅಂತ ಪೋಲೀಸ್"[೧೨] ಈ ರೀತಿ ಪೋಲೀಸ್ ವರ್ತಿಸುತ್ತಾನೆ. ಆತ ಕೂಡ ಅವಳಿಗೆ ನ್ಯಾಯ ನೀಡುವಲ್ಲಿ ವಿಫಲನಾಗುತ್ತಾನೆ. ಭಿಕ್ಷುಕ ಮುದುಕಿಯ ಕೈಯಲ್ಲಿನ 'ರೊಟ್ಟಿ'ಯನ್ನು ನೋಡುತ್ತಿರುವ ಸಂದರ್ಭದಲ್ಲಿ ರೊಟ್ಟಿಯನ್ನು ಅವನಿಂದ ಮರೆಮಾಚಲು ಯತ್ನಿಸಿದಳು. ಆದರೆ ತಿರುಕ ಕೈಯಿಂದ ಕಸಿದುಕೊಂಡು ಅವಳು ಕಿರುಚಿ, ಜನರಲ್ಲಾ ಸೇರಿ ಪೋಲೀಸ್ ಬಂದು ರಕ್ಷಣೆಯ ನೆಪದಲ್ಲಿ ಶೋಷಣೆಯನ್ನು ಮಾಡುತ್ತಾನೆ. ಈ ಘಟನೆಯ ಮೂಲಕ ಅಧಿಕಾರ ಶಾಹಿ ವರ್ಗ ಅಸಹಾಯಕತೆಯಲ್ಲಿರುವ ಹೆಣ್ಣನ್ನು ಮತ್ತು ಹಸಿದ ಭಿಕ್ಷುಕನನ್ನು ರಕ್ತ ಬರುವ ರೀತಿಯಲ್ಲಿ ಹೊಡೆಯುತ್ತಾರೆ. ಉಳ್ಳವರ ಹಾಗೂ ಇಲ್ಲದವರ ಮನಸ್ಸಿನ ಅಂತರ ಸ್ಪಷ್ಟವಾಗುತ್ತದೆ. ಘಟನೆಗೆ ಸಂಬಂಧವೇ ಪಡದ ಜನರ ಗುಂಪು ಅವಳ ದೌರ್ಬಲ್ಯ ಅವಳ ಅಸಹಾಯಕತೆ, ಅಪಮಾನ ಇತ್ಯಾದಿಗಳನ್ನೆಲ್ಲಾ ಸಂತಸದಿಂದ ಅನುಭವಿಸಬೇಕಾದ ವಿವರ ನೋಡಬಹುದು. ನಮ್ಮ ಸಾಮಾಜಿಕ ವ್ಯವಸ್ಥೆಯ ವ್ಯಂಗ್ಯವನ್ನು ತೋರಿಸುತ್ತದೆ. ಕೇವಲ 'ಹಸಿವು' ಮಾತ್ರ 'ರೊಟ್ಟಿ' ಕಥೆಯ

---

೧೧. ಪಿ. ಲಂಕೇಶ್, ಸಮಗ್ರ ಕಥೆಗಳು, ಪು. ೧೨೭, ೧೯೨.
೧೨. ಪಿ. ಲಂಕೇಶ್, ಸಮಗ್ರ ಕಥೆಗಳು, ಪು. ೧೨೯.

ವಸ್ತುವಾಗದೆ, ಹೆಣ್ಣಿನ ಶೋಷಣೆ, ಅಸಹಾಯಕತೆ, ಅನಾಗರೀಕವಾದ ವರ್ತನೆ ಹೀಗೆ ಹಲವಾರು ವಿವಾದಗಳನ್ನು ಪಾತ್ರಗಳ ಮೂಲಕ ನಿರ್ಣಯಿಸಲಾಗುತ್ತದೆ.

'ಗುತ್ತಿ ಗೀತಾ ಆದದ್ದು' ಕತೆಯು ಹಳ್ಳಿಯ ಮುಗ್ದ ಹೆಣ್ಣಿನ ಕಥೆ. ತನ್ನ ಅವ್ವನೊಂದಿಗೆ ಸಂತೆಯ ದಿನ ಪೇಟೆಗೆ ಬಂದವಳು, ಅಕಸ್ಮಾತ್ ತನ್ನ ಅವ್ವನಿಂದ ಬೇರೆಯಾಗಿ ಆಕೆಯ ನಿರೀಕ್ಷೆಯಲ್ಲಿಯೇ ಜನಸಂದಣಿಯಲ್ಲಿ ಒಂಟಿಯಾದವಳು. ಇಂತಹ ಸನ್ನಿವೇಶದ ಲಾಭ ಪಡೆಯಲು ಅಲ್ಲಿಯ ಹಲವರು ಪ್ರಯತ್ನಿಸುವರು. ಅಂತಹವರಲ್ಲಿ ವೃತ್ತಿಯಿಂದ ಚಾಣಾಕ್ಷ ಕಳ್ಳನಾದ ಸಣ್ಣಮುನಿಯ ಗುತ್ತಿಯನ್ನು ಅಪಹರಿಸುವ ಆತ ಹೇಗೋ ಆಕೆ ಹೆಸರನ್ನು ತಿಳಿದುಕೊಂಡು ಆಕೆಯ ಮೇಲೆ ಬಲೆಯನ್ನು ಬೀಸುವನು. ಎಲ್ಲರ ಮುಂದೆ ತನ್ನ ಸ್ವಂತ ಹೆಂಡತಿಯ ಹಾಗೆ ಆಕೆಯ ಹೆಸರು ಹಿಡಿದು ಕರೆದು ತನ್ನ ಜೊತೆ ಬರುವಂತೆ ಪೀಡಿಸುವನು. ಮೊದಲೇ ತನ್ನವ್ವನ ಅಗಲಿಕೆಯಿಂದ ಗಾಬರಿಗೊಂಡಿದ್ದ ಗುತ್ತಿ ಈಗ ತೀರಾ ಭೀತಿಗೊಂಡು ಹುಚ್ಚಿಯಂತಾಗುವಳು. ಸಣ್ಣಮುನಿಯ ತನ್ನ ಜಾಣತನದಿಂದ ಆಕೆಯನ್ನು ಅಲ್ಲಿ ನೆರೆದವರ ಮುಂದೆ ತನ್ನ ಹೆಂಡತಿಯೆಂದು ಸಾಬೀತುಗೊಳಿಸುವಲ್ಲಿ ಯಶಸ್ವಿಯಾಗುತ್ತಿದ್ದಾಗ ಪೋಲೀಸ್ ಚಿಕ್ಕಣ್ಣನ ಪ್ರವೇಶದೊಂದಿಗೆ ಸನ್ನಿವೇಶಕ್ಕೆ ಹೊಸ ತಿರುವು ಬರುತ್ತದೆ. "ಗುತ್ತಿ ಅಂತ ಅಂದ ಆತ, ತನ್ನ ಹೆಂಡತಿಯೆಂಬ ವಾದ ಮುಖ್ಯ ಅಂಶವಾಗಿ ಚಿಕ್ಕಣ್ಣ ನಿಂತ. ಅವನನ್ನು ಹೆಬ್ಬೆಟ್ಟಿನಿಂದ ಕಪ್ಪನೆಯ ಕೂದಲ ಕುಚ್ಚನ ತನಕ ನೋಡಿದ. ಆತ ಕಣ್ಣು ತಪ್ಪಿಸಿದ. ಇನ್ನೊಂದು ಕ್ಷಣ ಚಿಕ್ಕಣ್ಣ ಅವನ ಕಣ್ಣಲ್ಲಿ ನೋಡಿದರೆ ನೆಲದೊಳಗೆ ಇಳಿದು ಹೋಗುತ್ತಿದ್ದ.

'ಗೊತ್ತಲೇ ಬೋಸುಡಿಕೆ' ಅಂದ ಚಿಕ್ಕಣ್ಣ, 'ನಿನಗೆ ನಿನ್ನ ಹೆಂಡ್ತಿ ಹೆಸರು ಗೊತ್ತಿರಕ್ಕಿಲ್ಲವಾ ಳ್ನ? ಏನಂತಿ? ಹ್ಯಾಂಗೈತಿ ನನ್ನ ಸವಾಲು' ಅಂದ.

ಆತ ಚಿಕ್ಕಣ್ಣನನ್ನು ಹೊಗಳಲು ತಕ್ಕ ಸಂದರ್ಭವೆಂದು 'ನಿಂಗೆ ಗೊತ್ತಿಲ್ಲದ್ದು ಐತ ಬಿಡಣ್ಣ. ಬಾಳ ಮೋಜಿನ ಪೋಜುದಾರ ನೀನು. ನಿನ್ನ ನೋಡಿದರೆ ಎಲ್ಲ ಹೆದರಿ ಗಡಗಡ ಅನ್ನಬೇಕು' ಅಂದ.

'ಆದ್ರೆ ನೀ ನಡಗ್ತಿಲ್ಲ? ಯಾಕೋ? ಎಂದು ತನ್ನ ಪ್ರಶ್ನೆ ಕೊಂಚ ಕಟುವಾಯಿತೆಂದು ನಿನ್ನ ಹೆಸರೇನಪ್ಪ?' ಅಂದ.

'ಮುನಿಯ ಅಂತ ಕಣಣ್ಣ, ಸಣ್ಣ ಮುನಿಯ ಅಂಗಾರೆ ನಮ್ಮೂರ ಜನ ಕುಂಸಿ ತಾವ ತ್ಯಾವಣಿಗೆ ಅಂತ ನಮ್ಮೂರು, ಈಕೆ ಹಿಂಗಾಯ್ತಾಳಂತ ನಾ ಕನಸಿನಲ್ಲೂ ಕಂಡಿರಲಿಲ್ಲ" [೧೩]

೧೩. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೨೬೩, ೧೯೯೨.

ಗುತ್ತಿಯ ಕತೆ ಸ್ತ್ರೀ ಹಿಂಸೆಯನ್ನು ಕುರಿತದ್ದು. ಅಮಾಯಕ ಒಂಟಿ ಹೆಣ್ಣಿನ ಮೇಲೆ ಆಧುನಿಕ ವ್ಯವಸ್ಥೆಯೆಂದು ಎಸಗುವ ಅತ್ಯಾಚಾರದ ಕತೆ. ಗುತ್ತಿ ಅಮಾಯಕ ಮುಗ್ಧೆ ಅವಳದು ನಿಷ್ಕಲ್ಮಷವಾದಂತಹ ಮನಸ್ಸು. ಅವಳು ಮೋಸ ಹೋಗುತ್ತಾಳೆ. ಇಲ್ಲಿ ಶೋಷಣೆ ಎಂಬುದು ತಣ್ಣಗೆ ನಡೆಯುತ್ತದೆ. ಹೆಣ್ಣಿನ ಅನಾಹುತವನ್ನು ಮಾನವೀಯ ಅಂತಃಕರಣವುಳ್ಳ ಚಿಕ್ಕಣ್ಣ ಆಕೆಯನ್ನು ಪಾರು ಮಾಡುತ್ತಾನೆ. ಸ್ಟೇಷನ್‌ನಲ್ಲಿ ಇನ್ಸ್‌ಪೆಕ್ಟರ್ ಬಾಪಟ್ ಗುತ್ತಿಯನ್ನು ಬಹಳ ನಯವಾಗಿ ಮಾತಾಡಿಸಿ ಚಿಕ್ಕಣ್ಣನಿಗೆ ಊಟ, ಹಣ್ಣು-ಹಂಪಲು ತರಲು ಹೇಳಿದ್ದ. ಗುತ್ತಿಗೆ ಹಸಿವು ಬಹಳವಾಗಿತ್ತು. ಬಾಪಟ್ ಹೇಮಲಾ ಎಂಬುವಳನ್ನು ಕರೆದು ಇವಳಿಗೆ ಪಾಠ ಕಲಿಸು ಎಂದು ಹೇಳಿದ್ದ 'ಪಾಠ'ದ ಅರ್ಥ ಹೇಮಾಳಿಗೆ ಗೊತ್ತಿತ್ತು.

ಸಣ್ಣಮುನಿಯನಿಗೆ ಪಾಪಪ್ರಜ್ಞೆ ಕಾಡುತ್ತದೆ. ಹಾಗಾಗಿ ಬಾಪಟ್‌ನ ಮೇಲಾಧಿಕಾರಿ ಭದ್ರಯ್ಯನ ಹತ್ತಿರಹೋಗಿ ಸತ್ಯ ಹೇಳಲು ಪ್ರಯತ್ನಿಸುತ್ತಾನೆ. ಆದರೆ ಅಷ್ಟರಲ್ಲಿ ಗುತ್ತಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಗುತ್ತಿ ಗೀತಾ ಆಗಿ ಸೂಳೆಯಾಗಿದ್ದಳು. ಈ ಮೂಲಕ ವ್ಯವಸ್ಥೆಯಲ್ಲಿ ಮಹಿಳಾ ಶೋಷಣೆ ಎದ್ದು ಕಾಣುವ ಕಥೆ ಇದು.

'ಮಾರಲಾಗದ ನೆಲೆ' ಕಥೆಯಲ್ಲಿ ಸಾವಂತ್ರಿ ನಯವಾಗಿ ಶೋಷಣೆಗೆ ಒಳಗಾಗುವುದು ಈ ಕತೆಯ ಕೇಂದ್ರ ವಸ್ತು. ಸಂಕ್ರಪ್ಪನ ಮಗಳು ಸಾವಂತ್ರಿ. ವಿಶ್ವನಾಥ ತನ್ನೂರಿಗೆ ಹೊಲ ಮಾರಲು ಹೋಗಿದ್ದ. ಈತನ ಹೊಲವನ್ನು ದುರುಗ ನೋಡಿಕೊಳ್ಳುತ್ತಿದ್ದನು. ವಿಶ್ವನಾಥನ ಹೊಲ ದೆವ್ವದಹೊಲವೆಂದು ಯಾರು ಕೊಂಡುಕೊಳ್ಳಲು ಮುಂದೆ ಬರುತ್ತಿರಲಿಲ್ಲ. ದುರುಗ ಒಂದು ದಿನ ಹೊಲದಲ್ಲೇ ಮಲಗಿದ್ದವರು ಬೆಳಿಗ್ಗೆಯಷ್ಟರಲ್ಲಿ ಹೆಣವಾಗಿದ್ದ. ದುರುಗನ ಹೆಂಡತಿ ಮತ್ತು ಮಕ್ಕಳ ಗೋಳು ಮುಗಿಲು ಮುಟ್ಟಿತು. ವಿಶ್ವನಾಥ ಯಲ್ಲವ್ವನಿಗೆ ಸಮಾಧಾನದ ಮಾತುಗಳನ್ನು ಹೇಳಿ ಪ್ರತಿ ತಿಂಗಳು ೩೦ ರೂಪಾಯಿಗಳನ್ನು ಕೊಡುತ್ತೇನೆಂದು ಹೇಳಿದ್ದನು. ವಿಶ್ವನಾಥ ಗದ್ದೆಯಲ್ಲಿ ಹೋಗುತ್ತಿದ್ದಾಗ ಹೆಣ್ಣಿನ ಚೀರುವಿಕೆಯ ಧ್ವನಿ ಕೇಳಿಸಿತ್ತು. "ಕಣ್ಣು ಬಿಟ್ಟ, ಯಾರೋ ಚೀರಿಕೊಂಡಂತಾಯಿತು. ಹೆಣ್ಣಿನ ಧ್ವನಿ ಎಲ್ಲಿದ್ದೇನೆಂದು ಗೊತ್ತಾಯಿತು. ಮಂಚಿಗೆಯ ಹಿಂದೆ. ಮುಂದೆ ಕಬ್ಬಿನಗರಿ ಹಣ್ಣಾದ ಹಳದಿಯಾದ ಬಿಸಿಲು. ಹೆಣ್ಣು ಚೀರಿತು, ಗಂಡಿನ ಧ್ವನಿ ಕೇಳಿತು. ಮಂಚಿಗೆಯಿಂದ ಹಾರಿ ಬದುವಿನ ಮೇಲೆ ನಿಂತು ನೋಡಿದೆ ಗದ್ದೆಯ ಕಿಪ್ಪಾಳಿಯಲ್ಲಿ ಕಬ್ಬಿನ ದಟ್ಟ ಬೆಳೆಯಲ್ಲಿ ಹುಲ್ಲಿನ ಸಂದಿನಲ್ಲಿ ಗಂಡಿನ ಬಟ್ಟೆ ಮೊದಲು ಕಣ್ಣಿಗೆ ಬಿತ್ತು. ಗಂಡಿನ ಮುಖ ಆ ಕಡೆ ತಿರುಗಿತ್ತು. ಹೆಣ್ಣಿನ ಕೆಂಪು ಮತ್ತು ಸೀರೆ, ಬೆತ್ತಲೆ ತೊಡೆ ಕಣ್ಣನ್ನು ಸೆಳೆದವು. ಗಂಡಿನ ಹಿಡಿತದಿಂದ ಕೊತ್ತರಿಸಿಕೊಂಡು ಹೆಣ್ಣಿನ ತಲೆ ನನ್ನತ್ತ ನಿಮಿರಿತು ಕೂಡಲೇ ಗೊತ್ತಾಯಿತು. ಅಲ್ಲಿ ಸಿಕ್ಕಿಕೊಂಡಿದ್ದಳು ಸಾವಂತ್ರಿ. ನಾನು ಏನು ಮಾಡುವುದೆಂದು ಇನ್ನೇನು ನಿರ್ಧರಿಸಬೇಕು ಸಾವಂತ್ರಿ ಆ ಗಂಡನ್ನು ನೂಕಿದಳು ಚೀರಿದಳು ಆತ ಹಿಂದಕ್ಕೆ ನೋಡದೆ ನೆಗೆದು ಕಬ್ಬಿನ

ಬೆಳೆಯಲ್ಲಿ ನುಸುಳಿ ಹೊರಟುಹೋದ"[೧೪] ಧ್ವನಿ ಕೇಳಿದ ವಿಶ್ವನಾಥ ಧ್ವನಿಗ್ರಹಿಸಿ ಕಬ್ಬಿನಗದ್ದೆಯ ಹತ್ತಿರ ಹೋಗಿದ್ದ ಅಲ್ಲಿ ಸಾವಂತ್ರಿ, ಬೆತ್ತಲೆಯಾಗಿ ಅಳುತ್ತಾ ನಿಂತಿದ್ದಳು. ವಿಶ್ವನಾಥ, ನನ್ನ ತಂಗಿ ತರ ನೀನು ಎಂದು ಸಮಾಧಾನದ ಮಾತನ್ನು ಹೇಳುತ್ತಾ ಸಾವಂತ್ರಿಯನ್ನು ವಿಶ್ವನಾಥನು ಭೋಗಿಸುತ್ತಾನೆ. ಇವರಿಬ್ಬರನ್ನು ವಿಶ್ವನ ಗೆಳೆಯ ರುದ್ರಮೂರ್ತಿ ನೋಡುತ್ತಾನೆ.

ವಿಶ್ವನಾಥನ ಹೊಲವನ್ನು ನೋಡಿಕೊಳ್ಳಲು ದುರುಗ ಸತ್ತಮೇಲೆ ರುದ್ರಮೂರ್ತಿ ವಹಿಸಿಕೊಂಡಿದ್ದನು. ವಿಶ್ವನಾಥ ರುದ್ರಮೂರ್ತಿಗೆ ಮೊದಲ ವರ್ಷದ ಬೆಳೆಯ ಗುತ್ತಿಗೆಯನ್ನು ಸಾವಂತ್ರಿಗೆ ಕೊಡಲು ಹೇಳಿದ್ದ. ಇದರಿಂದ ಸಾವಂತ್ರಿಗೆ ನ್ಯಾಯಸಿಗಲು ಸಾಧ್ಯವೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಯಲ್ಲವ್ವನಿಗೆ ಸಹಾಯ ಮಾಡಿದ್ದ ವಿಶ್ವನಾಥ ಸಾವಂತ್ರಿಗೆ ನಯ ಮಾತುಗಳಿಂದ ಮೋಸ ಮಾಡಿದ್ದಾನೆ. ಪ್ರಸ್ತುತ ಸಮಾಜದಲ್ಲಿ ಆಪ್ತರಿಂದಲೇ (ಸಹೋದರರು, ತಂದೆ, ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ, ದೊಡ್ಡಮ್ಮ ಮುಂತಾದವು) ಹೆಣ್ಣು ಹೆಚ್ಚು ಅಪಾಯಕ್ಕೆ ಒಳಗಾಗುತ್ತಿರುವ ವಿಷಯವನ್ನು ಸಾವಂತ್ರಿ ಪಾತ್ರದ ಮೂಲಕ ಕಥೆಗಾರರು ಚಿತ್ರಿಸಿದ್ದಾರೆ.

ಹಾಲತಿ ಸೋಮಶೇಖರ್ ಅವರು ಹೇಳುವಹಾಗೆ "ಮಾದೇವಣ್ಣನ ಮಗ ಶೇಖರ ಸಾವಂತ್ರಿಯನ್ನು ಕೆಡಿಸಲು ಪ್ರಯತ್ನಿಸಿ ಅದಕ್ಕೆ ಉಂಟಾದ ಅಡ್ಡಿಯಿಂದ ಹೊರ ನಡೆದರೆ ಕಥಾನಾಯಕ ಆಕೆಯ ಹಿತೈಷಿಯಂತೆ ನಟಿಸುತ್ತ ಹುನ್ನಾರದಿಂದ ಅವಳನ್ನೇ ಭೋಗಿಸುತ್ತಾನೆ."[೧೫] ಇಲ್ಲಿ ಕಾಮದ ಹಸಿವಿನ ಜೊತೆಗೆ ಹೆಣ್ಣಿನ ಶೋಷಣೆಯಾಗುವುದನ್ನು ನೋಡಬಹುದು. 'ಸಹಪಾಠಿ' ಕಥೆಯಲ್ಲಿ ಶೋಷಣೆಗೆ ಒಳಗಾದ ಮತ್ತು ಸಂಪ್ರದಾಯಬದ್ಧ ಸ್ತ್ರೀಯರನ್ನು ಈ ಕತೆಯಲ್ಲಿ ಕಾಣಬಹುದು. ಬಸವೇಗೌಡನ ಹೆಂಡತಿ, ಶಿವಪ್ಪನ ಹೆಂಡತಿ, ಜೋನಿಯ ಹೆಂಡತಿ, ಲಿಂಗಾಯುತರ ಹುಡುಗಿ ಈ ಕಥೆಗಳಲ್ಲಿ ಬರುವ ಪಾತ್ರಗಳು ಬಸವೇಗೌಡರ ಹೆಂಡತಿ, ಗಂಡನ ಯೋಗಕ್ಷೇಮ ನೋಡಿಕೊಳ್ಳುವುದರಲ್ಲೇ ಆಯಸ್ಸು ತುಂಬಿಸಿದ್ದಾಳೆ. ಗಂಡನ ಅನೀತಿ ಮತ್ತು ಉದ್ಧಟತನದ ಬಗ್ಗೆ ಪ್ರಶ್ನಿಸುವ ಧೈರ್ಯವೇ ಅವಳಿಗೆ ಬರುವುದಿಲ್ಲ.

ಬಸವೇಗೌಡ ಜೋನಿಯ ಹೆಂಡತಿಯನ್ನು ಅತ್ಯಾಚಾರ ಮಾಡಿದ್ದನು (ಕೊನೆಯಲ್ಲಿ ಜೋನಿ ಹೆಂಡತಿ ಯಾರನ್ನೋ ಕಟ್ಟಿಕೊಂಡು ಹೊರಟು ಹೋಗಿದ್ದಳು) ಹಾಗೂ ಶಿವಪ್ಪನ ಹೆಂಡತಿಗೆ ಸೀರೆ ಬಿಚ್ಚಿ ಊರಿನಲ್ಲಿ ಮೆರವಣಿಗೆ ಮಾಡಿದ್ದನು. ಲಿಂಗಾಯತರ ಹುಡುಗಿ (ಬ್ಯಾಡರನ್ನ) ಅಂರ್ಜಾತಿ ವಿವಾಹವಾಗಿದ್ದಳು. ಈ ಹುಡುಗಿಗಾಗಿ ಜಗಳವಾಡಿ ಈ ಜಗಳ ಕೊಲೆಯಲ್ಲಿ ಅಂತ್ಯವಾಯಿತು. ಈ ಕತೆಯಲ್ಲಿ ವಾಸ್ತವ ಪ್ರಪಂಚದಲ್ಲಿ ಮೇಲ್ವರ್ಗದವರು ಕೆಳವರ್ಗದ ಹೆಣ್ಣನ್ನು ಶೋಷಣೆ ಮಾಡುವುದು ಅಭಿವ್ಯಕ್ತವಾಗಿದೆ.

---

೧೪. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೨೪೭.
೧೫. ಡಾ. ಹಾಲತಿ ಸೋಮಶೇಖರ್, ಪಿ.ಲಂಕೇಶ್, ಪುಟ. ೨೨.

'ಮಂಜುಕವಿದ ಸಂಜೆ' ಕಥೆಯಲ್ಲಿ ಗೌರಮ್ಮ ಗಂಡನ ಲೈಂಗಿಕ ಹಗರಣದಿಂದ ಅಸಹಾಯಕಳಾಗಿ ನಿರಾಶೆಗೊಂಡಿದ್ದು ಕಥೆಯ ಮುಖ್ಯವಸ್ತು, ಗೌರಮ್ಮನ ಗಂಡ ಪ್ರಭುದೇವನು ಮಾಡುವ ಮಹಿಳಾ ಶೋಷಣೆ ಈ ಕಥೆಯಲ್ಲಿ ವ್ಯಕ್ತವಾಗುತ್ತದೆ. "ಹೆಂಡತಿ ಗೌರಮ್ಮನಿಗೆ ಕೂಡ ಪ್ರಭುದೇವರನ್ನು ನೋಡಿ ನಿರಾಶೆಯಾಗತೊಡಗಿತು. ಅವರ ಅರವತ್ತನೇ ಹುಟ್ಟುಹಬ್ಬದ ಮಾರನೇ ದಿನವೇ ಈ ಲೈಂಗಿಕ ಹಗರಣದಲ್ಲಿ ಅವರು ಸಿಕ್ಕಿ ಹಾಕಿಕೊಂಡಿದ್ದರು. ಅದು ಆದದ್ದು ಹೀಗೆ. ಪ್ರಭುದೇವರ ಮನಸ್ಸು ಈಚೆಗೆ ಸರಿ ಇರಲಿಲ್ಲ. ಪುಸ್ತಕ ಓದತೊಡಗಿದರೆ ಅರ್ಧಪುಟ ಮುಗಿಯುವಷ್ಟರಲ್ಲೇ ಅವರು ಎಂದೋ ಕಂಡ ಹೆಣ್ಣು ಅಲ್ಲಿ ಕಾಣಿಸಿಕೊಳ್ಳುತ್ತಿದ್ದಳು. ಇದು ಮುದಿ ಹುಚ್ಚು ಎಂದು ಕೊಂಡು ಎದ್ದು ಕಿಟಕಿಯ ಹತ್ತಿರ ನಿಂತರೆ ದಾರಿಯಲ್ಲಿ ಹೋಗುವ ಮುದುಕಿ ಕೂಡ ಅವರಿಗೆ ಸುಂದರಿಯಾಗಿ ಕಾಣುತ್ತಿದ್ದಳು. ಒಮ್ಮೆ ಒಬ್ಬಳು ನಡುವಯಸ್ಸಿನ ಹೆಣ್ಣು ರಸ್ತೆಯಲ್ಲಿ ಹೋಗುವುದು ಕಾಣಿಸಿತು. ಅವರು ಎಷ್ಟು ಪ್ರಯತ್ನಿಸಿದರೂ ಅವಳ ಪೂರ್ತಿ ಮುಖ, ಎರಡು ಸ್ತನಗಳು ಕಾಣಲೊಲ್ಲದು. ಸೀರೆಯಲ್ಲಿ ತುಯ್ಯುತ್ತಿದ್ದ ತೊಡೆ, ಜಘನದ ಪೂರ್ತಿ Impact ಮನಸ್ಸಿಗೆ ಸಿಗಲೊಲ್ಲದು."[೧೬] ಇಲ್ಲಿ ಅವನ ಕಲ್ಪನೆಯ ಹೆಣ್ಣು ಆತ ಸಮಾಜದಲ್ಲಿ ಅನುಭವಿಸಿದ ಹೆಣ್ಣು ಗೌರಮ್ಮ ಸಂಸ್ಕಾರವಂತ ಹೆಂಗಸು ಒಳ್ಳೆಯ ಪತ್ನಿ ಆದರೆ ಪ್ರಭುದೇವರ ಇಂತಹ ದುರಂತದ ಲೈಂಗಿಕ ಸಂಬಂಧದಿಂದ ಗೌರಮ್ಮ ಅನುಭವಿಸುವ ನೋವನ್ನು ಶೋಷಣಾ ನೆಲೆಯಲ್ಲಿ ಕಾಣಬಹುದು.

ನವ್ಯ ಸಾಹಿತ್ಯ ಪಂಥ ಹೆಣ್ಣನ್ನು ಪುರುಷನ ಕಣ್ಣಿನಲ್ಲಿ ನೋಡಿತು. ಜೊತೆಗೆ ಗಂಡು ಹೆಣ್ಣಿನ ಸಂಬಂಧದ ಸ್ವರೂಪವನ್ನು ವ್ಯಕ್ತಿಗತ ದೃಷ್ಟಿಕೋನದಲ್ಲಿಟ್ಟು ಪರಿಶೀಲಿಸಿತು. ಲಂಕೇಶರ ಮೊದಲ ಬರಹಗಳಲ್ಲಿ ಮಹಿಳಾ ಸಂವೇದನೆಗಳು ಸಂದರ್ಭದ ಕೂಸುಗಳಾಗಿ ಬರುತ್ತವೆಯೇ ಹೊರತು ಸ್ವತಂತ್ರ ವ್ಯಕ್ತಿತ್ವದ ಸ್ವಾವಲಂಬೀ ನೆಲೆಯಲ್ಲಿ ವಿಶ್ಲೇಷಣೆಗೊಂಡಿಲ್ಲ. ಆದರೆ ಬದಲಾದ ನವ್ಯೋತ್ತರ ಸಂದರ್ಭದಲ್ಲಿ ಲಂಕೇಶರು ಹೆಣ್ಣಿನ ಶಕ್ತಿ ಸಾಧ್ಯತೆಗಳತ್ತ ತಮ್ಮ ಬರಹವನ್ನು ಕೇಂದ್ರೀಕರಿಸಿದರು. ಹೀಗಾಗಿ ಸ್ತ್ರೀ-ಪುರುಷರ ಸಮಾನತೆ, ಮಹಿಳಾ ಸ್ವಾತಂತ್ರ್ಯ, ಹೆಣ್ಣು-ಗಂಡಿನ ನಡುವಣ ಬಿಕ್ಕಟ್ಟು, ಅಹಂಕಾರ, ದ್ವೇಷ, ಪ್ರತೀಕಾರ, ಅಸಹಾಯಕತೆಗಳು ಸ್ತ್ರೀ ಶೋಷಣೆ ಮತ್ತು ಸ್ತ್ರೀ ಚೈತನ್ಯ ಇವೆಲ್ಲಾ ಲಂಕೇಶರ ಚಿಂತನಾದ್ರವ್ಯವಾಗಿ ಮೂಡಿಬಂದಿದೆ.

### ೫.೩. ಹಸಿವು ಮತ್ತು ಪ್ರಭುತ್ವದ ನಿರ್ಣಯತೆಯ ಕಾನೂನು ಸಂಬಂಧಗಳು

ಲಂಕೇಶರು ಕೇವಲ ಕಥೆಗಾರರಲ್ಲದೆ ರಾಜಕೀಯ ಚಿಂತಕರಾಗಿಯೂ ತಮ್ಮನ್ನು ತಾವು ಗುರುತಿಸಿಕೊಂಡರು. ಆದರೆ ಇವರ ಕಾರ್ಯಕ್ಷಮತೆ ಎಂತದ್ದು ಎಂದು ಪ್ರಶ್ನೆ ಮಾಡುವ ಹಕ್ಕು ಬಹುಶಃ ಲಂಕೇಶರ ಭಾವನಾ ಲೋಕದ ಸದಸ್ಯರಾದವರಿಗೆ ಮಾತ್ರ ಎಂದರೆ

---

೧೬. ಪಿ.ಲಂಕೇಶ್, ಮಂಜುಕವಿದ ಸಂಜೆ, ಪುಟ. ೧.

ವಿಷಾದವೆನಿಸಲಾರದು. ರಾಜಕೀಯವಾಗಿ ಜಾಗೃತರಾದ ಅವರ ಮನಸ್ಸು ಭವಿಷ್ಯ ಭಾರತದ ಸಾಂಸ್ಕೃತಿಕ ಆಯಾಮಗಳಿಗೆ ಅದರಲ್ಲಿದ್ದಂತಹ ರೂಪನಿಷ್ಠ ಮೌಲ್ಯಗಳನ್ನು ಕಲ್ಪಿಸುವಲ್ಲಿ ತಾತ್ಕಾಲಿಕ ಉಪಶಮನವನ್ನು ನೀಡುವಂತೆ ಕಥನದಲ್ಲಿ ಮೂಡಿಬಂದವು. ಇದು ಅವರನ್ನು ರಾಜಕೀಯದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿತ್ತು. ಸ್ವತಃ ರಾಜಕೀಯ ರಂಗದ ಪ್ರತಿನಿಧಿಯಾಗಿದ್ದರಿಂದ ಅಲ್ಲಿನ ಅವ್ಯವಸ್ಥೆಗಳನ್ನೇ ಅವರ ಬರವಣಿಗೆಯ ವಸ್ತುಗಳನ್ನಾಗಿ ಬಳಸಿ ಸಮಾಜವನ್ನು ಎಚ್ಚರಿಸುವ ಸದಾ ಎಚ್ಚರದ ಪ್ರಜ್ಞೆಯಂತೆ ಬರೆಯಲು ಮುಂದಾದರು ಲಂಕೇಶರು ಇವರ ಕಥನ ಸಾಹಿತ್ಯದಲ್ಲಿ ಹಸಿವು ಮತ್ತು ಪ್ರಭುತ್ವದ ನಿರ್ಣಯತೆಯ ಕಾನೂನು ಸಂಬಂಧಗಳು ಮೂಡಿರುವುದನ್ನು ಕಾಣಬಹುದು. ಕಾನೂನು ಅಂದರೆ ಹಳ್ಳಿಯಲ್ಲಿ ನಡೆಯುವ ಪಂಚಾಯ್ತಿ ವ್ಯವಹಾರಗಳು, ಅಧಿಕಾರಿಗಳು ಸ್ವತಃ ತೆಗೆದುಕೊಳ್ಳುವ ನಿರ್ಧಾರಗಳು ಇವು ಕಥನ ಸಾಹಿತ್ಯದಲ್ಲಿ ಮೂಡಿರುವುದನ್ನು ಕಾಣಬಹುದು.

ಕಂಬಳ್ಳಿಯ ಬದುಕಿನ ಮೌಲ್ಯಗಳು, ಆಧುನಿಕತೆಗೆ ತೆರೆದುಕೊಂಡ ಪರಿಣಾಮವಿದ್ದಲ್ಲಿ ಕಾಮ, ಪ್ರೇಮ, ಆಸೆ, ಅಸೂಯೆ, ಪ್ರಭುತ್ವ, ಕಾನೂನು, ಜೂಜು, ಕಳ್ಳಭಟ್ಟಿ ಇತ್ಯಾದಿ ಸಂಗತಿಗಳು ಸಂಘರ್ಷಕ್ಕೆ ಅನುವು ಮಾಡಿಕೊಟ್ಟಿದ್ದು ಆ ಮೂಲಕ ಉಂಟಾದ ಬದುಕಿನ ಬಿಕ್ಕಟ್ಟುಗಳನ್ನು ಕಾದಂಬರಿ ಒಳಗೊಂಡಿದೆ. ಹಾಗೆ ನೋಡಿದರೆ ಕಾದಂಬರಿಯಲ್ಲಿ ಬರುವ ಯಾವುದೇ ಪಾತ್ರಗಳು ಸಂತೃಪ್ತ ಬದುಕನ್ನು ನಡೆಸುತ್ತಿಲ್ಲ. ಕಾರಣ ಅವರು ಹೊಂದಿರುವ ದ್ವೇಷ–ಅಸೂಯೆಗಳು ಇಂತಹ ಸ್ಥಿತಿಗೆ ಕೊಂಡೊಯ್ಯುವಂತೆ ಮಾಡಿವೆ. ಕಂಬಳ್ಳಿಯ ಸಾಮಾಜಿಕ ಚೌಕಟ್ಟಿನಲ್ಲಿ ಏರ್ಪಟ್ಟಿರುವ ನೋವು, ವಿಷಾದ, ದುಗುಡಗಳು ರಂಗವ್ವ, ಸಾವಂತ್ರಿ, ಮಾಚ, ಬಸ್ಯ, ರಾಚ, ಶಿವನಂಜ, ಕರಿಯ, ಭರ್ಮಣ್ಣ, ಸಣ್ಣೀರಪ್ಪ, ಇಕ್ಬಾಲ, ಶಿವಾಜಿ ಹೀಗೆ ಎಲ್ಲರ ಖಾಸಗಿ ಬದುಕಲ್ಲೂ ಅತೃಪ್ತಿಗಳನ್ನು ಕಾಣಬಹುದಾಗಿದ್ದು ಅದನ್ನು ಚಿತ್ರಿಸುವುದೇ ಕಾದಂಬರಿಕಾರರ ಉದ್ದೇಶವಾಗಿದೆ. ಅಂತಿಮವಾಗಿ ಮಂಜ–ಸಾವಂತ್ರಿಯರನ್ನು ಉಡುಪನ ಪೌರೋಹಿತ್ಯದಲ್ಲಿ ಮಾಡುವ ಅವರಿಬ್ಬರ ಮದುವೆ ಪ್ರಭುತ್ವ ಮತ್ತು ಕಾನೂನನ್ನು ಮೀರಿದ್ದು ಕಂಬಳ್ಳಿಯ ಪ್ರಪಂಚದಲ್ಲಿ ಇದನ್ನು ನೆರವೇರಿಸುವ ದಿಟ್ಟತನ ನಿಜವಾಗಿಯೂ ಮೆಚ್ಚಬೇಕಾಗುತ್ತದೆ. ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿದ ಅವಿದ್ಯಾವಂತ ರಂಗವ್ವನ ಪಾತ್ರದ ಹಿಂದೆ ಲೇಖಕರ ಪಾತ್ರ ಇಲ್ಲದೆ ಇಲ್ಲ. ಕಾರಣ ಅವರಿಗೆ ಸಮಾಜ ಬದಲಾಗಬೇಕಾಗಿದೆ. ಜಾತಿಪ್ರಜ್ಞೆಯನ್ನು ಮೀರಬೇಕಾಗಿದೆ. ಪಂಚಾಯ್ತಿ ಕಾನೂನುಗಳ ವಿರುದ್ಧ ಸಮರಸಾರಬೇಕಿದೆ. ಇವೆಲ್ಲವನ್ನು ಮೀರುವ ಪ್ರಯತ್ನವನ್ನು ಲೇಖಕರು ಇಲ್ಲಿ ರಂಗವ್ವನ ಮೂಲಕ ಮಾಡಿಸಿ ಅವರಿಗಿರುವ ಸಾಮಾಜಿಕ ಪ್ರಜ್ಞೆಯನ್ನು ವಿಸ್ತರಿಸುವತ್ತ ಮನಸ್ಸು ಮಾಡಿದ್ದಾರೆ.

ಹಸಿವು ಮತ್ತು ಪ್ರಭುತ್ವದ ನಿರ್ಣಯತೆಯ ಕಾನೂನಿನ ಸಂಬಂಧಗಳು ನಿರೂಪಿತವಾಗಿರುವ ಬಗೆಯನ್ನು ಮುಸ್ಸಂಜೆಯ ಕಥಾಪ್ರಸಂಗದ ಕೆಲವು ನಿದರ್ಶನಗಳಲ್ಲಿ ನೋಡಬಹುದು. "ತನಗೆ ಮತ್ತು ರಂಗವ್ವನಿಗೆ ಜಗಳವಾದ ದಿನವೇ ತನ್ನ ಊರವರಿಗೆ ಮಾತ್ರವಲ್ಲದೆ ನೆರೆಯವರಿಗೂ ವಿಷಯ ತಿಳಿಸಿ ಅವರಲ್ಲಿ ಒಬ್ಬರೂ ರಂಗವ್ವನಿಗೆ ಆಣೆ ಬಡ್ಡಿ ಕೊಡಕೂಡದೆಂದು ಭರ್ಮಣ್ಣ ಹೇಳಿದ್ದು ಸರಿಯಷ್ಟೆ. ರಾಚ ಇಂಥ ವಿಷಯಗಳಲ್ಲಿ ಮುಂದು. ಆತನ ಮುಖ್ಯ ಕೆಲಸ ಊರದೊಡ್ಡಿಯನ್ನು ಹರಾಜಿನಲ್ಲಿ ಕಂಟ್ರಾಕ್ಟ್ ತೆಗೆದುಕೊಂಡು ಗದ್ದೆಯಮೇಲೆ ನುಗ್ಗಿದ ದನಗಳ ಜೊತೆಗೆ ಬಯಲಲ್ಲಿ ಮೇಯುತ್ತಿದ್ದ ದನಗಳನ್ನು ಒಟ್ಟಿಗೆ ದೊಡ್ಡಿಗೆ ಕೂಡಿ ತಲೆಯೊಂದಕ್ಕೆ ನಾಲ್ಕಾಣೆ ಮಸೂಲು ಮಾಡುವುದು, ಹೋದಸಲ ತಾವರೆಕೆರೆಗೆ ಒಡ್ಡು ಹಾಕಿಸುವ ಕೆಲಸ ಕಂಟ್ರಾಕ್ಟ್ ಹಿಡಿದುಕೊಂಡು ಕೊಂಚ ದುಡ್ಡು ಕಳೆದುಕೊಂಡನೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರೂ ಅದರಲ್ಲಿ ಸಾವಿರಾರು ರೂಪಾಯಿ ಉಳಿದದ್ದು ರಾಚನಿಗೆ ಮತ್ತು ಹಾರ್ನಳ್ಳಿಯ ಪೈಲ್ವಾನರಿಗೆ ಮಾತ್ರ ಗೊತ್ತಿತ್ತು. ಈ ಸಾವಿರಾರು ರೂಪಾಯಿಯ ವಿಚಾರ ರಾಚನಿಗಿಂತ ಹಾರ್ನಳ್ಳಿಯ ಪೈಲ್ವಾನರಿಗೇ ಚೆನ್ನಾಗಿ ಗೊತ್ತಿತ್ತು ಎಂದರೆ ಒಳ್ಳೆಯದು – ಯಾಕೆಂದರೆ ಅಪಹರಣ ರಾಚನ ಕೈಗೆ ಸೇರುವುದಕ್ಕೆ ಮುನ್ನವೇ ಪೈಲ್ವಾನರ ಹೊಟ್ಟೆಯನ್ನು ಕೋಳಿ ಮತ್ತು ಹೆಂಡದ ರೂಪದಲ್ಲಿ ಸೇರಿತ್ತು."[೧೭] ರಂಗವ್ವನಿಗೆ ಬರಬೇಕಾದ ಹಣವನ್ನು ವಾಪಸ್ಸು ಕೊಡಕೂಡದೆಂದು ಕಾನೂನು ಮಾಡುವ ರೀತಿಯಲ್ಲಿ ಭರ್ಮಣ್ಣನ ಪ್ರಭುತ್ವದ ಧೋರಣೆಯನ್ನು ಲೇಖಕರು ಇಲ್ಲಿ ಸೂಚ್ಯವಾಗಿ ಹೇಳಿದ್ದಾರೆ. ಗದ್ದೆಯ ಮೇಲೆ ನುಗ್ಗಿದ ದನಗಳಿಗೆ ತಲೆಗೆ ನಾಲ್ಕಾಣೆ ನಿಗದಿ ಮಾಡಿರುವುದು ಅಲ್ಲಿನ ಲೋಕಲ್ ಕಾನೂನು ರೀತಿಯನ್ನು ಕಾಣಬಹುದು. ಪೈಲ್ವಾನನು ಮೋಸಮಾಡಿ ಒಡ್ಡು ಹಾಕಿಸುವ ಕೆಲಸದಲ್ಲಿ ಉಳಿದ ಹಣವನ್ನು ತಾನೇ ಸ್ವಾಹಮಾಡಿಕೊಳ್ಳುವುದು. ಈ ರೀತಿಯಾಗಿ ಕಂಬಳ್ಳಿಯ ಪ್ರಭುತ್ವದ ಕಾನೂನುಗಳಲ್ಲಿ ಇವರಿಗಿರುವ ವಿವಿಧ ರೀತಿಯ ಹಸಿವುಗಳನ್ನು ಕಾಣಬಹುದು.

ಹನುಮಕ್ಕನ ಪುರಾಣ ಬೂಸಿಯ ಪಂಚಾಯತಿಯ ಪ್ರಸಂಗದಲ್ಲಿ ಗುತ್ಯವ್ವ ಹಾಗೂ ಹನುಮಕ್ಕ ಇವರುಗಳ ಜಗಳವನ್ನು ಬಿಡಿಸಲು ಸಣ್ಣೀರಪ್ಪನು ಸ್ಕೂಲಿನ ಹೊರಗೆ ಬರುತ್ತಾನೆ. ಬೂಸಿ ಇದನ್ನು ಪ್ರಭುತ್ವದ ನೆಲೆಯಲ್ಲಿ ಸ್ವೀಕರಿಸಿ ಒಂದು ಪಂಚಾಯಿತಿ ಮಾಡುವ ಅವಕಾಶ ದೊರೆಯಿತೆಂದು ಸಂಭ್ರಮಗೊಳ್ಳುತ್ತಾನೆ. ಇಲ್ಲಿ ಮೇಷ್ಟ್ರು ಸಣ್ಣೀರಪ್ಪ ಗುತ್ಯವ್ವ ಮತ್ತು ಹನುಮಕ್ಕರ ಹತ್ತಿರ ಹಣದ ವ್ಯವಹಾರ, ಬೇರೆ ವ್ಯವಹಾರ ಇರಿಸಿಕೊಂಡಿದ್ದ. ಆದ್ದರಿಂದ ಇವರಿಬ್ಬರ ಸಹವಾಸ ಬೇಡವೆಂದು ನುಸುಳಲು ಯತ್ನಿಸಿ ಫಲಕಾರಿಯಾಗದೆ ಪಂಚಾಯ್ತಿಯಲ್ಲಿ ಆತನು ಸಿಕ್ಕಿಕೊಂಡ

---

೧೭. ಪಿ. ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೮೫.

"ನೀನು ಎಲ್ಡು ರೂಪಾಯಿ ತಗಂಡಿದ್ದ ಒಪ್ಪಿಕೋ – ಹನುಮಂತ ದೇವರತಾವ" ಅಂದಳು ಗುತ್ಯವ್ವ.

'ನೀವು ಹಿಂಗೆಲ್ಲ ಮಾಡಬಾರದು ಮೇಷ್ಟ್ರೇ' ಅಂದ ಬೂಸಿ; ತಾನು ಈ ಪಂಚಾಯಿತಿ ಕ್ಲಿಷ್ಟವೆಂದು ತಿಳಿದರೆ ಇದು ಇಷ್ಟು ಸಲೀಸಾಗಿ ಮುಗಿದಿದ್ದಕ್ಕೆ ಬೂಸಿಗೆ ಬೇಸರವಾಗಿತ್ತು. ತನ್ನೆಲ್ಲಾ ಜಾಣತನವನ್ನು ತೋರಿಸಬೇಕೆಂದು ಬಂದಿದ್ದ ಅವನ ವ್ಯಕ್ತಿತ್ವದ ಒಂದು ಅಂಶವನ್ನು ಈ ಜಗಳ ಉಪಯೋಗಿಸಿಕೊಂಡಿರಲಿಲ್ಲ. ತಾನೊಬ್ಬ ಮಹಾನ್ಯಾಯಾಧೀಶನೋ ಎಂಬಂತೆ ಗುತ್ಯವ್ವ, ನೀನು ಮಾಡಿದ ತಪ್ಪಿಗೆ ಸುಮ್ಮನೇ ಮೇಷ್ಟ್ರ ಮಾನತೆಗೀಬ್ಯಾಡ ಗೊತ್ತಾತ. ನೀನು ಹನುಮಕ್ಕನಿಂದ ಈಸಕೊಂಡ ಹಣನ ಮೇಷ್ಟರಿಗೆ ಕೊಟ್ಟ?' ಅಂದ"[೧೮] ಇಲ್ಲಿ ಮಡಾರಿಯಂತಿರುವ ಬೂಸಿ ಮೇಷ್ಟರಾಗಿರುವ ಸಣ್ಣೀರಪ್ಪನ ವಕಾಲತ್ತಾಗಿ ಮತ್ತು ಹನುಮಕ್ಕನ ವಕಾಲತ್ತಾಗಿ ಕಾನೂನು ಪಂಚಾಯಿತಿಯನ್ನು ಮಾಡುವುದು ವ್ಯಂಗ್ಯದ ಧೋರಣೆಯಾಗಿ ಕಂಡುಬರುತ್ತದೆ.

ಕಂಬಳ್ಳಿ ತನ್ನ ಬದಲಾಗುತ್ತಿರುವ ರಾಜಕಾರಣದ ಎಲ್ಲ ಪಟ್ಟುಗಳನ್ನು ಆವಾಹಿಸಿಕೊಂಡೇ ಉಸಿರಾಡುತ್ತಿತ್ತು. ರಂಗವ್ವನಿಗೆ ಬೆನ್ನೆಲುಬಾಗಿ ಬಂದ ಶಿವನಂಜ ಸಾವಂತ್ರಿಯ ಪ್ರೇಮ ವಂಚಿತನಾಗಿ ಭರ್ಮಣ್ಣನ ಪಕ್ಷ ಸೇರುತ್ತಾನೆ. ಸಿದ್ದ ತನ್ನ ಭಾವ ಮೈದುನನಾಗುವವನಾದ್ದರಿಂದ ಬೂಸಿಪಕ್ಷ ಬದಲಿಸುತ್ತಾನೆ. ಇದು ಕಂಬಳ್ಳಿಯ ರಾಜಕೀಯ ಧ್ರುವೀಕರಣದ ಅನಿಶ್ಚಿತತೆಯನ್ನು ತೋರಿಸುತ್ತದೆ. ಹಾಗೆಯೇ ಪತಿತನಾಗಿದ್ದ ಶಿವಾಜಿಯನ್ನು ಮೇಲೆತ್ತುವ ಕೆಲಸಕ್ಕೆ ಕೈಹಾಕಿದ್ದರಿಂದ ರಾಚನಿಗೆ ತನ್ಮೂಲಕ ಭರ್ಮಣ್ಣನಿಗೆ ಲಾಭವಾಗುವಂತೆ ಶಿವಾಜಿಗೂ ಇಲ್ಲಿ ಲಾಭವಾಗುತ್ತದೆ. ಸಿದ್ದ ಹೇಗಾದರೂ ಗೆಲ್ಲುವುದು ಶಿವಾಜಿಗೆ ತನ್ನ ಕಳೆದುಹೋದ ಕೀರ್ತಿ ಲಭ್ಯವಾಗುವಂತೆ ಮಾಡಿರುವುದರಿಂದ ರಾಚ–ಭರ್ಮಣ್ಣರ ರಾಜಕೀಯ ಭವಿಷ್ಯವೂ, ಶಿವಾಜಿ–ಸಿದ್ಧರ ಕುಸ್ತಿ ಸ್ಪರ್ಧೆಯು ನಿರ್ಧರಿಸುತ್ತದೆ. ಇಲ್ಲಿ ಗೆಲ್ಲಬೇಕೆಂದಿರುವ ಕಾನೂನನ್ನು ಒಳಗೊಳಗೆ ಮ್ಯಾಚ್‌ಫಿಕ್ಸ್ ಮಾಡಿಕೊಂಡು ಸೋಲು ಉಂಟಾಗುವ ರೀತಿಯಲ್ಲಿ ಹಣದ ಆಮಿಷಹೊಡ್ಡಿ ಸೋಲಿಸಲಾಗುತ್ತದೆ. ಕೊನೆಗೆ ಕುಸ್ತಿ ತನ್ನ ರಾಜಕಾರಣದ ರಂಗಿನೊಂದಿಗೆ ತೆರೆದುಕೊಳ್ಳುತ್ತದೆ. ಹಾಲುಮತದ ಸ್ವಾಮಿಗಳ ಶಿರಹಟ್ಟಿ, ಜಗದ್ಗುರುಗಳ ಆರೆಸ್ಸೆಸ್ಸಿನ ಮುಸ್ಲಿಂಲೀಗ್‌ನ ಪ್ರತಿಷ್ಠೆಯ ವೈಯಕ್ತಿಕ ರಾಜಕೀಯ ಗುಂಪು ರಾಜಕಾರಣದ ಮಟ್ಟಕ್ಕೆ ಇಳಿಯುತ್ತದೆ. ಕೊನೆಗೆ ಸಿದ್ದ ಗೆದ್ದು ಎಲ್ಲವೂ ಗೋಜಲು ಗೋಜಲಾಗಿ ತಮ್ಮ ಯೋಜನೆಗಳ ಸಂಕೀರ್ಣತೆಯಲ್ಲೇ ಎಲ್ಲರೂ ನಾಶವಾಗುವುದನ್ನು ಗಮನಿಸಿದಾಗ ಡೋಲಾಯಮಾನವಾಗಿರುವ ವರ್ತಮಾನ ಭಾರತದ ಭವಿಷ್ಯತ್ತಿಗೆ ಕಾದಂಬರಿಯ ಮುಕ್ತಾಯ ಮುನ್ಸೂಚನೆಯನ್ನು ನೀಡುತ್ತಿದೆಯೇನೋ ಎನಿಸುತ್ತದೆ. ಆದರೆ ಮುಸ್ಸಂಜೆ ತನ್ನ ಇಳಿ ಸಂಜೆಯ ಹೊತ್ತಿಗೆ ಕಂಬಳ್ಳಿಯ ಅವಸಾನದ ಕಥೆಯಂತೆ ಕಂಡು ಭಯ ಹುಟ್ಟಿಸಿದರೂ ನಾಳಿನ

---

೧೮. ಅದೇ, ಪುಟ. ೧೨೫.

ಬೆಳಗಿನ ನಿಖರತೆಗೆ ಒಗ್ಗಿಕೊಳ್ಳಲು ಇಡೀ ಗ್ರಾಮ ಭಾರತ ಸಜ್ಜಾಗುತ್ತಿದೆಯೆಂಬ ವಸಾಹತೋತ್ತರ ಜೀವನ ವಿಧಾನದ ವೈವಿಧ್ಯಪೂರ್ಣ ವಿವರಗಳನ್ನು ಬಿಟ್ಟುಕೊಡುತ್ತದೆ. ಹಾಗೆಯೇ ಮನುಷ್ಯ ಸಂಬಂಧದ ಸಾಮಾಜಿಕಸ್ಥಿತಿ ಬದಲಾದ ಪರಿಸರವನ್ನು ದಾಖಲಿಸುತ್ತದೆ.

'ಅಕ್ಕ' ಕಾದಂಬರಿಯನ್ನು ದುಡಿಸಿಕೊಂಡಿರುವ ರೀತಿ ವಿಶಿಷ್ಟವಾದುದಾಗಿದೆ. ನಿರೂಪಕನ ಸ್ವಗತದ ಧಾಟಿಯಲ್ಲಿ ಕಾದಂಬರಿಯ ಬೆಳವಣಿಗೆಯನ್ನು ಕಾಣುತ್ತೇವೆ. ಕಾದಂಬರಿಯ ನಾಯಕ ಹಾಗೂ ನಿರೂಪಕ ಒಬ್ಬನೇ ಆಗಿದ್ದು ಕೆಲವು ಸಂದರ್ಭಗಳು ಕೆಲವು ನಿಯಮ ಮತ್ತು ಕಾನೂನುಗಳನ್ನು ಆತನೇ ಪರಿಚಯಿಸುತ್ತಾನೆ. ಜೊತೆಗೆ ನಿಯಂತ್ರಿಸುತ್ತಾನೆ. ಈ ಕ್ಯಾತನ ಲೋಕವನ್ನೇ ಗ್ರಹಿಸುವ, ಗ್ರಹಿಸಿದ್ದನ್ನು ನಿರೂಪಿಸುವ ರೀತಿಯೇ ಕಾದಂಬರಿಯ ತಂತ್ರವಾಗಿದೆ. ಕ್ಯಾತನ ಗ್ರಹಿಕೆಯಲ್ಲಿ ನಿರೂಪಿತವಾಗಿರುವ ಕಾದಂಬರಿ ಕೊಳಗೇರಿಯ ಬದುಕನ್ನು ಸ್ವತಃ ಅನುಭವಿಸಿದ ವ್ಯಕ್ತಿಯಾಗಿದ್ದು ಅಲ್ಲಿನ ಅನುಭವವನ್ನು ತನ್ನ ಭಾಷೆಯಲ್ಲಿಯೇ ದುಡಿಸಿಕೊಳ್ಳುವುದರಿಂದ ಇದೊಂದು ವಿಶಿಷ್ಟ ರೀತಿಯ ರಚನೆಯಾಗಿ ಕಂಡುಬರುತ್ತದೆ. ಕ್ಯಾತ ಕಾದಂಬರಿ ಬರೆಯುವುದೇ ಬೈಗುಳದ ಮೂಲಕ ನಗರದ ಬಾಹ್ಯ ಜಗತ್ತಿಗೆ ಹೊಂದಿಕೊಂಡಿರುವ ಈ ಭೀಕರ ವಾಸ್ತವ ಅನೇಕ ರಾಜಕೀಯ ಪ್ರಭುತ್ವದ ಕೇಂದ್ರಗಳಾಗಿ ರೂಪುತಾಳುತ್ತವೆ. ಕೊಳಚೆ ವಾಸಿಗಳ ಬದುಕಿನ ರೀತಿ, ವೇಶ್ಯಾವಾಟಿಕೆ, ಬಡತನ, ದಾರಿದ್ರ್ಯ, ಹಸಿವು, ದಬ್ಬಾಳಿಕೆ, ಹೊಸ ಹೊಸ ಕಾನೂನುಗಳು – ಹೀಗೆ ಪ್ರತಿಯೊಂದು ಕೂಡ ಅಲ್ಲಿನ ಬದುಕಿನ ಕ್ರಮವೇ ಒಂದು ಸಿನಿಮಾ ಜಗತ್ತಿನಂತೆ ಕಂಡುಬರುತ್ತದೆ. ದೇವೀರಿಯ ಬದುಕಿನ ಹೋರಾಟವೇ ಅವಳು ಸಾಗುವ ದಾರಿ ಕ್ಯಾತನ ಮನೋಧರ್ಮಕ್ಕೆ ವಿರುದ್ಧವಾದುದು ಕ್ಯಾತನಿಗೆ ದೇವೀರಿಯ ಜೀವಿತದ ಬಗ್ಗೆ ಸಂಶಯ ಇರುವಂತೆಯೇ ಮೆಚ್ಚುಗೆಯೂ ಇದೆ. ಈ ಸಮಾಜದ ನೀಚತನಗಳ ನಡುವೆ ಒಂದು ಹೆಣ್ಣಾಗಿ ಆಕೆ ಮಾಡುವ ಬದುಕಿನ ಹೋರಾಟದ ಬಗ್ಗೆ ಹೆಮ್ಮೆ ಎನ್ನಿಸುತ್ತದೆ. ಇದು ಅಕ್ಕ ಕಾದಂಬರಿಯ ತಂತ್ರದ ವಿಶಿಷ್ಟತೆ.

ಕೊಳಗೇರಿಯಲ್ಲಿ ಹುಟ್ಟಿ ಬೆಳೆದಿರುವ ಕ್ಯಾತನೇ ನಿರೂಪಕನಾದ್ದರಿಂದ ಯಾವ ವಿಧದ ಭಾವಾತಿರೇಕ, ವೈಭವೀಕರಣವಿಲ್ಲದೆ ಕೊಳಗೇರಿಗಳಲ್ಲಿರುವ ಶೋಷಣೆ ಮತ್ತು ನೋವು ಹಾಗೆಯೇ ಅಲ್ಲಿರುವವರಲ್ಲಿ ಕಾಣುವ ಸಂಭ್ರಮ ಹಾಗೂ ಜೀವನೋತ್ಸಾಹ ಇವೆಲ್ಲವನ್ನು ಕೃತಿಯಲ್ಲಿ ನಿರೂಪಿಸಿದ್ದಾರೆ. ಕೊಳಗೇರಿಯ ಗುಡಿಸಲುಗಳಲ್ಲಿಯೂ ತಮ್ಮದೇ ಆದ ಬದುಕಿನ ಲಯ ಇರುವುದನ್ನು ಕೃತಿ ದಾಖಲಿಸುತ್ತದೆ. ಅಲ್ಲಿಯೂ ಸಂಭ್ರಮ ಉಲ್ಲಾಸಗಳಿವೆ. ಋತುಮತಿಯಾದ ಕನ್ಯೆಗೆ ಎಲ್ಲರೂ ಸೇರಿ ಆರತಿ ಎತ್ತಿ ಉತ್ಸವ ಮಾಡುತ್ತಾರೆ. ಕ್ಯಾತ ಪದ್ದಿಯಂತಹ ಗಂಡುಹೆಣ್ಣುಗಳ ಪರಸ್ಪರ ಆಕರ್ಷಿತರಾಗಿ ತಮ್ಮ ಸಂತೋಷ ಸಡಗರಗಳನ್ನು ಹರಡಿಕೊಳ್ಳುತ್ತಾನೆ. ನಗುತ್ತಾನೆ, ಅಳುತ್ತಾನೆ. ಪ್ರೀತಿಸುತ್ತಾನೆ. ಇದು ಅವನ ಜಗತ್ತಿನಲ್ಲಿ ಅವನೇ ನಿರ್ಣಯಿಸಿಕೊಂಡ ಕಲ್ಪಿತ

ಕಾನೂನು ಮತ್ತು ಪ್ರಭುತ್ವ ಪದ್ದಿ ವಿಷಯದಲ್ಲಿ ಆತನದೇ ಕಲ್ಪನಾ ಜಗತ್ತೊಂದನ್ನು ನೋಡಹೊರಟ ಚಿಂತನೆಯಾಗಿದೆ. ಪದ್ದಿ ಸಿನಿಮಾದಲ್ಲಿ ನಾಯಕಿಯಾಗಿ ಕಾರ್ಮೆಂಟ್ ಸ್ಕೂಲು ಸೇರಿ ಇಂಗ್ಲೀಷ್ ಕಲಿತು ಸಮಾಜದಲ್ಲಿ ಎತ್ತರಕ್ಕೇರುವ ಕನಸುಹೊಂದಿದ್ದಾನೆ. ಇಂತಹ ಬದುಕಿನ ತುಡಿತವನ್ನು ಉತ್ತಮಪುರುಷ ಮತ್ತು ಪ್ರಥಮಪುರುಷದ ಹಿನ್ನೆಲೆಯಲ್ಲಿ ಕಥನದ ಮಾದರಿಯನ್ನೇ ಸೆರೆಹಿಡಿದಿದ್ದಾರೆ ಲೇಖಕರು.

ಮನುಷ್ಯ ಸಂಬಂಧಗಳ ಹಿನ್ನೆಲೆಯಲ್ಲಿ ಹಸಿವು ಮತ್ತು ಪ್ರಭುತ್ವದ ಧೋರಣೆಯನ್ನು ಅವರ ಕಥೆಗಳಲ್ಲಿಯೂ ಕಾಣಬಹುದು. 'ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ'ಯಲ್ಲಿನ ಈರವ್ವನ ಜಗಳ ಅವಳ ಕುಟುಂಬಕ್ಕೆ ರಕ್ಷಾ ಕವಚವಾಗಿದೆ. ಪುರುಷಪ್ರಧಾನ ಸಂಸ್ಕೃತಿಯಲ್ಲಿ ಗಂಡಿನ ಯಜಮಾನಿಕೆ ಇಲ್ಲದೆ ಬದುಕುವುದು ಅತ್ಯಂತ ಕಷ್ಟಸಾಧ್ಯ. ಬೇಲಿ ಇಲ್ಲದ ಹೊಲಕ್ಕೆ ನುಗ್ಗಬಲ್ಲ ಪುಂಡು ದನಗಳನ್ನು ಬೆದರಿಸಲು ಬೆದರು ಬೊಂಬೆಯನ್ನು ಬಳಸುವಂತೆ ಗಂಡಿಲ್ಲದ ತನ್ನ ಕುಟುಂಬವನ್ನು ಪರಪುರುಷರಿಂದ ರಕ್ಷಿಸಿಕೊಳ್ಳಲು ಈರವ್ವ ಜಗಳಗಂಟಿತನವನ್ನು ಬೆಳೆಸಿಕೊಂಡಿದ್ದಾಳೆ. ವಯಸ್ಸಿಗೆ ಬಂದ ಮಗಳು ಬೆಳೆಯಬೇಕಾದ ಪುಟ್ಟ ಹುಡುಗನ ವಿದ್ಯಾಭ್ಯಾಸ ಜೀವನ ಸಾಗಿಸಬೇಕಾದ ಅನಿವಾರ್ಯತೆ ಅವಳನ್ನು ಬಾಯಿಜೋರಿನ ಹೆಂಗಸನ್ನಾಗಿಸಿದೆ. ಈ ಜೋರುತನ ಅವಳದೇ ಆದ ಕಾನೂನು ತನ್ನ ಕುಟುಂಬದ ಭದ್ರತೆಗೆ ಹಾಕಿಕೊಂಡಂತ ನಿಯಮವಿದು. ಹಳ್ಳಿಯಲ್ಲಿನ ಸಂಕೀರ್ಣತೆ ಹಾಗೂ ಪಿತೃಪ್ರಾಧಾನ್ಯತೆ ದಿಕ್ಕಿಲ್ಲದ ಕುಟುಂಬವನ್ನು ಆಪೋಶನ ತೆಗೆದುಕೊಳ್ಳುವಷ್ಟು ಸಶಕ್ತವಾಗಿದೆ. ಈರವ್ವ ತನ್ನ ಬದುಕನ್ನು ಜಯಿಸಬೇಕಾದ ಅನಿವಾರ್ಯತೆಯಲ್ಲಿ ತನ್ನ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುವ ಸಂಕಷ್ಟದಲ್ಲಿದ್ದಾಳೆ. ಸಂಸಾರ ನಿಭಾಯಿಸಬಲ್ಲ ಗಂಡಿನ ಪಾತ್ರವನ್ನು ತಾನೇ ತಳೆದಿದ್ದಾಳೆ. ಇದು ಅವಳ ಪ್ರಭುತ್ವದ ನಿರ್ಣಯದ ನಿಲುವಾಗಿದೆ.

ಊರಿನ ಗಟ್ಟಿಕುಳ ನಿಂಗೇಗೌಡ ಅವಳ ಹಿತೈಷಿಯೋ – ಮತ್ತೇನೋ ಆಗುವಲ್ಲಿ ನಮ್ಮ ಪಲ್ಲಟಗೊಳ್ಳುತ್ತಿರುವ ಸಾಮಾಜಿಕ ವಿವರಗಳು ಹೆಣ್ಣುಗಂಡಿನ ಸಾಂಗತ್ಯಕ್ಕೆ ಅರ್ಥ ನೀಡಿದೆ. ನಿಂಗೇಗೌಡನೊಂದಿಗಿನ ಸಂಬಂಧಕ್ಕೆ ಶೇಖರಪ್ಪನ ಸಂಬಂಧಕ್ಕೆ ಸಪೋಟ ಹಣ್ಣನ್ನು ಕದ್ದು ಸಿಕ್ಕಿಬಿದ್ದ ಪ್ರಸಂಗದಲ್ಲಿ ಸೃಷ್ಟಿಯಾದ ಇರಿಸುಮುರುಸುಗಳ್ಯಾವುದಕ್ಕೂ ಈರವ್ವನನ್ನು ಯಾರೂ ಪ್ರಶ್ನಿಸಲಾರರು. "ಅವ್ವ ಶೇಖರಪ್ಪನವರ ತೋಟಿ ಹುಸೇನಿಯನ್ನ ಬೈಯ್ಯುತ್ತಿದ್ದಳು. 'ಹಾಟಗಳ್ಳ ನಾನ್ಯಾರು ಗೊತ್ತಿಲ್ಲೇನಾ ಉಮಣ್ಣನ ಅವ್ವ, ನಿಮ್ಮ ಶೇಖರಪ್ಪ ನಂಗೆ ಹೊಸಬನೇನ್ಲಾ' ಎಂದು ಕೂಗಾಡುತ್ತಿರಲು ಲಿಂಗಿ ಕೂಡ ಅದೇನೇನೋ ಬಯ್ಯುತ್ತಿದ್ದಳು. ಹುಸೇನಿ 'ನಿಮ್ಮಪ್ಪಂದೇನೆ ಹೆಚ್ಚು ಮಾತಾಡಿದ್ರೆ ಹಲ್ಲು ನಿಕಾಲ್ ಮಾಡ್ತೀನಿ' ಎಂದು ಚೀರುತ್ತಿದ್ದ. ಅವನ ತಲೆ ಕೆದರಿತ್ತು; ಅವಳ ಮಡಿಲಲ್ಲಿ ಅದೇನೋ ತೂಗುತ್ತಿದ್ದವು; ಅವಳ ಕೈಯಲ್ಲಿ ಎರಡು ದೊಡ್ಡ ಗುಲಾಬಿ ಟೊಂಗೆಗಳು

ಎರಡು ನಂದಿ ಬಟ್ಟಲ ಗಿಡಗಳು ಇದ್ದವು 'ನೋಡ್ರೀ ಸಾರ್ ಹೆಂಗಸು ಸಪೋಟ ಹಣ್ಣೆಲ್ಲಾ ಕದ್ದುಕಂಡುಹೋಗ್ತಾರೆ' ಅಂದ ಹುಸೇನಿ ಶೇಖರಪ್ಪನವರತ್ತ ತಿರುಗಿ".[೧೯] ಇಲ್ಲಿ ಅಮಾಯಕ ಸ್ಥಿತಿಯಲ್ಲಿದ್ದರೂ ಈರವ್ವ ಹುಸೇನಿಯ ಪ್ರಭುತ್ವದ ಕೃತಕ ನಿಲುವುಗಳು ಅವಳು ಹಾಕಿಕೊಂಡಿರುವ ಜಗಳಗಂಟಿತನದ ಬೇಲಿಯ ಮುಂದೆ ಹೊಸ ಪಂಚಾಯ್ತಿ ಕಾನೂನುಗಳನ್ನು ಸೃಷ್ಟಿಸುವಲ್ಲಿ ಕೆಲಸಮಾಡುತ್ತವೆ. ಅವಳ ಚೀರಾಟ, ಜಗಳ, ಅಸಹಾಯಕ ಪ್ರಸಂಗದಲ್ಲಿ ಹೆಚ್ಚುತ್ತಲೇ ಹೋಗುತ್ತವೆ. ಮಗ ಉಮಾಪತಿಗೆ ಅವ್ವನ ವರ್ತನೆ ಅಪಮಾನ ಎನಿಸಿದರೆ ಶೇಖರಪ್ಪ ಕೊಡುವ ಸಮರ್ಥನೆ ಈರವ್ವನ ವ್ಯಕ್ತಿತ್ವಕ್ಕೆ ವಿಭಿನ್ನ ಆಯಾಮಗಳನ್ನು ನೀಡಿದೆ. ಈರವ್ವನ ಈ ಹೋರಾಟ, ಚೀರಾಟ ಅವಳ ಜೀವನೋತ್ಸಾಹದ ಒಂದಂಶವೇ ಆಗಿದೆ ಎನ್ನುವುದನ್ನು ಸಾಬೀತುಪಡಿಸುತ್ತದೆ. ಮಗಳು ಲಿಂಗಿಯ ಕಳ್ಳ ಬಸಿರನ್ನು ಇಳಿಸಲು ಹುಸೇನಿಯಲ್ಲಿ ಮದ್ದು ಕೇಳುವುದು. ನಿಂಗೇಗೌಡನೊಂದಿಗಿನ ಸಂಬಂಧ, ಸಪೋಟಹಣ್ಣನ್ನು ಕಿತ್ತೊಯ್ಯುವ ಪ್ರಸಂಗ ಹೀಗೆ ಇವೆಲ್ಲವನ್ನು ಗುಟ್ಟಾಗಿಸಿಕೊಳ್ಳದೆ ಎತ್ತರದ ದನಿಯಲ್ಲಿ ಬಿಚ್ಚಿಡುವ ಈರಮ್ಮನಲ್ಲಿ ಕೃತಕತೆಯಾಗಲೀ ಸ್ವಾರ್ಥವಾಗಲೀ ಕಂಡುಬರುವುದಿಲ್ಲ. ನಿಂಗೇಗೌಡ, ಹುಸೇನಿ, ಉಮಾಪತಿಯರ ನಗರದ ನಾಜೂಕಿನ ನಡತೆಯನ್ನು ಖಂಡಿಸುತ್ತಾ ತಮ್ಮ ವ್ಯಕ್ತಿತ್ವವನ್ನು ಮುಚ್ಚಿಟ್ಟುಕೊಂಡು ಬದುಕುವ ಎಲ್ಲರ ಒಳಗನ್ನೂ ಸ್ಫೋಟಗೊಳಿಸುತ್ತಾಳೆ. ಅವರೆಲ್ಲರನ್ನು ಧಿಕ್ಕರಿಸಿ ಹೊರಟುಹೋಗುವ ಅವಳ ಪ್ರವೃತ್ತಿ ಲಂಕೇಶರ ವ್ಯಕ್ತಿತ್ವದ ಶೋಧನೆಯ ಫಲವಾಗಿದೆ.

'ರುದ್ರಾಣಿಯ ಸುಪ್ತ ಕಥೆ'ಯ ನಾಯಕಿ ರುದ್ರಾಣಿ ಕೌಟುಂಬಿಕವಾಗಿ ಸಾವಿನ ಸರಮಾಲೆಯಿಂದ ನೊಂದವಳು. ನಿರ್ಲಿಪ್ತತೆಯಿಂದ ಈ ಅನಾಹುತಗಳನ್ನೆಲ್ಲಾ ಸಹಿಸಿಕೊಳ್ಳುವ ರುದ್ರಾಣಿ ಸಾಮಾಜಿಕ ಬದುಕಿನಲ್ಲಿ ಮಾತ್ರ ಕಠಿಣ ಮನೋಧರ್ಮದಿಂದ ಶೋಷಣೆಯನ್ನು ಪ್ರತಿಭಟಿಸುವ ವ್ಯಕ್ತಿತ್ವದವಳಾಗಿದ್ದಾಳೆ. ಕಾಲೇಜಿನ ಮುಖ್ಯಸ್ಥಳಾಗಿ ಅಧಿಕಾರ ಹಾಗೂ ಆಡಳಿತ ವರ್ಗದವರಿಗೆ ತಲೆನೋವಾಗಿ ಪರಿಣಮಿಸುವ ಅನ್ಯಾಯ ಎಸಗಿದವರ ಬಗ್ಗೆ ಪ್ರತಿಭಟಿಸುವ ಶೋಷಣೆ ವಿರುದ್ಧ ಕೆಂಡಕಾರುವ ಆತ್ಮಸ್ಥೈರ್ಯವುಳ್ಳ ರುದ್ರಾಣಿಯ ವ್ಯಕ್ತಿತ್ವ ನಿಗೂಢವೆನಿಸುವುದು ಕಾಲೇಜಿನ ಅಧ್ಯಕ್ಷ ಮುತ್ತಣ್ಣನ ದೌರ್ಬಲ್ಯವನ್ನು ಕಾಲೇಜಿನ ಅಭಿವೃದ್ಧಿಗಾಗಿ ಬಳಸಿಕೊಳ್ಳುವುದು ರುದ್ರಾಣಿಯ ಬುದ್ಧಿವಂತಿಕೆ. ಹಿಂಸೆಗೆ – ಹಿಂಸೆಯನ್ನು ಪ್ರತಿಯಾಗಿ ನೀಡಿ ಯಜಮಾನ ಸಂಸ್ಕೃತಿಗೆ ಸೆಡ್ಡುಹೊಡೆಯುತ್ತಾಳೆ. ಇಲ್ಲಿ ಪ್ರಭುತ್ವ ನಿರ್ಣಯದ ಸಂದರ್ಭವನ್ನು ರುದ್ರಾಣಿ ಪಾತ್ರದ ಮೂಲಕ ಕಾಣಬಹುದು. ಮನೆಯ ಕೆಲಸದ ಹುಡುಗಿ ಸೀತೆಗೆ ತಾಯಿಯಂತೆ ನಡೆದುಕೊಳ್ಳುತ್ತಾಳೆ. ತನ್ನ ದಿಟ್ಟತನ, ಸ್ವಾಭಿಮಾನ ಗಂಡಿನ ಆತ್ಮಸ್ಥೈರ್ಯಗಳಲ್ಲೂ ಆ ಗಂಡಿನ ಎದುರು ನಿರ್ಲಜ್ಜೆಯಾಗಿ ಬದಲಾಗುವುದು ಅವಳ ಸುಪ್ತ ಕಥೆಯಾಗಿದೆ. ಗಂಡಿನ

---

೧೯. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೧೮೯.

ಶೋಷಣೆಯನ್ನೆಲ್ಲಾ ಪ್ರತಿರೋಧಿಸುತ್ತಾ ಬಂದಾಕೆ ಗಂಡಿನ ತೋಳ್ತೆಕ್ಕೆಯಲ್ಲಿ ಮಗುವಿನಂತಾಗುವ ತಿರುವು ಈ ಕಥೆಯ ತಂತ್ರವಾಗಿದೆ. ತಾನೇ ನಿರ್ಮಿಸಿದ ಸೂತ್ರಕ್ಕೆ ತದ್ವಿರುದ್ಧವಾಗಿ ಪಾತ್ರವನ್ನು ಪರಿವರ್ತಿಸುವುದು ಲಂಕೇಶರ ಕಥಾ ವಿಶಿಷ್ಟತೆಯಾಗಿದೆ. ಈ ಕಥೆಯಲ್ಲಿ ಮಹಿಳೆ ಅಬಲೆಯಾಗಿ ಶೋಷಣೆಗೆ ಒಳಗಾಗುವುದಕ್ಕಿಂತ ಸಬಲೆಯಾಗಿ ಪ್ರಭುತ್ವದ ನಿರ್ಣಯವನ್ನು ಸ್ತ್ರೀಪಾತ್ರಗಳು ಕೈಗೊಳ್ಳುವುದು ವಿಶೇಷ.

ನವ್ಯಸಾಹಿತ್ಯ ವೈಯಕ್ತಿಕತೆಯ ಮೂಲಕ ಸಾಮಾಜಿಕತೆಯನ್ನು ಅರಿಯಲು ತೊಡಗಿದರೂ ಸಾಮಾಜಿಕ ಸ್ವರೂಪದ ಬಗ್ಗೆ ಒಂದು ವಿಶೇಷವಾದ ಕಾಳಜಿಯನ್ನು ನಾವು ಲಂಕೇಶರ ಕಥೆಗಳಲ್ಲಿ ಕಾಣುತ್ತೇವೆ. ಸಮಾಜದ ಬಗ್ಗೆ ಚಿಂತಿಸುವವರೆಲ್ಲಾ ಸಮಾಜ ಸುಧಾರಕರಾಗಲು ಸಾಧ್ಯವಿಲ್ಲ. ಸಮಾಜದ ಮೂರ್ತಸ್ಥಿತಿಯ ಬಗ್ಗೆ ಮರುಕಪಟ್ಟುಕೊಳ್ಳುವುದೇ ಬೇರೆ ಅದೇ ಸಮಸ್ಯೆಗಳ ವಿರುದ್ಧ ಅಥವಾ ಆ ಸಮಸ್ಯೆಗಳಿಗೆ ಕಾರಣವಾದ ಸ್ಥಾಪಿತ ಹಿತಾಸಕ್ತಿಗಳ ವಿರುದ್ಧ ಹೋರಾಡುವುದು ಬೇರೆ. ಈ ತರಹದ ಗೊಂದಲಮಯ ಸ್ಥಿತಿಯನ್ನು ಸಂಕೀರ್ಣ ಸಂದರ್ಭಗಳನ್ನು ಲಂಕೇಶರು ತಮ್ಮ ಕಥೆಗಳಲ್ಲಿ ವಿಡಂಬನೆಗೆ ಒಳಪಡಿಸಿದ ಕಥೆಗಳನ್ನು ನೋಡಬಹುದು. ಹಸಿವು ಮತ್ತು ಪ್ರಭುತ್ವ ನಿರ್ಣಯದ ಕಾನೂನು ಸಂಬಂಧಗಳನ್ನು 'ರೊಟ್ಟಿ' ಕಥೆಯಲ್ಲಿ ನೋಡಬಹುದು. ಪ್ರಭುತ್ವ ಎಂಬುದು ಹೇಗೆ ಭಿಕ್ಷುಕ ಮತ್ತು ಮುದುಕಿಯನ್ನು ಸಿಂಗಾರಪೇಟೆಯ ರೈಲ್ವೆಸ್ಟೇಷನ್ನಿನಲ್ಲಿ ನಡೆದ ಘಟನೆಯನ್ನು ನಿರ್ಣಯಿಸುತ್ತದೆ. ರೊಟ್ಟಿಯ ಒಡತಿ ಮುದುಕಿ ಭಿಕ್ಷುಕ ಹಸಿವಿಗೆ ರೊಟ್ಟಿ ಕಿತ್ತು ತಿಂದಿದ್ದು ಗೊತ್ತಿದ್ದರೂ ಚೀರಾಡಿ ದೊಡ್ಡ ರಾದ್ಧಾಂತಮಾಡುತ್ತಾಳೆ. ಅಲ್ಲಿರುವ ಜನ ಮುದುಕಿಯನ್ನು ಹೀಯಾಳಿಸಿ ತಮ್ಮ ಚಪಲವನ್ನು ತೀರಿಸಿಕೊಳ್ಳುತ್ತಾರೆ.

ಸಣ್ಣ ರೊಟ್ಟಿಗೆ ದೊಡ್ಡ ರಾದ್ಧಾಂತ ನಡೆಯುವುದನ್ನು ಗಮನಿಸಬಹುದು. ಇಲ್ಲಿ ಘಟನೆಯನ್ನು ನಿಭಾಯಿಸಲಾಗದ ಆಡಳಿತ ವ್ಯವಸ್ಥೆಯ ವೈಫಲ್ಯವೇ ಎದ್ದು ಕಾಣುತ್ತಿದ್ದರೂ ಅದಕ್ಕಿಂತ ಮುಖ್ಯವಾಗಿ ಜನರ ಸಾಮಾಜಿಕ ಪ್ರಜ್ಞೆಯ ಗೊಂದಲಗಳೂ ಮುದುಕಿಯ ಮಗುವಿನಂತಹ ಹಠಮಾರಿತನಗಳು ಇವುಗಳ ನಡುವೆ ಸಾಮಾಜಿಕ ಸಮಸ್ಯೆಯಾದ ಹಸಿವು ಗೌಣವಾಗಿ ಹೋಗಿ ಪ್ರಭುತ್ವ ಮುದುಕಿಯನ್ನು ನಡೆಸಿಕೊಳ್ಳಲು ಹೊಸ ಕಾನೂನನ್ನು ಆ ಕ್ಷಣದಲ್ಲಿ ತಯಾರಿಸಿ ಆಕೆಯನ್ನು ಶೋಷಣೆಗೆ ಒಳಗುಮಾಡುತ್ತಾರೆ. ಇಲ್ಲಿ ಯಾರೂ ಏನನ್ನು ಸಮಾಜಕ್ಕೆ ತೆತ್ತುಕೊಳ್ಳಲು ಸಿದ್ಧರಿಲ್ಲ. ಮುದುಕಿಯನ್ನು ಹೀಯಾಳಿಸಿದ ಜನ ಸಮಾಜದ ಬಗ್ಗೆ ತಮಗಿರುವ ಕಾಳಜಿಯನ್ನು ತೋರ್ಪಡಿಸುವ ಸಲುವಾಗಿ ಮುದುಕಿಯನ್ನು ಅವಮಾನಿಸುತ್ತಾರೆ. ಆದರೆ ರಕ್ತ ಚೆಲ್ಲಿದಾಗ ಮಾತ್ರ ಎಲ್ಲರೂ ಎಲ್ಲವನ್ನು ಅರ್ಥಮಾಡಿಕೊಳ್ಳುತ್ತಾರೆ ಎನ್ನುವ ಒಂದು ಸಣ್ಣ ಕ್ರಾಂತಿಯ ಸಂದೇಶವನ್ನು ಈ ಕಥೆಯ ಮೂಲಕ ಕಾಣಬಹುದು. ಕೇವಲ ರೊಟ್ಟಿ ಕಿತ್ತುತಿಂದಿದ್ದಕ್ಕೆ ಪೋಲಿಸರು ಭಿಕ್ಷುಕನನ್ನು ಹೊಡೆದಾಗ ರಕ್ತ ಚಿಮ್ಮುತ್ತದೆ. "ಬೆತ್ತಲೆ ನಿಂತಂಥ

ಅನ್ನಿಸಿಕೆ. ಸುತ್ತಣ ಒತ್ತಡಕ್ಕೆ ನೀತಿಬಿಟ್ಟು ಹೋಗುವ ಭಯ. ಆಗ ಜನರ ಗುಸುಗುಸು ಭಯ ಶುರುವಾಯಿತು. ಯಾರೋ 'ಪೊಲೀಸ್' ಅಂದರು. ದೂರದಲ್ಲಿ ಜನರನ್ನು ಇಕ್ಕೆಲಕ್ಕೆ ಒತ್ತರಿಸುತ್ತ ಒಬ್ಬ ಪೊಲೀಸ್ ಬರುತ್ತಿದ್ದ. ಅವಳಲ್ಲಿ ಹೊಸಜೀವ ಸುಳಿಯಿತು. ಭಯ ಅವಳಲ್ಲಿ ಆಳವಾಯಿತು, ಅಸಹಾಯಕಳಾಗಿ ಅತ್ತಳು. ಪೊಲೀಸ್ ಏನನ್ನೋ ಕೇಳುತ್ತ ಗಡಿಬಿಡಿಯಿಂದ ಬಂದ. ಅವನ ಮುಖ ಮೈಬೆವರಿತ್ತು. ರಾಹುಕಳೆ ಇತ್ತು. ಹತ್ತಿರ ಬಂದವನೆ ಅವಳಿಂದ ಚೀಲ ಕಸಿದುಕೊಂಡ ಭಿಕ್ಷುಕನ ಹತ್ತಿರ ಹೋಗಿ ಅವನಿಂದ ರೊಟ್ಟಿ ಕಿತ್ತುಕೊಂಡು ಅವನಿಗೆ ಕೋಲಿನಿಂದ ತಲೆಗೆ ಬಾರಿಸಿದ ಜನ ತೆಪ್ಪಗೆ ನಿಂತಿದ್ದರು. ಆದರೆ ರೊಟ್ಟಿಯ ಕಳ್ಳನಿಗೆ ಹೊಡೆತ ಬಿದ್ದೊಡನೆ ಕೋಪದ ಅಲೆ ಎದ್ದಿತು. ಕೋಪ ಕೃತಿಗೆ ಇಳಿಯಲು ಹವಣಿಸುತ್ತಿತ್ತು. ಭಿಕ್ಷುಕನಿಗೆ ಪೊಲೀಸ್ ಇನ್ನೊಂದು ಏಟುಕೊಟ್ಟ; ರಕ್ತ ಚಿಮ್ಮಿತು. ಆತ ತತ್ತರಿಸಿ ನಿಂತ. ಪೋಲಿಸಿನವನಿಗೂ ಭಯವಿರಬೇಕು 'ಹೋಗಿಸಾರ್, ಹೊರಟುಹೋಗಿ' ಅಂತ ಅವರನ್ನು ಕೋಲಿನಿಂದ ನೂಕಹತ್ತಿದ. ಆಕೆ ಕಳ್ಳನನ್ನು ದಿಟ್ಟಿಸಿ ನೋಡುತ್ತಿದ್ದಳು. ರಕ್ತ ಸುರಿಯುತ್ತಿತ್ತು. ಜನ ಪೋಲಿಸಿನವರ ದೊಣ್ಣೆ ಹಿಡಿದುಕೊಂಡು 'ಯಾಕೆ ಹೊಡೆದೆ' ಅಂತ ಕೇಳಿದರು. ಇನ್ನೇನು ಪೊಲೀಸ್ ಜನರ ಕೈಯಲ್ಲಿ ತುಕಡ ಆಗಬೇಕು".[೨೦] ಈ ಸಂದರ್ಭವನ್ನು ಕಂಡ ಭಿಕ್ಷುಕಿ ತನ್ನ ಚೀಲದಲ್ಲಿದ್ದ ಹಣ್ಣನ್ನು ಉಳಿದ ರೊಟ್ಟಿಯನ್ನು ಎಲ್ಲರಿಗೂ ಹಂಚಲು ಮುಂದಾದಳು. ಯಾರು ತೆಗೆದುಕೊಳ್ಳಲಿಲ್ಲ. ಆಕೆ ನಿಶ್ಯಕ್ತಳಾದಳು. ನಮ್ಮ ಸಮಾಜದ ಸ್ಥಿತಿಯನ್ನು ಅರಿತು ಪ್ರಜ್ಞಾಪೂರ್ವಕವಾಗಿ ಪ್ರತಿಕ್ರಿಯಿಸಲು ಈ ತರದ ಕ್ರಾಂತಿಯೇ ನಡೆಯಬೇಕೆಂದು ಜನರಲ್ಲಿ ಹೆಪ್ಪುಗಟ್ಟಿರುವ ಸಾಮಾಜಿಕಪ್ರಜ್ಞೆಯನ್ನು ಈ ಕಥೆಯ ಮೂಲಕ ವಿವರಿಸಿದ್ದಾರೆ.

ಬಡ ಮಧ್ಯಮವರ್ಗದ ಕುಟುಂಬದಲ್ಲಿ ಹುಟ್ಟಿ ಬೆಳೆದ ಲಂಕೇಶರು ಹುಟ್ಟಿನಿಂದಲೇ ಸಮಾಜವನ್ನು ಅಧ್ಯಯನ ಮಾಡುತ್ತಾ ಸಮಾಜದಲ್ಲಿರುವ ಎಲ್ಲಾ ಸಾಮಾಜಿಕ ಸಮಸ್ಯೆಯನ್ನು ನೋಡುತ್ತಲೇ ಬೆಳೆದವರು. ಸಮಾಜದ ಎಲ್ಲಾ ಸ್ತರದ ಸಮಸ್ಯೆಗಳ ಕುರಿತಾಗಿ ಲಂಕೇಶರ ಸಾಹಿತ್ಯ ರಚನೆಯಾಗಿದೆ. ಸಮಾಜದಲ್ಲಿ ನಡೆಯುವ ಶೋಷಣೆ, ದಬ್ಬಾಳಿಕೆ, ಪಂಚಾಯ್ತಿ, ಹೊಸ–ಹೊಸ ಕಾನೂನುಗಳು ಮೇಲುಕೀಳು ಇಂತವುಗಳು ಲಂಕೇಶರ ಕಥೆಗಳಲ್ಲಿ ನಿರೂಪಿತವಾಗಿವೆ. "ಲಂಕೇಶರು ಬಾಲ್ಯ ಮತ್ತು ಶಾಲಾ ದಿನಗಳನ್ನು ಕಳೆದ ಹಳ್ಳಿಯ ಬದುಕನ್ನು ಲಂಕೇಶರು ತಮ್ಮ ಆತ್ಮಚರಿತ್ರೆಯಲ್ಲಿ ತುಂಬಾ ವ್ಯಾಮೋಹದಿಂದ ದಾಖಲಿಸುತ್ತಾರೆ. ಗ್ರಾಮೀಣ ಪರಿಸರದ ಮನುಷ್ಯ ಸಂಬಂಧಗಳು, ಸಾಮಾಜಿಕ ವಿವರಗಳು, ನಿಸರ್ಗದ ಚೆಲುವು ಇವುಗಳ ನಡುವೆ ಬೆಳೆಯುವ

---

೨೦. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೧೨೮.

ಬಾಲಕನ ಗ್ರಹಿಕೆಯನ್ನು ಚುರುಕುಗೊಳಿಸಿವೆ".[೨೧] ಹೀಗೆ ಲಂಕೇಶರ ಬಾಲ್ಯದ ಸಾಮಾಜಿಕ ಪರಿಸರ ಅವರ ಸಾಹಿತ್ಯದ ಮೇಲೆ ಗಾಢವಾದ ಪ್ರಭಾವ ಬೀರಿರುವುದು ಸತ್ಯದ ಸಂಗತಿಯೇ.

ನವ್ಯಕಥೆಗಾರರ ಅನುಭವದ ಗ್ರಹಿಕೆ ಮತ್ತು ಶೋಧನೆ, ವ್ಯಕ್ತಿ ಕೇಂದ್ರಿತವಾಗಿದ್ದ ಕಥೆಗಳೇ ಆಗಿದ್ದವು. ವ್ಯಕ್ತಿತ್ವ ಮತ್ತು ಸಮಾಜಕ್ಕೆ ಪೂರಕವಾದಂತಹ "ಬಹಿರಂಗ ಜಗತ್ತಿನ ವಾಸ್ತವಗಳನ್ನು ಮನುಷ್ಯನ ಅಂತರಂಗದ ಆತ್ಮಸಾಕ್ಷಿಯ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸುವ ಕ್ರಮವಿದು. ವ್ಯಕ್ತಿಯ ಆಂತರಿಕ ಶೋಧನೆ ಮತ್ತು ವಿಶ್ಲೇಷಣೆಗೆ ಒತ್ತುಕೊಡುವುದರಿಂದ ಇಲ್ಲಿನ ನಾಯಕರು ಸಮಾಜದ ಸ್ವಕೇಂದ್ರಿತರಂತೆಯು ಕಾಣತೊಡಗಿಸುವುದುಂಟು".[೨೨] ಅಂದರೆ ಲಂಕೇಶರ ಕಥೆಗಳು ಸಮಾಜದ ಸಖ್ಯದಿಂದ ಕಳಚಿಕೊಂಡಿತು ಎಂದು ಇಲ್ಲಿನ ಅರ್ಥವಲ್ಲ. ಸಮಾಜದ ನಿರ್ಮಾಣದಲ್ಲಿ ಬರುವ ಅಧಿಕಾರವರ್ಗ, ಸಾಮಾಜಿಕಪ್ರಜ್ಞೆ ವ್ಯವಸ್ಥೆಯನ್ನು ಹೇಗೆ ದುರ್ಬಳಕೆ ಮಾಡಿಕೊಂಡಿದ್ದಾರೆ. ಅವರದೇ ಆದ ಪ್ರಭುತ್ವದ ನಿಲುವನ್ನು ತಳೆಯುತ್ತಾರೆ. ಹೊಸ ಕಾನೂನನ್ನು ಅವರ ಮಿತಿಯೊಳಗೆ ಮಾಡಿಕೊಳ್ಳುತ್ತಾರೆ. ಇವೆಲ್ಲವನ್ನು ತೀಕ್ಷ್ಣವಾಗಿ ಒಳಗಣ್ಣಿನಿಂದ ನೋಡುವ ಲೇಖಕರು ಸಾಮಾಜಿಕ ಚಿಕಿತ್ಸಕ ದೃಷ್ಟಿಯನ್ನು ಕಥನದಲ್ಲಿ ಮಾಡುತ್ತಾರೆ. ಇಲ್ಲಿ ಸಮಾಜದ ಸಮಸ್ಯೆಗಳಿಗೆ ಒಂದು ರೂಪವನ್ನು ಕೊಡುವ ಹೊಸ ಪ್ರಯತ್ನ. ಆ ಮೂಲಕ ಸಮಾಜದ ಬಗೆಗಿನ ಕಾಳಜಿಯನ್ನು ಮೂರ್ತರೂಪದಲ್ಲಿ ಚಿತ್ರಿಸುವ ತವಕ ಎದ್ದುಕಾಣುತ್ತದೆ. 'ರೊಟ್ಟಿ' ಕಥೆಯನ್ನು ಗಮನಿಸಿದಾಗ ಹಸಿವು ಎನ್ನುವುದು ಒಂದು ಸಾಮಾಜಿಕ ಸಮಸ್ಯೆಯಾದರೂ ಮೊದಲಿಗೆ ಅದು ಒಂದು ಅಂತರಂಗದ ಸಮಸ್ಯೆಯಾಗಿ ಕಾಣಿಸುತ್ತದೆ. ನಂತರ ಅದು ಬಹಿರಂಗದ ಸಾಮಾಜಿಕ ಸಮಸ್ಯೆಯಾಗಿ ಒಂದು ವಿಚಿತ್ರದ ತಿರುವನ್ನು ಪಡೆಯುತ್ತದೆ. ಹೀಗೆ ಇನ್ನು ಅನೇಕ ಕಥೆಗಳಲ್ಲಿ ನಾವು ವ್ಯಕ್ತಿಗತ ಸಮಸ್ಯೆಗಳ ಮೂಲಕ ಸಾಮಾಜಿಕ ಸಮಸ್ಯೆಗಳಿಗೆ ಯೂಟರ್ನ್ ತೆಗೆದುಕೊಳ್ಳುವ ವಿವಿಧ ಹಂತಗಳಿಗೆ ಸಾಗುವ ಜೀವನ ವಿಧಾನವನ್ನು ಲಂಕೇಶರ ಕಥೆಗಳಲ್ಲಿ ಕಾಣುತ್ತೇವೆ.

### ೫.೪. ಹಸಿವು ಮತ್ತು ಸಾಮಾಜಿಕ ನಿಲುವುಗಳ ಸಂಬಂಧಗಳು

ಪಿ.ಲಂಕೇಶರು ಸೃಜನಶೀಲತೆಯ ಮಾಧ್ಯಮಗಳನ್ನು ಹುಡುಕಿ ಹೊರಟವರು. ಆದರೆ ಇದರ ಹಿಂದೆ ಯಾವಾಗಲೂ ಜನರನ್ನು ಮುಟ್ಟಬೇಕೆಂಬುದೇ ಅವರ ಆಶಯವಾಗಿತ್ತು. ಹೀಗಾಗಿಯೇ ಕತೆ, ಕಾದಂಬರಿ, ನಾಟಕ, ವಿಮರ್ಶೆಗಳನ್ನು ಬರೆದರು. ಇನ್ನು ಜನರನ್ನು ತಲುಪಬೇಕೆನಿಸಿದಾಗ ಸಿನಿಮಾವನ್ನು ಮಾಡಿದರು. ಮುಂದೊಮ್ಮೆ ಪತ್ರಿಕೋದ್ಯಮವನ್ನು ಮುಂದುವರಿಸಿ ಆ ಮೂಲಕ ಜನರ ಆಶೋತ್ತರಗಳಿಗೆ ಹತ್ತಿರವಾಗಿಯೇ ಉಳಿದದ್ದನ್ನು

---

೨೧. ಕೆ.ಮರುಳುಸಿದ್ದಪ್ಪ, ಪಿ.ಲಂಕೇಶ, ಪುಟ. ೧೪.
೨೨. ಅದೇ.,

ಕಾಣುತ್ತೇವೆ. ಸಾಮಾಜಿಕ ಸಂದರ್ಭದಲ್ಲಿ ಇವರ ಸೃಜನಶೀಲತೆಗೆ ಹಲವು ಮುಖಗಳಿದ್ದು ಅಂದಿನ ತುರ್ತು ಏನಿರುತ್ತದೆ. ಅದಕ್ಕೆ ತಕ್ಕಂತ ಸಾಮಾಜಿಕ ನಿಲುವುಗಳು ಸ್ಪಷ್ಟವಾಗುವ ರೀತಿಯಲ್ಲಿ ಅವರ ಸಾಹಿತ್ಯ ಅವಕಾಶವನ್ನು ಮಾಡಿದೆ. ಹೀಗೆ ಲಂಕೇಶರ ಬದುಕು ಮತ್ತು ಸಾಹಿತ್ಯ ಒಂದರೊಳಗೊಂದು ಮಿಳಿತಗೊಂಡು ಸಮಾಜವನ್ನು ನೋಡುವ ರೀತಿಯೇ ಬೇರೆಲ್ಲರಿಗಿಂತ ವಿಭಿನ್ನವಾಗಿದ್ದು ಶುದ್ಧಮಾನವತ್ವದ ವಿವಿಧ ಮುಖಗಳ ಅಧ್ಯಯನವಾಗಿದೆ.

ಹಸಿವು ಮತ್ತು ಸಾಮಾಜಿಕ ನಿಲುವಿನ ಸಂಬಂಧಗಳನ್ನು ಮನುಷ್ಯತ್ವದ ಸಂಬಂಧದಲ್ಲಿ ಅವರ ಸಾಹಿತ್ಯದಲ್ಲಿ ತಳೆದಿರುವ ಧೋರಣೆಗಳ ಮೂಲಕ ನೋಡಬಹುದು. ಸಮಾಜವನ್ನು ಸುತ್ತುವರೆದಿರುವ ಪರಿಸರ ಅತ್ಯಂತ ಹೇಯವಾಗಿದ್ದು ಇದಕ್ಕೆ ಚಿಕಿತ್ಸೆಯನ್ನು ಬಯಸಿದ ಲಂಕೇಶರು ತಮ್ಮನ್ನು ಒಂದು ವಾದಕ್ಕೆ ಸಿದ್ಧಪಡಿಸಿಕೊಂಡು ಪರಿಹಾರವನ್ನು ಕಾಣಲು ಯತ್ನಿಸಿದವರು. ಈ ನೆಲೆಯಲ್ಲಿ ಸದಾ ತಮ್ಮನ್ನು ಸಮಾಜಮುಖಿ ಆಶಯಗಳಲ್ಲಿ ತೊಡಗಿಸಿಕೊಂಡು ಸಾಮಾಜಿಕ ಸ್ವಾಸ್ಥ್ಯವನ್ನು ಕಾಣಲು ಹಂಬಲಿಸಿದವರು. ತಾವು ಅಂದುಕೊಂಡ ಸಾಮಾಜಿಕ ಸಮಸ್ಯೆಗಳ ಅರಿವನ್ನು ಹೊಂದಿ ಬರೆದವರು ಈ ಮೂಲಕ ಸಾಮಾಜಿಕ ನಿಲುವುಗಳನ್ನು ಪ್ರಕಟಪಡಿಸಿದವರು. 'ಮುಸ್ಸಂಜೆಯ ಕಥಾಪ್ರಸಂಗ'ದಲ್ಲಿ ವ್ಯಕ್ತವಾಗಿರುವ ಸಾಮಾಜಿಕ ನಿಲುವನ್ನು ನೋಡುವುದಾದರೆ ಭರ್ಮಣ್ಣ ರಂಗವ್ವನಿಗೆ ಮಾಡಿದ ಉಪಾಯಗಳೆಲ್ಲವೂ ವ್ಯತಿರಿಕ್ತವಾಗಿ ವ್ಯಕ್ತಗೊಂಡವು. ಅವನ ಮನೋಸಹಜ ವೈರುಧ್ಯಗಳು, ಅಸೂಯೆಗಳು ಎಲ್ಲವೂ ರಂಗವ್ವನ ಮುಂದೆ ಮಣ್ಣುಮುಕ್ಕಿದವು. ಒಂದು ಸಾಮಾಜಿಕ ವ್ಯವಸ್ಥೆ ಯಾವ ರೀತಿ ನಡೆಸಿಕೊಳ್ಳುತ್ತದೆ ಎಂಬುದು ಅಲ್ಲಿನ ವಾತಾವರಣಕ್ಕೆ ಸುತ್ತಲಿನ ಮನುಷ್ಯ ನಿರ್ಮಿತ ವಲಯಕ್ಕೆ ಸಂಬಂಧಿಸಿರುತ್ತದೆ. ರಂಗವ್ವ ಗಟ್ಟಿ ಹೆಂಗಸು ಇದಕ್ಕೆ ಕಾರಣ ಅವಳು ನಿರ್ಮಿಸಿಕೊಂಡ ಮಾನಸಿಕ ದೃಢತೆ. ಗಂಡ ಸತ್ತಮೇಲೆ ಎಲ್ಲಾ ಜವಾಬ್ದಾರಿಯನ್ನು ಹೊತ್ತು ಸಂಸಾರದ ತೇರನ್ನು ಎಳೆಯುವ ಹೊಣೆಗಾರಿಕೆ ಸಣ್ಣ ಮಗು ಸಾವಂತ್ರಿ ಅವಳ ಮಡಿಲಲ್ಲಿ ಇದ್ದು ರಂಗವ್ವ ಸಾಮಾಜಿಕ ನಿಲುವಿನ ಸಿದ್ಧಮಾದರಿಗೆ ಅವಳನ್ನು ತಯಾರು ಮಾಡಿದವು. "ರಂಗವ್ವ ಸಾವಂತ್ರಿ ಕುಟುಂಬಕ್ಕೆ ಆಪ್ತವಾಗಿ ನೆರೆಹೊರೆಯಲ್ಲಿ ನಂದ್ಯಪ್ಪ ದಂಪತಿಗಳ ಕುಟುಂಬವಿದೆ. ಎರಡೂ ಕುಟುಂಬಗಳನ್ನು ಹೋಲಿಸಿದರೆ ಕಂಡುಬರುವ ವ್ಯತ್ಯಾಸ ಗಮನಾರ್ಹವಾಗುತ್ತದೆ. ರಂಗವ್ವ ಗಟ್ಟಿ ಹೆಂಗಸು ಅವಳ ಮಗಳು ಸಾವಂತ್ರಿಯು ಸಾಹಸಿ. ಮುನ್ನುಗ್ಗುವ ಸ್ವಭಾವದವಳು. ನಂದ್ಯಪ್ಪ ಅವನ ಹೆಂಡತಿ ನಿಂಗವ್ವ ಮಗಳು ಶಿವಿ ತುಂಬಾ ಮೆದು ಸ್ವಭಾವದವರು. ತಮ್ಮ ನೆರಳಿಗೆ ಅಂಜಿ ಬದುಕುವ ಜನ. ಬದುಕಿನ ಕ್ರೂರ ವಾಸ್ತವದ ಸುಳಿಯಲ್ಲಿ ಸಿಲುಕಿದಾಗ ರಂಗವ್ವ ಸಾವಂತ್ರಿ ಸಾಹಸಪಟ್ಟು ಈಜಿ ದಡ ಸೇರುತ್ತಾರೆ. ನಂದ್ಯಪ್ಪನ ಮಗಳು ಶಿವಿ ಧಾರುಣವಾದ ರೀತಿಯಲ್ಲಿ ಸಾವನ್ನಪ್ಪುತ್ತಾಳೆ. ವರದಕ್ಷಿಣೆಯ ಭೂತಕ್ಕೆ ಬಲಿಯಾಗುತ್ತಾಳೆ. ಶಿವಮೊಗ್ಗೆಯಲ್ಲಿರುವ ಗಂಡಿಗೆ ತೋರಿಸಲು ಅನಾರೋಗ್ಯವಿದ್ದ ಶಿವಿಯನ್ನು ಕರೆದೊಯ್ದಾಗ ಅವಳು ಹಿಂದಿರುಗಿ ಊರಿಗೆ ಬರುವುದೇ ಇಲ್ಲ. ಜೊತೆಯಲ್ಲಿ ಹೋಗಿದ್ದ

ಸಾವಂತ್ರಿಗೆ ಅದೊಂದು ದೊಡ್ಡ ಆಘಾತ; ಆಕೆ ಅದನ್ನು ಎದುರಿಸಿದ ರೀತಿ ವಿಶಿಷ್ಟವಾದದ್ದು. ಇಂತಹ ಸಾಧ್ವಿ ಶಿವಿ ಸಾಯುವಾಗ ಬಸಿರಾಗಿದ್ದಳೆಂಬ ಮತ್ತು ಅದಕ್ಕೆ ಕಾರಣ ಕರಿಯನೆಂಬ ಒಬ್ಬ ಹದಿಹರೆಯದ ಪೋಲಿ ಹುಡುಗನೆಂಬ ಸುದ್ದಿ ಕೇಳಿದಾಗ ಸಾವಂತ್ರಿಗೆ ದಿಗ್ಭ್ರಮೆಯಾಗುತ್ತದೆ".[೨೩] ಇಲ್ಲಿ ಸಾಮಾಜಿಕ ನಿಲುವು ಪ್ರಕಟವಾಗಿರುವ ಬಗೆಯನ್ನು ನೋಡಬಹುದು.

ಒಂದು ಪರಿಸರ ಕುಟುಂಬದ ಮೇಲೆ ಬೀಳುವ ಪ್ರಭಾವ ಮತ್ತು ಪರಿಣಾಮವನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ರಂಗವ್ವ ಮತ್ತು ಸಾವಂತ್ರಿ ಸಾಮಾಜಿಕ ಒತ್ತಡಗಳು ಎಷ್ಟೇ ಇದ್ದರೂ ಅವರಿಗೆ ಎದುರಾಗುವ ದುಷ್ಟಶಕ್ತಿಗಳು ಎಷ್ಟೇ ಬಂದರು ಅವರು ಅಂದುಕೊಂಡದ್ದನ್ನು ಸಾಧಿಸಿಯೇ ತೀರುತ್ತಾರೆ. ಸಾವಂತ್ರಿ ಮತ್ತು ಮಂಜರ ಮದುವೆ ಕೊನೆಗೆ ನೆರವೇರುತ್ತದೆ. ಭರ್ಮಣ್ಣರಂತವರ ದೃಷ್ಟಿಯಲ್ಲಿ ಇದು ಆಗಬಾರದು ಎನ್ನುವ ಕೆಲಸ ಮತ್ತು ಆಣೆಬಡ್ಡಿಯನ್ನು ಜನ ಹಿಂತಿರುಗಿಸಲು ಬೇಡವೆಂದು ರಂಗವ್ವನ ವಿರುದ್ಧ ಪಿತೂರಿಯನ್ನು ಹೂಡುತ್ತಾರೆ. ಅದು ಆಗದ ಕೆಲಸವಾಗುತ್ತದೆ. ಇವೆಲ್ಲವು ಒಂದು ಸಾಮಾಜಿಕ ಸಿದ್ಧಾಂತ ಚೌಕಟ್ಟಿನಲ್ಲಿ ಹಾಗುವ ಹಿಂಬಾಗಿಲ ಕೆಲಸಗಳು ಅವು ಊರ್ಜಿತವಾಗದಾಗ ಅಸಮಧಾನವುಂಟಾಗುತ್ತದೆ. ಇನ್ನೊಂದು ತಪ್ಪನ್ನು ಮಾಡಲು ಮುಂದಾಗುವಂತೆ ಪ್ರೇರೇಪಿಸುತ್ತದೆ. ವ್ಯವಸ್ಥೆಯ ವಿಕ್ಷಿಪ್ತಮನಸ್ಸಿನ ಮನುಷ್ಯನನ್ನು ಮುಂದುವರೆದು ಸಾವಂತ್ರಿ ಮತ್ತು ಮಂಜನ ಮದುವೆ ಕೆಳಸ್ತರ ಸಮಾಜದೊಂದಿಗಿನ ಮುಖಾಮುಖಿಯಲ್ಲಿ ವಸಾಹತೋತ್ತರ ಯುಗದ ಚಿಂತನಾ ವೈವಿಧ್ಯಗಳು ರೂಪುಗೊಂಡಂತೆ ಕಾಣಿಸುತ್ತದೆ. ಮಂಜ ಮತ್ತು ಸಾವಂತ್ರಿಯ ಮದುವೆಗೆ ಮುನ್ನವೇ ಕಂಬಳ್ಳಿಯ ಪ್ರತಿಷ್ಠಿತ ವ್ಯಕ್ತಿ ಶ್ರೇಷ್ಠಿಯವರ ಮಗಳು ದೇವಿ ಹೊಲೆಯರ ಹುಡುಗನೊಂದಿಗೆ ಓಡಿಹೋಗಿ ಮದುವೆಯಾಗಿರುವ ಪ್ರಸ್ತಾಪವಿದೆ. ಇದು ಪರಂಪರಾನುಗತವಾಗಿ ಬಂದಿದ್ದ ರೂಢಿ ವ್ಯವಸ್ಥೆಯ ವಿರುದ್ಧವಾಗಿ ನಡೆದ ವಿಲಕ್ಷಣ ಘಟನೆಗಳಂತೆ ಕಂಬಳ್ಳಿಯಲ್ಲಿ ಕಂಡುಬಂದಿರುತ್ತದೆ. ಸ್ವಾತಂತ್ರಪೂರ್ವ ಭಾರತದ ಗ್ರಾಮ ಸಮಾಜದಲ್ಲಿ ಜಾತಿಜಾತಿಗಳ ನಡುವೆ ನಡೆದ ವಿವಾಹ ಸಂಬಂಧಗಳು, ವಿವಾಹೇತರ ದೈಹಿಕ ಸಂಪರ್ಕಗಳೆಲ್ಲಾ ಭಾರತೀಯ ಸಮಕಾಲೀನ ಸಮಾಜದ ಹಲವಾರು ಕಾದಂಬರಿಗಳಲ್ಲಿ ದಾಖಲಾಗಿವೆ. ಆದರೆ ಅವೆಲ್ಲವೂ ಗುಟ್ಟಾಗಿ ನಡೆಯುತ್ತಿದ್ದವೇ ಹೊರತು ಬಹಿರಂಗವಾಗಿರಲಿಲ್ಲ. ಯು.ಆರ್.ಅನಂತಮೂರ್ತಿಯವರ 'ಸಂಸ್ಕಾರ'ದ ಪ್ರಾಣೇಶಾಚಾರ್ಯ ಬ್ರಾಹ್ಮಣಸಮಾಜದ ಅತ್ಯಂತ ಸಂಭಾವಿತ ಸಂಪ್ರದಾಯಸ್ಥ. ದಲಿತ ಸಮುದಾಯದ ಚಂದ್ರಿಯ ಮೊಲೆಗಳು ಪ್ರಾಣೇಶಾಚಾರ್ಯದ ಮೊಣಕೈಗೆ ತಾಕಿದ ಕೂಡಲೇ ನಾರಣಪ್ಪನ ಶವಸಂಸ್ಕಾರದಂಥ ಸೂತಕದಲ್ಲೂ ಕಾಮಗೋಚರಿಸುವ ಜಾತಿ–ಜಾತಿಗಳ ನಡುವಿನ ಲೆಕ್ಕಾಚಾರಗಳೆಲ್ಲವನ್ನು ಗಾಳಿಗೆ ತೂರಿಬಿಡುವ ಬಾಳೆತೋಟದ ಜಿನುಗು ಮಳೆಯಲ್ಲೇ ಅವರಿಬ್ಬರೂ ದೈಹಿಕ ಸಂಪರ್ಕ ಬೆಳೆಸುವ

---

೨೩. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ, ಪುಟ. ೧೧೮, ೨೦೦೮.

ಮೂಲಕ ಕಾಮವೆಂಬ ಹಸಿವನ್ನು ನೀಗಿಸಿಕೊಳ್ಳುವ ಹಿಂದಿನಿಂದಲೂ ರೂಢಿಗತವಾಗದ ಸಾಮಾಜಿಕ ನಿಲುವನ್ನು ಮುರಿಯುವ ಜಾತಿಯನ್ನು ಮೀರುವ ಕಾಮಪರಕಾಷ್ಠೆಯೊಂದು ಲಂಕೇಶರ ಓರಗೆಯವರಾದ ಲೇಖಕರಲ್ಲಿ ಸೃಷ್ಟಿಯಾಗಿರುವುದನ್ನು ಈ ಸಂದರ್ಭದಲ್ಲಿ ನೋಡಬಹುದು.

ಕರಿಯನ ಸಂದರ್ಭವನ್ನು ನೋಡುವುದಾದರೆ ಸಾಮಾಜಿಕ ವ್ಯವಸ್ಥೆ ಆತನನ್ನು ರೂಪಿಸುವ ಬಗೆಯನ್ನು ತಿಳಿಯಬಹುದು. "ಕರಿಯನೆಂದರೆ ಊರ ದೊಡ್ಡ ತರಲೆಯೆಂದು ಈಚೆಗೆ ಕತೆಗಳು ಹೆಚ್ಚಿದ್ದರಿಂದ ಈಗ ಅವನು ಅದೇನೋ ಚಾಡಿ ಹೇಳಲು ಬಂದಿರುವುದಾಗಿ ತಿಳಿದು ಅವಳೂ ಇಸ್ಕೂಲ್ ಕಾಂಪೌಂಡ್‌ನ ಲಿಂಬೆ ಹಣ್ಣೆಲ್ಲ ಯಾರಪ್ಪ ಕದ್ದದ್ದು? ಎಂದು ಕೇಳಿಯೇಬಿಟ್ಟಳು. ತಾನಿನ್ನೂ ನಿಂಬೆಹಣ್ಣು ಕದಿಯುವಷ್ಟು ಕೀಳುಮಟ್ಟಕ್ಕೆ ಬಂದಿಲ್ಲವಾದ್ದರಿಂದ ಕರಿಯನಿಗೆ ಇದರಿಂದ ಖಿನ್ನತೆ ಆವರಿಸಿತಲ್ಲದೆ ತಾನು ಹೋದತಿಂಗಳು ಬಾಳೆಗೊನೆ ಕದಿಯದಿದ್ದುದು ದೊಡ್ಡ ತಪ್ಪಾಯಿತೆಂದು ಈಗ ಅನಿಸತೊಡಗಿತ್ತು. ತನ್ನ ಬಗ್ಗೆ ಎಲ್ಲೆಲ್ಲೂ ಅಪಪ್ರಚಾರ ನಡೆಯುತ್ತಿದ್ದುದರಿಂದ ಇದಕ್ಕೆ ಅಪಪ್ರಚಾರ ಅಥವಾ ಅದಕ್ಕೆ ಸರಿಸಮಾನವಾದ ಕೃತ್ಯ ಉತ್ತರವೆಂದು ಅಂದುಕೊಂಡ".[೨೪] ಸಾಮಾಜಿಕ ವ್ಯವಸ್ಥೆ ಅವನನ್ನು ಕಳ್ಳನನ್ನಾಗಿ ಮಾಡಲು ಪ್ರಚೋದಿಸುವ ಗುಣವನ್ನು ನೋಡಬಹುದು. "ಮುಸ್ಸಂಜೆಯ ಕಥಾಪ್ರಸಂಗ'ವೆಂಬ ಹೆಸರು ಕಂಬಳ್ಳಿಯ ಸಾಮಾಜಿಕ ಅವನತಿಯನ್ನು ಸೂಚಿಸುವಂತಿದೆ ಎಂಬ ವಿಚಾರಕ್ಕೆ ಪುಷ್ಟಿ ದೊರೆಯುವಂತೆ ಲಂಕೇಶರು ಕೆಲವು ಘಟನೆಗಳ ಮೂಲಕ ವ್ಯಕ್ತಪಡಿಸಿದರಾದರೂ ಅಲ್ಲಿ ನಡೆದ ಸಾಮಾಜಿಕ ಪರಿವರ್ತನೆಯನ್ನು ಲೇಖಕರು ಸಂಪೂರ್ಣ ಒಪ್ಪಿಕೊಳ್ಳುವುದೂ ಇಲ್ಲ. ನಿರಾಕರಿಸುವುದೂ ಇಲ್ಲವೆಂಬುದು ಗಮನಾರ್ಹ ವಿಚಾರವಾಗುತ್ತದೆ. ಶ್ರೇಣೀಕೃತ ಜಾತಿ ವ್ಯವಸ್ಥೆ ಶಿಥಿಲಗೊಳ್ಳುವುದು ಪುರುಷ ಪ್ರಧಾನತೆಯ ವಿರುದ್ಧ ಸ್ತ್ರೀ ಅವಿಧೇಯಳಾಗಿ ಬಂಡಾಯವೇಳುವುದು ಗೇಣಿದಾರರಿಗೆ ಅವರ ಹಕ್ಕಿನ ಜಮೀನಿನ ಒಡೆತನ ದಕ್ಕುವುದು ಇವೆಲ್ಲ ಪ್ರಗತಿಪರವಾದ ಬದಲಾವಣೆಗಳು ಕಾದಂಬರಿಕಾರರು ಇವುಗಳ ಪರವಾಗಿದ್ದಾರೆ. ಆದರೆ ವಿದ್ಯೆ ಮತ್ತು ನಾಗರಿಕತೆಯ ಜೊತೆಜೊತೆಗೆ ಬಂದಿರುವ ಸುಖಾಪೇಕ್ಷೆ, ಹೊಣೆಗೇಡಿ ಮನರಂಜನೆಗಳು, ಜೂಜುಕೋರತನ ಸುಲಭವಾಗಿ ಹಣಮಾಡುವ ಚಪಲ ಪುಡಾರಿಗಳ ರಾಜಕೀಯ ಗ್ರಾಮೀಣ ಸಮಾಜವನ್ನು ಅವನತಿಯತ್ತ ದೂಡಿವೆ. ಈ ಅವನತಿಯ ವಿಚಾರದಲ್ಲಿ ಲೇಖಕರಿಗೆ ಆತಂಕವಿದೆ. ಆದರೆ ಬದುಕು ಅಲ್ಲೋಲ ಕಲ್ಲೋಲಗಳ ನಡುವೆಯೂ ಆಕರ್ಷಣೆಯನ್ನು ಕಳೆದುಕೊಂಡಿಲ್ಲ. ಅದೆಲ್ಲವನ್ನು ಸಮಗ್ರವಾಗಿ ಗ್ರಹಿಸಿ ಸಾಕ್ಷೀಭಾವದಿಂದ ದಾಖಲೆಗೊಳಿಸುವ ಕೆಲಸವನ್ನು ಲಂಕೇಶರು ಮಾಡಿದ್ದಾರೆ.

---

೨೪. ಪಿ.ಲಂಕೇಶ, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೮೨.

'ಬಿರುಕು'ವಿನ ಬಸವರಾಜ ಸಾಮಾಜಿಕ ನಿಲುವುಗಳನ್ನು ಉಳ್ಳಂತಹ ವ್ಯಕ್ತಿಯಾಗಿರುವುದನ್ನು ನೋಡಬಹುದು. ರೀಸರ್ಚ್ ವಿದ್ಯಾರ್ಥಿಯಾಗಿರುವ ಬಸವರಾಜ ಬೆಂಗಳೂರಿನಂಥ ನಗರದಲ್ಲಿ ಹಳ್ಳಿಯಿಂದ ಬಂದ ಕಾರಣ ಆ ಪರಿಸರದಲ್ಲಿ ಬದುಕಲು ಹೆಣಗಾಡುತ್ತಾನೆ. ಆದರೆ ಸೆನ್ಸಿಟಿವ್ ಆದ ಆತ ತನ್ನ ಸುತ್ತಲಿನ ನಾಗರಿಕ ಸಮಾಜದ ಪ್ರತಿಷ್ಠಿತರ ನಡುವೆಯೂ ಬೇರೆಯವನಾಗಿ ಉಳಿಯುತ್ತಾನೆ. ಏಕೆಂದರೆ ತನ್ನ ಸುತ್ತಲೂ ಇರುವ ಸಿನಿಕರನ್ನು ಬಯ್ದು ಇಡೀ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಅಸಮಾಧಾನಿಯಾಗುತ್ತಾನೆ. ಜೊತೆಗೆ ಆ ಸಿನಿಕರಿಂದ ತಪ್ಪಿಸಿಕೊಳ್ಳಲು ಸುಳ್ಳುಗಳ ಸರಮಾಲೆಯನ್ನೇ ಹೆಣೆಯುತ್ತಾನೆ. ಬಸವರಾಜು ಮತ್ತು ಅವನ ಪರಿಸರಕ್ಕೆ ಇರುವ ಸಾಮಾಜಿಕ ಸಂಬಂಧವನ್ನು ಅವನು ತನ್ನ ಸುತ್ತಣ ಜಗತ್ತನ್ನು ಅರ್ಥಮಾಡಿಕೊಳ್ಳಲು ಮಾಡುವ ಪ್ರಯತ್ನಗಳ ಮೂಲಕ ಮತ್ತು ಬಸವರಾಜನಿಗೆ ಅವರು ತೋರುವ ಪ್ರತಿಕ್ರಿಯೆಗಳ ಮೂಲಕ ತಿಳಿದುಕೊಳ್ಳಬಹುದು. ಬಸವರಾಜನಿಗೆ ಆಗಲೇ ಪರಿಚಯವಿರುವ ಕೆಲವರು ಸಮಾಜದಲ್ಲಿ ಆಗಲೇ ನಿಶ್ಚಿತ ಸ್ಥಾನಗಳಿಸಿಕೊಂಡವರು ಮತ್ತೆ ಕೆಲವರು ಅವನ ವಯಸ್ಸಿನವರು. ಸಮಾಜದಲ್ಲಿ ನಿಶ್ಚಿತ ಸ್ಥಾನಗಳಿಸಿಕೊಳ್ಳುವವರು. ಆದ್ದರಿಂದ ಸಾಮಾಜಿಕ ನಿಲುವು ಸಿದ್ಧ ಮಾದರಿಯಾಗದೆ ಅದು ಅಂದಿನ ಪರಿಸ್ಥಿತಿ ಮನಸ್ಥಿತಿಯನ್ನು ಮನುಷ್ಯ ಸಂಬಂಧದ ಹಿನ್ನೆಲೆಯಲ್ಲಿ ನಿರ್ಧರಿಸುತ್ತದೆ. ಇವೆಲ್ಲಾ ಬಸವರಾಜುವಿನ ಅರಿವಿಗೆ ತೋರಿಸುವ ಪ್ರತಿಕ್ರಿಯೆಗಳ ಮೂಲಕ ಅವನ ಪ್ರಜ್ಞೆಯನ್ನು ಅರ್ಥಮಾಡಿಕೊಳ್ಳಬೇಕು. ಬಸವರಾಜುವಿನ ದೃಷ್ಟಿಕೋನ ವ್ಯಕ್ತಿಗಳ ಮತ್ತು ಸನ್ನಿವೇಶಗಳ ಜೊತೆಗೆ ವ್ಯವಹರಿಸುವ ರೀತಿಯದು. ಸಾಮಾಜಿಕ ಸಂದರ್ಭದಲ್ಲಿ ವ್ಯವಹರಿಸುವ ನಿಲುವುಗಳೇ ಅವನ ವ್ಯಕ್ತಿತ್ವದ ನಿಲುವುಗಳಾಗಿರುತ್ತವೆ.

'ಅಕ್ಕ' ಕಾದಂಬರಿ ಮನುಷ್ಯ ಸಂಬಂಧಗಳ ಸತ್ಯಗಳನ್ನು ಹೊಸ ಸಮಾಜದ ರಾಜಕೀಯ ಆರ್ಥಿಕ ಸತ್ಯಗಳನ್ನು ಮಹತ್ವಾಕಾಂಕ್ಷೆಯಿಂದ ಪ್ರಕಟಿಸುತ್ತದೆ. ಇಲ್ಲಿ ಹಸಿವು ಮತ್ತು ಸಾಮಾಜಿಕ ನಿಲುವುಗಳನ್ನು ಕೊಳಗೇರಿಯ ಬದುಕಿನ ಅನಾವರಣವನ್ನು ಕ್ಯಾತನ ನಿರೂಪಣೆಯ ಮೂಲಕ ವ್ಯಕ್ತಪಡಿಸುತ್ತದೆ. "ಏನುಮಾಡೋದು ಹೇಳಿ ಸಾರ್, ಬ್ರೆಡ್ಡು ಕಂಡ್ರೆ ನನಗಾಗ್ತಿರಲಿಲ್ಲ. ಬ್ರೆಡ್ಡು ಜಾಮು, ವಡೆ ವಗೈರೆ ನೋಡಿದಾಗಲೆಲ್ಲ ನಂಗೆ ಖಡವಾ, ನಾಗ್ರಗಳ ನೆನಪಾಗ್ತದೆ. ಅವರು ಈ ನಮ್ಮ ಗುಡ್ಳಲ್ಲಿ ಕುಂತು ಪೊಲೀಸ್ ಸೈರನ್‌ನಂಗೆ ಬಡಕೋತ ಇರೋದು ನೆನಪಾಗ್ತದೆ. ದೇವೀರಿ ಎಂದೂ ಬ್ರೆಡ್ಡು ಕೊಳ್ಳಾಕೆ ಹೋಗೋಳಲ್ಲ. ಈ ಬ್ರೆಡ್ಡನ್ನ ಯಾರೋ ಕೊಟ್ಟಿರಬೇಕು. ಅಂತ ನೆನೆಸಿಕೊಂಡ ಕೂಡ್ಲೆ ದೇವೀರಿ ಇಟ್ಟಿಗೆ ಹೊರಾಕೆ ಹೋಗಿಲ್ಲ. ಮತ್ತೆಲ್ಲೋ ಹೋಗಿದಾಳೆ ಅನ್ನಿಸ್ತದೆ. ಹಿಂಗಾಗಿ ಮನಸ್ಸಿಗೆ ಬಲೆ ಬ್ಯಾಸರಾಗುತ್ತೆ. ಹಿಂಗಂತ ಅಂದುಕೊಳ್ತಾನೆ ತಿಂತಿದಾನೆ ಕ್ಯಾತ. ನಮ್ಮ ಕ್ಯಾತನ ಮನಸ್ಸಿನಾಗೆ ಏನೇನಾಗ್ತದೆ ಅಂತ ಗೊತ್ತಿರೋಳಂಗೆ ದೇವೀರಿ ಒಂಚೂರು ಒಳ್ಳೇ ತರ ಮಾತಾಡ್ತಾಳೆ. ದಿನಾಲೂ ಆಕೆ ಕ್ಯಾತ ತಿನ್ನುವಾಗ ರಾಮಾಯಣ ಮಾಡದೇ

ಇರೊಳಲ್ಲ".[೨೫] ಕೊಳಗೇರಿಯಲ್ಲಿ ವಾಸವಾಗಿರುವ ಈ ಕುಟುಂಬಗಳು ಒಂದಲ್ಲ ಒಂದು ರೀತಿಯಲ್ಲಿ ವಿಶಿಷ್ಟ ಬಗೆಯವು. ಕಾದಂಬರಿಯಲ್ಲಿ ಕ್ಯಾತ ರಾಮಪ್ಪನನ್ನು ಹೊರತುಪಡಿಸಿ ತನ್ನ ಅಕ್ಕನನ್ನು ಸೇರಿದಂತೆ ಯಾವ ಪಾತ್ರಗಳನ್ನು ಗೌರವಪೂರ್ವಕವಾಗಿ ನೋಡುವುದಿಲ್ಲ. ರಾಮಪ್ಪನ ಬಗೆಗಿನ ಗೌರವ ಸ್ವಾರ್ಥ ಮೂಲದ್ದೆನಿಸಿದರೂ ರಾಮಪ್ಪನಪಾತ್ರ ಅವನಿಗೆ ಮಾನವೀಯವಾಗಿ ಕಾಣಿಸುತ್ತದೆ. 'ಉಮಾಪತಿಯ ಸ್ಕಾಲರ್‌ಶಿಫ್ ಯಾತ್ರೆ'ಯ ಅಕ್ಕ ತಮ್ಮರ ಸಂಬಂಧ, 'ಅಕ್ಕ-ತಮ್ಮ'ರ ಕಥೆಯಲ್ಲಿ ಅಕ್ಕ ತಮ್ಮರ ಸಂಬಂಧ ಮುಸ್ಸಂಜೆಯಲ್ಲಿನ ರಂಗಯ್ಯ - ಶಿವನಂಜರ ಸಂಬಂಧ ದೇವೀರಿ-ಕ್ಯಾತನ ನಡುವಿನ ಅಕ್ಕ-ತಮ್ಮರ ಸಂಬಂಧಗಳನ್ನು ಗಮನಿಸಿದರೆ ಮನುಷ್ಯ ಸಂಬಂಧಗಳನ್ನು ತೀವ್ರತರವಾದ ಆಪ್ತತೆಯಿಂದಲೇ ಕಾಣುವ ಲಂಕೇಶ್ ಅಕ್ಕ ಕಾದಂಬರಿಯಲ್ಲಿ ಪಾತ್ರ ಸಹಜ ವಿಕಾಸದ ವಾಸ್ತವವಾದಿ ಚಿಂತನೆಯಲ್ಲೇ ಶೋಧಿಸುತ್ತಾರೆ. ಪ್ರಾಯಶಃ ವಸಹತೋತ್ತರ ಜೀವನ ಕಾಲದ ಸಾಮಾಜಿಕ ಪರಿಸರ ಮನುಷ್ಯ ಸಂಬಂಧಿ ಧೋರಣೆಗಳಲ್ಲಿ ಭಾವುಕತೆಯ ಪರಿಧಿಯನ್ನು ಮೀರಿ ಕಟುವಾಸ್ತವದ ಸಾಮಾಜಿಕ ನಿಲುವನ್ನು ಎತ್ತಿತೋರಿಸುವಂತೆ ಲಂಕೇಶರು ಕಾಣುತ್ತಾರೆ.

ಕ್ಯಾತ ಕಾದಂಬರಿಯಲ್ಲಿ ಹೆಚ್ಚು ದಿನಗಳು ಹಸಿವಿನಿಂದ ಬಳಲುತ್ತಾನೆ ಕಾರಣ ದೇವೀರಿಯ ಸಂಸಾರದ ಬೇಜವಾಬ್ದಾರಿತನ ಅವಳಿಗಿದ್ದ ಒಳ ಒಪ್ಪಂದದಲ್ಲಿ ಸರಿಯಾಗಿ ಮನೆ ಸೇರದ ಕಾರಣ ಕ್ಯಾತ ಹಸಿವನ್ನು ಅನುಭವಿಸುತ್ತಾನೆ. ಅಂತಹ ಸಂದರ್ಭದಲ್ಲಿ ಪದ್ದಿ ಮತ್ತು ಸಂಪೂರ್ಣಮ್ಮ ಇವನಿಗೆ ಆಹಾರ ನೀಡುತ್ತಾರೆ. ಹಿಂಜರಿಕೆಪಟ್ಟರು ಬ್ಯಾಡ ಅಂದರು ಬಿಡುತ್ತಿರಲಿಲ್ಲ. "ಸಂಪೂರ್ಣಮ್ಮ ಅಷ್ಟು ಸಲೀಸಾಗಿ ಬಿಡಬೇಕಲ್ಲ. 'ಚಪಾತಿ ರೆಡಿ ಐತೆ ತಿಂದು ಹೋಗೋ ಬಿಕನಾಸಿ' ಅಂತ ಪಟ್ಟು ಹಿಡಿದುಕೂತಳು. ಈ ಸಂಪೂರ್ಣಮ್ಮನ ವರಾತವೇ ಹೀಗೆ ಸಾರ್, ಮೊಲ ಎದ್ದು ಓಡುವಾಗ ನಾಯಿ ಉಚ್ಚೆ ಹೊಯ್ಯಲು ಕೂತಂಗೆ. ಒಮ್ಮೊಮ್ಮೆ ಬಲೆ ಸಿಟ್ಟು ಬಂದುಬಿಡುತ್ತೆ. 'ಬ್ಯಾಡವ್ವ ನಿನ್ನ ಕಾಲಿಗೆ ಬೀಳ್ತಿನಿ, ಎಲ್ಲೋ ಹೋಗಬೇಕು" ಅಂದ. 'ಗೊತ್ತು ಕೂತ್ಕೋ ನಾನರೀದ ನಿನ್ನ ರಾಜಕಾರ್ಯವಾ? 'ಅಂದು ಕೂರಿಸಿ ಚಪಾತಿ ತಿನ್ನಿಸಿಯೇ ಬಿಟ್ಟಳು"[೨೬] ಹಸಿವು ಮತ್ತು ಸಾಮಜಿಕ ನಿಲುವುಗಳನ್ನು ಸಂಪೂರ್ಣಮ್ಮ ಮತ್ತು ಕ್ಯಾತರ ಪಾತ್ರಗಳ ಮೂಲಕ ನೋಡಬಹುದು. ಕರುಳುಬಳ್ಳಿಯ ಸಂಬಂಧ ಸಂಪೂರ್ಣಮ್ಮನಲ್ಲಿ ಕಾಣಬಹುದು. ಲಂಕೇಶರ ಕಾದಂಬರಿಗಳಲ್ಲಿ ಪ್ರೀತಿ, ಪ್ರೇಮ, ಹಸಿವು, ನೀರಡಿಕೆ, ಲೈಂಗಿಕತೆ ಸರಳವಾಗಿ ಸಿಗದ ವಸ್ತು. ಪ್ರೊ. ರಂಗಯ್ಯನ ಮಗಳ ಪ್ರೇಮವಾಗಲಿ ರೌಡಿ ಗ್ಯಾಂಗಿನಲ್ಲಿ ಇರುವ ಹೆಣ್ಣಾಗಲೀ, ಕ್ಯಾತನ ಹಸಿವಾಗಲೀ ಅಕ್ಕ ಕಾದಂಬರಿಯ ಪ್ರೀತಿ, ವಿಶ್ವಾಸ ಮತ್ತು ಸಿನಿಮಾ ಸೇರುವುದು ಲೈಂಗಿಕ ಶೋಷಣೆಗೆ ಒಳಗಾಗುವುದು, ದೇವೀರಿಯ ಪ್ರೇಮ, ಲೈಂಗಿಕತೆ ಎಲ್ಲವೂ

---

೨೫. ಪಿ.ಲಂಕೇಶ, ಬಿರುಕು, ಪುಟ. ೧೯.
೨೬. ಪಿ.ಲಂಕೇಶ, ಅಕ್ಕ, ಪುಟ. ೧೬.

ಅಮಾನುಷವಾಗಿ, ಕೃತ್ರಿಮವಾಗಿ, ವ್ಯಂಗವಾಗಿ ಕಾಣಿಸಿಕೊಳ್ಳುತ್ತದೆ. ಲಂಕೇಶರ ಕಾದಂಬರಿಗಳಲ್ಲಿ ರಾಜಕೀಯ, ಸಂಸ್ಕೃತಿ, ಲೈಂಗಿಕತೆ, ಸಾಮಾಜಿಕ ನಿಲುವು, ಹಸಿವು ಇತ್ಯಾದಿಗಳಲ್ಲಿ ಮೇಲುನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಯಾವುದೋ ರಾಜಕೀಯ ಶಕ್ತಿಯೊಡನೆ ತಳುಕು ಹಾಕಿಕೊಂಡು ಬದುಕುತ್ತಿರುವುದನ್ನು ಚಿತ್ರಿಸುತ್ತವೆ. ಅವೆಲ್ಲವೂ ಅಂತರಾಳದಲ್ಲಿ ಸಮಾಜದ ಬದುಕಿನೊಡನೆ ಸಂಬಂಧವಿಟ್ಟುಕೊಂಡಿವೆ ಎಂಬ ಶೋಧ ನಡೆಯುತ್ತದೆ. ಅಂತರ್ಗತವಾಗಿ ಕಂಡುಬರುತ್ತದೆ. ಇವೆಲ್ಲವುಗಳು ಇದುವರೆಗೆ ಸ್ಥಾಪಿತವಾದ ಸಿದ್ದಮಾದರಿಗಳನ್ನು ಮುರಿದು ಹೊಸ ಮಾದರಿಯ ಕಡೆಗೆ ಹೋಗಬೇಕೆಂಬುದನ್ನು ಸೂಚಿಸುತ್ತದೆ.

ಲಂಕೇಶರು ಕನ್ನಡ ಕಥಾ ಸಾಹಿತ್ಯಕ್ಕೆ ಭಿನ್ನ ಸ್ವರೂಪದ ಸಾಮಾಜಿಕ ನಿಲುವಿನ ಸಂವೇದನೆಯನ್ನು ಚರ್ಚಿಸುತ್ತಾ ಆ ಮೂಲಕ ಓದುಗರ ಆಸಕ್ತಿಗೆ ಹೊಸ ಇಂಬನ್ನು ನೀಡುವ ಕಥೆಗಳನ್ನು ರಚಿಸಿದ್ದಾರೆ. ಲಂಕೇಶರ ಕಥೆಗಳಲ್ಲಿ ಮಾನವನ ಹಿರಿಮೆಗಿಂತ ಅವನ ಅಲ್ಪತನ, ಆಕ್ರಮಣ ಪ್ರವೃತ್ತಿ ಟೊಳ್ಳು ಡಂಬಾಚಾರ ವ್ಯಕ್ತಿತ್ವದ ಬಿರುಕುಗಳು ಇವೇ ಅವರ ಕತೆಗಳ ವೈಶಿಷ್ಟ್ಯತೆಯಾಗಿ ಕಾಣಬಹುದು. “ಆಕ್ಟೋಪಸ್” ಕಥೆಯಲ್ಲಿ ಸಾಮಾಜಿಕ ನಿಲುವು ವ್ಯಕ್ತವಾಗುವ ಬಗೆಯನ್ನು ಗುರುತಿಸ ಹೊರಟರೆ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿನ ಅವ್ಯವಸ್ಥೆ ಹಾಗೂ ಅಸ್ವಸ್ಥ ಮನಸ್ಸಿನ ಬುದ್ಧಿ ಜೀವಿಗಳ ಕುರಿತು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಮನುಷ್ಯನ ಖಾಸಗಿ ವ್ಯಕ್ತಿತ್ವದ ಸಾಮಾಜಿಕತೆಯನ್ನು ಕಥೆಗಾರರು ಶೋಧಿಸುತ್ತಾ ಬೌದ್ಧಿಕವಾಗಿ ಎತ್ತರದ ಸ್ತರದಲ್ಲಿ ವಿಶ್ವವಿದ್ಯಾನಿಲಯಗಳಲ್ಲಿನ ಖ್ಯಾತಿವೆತ್ತ ಗುರುಗಳ ನೈತಿಕ ಭ್ರಷ್ಟತೆಯನ್ನು ಚಿತ್ರಿಸಿದ್ದಾರೆ. ವಿಶ್ವವಿದ್ಯಾನಿಲಯದ ವೈಸ್ ಚಾನ್ಸಲರ್ ದೊಡ್ಡೇಗೌಡ, ಇಂಗ್ಲೀಷ್ ವಿಭಾಗದ ಮುಖ್ಯಸ್ಥ ನರಸಯ್ಯ ಸಾಮಾಜಿಕವಾಗಿ ಪ್ರತಿಷ್ಠಿತರು. ಆದರೆ ತಮ್ಮ ಶಿಷ್ಯ ಆನಂದ ತಮ್ಮನ್ನು ಮೀರಿ ಬೆಳೆಯಬಲ್ಲವನು ಎಂದು ತಿಳಿದಾಗ ಅವರಿಬ್ಬರೂ ಅವನನ್ನು ಹೊಸಕಿ ಹಾಕುವುದು. ಬುದ್ಧಿ ಜೀವಿಗಳ ‘ಅಕ್ಟೋಪಸ್’ನ ಕಬಂಧ ಬಾಹುವಿನಿಂದ ತಪ್ಪಿಸಿಕೊಳ್ಳಲಾಗದೆ ಆನಂದ ಮೋಸ ಹೋಗುವುದನ್ನು ಇಲ್ಲಿ ಗಮನಿಸಬಹುದು. ಸಮಾಜದಲ್ಲಿ ಪ್ರತಿಷ್ಠಿತರಿದ್ದಿರಬಹುದು ಆದರೆ ವೈಯಕ್ತಿಕವಾಗಿ ಅಂತರಂಗದ ಕೊಳಕುತನವನ್ನು ಹೊಂದಿದ ದೊಡ್ಡೇಗೌಡ ಹಾಗೂ ನರಸಯ್ಯ ವಿಶ್ವವಿದ್ಯಾನಿಲಯ ಮಟ್ಟದ ನಡೆಯುವ ಅವರ ಅವ್ಯವಹಾರಗಳನ್ನು ಪ್ರತಿನಿಧಿಸುತ್ತಾರೆ.

‘ಜಯಂತನ ಸ್ವಗತ’ ಕಥೆಯಲ್ಲಿ ಎಪ್ಪತ್ತಾಗಿದ್ದರೂ ಜೀವನೋತ್ಸಾಹದಿಂದ ಪುಟಿಯುವ ಅಪ್ಪ ಇಪ್ಪತ್ತರಲ್ಲೇ ಮುಪ್ಪಡಿಗಿಸಿಕೊಂಡಂತಿರುವ ಮಗನ ನಡುವೆ ನಡೆಯುವ ತಲೆಮಾರುಗಳ ಸಮಸ್ಯೆಯನ್ನು ಬಿಂಬಿಸುತ್ತದೆ. ಮುಪ್ಪಿನ ಕಾಲದಲ್ಲೂ ಅಮ್ಮನನ್ನು ಗಾಢವಾಗಿ ರೋಮಿಯೋ ತರಹ ಪ್ರೀತಿಸುವ ಅಪ್ಪ ವಾಯು ವಿಹಾರ, ವ್ಯಾಯಾಮ, ಆರೋಗ್ಯಕರ ಆಹಾರದ ಬಳಕೆಯಿಂದ ಲವಲವಿಕೆ ಹಾಗೂ ಚಟುವಟಿಕೆಗಳಿಂದ ಜೀವನ್ಮುಖಿಯಾದ ಅಪ್ಪ ಸ್ವಸ್ಥ ಸಮಾಜದ

ಸಂಕೇತವಾಗಿದ್ದಾನೆ. ಸಿಡುಕು ಮೋರೆಯ ಅಪ್ಪನಿಗೆ ಪ್ರತಿರೋಧಿಸುವುದೇ ಬದುಕಿನ ಗುರಿ ಎಂಬಂತೆ ಬದುಕುವ ಮಗ ಜಯಂತ ಹೊಸ ತಲೆಮಾರಿನ ಅಸ್ವಸ್ಥತೆ, ಅಸಮಾಧಾನಗಳ ಪ್ರತಿನಿಧಿಯಾಗಿದ್ದಾನೆ. ಪ್ರೀತಿಯ ಬಗೆಗಿನ ಅಸಹನೆ, ಸಂಬಂಧದ ಬಗ್ಗೆ ಸಿಡುಕು ಅಪ್ಪನ ಬಗ್ಗೆ ಗುಮಾನಿ ಹೀಗೆ ನೇತ್ಯಾತ್ಮಕ ಧೋರಣೆಗಳಿಂದಲೇ ವೈಯಕ್ತಿಕ ಬದುಕನ್ನು ಅಸಹನೀಯ ಮಾಡಿಕೊಳ್ಳುವ ಜಯಂತ ಎರಡನೇ ಪೀಳಿಗೆಯನ್ನು ಸಂಕೇತಿಸುತ್ತಾನೆ. ಸರ್ವಕಾಲಕ್ಕೂ ಎರಡನೇ ಪೀಳಿಗೆಯ ಸಂವಹನದ ಕೊರತೆ ಹೀಗೆ ಇರುತ್ತದೆ ಎಂಬುದು ಕಥೆಯ ಇಂಗಿತವಾಗಿದೆ.

ವ್ಯಷ್ಟಿಯ ಮೂಲಕ ಸಮಷ್ಟಿಯನ್ನು ಶೋಧಿಸುವ ಲಂಕೇಶರ ಉತ್ತಮ ಕಥೆಗಳಲ್ಲಿ 'ಕಣ್ಣಪ್ಪನ ಅಂತಿಮದಿನಗಳು' ಒಂದಾಗಿದೆ. ಕಣ್ಣಪ್ಪ ತರಕಾರಿ ವ್ಯಾಪಾರಿ. "ಕಣ್ಣಪ್ಪನೂ ಗಾಡಿಯಲ್ಲಿ ತರಕಾರಿ ವ್ಯಾಪಾರ ಮಾರುವವ; ಅರವತ್ತು ವರ್ಷದ ಕಣ್ಣಪ್ಪ ಕಳೆದ ಐವತ್ತು ವರ್ಷದಿಂದ ಇದೇ ವ್ಯಾಪಾರ ಮಾಡುತ್ತಿದ್ದಾನೆ. ಬೆಳಿಗ್ಗೆ ಲಾಲ್‌ಬಾಗ್‌ಗೆ ಹೋಗಿ ಹರಾಜಿನಲ್ಲಿ ತರಕಾರಿ ಕೊಂಡು ಕಲಾತ್ಮವಾಗಿ ಜೋಡಿಸಿ ಗಾಡಿಯನ್ನು ಲಾಲ್‌ಬಾಗ್ ಪೂರ್ವದ ದ್ವಾರದಲ್ಲಿ ನಿಲ್ಲಿಸಿ ಮೂಲೆ ಹೊಟೇಲ್‌ನಲ್ಲಿ ಕಾಫಿ ಕುಡಿದು ಹೊರಡುತ್ತಾನೆ. 'ಗೋರಿಕಾಯಿ, ಬೆಂಡೆಕಾಯಿ, ನುಗ್ಗೇಕಾಯಿ, ಸೋರೆಕಾಯಿ!' ಎಂದು ಕಂಚಿನ ಕಂಟದಲ್ಲಿ ಕೂಗುತ್ತಾ ಬಿನ್ನಿಪೇಟೆ, ಶ್ರೀರಾಂಪುರದ ಇಕ್ಕಟ್ಟು ರಸ್ತೆಗಳಲ್ಲಿ ಹೋಗುತ್ತಾನೆ"[೨೭] ಕಣ್ಣಪ್ಪನದು ಮುಗ್ಧ ಬಡತನದ ಬದುಕು. ಆದರೆ ನೆಮ್ಮದಿಯ ಹಾಗೂ ನಮ್ರತೆಯ ಬಾಳಿನಲ್ಲಿ ಪೋಲೀಸರ ಅವ್ಯವಸ್ಥೆ ಕಾನೂನಿನ ಕ್ರೌರ್ಯ ಮತ್ತು ದೌರ್ಜನ್ಯಗಳು ಸೃಷ್ಟಿಸುವ ಅಶಾಂತಿ ಈ ಕಥೆಯಲ್ಲಿದೆ. ಆಕಸ್ಮಿಕವಾಗಿ ಗಲಾಟೆಯ ಗುಂಪಿಗೆ ಸಿಲುಕಿ ಪೋಲೀಸರ ಕೈಯಲ್ಲಿ ನರಳುವ ಕಣ್ಣಪ್ಪ ತಾನು ಮಾಡದ ತಪ್ಪಿಗೆ ಶಿಕ್ಷೆ ಅನಭವಿಸಿ ಮಾಡದ ತಪ್ಪನ್ನು ಒಪ್ಪಿಕೊಂಡು ಬದುಕಿನ ಆಸಕ್ತಿಯನ್ನು ಕಳೆದುಕೊಳ್ಳುತ್ತಾನೆ. ಆದರೆ ಜೈಲಿಗೆ ಹೋಗಿ ಬಂದವನು ಎಂಬ ಸಮಾಜದ ಕಣ್ಣುಗಳಿಗೆ ಗಿರಾಕಿಗಳ ಅಸಡ್ಡೆಗೆ ನಿರ್ಲಕ್ಷ್ಯಕ್ಕೆ ಗುರಿಯಾಗುತ್ತಾನೆ. ಬಡತನ, ಹಸಿವು, ಮುಪ್ಪು ಇವೆಲ್ಲ ಕಣ್ಣಪ್ಪನನ್ನು ನಾಗರೀಕ ಸಮಾಜಕ್ಕಿಂತ ಸೆರೆಮನೆಯೆ ವಾಸಿ ಎನ್ನುವಂತೆ ಮಾಡುತ್ತದೆ. ಸುಳ್ಳು ತಟವಟ, ಮೋಸಗಳನ್ನು ತಿಳಿಯದ ಕಣ್ಣಪ್ಪ, ಆಧುನಿಕ ನಾಗರಿಕತೆಯ ಅವ್ಯವಸ್ಥೆಯನ್ನೇ ಬದುಕಾಗಿಸಿಕೊಳ್ಳುತ್ತಾನೆ. ತನ್ನ ಅಸಹಾಯಕ ಬದುಕಿಗೆ ಪೊಲೀಸ್ ಹಾಗೂ ಕಾನೂನಿನ ಅಸಮಾನತೆ ಹಾಗೂ ದೌರ್ಜನ್ಯವೇ ಕಾರಣ ಎಂದು ತಿಳಿದಾಗ ಕಾನೂನನ್ನು ದ್ವೇಷಿಸದೆ ಅದನ್ನೇ ಆಸರೆಯನ್ನಾಗಿಸಿಕೊಂಡು ಬದುಕುವುದು ವ್ಯವಸ್ಥೆಯ ಸೋಲಾಗುತ್ತದೆ. ವ್ಯಕ್ತಿಯ ನೆಮ್ಮದಿ, ಸಮಾಜದ ನೆಮ್ಮದಿಯೂ ಆಗಬೇಕು ಆದರೆ ವ್ಯಕ್ತಿಯನ್ನು ರಕ್ಷಿಸಬೇಕಾದ

---

೨೭. ಪಿ.ಲಂಕೇಶ, ಉಲ್ಲಂಘನೆ ಮತ್ತು ಇತರ ಕಥೆಗಳು, ೨೦೧೩, ಪುಟ. ೭೯.

ಕಾನೂನು ತಾನೇ ಭಕ್ಷಕನಾದಾಗ ವ್ಯಕ್ತಿ ಹಾಗೂ ಸಮಾಜದ ಅಶಾಂತಿಯಿಂದ ನರಳುವುದನ್ನು ಕಣ್ಣಪ್ಪನ ಅಂತಿಮ ದಿನಗಳು ಕಥೆ ಸಾಬೀತುಪಡಿಸುತ್ತದೆ.

ವ್ಯಕ್ತಿಗಳ ಸಮೂಹವೇ ಸಮಾಜ. ಇಂತಹ ಸಮಾಜ ಆರೋಪಿಸಿಕೊಳ್ಳುವ ನಾನಾ ರೀತಿಯ ಮುಖವಾಡಗಳನ್ನು ಅನುಸರಿಸಿಕೊಂಡು ವ್ಯಕ್ತಿಯೊಬ್ಬ ತನ್ನ ಬದುಕನ್ನು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆಯನ್ನು 'ಡಿಸೋಜಾನ ಹೂವಿನವೃತ್ತಿ' ಕಥೆ ಹೇಳುತ್ತದೆ. ವ್ಯಕ್ತಿ ಹಾಗೂ ಸಮಾಜದ ಸ್ಥಿತ್ಯಂತರಗಳು ಏಕಕಾಲಕ್ಕೆ ನಡೆಯಬೇಕು ಎನ್ನುವುದನ್ನು ಲಂಕೇಶರು ಈ ಕಥೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಸ್ಥಾಪಿತ ಸಮಾಜ ಸಿದ್ಧಮಾದರಿಗಳನ್ನು ಸಮಾಜದ ಸೂಕ್ಷ್ಮವಾದ ನಾಡಿ–ಮಿಡಿತವನ್ನು ಅರ್ಥೈಸಿಕೊಂಡು ವ್ಯಕ್ತಿಯ ಈ ಕಥೆ ಲಂಕೇಶರ ಸೂಕ್ಷ್ಮ ಅವಲೋಕನಕ್ಕೆ ಸಾಕ್ಷಿಯಾಗಿದೆ. ಮನುಷ್ಯನ ಮೂಲಭೂತ ವಿವರಗಳಲ್ಲಿ ಗ್ರಾಮ, ನಗರ, ಬಡತನ ಸಿರಿತನ ಇವುಗಳ ನಡುವೆ ಅಂತರ್ಗತ ಸಂಬಂಧಗಳಿವೆ. ಗ್ರಾಮೀಣರ ಸೊಪ್ಪು, ತರಕಾರಿ, ಹೂ, ರಸ್ತೆಬದಿಯ ವ್ಯಾಪಾರ, ಅವರ ಉಡುಪು ಹಾಗೂ ಗ್ರಾಮ್ಯ ಶೈಲಿಯ ಮಾತುಗಳಿಗೆ ಅಂತರ್ಗತವಾದ ಸಂಬಂಧಗಳಿವೆ. ನಗರಗಳ ಮಳಿಗೆ ವ್ಯಾಪಾರಿಗಳು, ಅಚ್ಚುಕಟ್ಟಾದ ಉಡುಪು, ವ್ಯವಹಾರ ಕುದುರಿಸಲು ಬೇಕಾಗುವ ಇಂಗ್ಲೀಷ್ ಮಿಶ್ರಿತ ನಾಗರಿಕ ಭಾಷೆಗಳು ಸ್ಥಾಪಿತ ಮೌಲ್ಯಗಳಾಗಿವೆ. ಹೂವಿನಂತಹ ಹಳ್ಳಿಯ ಸರಕನ್ನು ನಾಗರಿಕ ರೀತಿಯಲ್ಲಿ ವ್ಯಾಪಾರ ಮಾಡಲು ಪ್ರಯತ್ನಿಸಿ ಸೋತ ಡಿಸೋಜಾಗೆ ನಾಗರಿಕ ಸಮಾಜದ ಮುಖವಾಡದಿಂದ ಗೆಲುವು ದಕ್ಕುವ ಸೂಕ್ಷ್ಮ ವಿಚಾರವನ್ನು ಲಂಕೇಶರು ಉತ್ತಮವಾದ ಕತೆಯನ್ನಾಗಿಸಿದ್ದಾರೆ.

ಪ್ಯಾಂಟಸಿ ತಂತ್ರದ 'ಅಭಿಪ್ರಾಯ ಮತ್ತು ಕೆಲಸದವ' ಕಥೆಯಲ್ಲಿ ನಿವೃತ್ತ ಅಧಿಕಾರಿ ಹಾಗೂ ಬಡಪಾಯಿ ರೈತನ ಆತ್ಮಶೋಧನೆ ಮಾಡಿದ್ದಾರೆ. ನಿವೃತ್ತರಾದರೂ ಪ್ರತಿಷ್ಠೆ ಹಾಗೂ ಅಹಂಕಾರವನ್ನು ಬಿಡದ ಅಧಿಕಾರಿಗಳು, ಸಾಮಾಜಿಕ ಸಂದರ್ಭದಲ್ಲಿ ಅಧಿಕಾರಶಾಹಿ ಧೋರಣೆಯಿಂದ ವರ್ತಿಸಿದರೆ, ಮಣ್ಣಿನಮಗನಾದ ರೈತ ಮಾನವೀಯ ಅಂತಃಕರಣದಿಂದ ಅಧಿಕಾರಿಗಳ ಸೇವೆ ಮಾಡುತ್ತಾರೆ. ಅಧಿಕಾರಿಗಳ ಅಹಂ ಸಣ್ಣತನಗಳನ್ನು ಅಪಮಾನಗಳನ್ನು ಸಹಿಸುತ್ತಾ ಅವಮಾನಗಳನ್ನು ನುಂಗುತ್ತಾ ಬದುಕುವ ರೈತನ ಕಷ್ಟ ಸಹಿಷ್ಣುತಾ ಗುಣವನ್ನು ಈ ಕಥೆ ಧ್ವನಿಸುತ್ತದೆ.

ಸಂವಹನ ಮಾಧ್ಯಮವಾದ ಪತ್ರಿಕೆಯ ಜವಾಬ್ದಾರಿಯುತ ಸ್ಥಾನದಲ್ಲಿರುವಾತ ಸಾಹಿತಿಯ ಅಸ್ತಿತ್ವವನ್ನು ಗುಮಾನಿಯಿಂದ ನೋಡುವ ಹಾಗೂ ಅಲ್ಲಗಳೆಯುವ ಸಂದರ್ಭವೊಂದನ್ನು 'ಒಂದುಘಟನೆ' ಕಥೆ ನಿರೂಪಿಸಿದೆ. ತಾನು ಬರೆದ ಕಥೆಗೆ ಹಣ ಕೇಳಲು ಬಂದ ಸಾಹಿತಿಯನ್ನು ಸಂಪಾದಕ ಅಸಂಬದ್ಧ ಪ್ರಶ್ನೆಗಳ ಮೂಲಕ ಲೇವಡಿ ಮಾಡುವುದು ಪತ್ರಿಕೆಯ ನೈತಿಕ ಮೌಲ್ಯ ಹಾಗೂ ಪ್ರಜ್ಞೆಯ ಅಪಮೌಲ್ಯಗಳನ್ನು ತೋರಿದೆ. ಸಾಮಾಜಿಕ ಜವಾಬ್ದಾರಿಯನ್ನು ಹೊರಬೇಕಾದ

ವ್ಯಕ್ತಿಗಳು ನೈತಿಕತೆ ಇಲ್ಲದಂತೆ ವರ್ತಿಸುವುದು ಸಾಹಿತಿ ಗೌರೀಶ ಅನುಭವಿಸುವ ಅಪಮಾನ ತಲ್ಲಣಗಳು ಅವನ ಸಮಾಜದ ಸ್ವರೂಪವನ್ನು ಅನಾವರಣಗೊಳಿಸುತ್ತದೆ. ವ್ಯಕ್ತಿಮೂಲವಾದ ಸಂಕಟ, ಅಪಮಾನ, ಅನುಮಾನಗಳನ್ನು ಸಮಾಜಕ್ಕೆ ಹರಡುತ್ತಾ ಸಾಮಾಜಿಕ ಅಶಾಂತಿ ಹಾಗೂ ಅವ್ಯವಸ್ಥೆಗಳಿಗೆ ಕಾರಣವಾಗುವುದನ್ನು ಈ ಕಥೆ ವಿವರಿಸಿದೆ.

'ಸಹಪಾಠಿ', 'ಮುಟ್ಟಿಸಿಕೊಂಡವನು' ಕಥೆಗಳಲ್ಲಿ ಸ್ಪರ್ಶದ ಆಯಾಮ ಭೌತಿಕವಷ್ಟೇ ಅಲ್ಲ, ಸಾಂಸ್ಕೃತಿಕವೂ ಹೌದು. ಆದರೆ ಅಸ್ಪೃಶ್ಯತೆಯನ್ನು ಸೃಷ್ಟಿಸಿದ ಸಮಾಜದಲ್ಲಿ ಸ್ಪರ್ಶ, ಧ್ಯಾನ, ಪ್ರಾರ್ಥನೆಗಳ ಸ್ತರವನ್ನು ಏರುವುದು ತೀರಾ ಪ್ರಯಾಸಕಾರಿ ಅನುಭವ. ದಲಿತರು ಸವರ್ಣೀಯರ ಸಂಬಂಧ ಮಾನವೀಯವಾಗುವುದು ಪರಸ್ಪರ ಸ್ಪರ್ಶದ ಮೂಲಕವೇ ಸ್ಪರ್ಶಿಸಿದ ಸಂಸ್ಕೃತಿಯೊಂದರಲ್ಲಿ ಮನಸ್ಸುಗಳು ಸ್ಪರ್ಶಿಸುವುದು ಹೇಗೆ? ಇದನ್ನು ಮೊದ ಮೊದಲು ಪ್ರಾಯಶಃ ವ್ರತದ ನಿಷ್ಠೆಯಲ್ಲಿ ಸಾಧಿಸಬೇಕು. 'ಸಹಪಾಠಿ' ಕಥೆಯಲ್ಲಿ ಬಸವೇಗೌಡ ಜೋನಿಯನ್ನಾಗಲೀ, ಶಿವಪ್ಪನನ್ನಾಗಲೀ, ಮುಟ್ಟುವ ಕ್ರಿಯೆ ಯಾಕೆ ಒಂದು ಕಠಿಣವಾದ ಆಚರಣೆಯಾಗುತ್ತದೆ ಎಂದು ಸಾಮಾಜಿಕ ನಿಲುವಿನಲ್ಲಿ ಗುರುತಿಸಬಹುದು. ಗಾಂಧೀಜಿಯವರ ಕನಸು ಬರೀ ಕನಸಲ್ಲ, ಹುಸಿ ಆದರ್ಶದ ಭೋಳೆತನವಲ್ಲ, ದಲಿತರು ಮತ್ತು ಮಹಿಳೆಯರ ಸಮಸ್ಯೆಗಳನ್ನು ತಮ್ಮ ಕಾರ್ಯ ಕ್ಷೇತ್ರದ ಕೇಂದ್ರ ಸ್ಥಾನದಲ್ಲಿ ಚಿಂತಿಸಿದ ಗಾಂಧೀಜಿ ಲಂಕೇಶರ ಮೇಲೆ ಮಾಡಿರುವ ಪ್ರಭಾವ ಆಳವಾದದ್ದು. ಲಂಕೇಶರ ಕಥೆಗಳಲ್ಲಿ ವ್ಯಕ್ತವಾಗಿರುವ ಸ್ತ್ರೀ ದೃಷ್ಟಿಕೋನ ನಮ್ಮ ಎಲ್ಲ ಸಮಕಾಲೀನ ಸಾಮಾಜಿಕ ನಿಲುವಿನ ದ್ಯೋತಕವಾಗಿದೆ.

'ರೊಟ್ಟಿ' ಕಥೆಯಲ್ಲಿ ಮುದುಕಿಗೆ ದಕ್ಕಬೇಕಾದ ಸಾಮಾಜಿಕ ನ್ಯಾಯ ನೀಡುವಲ್ಲಿ ಅಧಿಕಾರಶಾಹಿ ವರ್ಗ ವಿಫಲವಾಗುತ್ತದೆ. ತಿರುಕ ಮುದುಕಿಯ ಕೈಯಲ್ಲಿನ ರೊಟ್ಟಿಯನ್ನು ನೋಡುತ್ತಿರುವ ಸಂದರ್ಭದಲ್ಲಿ ರೊಟ್ಟಿಯನ್ನು ಅವನಿಂದ ಮರೆಮಾಚಲು ಯತ್ನಿಸಿದಳು. ಆದರೆ ತಿರುಕ ಕೈಯಿಂದ ಕಸಿದುಕೊಂಡು ಅವಳು ಕಿರುಚಿ ಜನರೆಲ್ಲಾ ಸೇರಿ ಪೋಲೀಸ್ ಬಂದು ರಕ್ಷಣೆಯ ನೆಪದಲ್ಲಿ ಗೋಡೆ ಕಟ್ಟಿದಾಗ ಕೇಳಿದ್ದರೆ ನಾನೆ ತರುವೆ ಎಂದು ಅಸಹಾಯಕತೆಯಿಂದ ಗೊಣಗುವಲ್ಲಿ ಉಳ್ಳವರ ಹಾಗೂ ಇಲ್ಲದವರ ಮನಸ್ಸಿನ ಅಂತರ ಸೃಷ್ಟಿಯಾಗುತ್ತದೆ. ಘಟನೆಗೆ ಸಂಬಂಧವೇ ಪಡದ ಜನರಗುಂಪು ಅವಳ ದೌರ್ಬಲ್ಯ ಹಾಗೂ ಅಸಹಾಯಕತೆ ಅಪಮಾನ ಇತ್ಯಾದಿಗಳನ್ನೆಲ್ಲಾ ಸಂತಸದಿಂದ ಅನುಭವಿಸಬೇಕಾದ ವಿವರಗಳನ್ನು ನೋಡುವುದು ನಮ್ಮ ಸಾಮಾಜಿಕ ಅವ್ಯವಸ್ಥೆಯನ್ನು ತೋರುತ್ತಿದೆ. ಕೇವಲ 'ಹಸಿವು' ಮಾತ್ರ ರೊಟ್ಟಿ ಕಥೆಯ ವಸ್ತುವಾಗದೆ ಹೆಣ್ಣಿನ ಶೋಷಣೆ, ಅಸಹಾಯಕತೆ, ಅನಾಗರೀಕವಾದ ಮಾತು, ಭಿಕ್ಷುಕರಾದ ರಕ್ಷಕರು ಹೀಗೆ ಹಲವಾರು ವಿವರಣೆಗಳನ್ನು ಪಾತ್ರಗಳ ಮೂಲಕ ಶೋಧಿಸಿದ್ದಾರೆ. ಲಂಕೇಶರ ಸಮಾಜಮುಖಿ ಚಿಂತನೆ ಈ ಕಥೆಯಲ್ಲಿ ಸ್ಪಷ್ಟಗೊಂಡಿದೆ.

ಹೀಗೆ ಲಂಕೇಶರು ತಮ್ಮ ಬರವಣಿಗೆಯ ಮೂಲಕ ಸಾಮಾಜಿಕ ಸಿದ್ಧಾಂತಗಳು ನಿಲುವುಗಳಾಗಿ ಪ್ರಕಟವಾಗಲು ಆಗುವ ಘಟನೆಗಳು ವಸ್ತು ವೈವಿಧ್ಯತೆಯನ್ನು ಕುರಿತು ಕಥೆಗಳನ್ನು ಬರೆಯ ಹೊರಟವರು ನಿರೂಪಣಾ ತಂತ್ರ, ನಾವೀನ್ಯತೆಯಿಂದ ಸಾಮಾಜಿಕ ಕಾಳಜಿಯಿಂದ ಮತ್ತು ನಿರ್ಭೀತ ವ್ಯಕ್ತಿನಿಷ್ಠ ಅನಿಸಿಕೆಗಳಿಂದ ಲಂಕೇಶರು ಕನ್ನಡ ಕಥನ ಸಾಹಿತ್ಯ ರಚನಕಾರರಲ್ಲಿಯೇ ಅನನ್ಯ ಲೇಖಕರು ಈ ಮೂಲಕ ಗಾಢ ಸಂಬಂಧವನ್ನು ಸ್ಥಾಪಿಸಿಕೊಂಡ ಲಂಕೇಶರು ಸಾಮಾಜಿಕ ನಿಲುವುಗಳನ್ನು ಸ್ಪಷ್ಟಪಡಿಸಿದವರು.

*****

# ಅಧ್ಯಾಯ ಆರು

## ಹಣ ಮತ್ತು ಅಧಿಕಾರ : ಮನುಷ್ಯ ಸಂಬಂಧಗಳ ಸ್ವರೂಪ

ಲಂಕೇಶರು ಮಹತ್ವದ ಬರಹಗಾರರು ಅವರ ಸಾಹಿತ್ಯಕ ಗುಣಗಳಲ್ಲಿ ಆಧುನಿಕ ಸಂವೇದನೆಯನ್ನು ತನ್ನ ವ್ಯಕ್ತಿತ್ವದಲ್ಲಿ ಅರಗಿಸಿಕೊಂಡು ಅಭಿವ್ಯಕ್ತಿಸುವುದು ಅವರಲ್ಲಿನ ಆಂತರ್ಯದ ಸಂಕಟವನ್ನು ಸಮಾಜದೊಂದಿಗೆ ಸಮೀಕರಿಸುವುದು ಅದಕ್ಕೆ ಬೇಕಾದ ಸಂವಹನ ವಿಧಾನವನ್ನು ಹೊಸದಾಗಿ ರೂಪಿಸಿಕೊಳ್ಳುವುದು ತಾನು ಹೇಳಬೇಕಾದ್ದನ್ನೆಲ್ಲ ಹೇಗೆ ಹೇಳಲು ಸಾಧ್ಯ ಎಂಬ ಹುಡುಕಾಟ ನಡೆಸುವುದು ಸಮಕಾಲೀನ ಸಮಾಜದ ಮನುಷ್ಯ ಸಂಬಂಧದ ನಾಡಿಮಿಡಿತವನ್ನು ಅರಿಯುವುದು ಅಂದಿನ ಸಂದರ್ಭದ ಘಟನೆಗಳು ಆಗು-ಹೋಗುಗಳಿಗೆ ಹೊಸ ಆಯಾಮವನ್ನು ಕೊಡುವ ಚಿಂತನೆಗಳಲ್ಲಿ ಹುಟ್ಟುವ ಸವಾಲುಗಳು ತಮ್ಮ ಬಾಲ್ಯದ ಅನುಭವಗಳೊಂದಿಗೆ ಉಂಟಾದ ತಾಜಾ ಉದಾಹರಣೆಗಳು. ಅವು ಅವರ ಆಂತರ್ಯದಲ್ಲಿ ಮೈಗೂಡಿದ ಬಗೆ ಇಂತ ಅನಿವಾರ್ಯತೆಗಳಿಗೆ ತಮ್ಮನ್ನು ತಾವೇ ಒಡ್ಡಿಕೊಂಡು ಬರೆದವರು ಲಂಕೇಶರು.

ಒಬ್ಬ ಸೃಜನಶೀಲ ಬರಹಗಾರನ ಬರವಣಿಗೆಯ ಹಿಂದಿನ ಒತ್ತಡಗಳು ಬೆರಗುಗೊಳಿಸುವಂತವು. ಸಮಾಜದಲ್ಲಿನ ಆಷಾಢಭೂತಿತನ, ಹಣ ಮತ್ತು ಅಧಿಕಾರದ ದಾಹ, ಭ್ರಷ್ಟಾಚಾರಗಳನ್ನು ಅನುಭವಿಸಿದ ಕೋಪ, ಬೇಸರ ಮತ್ತು ಅವ್ಯಕ್ತ ಭಯ ಲಂಕೇಶರ ಸಾಹಿತ್ಯದ ಗುಣವಿಶೇಷ. ಒಂದು ಮನೋಧರ್ಮ ತನ್ನ ಪರಿಸರದಲ್ಲಿ ಅನುಭವಿಸುವ ಎಲ್ಲ ಬಗೆಯ ಸಾಹಿತ್ಯದ ಕಾರ್ಯಕಾರಣಗಳು ಬರಹದಲ್ಲಿ ಮೂಡುವಾಗ ವಿಶೇಷತೆಯನ್ನು ಮನುಷ್ಯ ಸಂಬಂಧಗಳನ್ನು ಸಾಹಿತ್ಯ ರೂಪುಗೊಳಿಸುತ್ತದೆ. ಅದು ಸಾಧ್ಯವಾಗುವುದು ಕವಿಗೆ ಮಾತ್ರ ಬದುಕಿನ ಕಲೆಯನ್ನು ನಾಡಿಮಿಡಿತವನ್ನು ಅರಿತವನಿಗೆ ಮಾತ್ರವೇ ಸಾಧ್ಯ. ಲಂಕೇಶರು ತಾವು ನಂಬಿದ್ದ ತತ್ವ, ಆಲೋಚನೆಗಳಿಗೆ ಹೋರಾಡುವ ಗುಣವನ್ನು ಹೊಂದಿರುವವರು ಆಧುನಿಕ ಸಂದರ್ಭದಲ್ಲಿ ವಿವಿಧ ಆಯಾಮಗಳಿಗೆ ಸಾಮಾಜಿಕ ಚಿಂತನೆಗಳನ್ನು ನೇರವಾಗಿ ಟೀಕಿಸುವ ಗುಣವನ್ನು ಹೊಂದಿರುವರು. ಹಣ ಮತ್ತು ಅಧಿಕಾರ ಮನುಷ್ಯ ಸಂಬಂಧಗಳನ್ನು ನವೋದಯದ ಕವಿಗಳಾದ ಕುವೆಂಪು, ಶಿವರಾಮಕಾರಂತ, ಬೇಂದ್ರೆ, ಮಾಸ್ತಿ ಇವರೆಲ್ಲರೂ ತಮ್ಮ ಸಮಗ್ರ ಸಾಹಿತ್ಯದಲ್ಲಿ ಪ್ರಧಾನ ವಸ್ತುಗಳನ್ನಾಗಿಯೇ ಚರ್ಚಿಸಿ ಸಾಮಾಜಿಕ ಸಂದರ್ಭದಲ್ಲಿ ಇರುವ ಹಣದ ದಾಹ, ಅಧಿಕಾರ ದಾಹ ಏನೆಲ್ಲಾ ಘಟನೆಗಳನ್ನು ಸೃಷ್ಟಿಸುತ್ತವೆ ಅವುಗಳಿಂದ ಆಗುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಘಾತಗಳು ಎಂಥವು. ಮನುಷ್ಯ ಹಣ ಮತ್ತು ಅಧಿಕಾರದ ದಾಹಕ್ಕೆ ಬಲಿಯಾಗಿ ತನ್ನ ದಿಕ್ಕನ್ನು ಬದಲಿಸುವ ಬದುಕಿನ ಸಂಬಂಧಗಳ ಬಗ್ಗೆ ಇವುಗಳನ್ನು ಕುರಿತು ಸಾಹಿತ್ಯದಲ್ಲಿ ಬರೆಯ ಹೊರಟಿರುವುದನ್ನು ನೋಡಬಹುದು. ಪ್ರಗತಿಶೀಲ ಸಾಹಿತಿಗಳಾದ ಅನಕೃ,

ನಿರಂಜನ, ಬಸವರಾಜಕಟ್ಟೀಮನಿ, ತ.ರಾ.ಸು, ವಜ್ರಮುಟಿ ಇನ್ನೂ ಪ್ರಮುಖ ಬರಹಗಾರರು ಹಣ ಮತ್ತು ಅಧಿಕಾರದ ಮನುಷ್ಯ ಸಂಬಂಧಗಳನ್ನು ಕುರಿತು ಬರೆಯ ಹೊರಟವರೇ ಇದರಿಂದ ನಗರ ಹಳ್ಳಿಗಳನ್ನು ಆವರಿಸಿಕೊಂಡಿರುವ ಕ್ಷುದ್ರ ರಾಜಕಾರಣ. ನಾಗರಿಕತೆಯ ಟೊಳ್ಳು ಬದುಕಿನ ಆಳದ ನೋವುಗಳು, ಅಂತರಂಗ ಬಹಿರಂಗಗಳ ಸುತ್ತಲು ವಾಸ್ತವದ ಬಗೆಗಿನ ವಿಷಾದ, ವಿಷಣ್ಣತೆ, ವ್ಯಂಗ್ಯ ಉದ್ವಿಗ್ನತೆಗಳು ಇವುಗಳನ್ನು ಹಣ ಮತ್ತು ಅಧಿಕಾರದಿಂದ ಉಂಟಾಗುವ ಪರಿಣಾಮದಲ್ಲಿ ಹಿಡಿದಿಟ್ಟಿರುವ ಜೀವಂತಿಕೆಯನ್ನು ಈ ಲೇಖಕರು ಮಾಡಿದ್ದಾರೆ. ನವ್ಯ ಲೇಖಕರಾದ ಯು.ಆರ್.ಅನಂತಮೂರ್ತಿ, ಗೋಪಾಲಕೃಷ್ಣ ಅಡಿಗ, ರಾಮಚಂದ್ರ ಶರ್ಮ, ಪೂರ್ಣಚಂದ್ರ ತೇಜಸ್ವಿ, ಶ್ರೀಕೃಷ್ಣ ಆಲನಹಳ್ಳಿ ಇನ್ನೂ ಮುಂತಾದವರು ಕಟ್ಟಿಕೊಡುವ ಹಣ ಮತ್ತು ಅಧಿಕಾರದ ಮನುಷ್ಯ ಸಂಬಂಧಗಳ ಬಗೆಯನ್ನು ನೋಡಬಹುದು. ಸಾಮಾಜಿಕವಾಗಿ ಇರುವ ಸಂಘರ್ಷಗಳು ತಾತ್ವಿಕ ನಿಲುವುಗಳು, ಬದುಕಿನ ತಲ್ಲಣಗಳು, ವ್ಯಂಗ್ಯ-ವಿಡಂಬನೆಗಳಲ್ಲಿ ಸೂಚಿಸುತ್ತಾ ರೂಪಕ, ಪ್ರತಿಮೆ, ಪ್ರತೀಕ, ತಂತ್ರಗಾರಿಕೆಯ ಮುಖೇನ ಸಮಾಜದಲ್ಲಿ ಇರುವ ಅನೀತಿ ಭ್ರಷ್ಟತೆಯನ್ನು ದಾಖಲು ಮಾಡುತ್ತಾರೆ. ಹಾಗಾಗಿ ಅಂದಿನ ಕಾಲದ ಮನುಷ್ಯ ಸಂಬಂಧಗಳ ಸ್ಥಿತಿಸ್ಥಾಪಕತ್ವ ಗುಣವನ್ನು ನೋಡಬಹುದು. ದಲಿತ-ಬಂಡಾಯದ ಪ್ರಮುಖ ಲೇಖಕರಾದ ದೇವನೂರ ಮಹಾದೇವ, ಮೊಗಳ್ಳಿಗಣೇಶ್, ಬೆಸಗರಹಳ್ಳಿ ರಾಮಣ್ಣ, ಅರವಿಂದ ಮಾಲಗತ್ತಿ ಇನ್ನೂ ಹಲವು ಬರಹಗಾರರು ಹಣ ಮತ್ತು ಅಧಿಕಾರದ ಸಂದರ್ಭಗಳಲ್ಲಿ ನಡೆಯುವ ಸಮಾಜದ ಸಂಗತಿಗಳನ್ನು ತಮ್ಮ ಸಾಹಿತ್ಯದಲ್ಲಿ ಹೆಚ್ಚು, ಸಿಟ್ಟು, ಆಕ್ರೋಶದ ಹಿನ್ನೆಲೆಯಲ್ಲಿ ಹಾಗೂ ಸಮಕಾಲೀನ ಸಮಾಜದ ಗೋಸುಂಬೆತನಗಳನ್ನು ಅನಾವರಣಗೊಳಿಸಲು ಮುಂದಾದವರು.

ಲಂಕೇಶರು ಸಮಾಜದಲ್ಲಿ ವಾಸ ಮಾಡುವ ವ್ಯಕ್ತಿಗಳ ಅಂತರ್ಮುಖತೆಯಲ್ಲಿ ದೃಷ್ಟಿ ಹರಿಸಿದವರು. ಜೊತೆಜೊತೆಗೆ ಬಹಿರ್ಮುಖದಲ್ಲಿಯೂ ಇರಬಹುದಾದ ವ್ಯಕ್ತಿಯ ಆಂತರ್ಯ ಅವರಿಗೆ ಮಹತ್ವದ್ದಾಗಿ ಕಾಣುತ್ತದೆ. ಕವಿಯಾದವನಿಗೆ ಇದು ಸಹಜ, ಹೀಗಾಗಿಯೇ 'ರವಿ ಕಾಣದ್ದನ್ನು ಕವಿ ಕಂಡ' ಎಂದು ಹೇಳುವುದು. ಕವಿಯಾದವನಿಗೆ ಎಲ್ಲದರಲ್ಲಿಯೂ, ಎಲ್ಲರಲ್ಲಿಯೂ ಒಡನಾಟವಿರಬೇಕು. ಲಂಕೇಶರು ಇದನ್ನು ಸಾಧ್ಯವಾಗಿಸಿಕೊಂಡವರು. ಅವರ ಸಾಹಿತ್ಯ ಮತ್ತು ಸಮಾಜದ ನಡುವಿನ ಸಂದರ್ಭಗಳಲ್ಲಿ ಸದಾ ಆಶಕ್ತರು, ನವ್ಯರ ಆಶಯವನ್ನು ಹೊಂದಿರುವ ಕವಿ ಲಂಕೇಶರು ವೈಯಕ್ತಿಕತೆ ಹಾಗೂ ಸಾಮಾಜಿಕತೆ ಈ ಎರಡರಲ್ಲೂ ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಾರೆ. ಅದೇನಾದರೂ ಇದಕ್ಕೆ ವ್ಯತಿರಿಕ್ತವಾಗಿ ಸಾಗಿದ್ದೇ ಆದರೆ ಅವನಿಗೆ ಸೋಲು ಖಚಿತ ಎನ್ನುವ ನಿರ್ಣಯವನ್ನು

ತಳೆಯುತ್ತಾರೆ. ಈ ಮಾತಿನಲ್ಲಿರುವ ಸೂಕ್ಷ್ಮತೆಯನ್ನು ಗಂಭೀರವಾಗಿ ಆಲೋಚಿಸಿದರೆ ಅವರಲ್ಲಿರುವ ಸಮಾಜಮುಖಿ ಧೋರಣೆ ಸ್ಪಷ್ಟವಾಗುತ್ತದೆ.

**೬.೧. ಹಣ ಮತ್ತು ಅಧಿಕಾರ ಕೌಟುಂಬಿಕ ಸಂಬಂಧಗಳು**

'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಲೇಖಕರು ಕಲ್ಪಿಸಿಕೊಂಡ ಓದುಗನಿಗೂ ಹಣ ಮತ್ತು ಅಧಿಕಾರ ಕೌಟುಂಬಿಕ ಸಂಬಂಧಗಳು ವ್ಯಕ್ತವಾಗಿರುವ ಬಗೆಯನ್ನು ಹೆಣೆದಿರುವ ತಂತ್ರಕ್ಕೂ ಅನ್ಯೋನ್ಯ ಸಂಬಂಧವಿದೆ. ಲಂಕೇಶರ ಮಾತಿನಲ್ಲೇ ಹೇಳುವುದಾದರೆ ಅವರು ಕಟ್ಟಿಸಿಕೊಂಡ ವಾಚಕ ಮಹಾಶಯರಿಗೆ ಆನಂದದಾಯಕವಾಗಬಲ್ಲ ಕಥಾವಸ್ತುಗಳೆಂದರೆ 'ಹಣ, ವಿದ್ಯೆ, ಜಾತಿ, ಕುಸ್ತಿ ಮತ್ತು ಪ್ರೇಮ' ಇವುಗಳಿಗೆ ಕಾದಂಬರಿಯಲ್ಲಿ ಬರುವ ಹೆಂಡ, ಹಾದರ ಹಾಗೂ ಜೂಜು ಸೇರಿದರೆ ಈ ಪಟ್ಟಿ ನೋಡಬಹುದು. ಇಲ್ಲಿ ಹಣ, ಹೆಂಡ, ಜಾತಿ, ಪ್ರೀತಿಯ ವೈಷಮ್ಯಗಳು ಕಂಬಳ್ಳಿಯ ಅನೇಕ ಸಂಘರ್ಷಗಳಿಗೆ ಗುರಿ ಮಾಡಿದ್ದು ಇಡೀ ಊರನ್ನೇ ವಿನಾಶದತ್ತ ಕೊಂಡೊಯ್ದಿರುವುದನ್ನು ಕಾಣಬಹುದು. ಆಧುನಿಕತೆ ಸೃಷ್ಟಿಸುತ್ತಿರುವ ಮನುಷ್ಯನ ಇಂತಹ ಸಣ್ಣತನಗಳನ್ನು ನೋಡಿದಾಗ ಮನುಷ್ಯ ತನ್ನ ದೈನಂದಿನ ಬದುಕಿನಲ್ಲಿ ತನ್ನನ್ನು ತಾನು ಯಾವ ರೀತಿಯಲ್ಲಿ ಕುಬ್ಜಗೊಳಿಸಿಕೊಳ್ಳುತ್ತಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ. ರಂಗವ್ವನ ಮೇಲೆ ಭರ್ಮಣ್ಣನು ದ್ವೇಷ ಸಾಧಿಸುತ್ತಾನೆ. ಅದೇ ಸಂದರ್ಭದಲ್ಲಿ ರಂಗವ್ವಳ ಮಗಳಾದ ಸಾವಂತ್ರಿ ಬೇಡರ ಮಂಜನ ಪ್ರೇಮ ಪ್ರಕರಣವನ್ನು ದ್ವೇಷದ ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ. ಆದರೆ ಇವರಿಬ್ಬರ ಸಂಘರ್ಷದಲ್ಲಿ ಸಾವಂತ್ರಿ ನಿರಪರಾಧಿಯಾಗಿರುವುದು ಸ್ಪಷ್ಟವಾಗುತ್ತದೆ.

ರಂಗವ್ವ ಭರ್ಮಣ್ಣನನ್ನು ದ್ವೇಷಿಸಿದ್ದು ಹಣದ ವ್ಯಾಮೋಹದಿಂದ ಆದರೆ ಭರ್ಮಣ್ಣ ರಂಗವ್ವಳನ್ನು ದ್ವೇಷಿಸಿದ್ದು ಸ್ವಾರ್ಥ, ಕಾಮ, ಪ್ರತಿಷ್ಠೆ, ಅಹಂಕಾರದಿಂದ ಹಾಗಾಗಿ ರಂಗವ್ವಳ ಮೇಲೆ ಭರ್ಮಣ್ಣ ಹಲವು ರೀತಿಯಾಗಿ ಪ್ರತೀಕಾರದ ಬಲೆಯನ್ನೇ ಹೆಣೆಯುತ್ತಾನೆ. ಆರ್ಥಿಕವಾಗಿ ದುರ್ಬಲಗೊಳಿಸಲೇಬೇಕೆಂದು ಒಂದಾದರೆ ಕರಿಯನ ಮೂಲಕ ಹಣದ ಪೆಟ್ಟಿಗೆಯನ್ನೇ ಸಾಗಿಸಬೇಕೆನ್ನುವುದು ಮತ್ತೊಂದಾಗಿದೆ. ಬಸ್ಯಾ, ರಾಚ, ಶಿವಾಜಿ ಮುಂತಾದವರನ್ನು ಇದಕ್ಕೆ ದಾಳವನ್ನಾಗಿ ಬಳಸಿಕೊಳ್ಳುತ್ತಾನೆ. ಭರ್ಮಣ್ಣ ಇಷ್ಟೆಲ್ಲವನ್ನು ಪ್ರಜ್ಞಾಪೂರ್ವಕವಾಗಿ ಮಾಡುವುದು ರಂಗವ್ವಳ ಬಗ್ಗೆ ಇದ್ದ ದ್ವೇಷಕ್ಕಾಗಿ ಮಾತ್ರ. ಆದರೆ ಈ ಎಲ್ಲದರಲ್ಲೂ ಆತನಿಗೆ ಮುಖಭಂಗವಾಗುವುದನ್ನು ಕಾಣುತ್ತೇವೆ. ಆಣೆ ಬಡ್ಡಿ ರಂಗವ್ವನ ಮೇಲಿನ ದೌರ್ಜನ್ಯದ ಪಿತೂರಿಯ ಬಗೆಗೆ ಸಾಮಾಜಿಕ ಅನುಕಂಪನ ಪರಾಮರ್ಶನ ಇಲ್ಲಿ ಮುಖ್ಯ. ಆದರೂ ರಂಗವ್ವ ಕಂಡ ಈ ಎಲ್ಲ ರಾಜಕಾರಣದ ಪ್ರತಿಪಟ್ಟುಗಳನ್ನು ಹಾಕುವ ಚತುರೆಯಂತೆಯೇ ಕಾಣುತ್ತಾಳೆಯೇ ಹೊರತು ಅವಳು ಎಲ್ಲಯೂ ಇಲ್ಲಿ ಮುಗ್ಧತೆಯಿಂದ ಕಾಣುವುದಿಲ್ಲ. ಅವಳಲ್ಲಿಯೂ ಸುಪ್ತವಾಗಿ ಅಡಗಿದ್ದ ರಾಜಕಾರಣ ಸಮಯಕ್ಕಾಗಿ ಕಾಯುತ್ತಿತ್ತು ಎನಿಸುತ್ತದೆ. ಇಂಥ ಸಂದಿಗ್ಧ ಕಾಲದಲ್ಲಿ

ಅವಳು ಕಡೆಗೆ ಕೊಟ್ಟ ಸಾಲವನ್ನು ಘಟವಾಣಿ ಹೆಂಗಸಿನ ಹಾಗೆ ಹಿಂದಕ್ಕೆ ಕೇಳುವುದನ್ನು ನಿಲ್ಲಿಸುತ್ತಾಳೆ. ಒಂದು ಕಾಲಕ್ಕೆ ಹಣವನ್ನು ಬಡ್ಡಿಗಾಗಿ ಸಾಲ ಕೊಡುವುದು ಅವಳಿಗೆ ನೆಮ್ಮದಿಯ ವಿಷಯವಾಗಿದ್ದರೆ ಅದನ್ನು ವಾಪಸ್ಸು ಕೇಳದಿರುವುದು ಕಷ್ಟವೇ ಆದರೂ ಅದನ್ನು ನಿಭಾಯಿಸಿದ ರಂಗವ್ವ ಆ ಮೂಲಕ ತನ್ನ ಆಣೆ ಬಡ್ಡಿ ಹಿಂದೇಟಿನಿಂದ ಕೊಂಚ ತಪ್ಪಿಸಿಕೊಳ್ಳುವ ಯತ್ನಮಾಡುತ್ತಾಳೆ. ಇದರ ಜೊತೆಗೆ ಹನುಮಕ್ಕಳ ಪ್ರಸಂಗದಲ್ಲಿ ಕರಿಯನ ಹಣಕಾಸಿನ ಪ್ರಕರಣದೆಡೆಗೆ ಮಗ ಹಾಳಾಗುತ್ತಾನೆಂದು ತಿಳಿದು ನಡೆಯುವ ಪ್ರಸಂಗ ಈ ರೀತಿ ಇದೆ. "ಹೊಟ್ಯಾಗೆ ಹುಟ್ಟಿದ ಮೇಲೆ ಮಗ ಅಲ್ಲದೆ ಇನ್ನೇನಾದಾನು, ಕರಕೊಂಡು ಹೋಗು, ನಿಮ್ಮ ಸಾವಾಸ ಸಾಕು' ಎಂದ ಭರ್ಮಣ್ಣ. ಅವಳನ್ನು ಹತೋಟಿಗೆ ತರುವುದಕ್ಕೆ ಇದೇ ಸರಿಯಾದ ಮಾರ್ಗವೆಂದು ಅವನಿಗೆ ಗೊತ್ತಿತ್ತು. ಹನುಮಕ್ಕನಿಗೆ ತನ್ನ ಮಗ ಹಾಳಾಗುತ್ತಾನೆಂದು ಎಲ್ಲೋ ಒಂದು ಕಡೆ ಅನಿಸಿದ್ದು ನಿಜವಾದರೂ ಆತ ಕೊಟ್ಟ ರೂಪಾಯಿಯ ಕಿಮ್ಮತ್ತು ಕಡಿಮೆಯೆಂದು ಅನ್ನಿಸಿರಲಿಲ್ಲ. ಭರ್ಮಣ್ಣ ಇಷ್ಟು ಸಲೀಸಾಗಿ ತನ್ನ ಮಗನನ್ನು ಬಿಡಬಹುದೆಂದು ಅವಳಿಗೆ ಅನ್ನಿಸಿರಲಿಲ್ಲ. ಮಗ ಕೆಡುತ್ತಿರುವುದು ಬರಬಹುದಾದ ಹೆಚ್ಚು ದುಡ್ಡು, ತನ್ನ ಕಷ್ಟ ಕಾರ್ಪಣ್ಯಗಳು ಎಲ್ಲ ಸೇರಿಕೊಂಡು ಈಗ ದೊಡ್ಡದಾಗಿ ಅಹಹತ್ತಿದಳು. ಭರ್ಮಣ್ಣ ಅವಳನ್ನು ಸಮಾಧಾನ ಪಡಿಸದೇ ಗತ್ಯಂತರ ಇರಲಿಲ್ಲ."[೧] ಇಲ್ಲಿ ಹಣ ಮತ್ತು ಅಧಿಕಾರ ಕೌಟುಂಬಿಕ ಸಂಬಂಧಗಳಿಗೆ ಹನುಮಕ್ಕ ಕರಿಯನ ವಿಷಯಕ್ಕೆ ಪಡುವ ವೇದನೆ ಭರ್ಮಣ್ಣನ ಮಾತುಗಳು ಇಲ್ಲಿ ಮುಖ್ಯವಾದವು ಭರ್ಮಣ್ಣ ರಂಗವ್ವನ ಹಣವನ್ನು ಹಿಂತಿರುಗಿಸಬೇಡಿ ಎಂದು ಜನರಲ್ಲಿ ಅಪಪ್ರಚಾರ ಮಾಡಿ ಎಲ್ಲದಕ್ಕೂ ಮೂಗುತೂರಿಸುವ ವ್ಯಕ್ತಿಯಲ್ಲಿ ನಿಲ್ಲುತ್ತಿದ್ದ. ಕಾರಣ ಹನುಮಕ್ಕಳಿಗೆ ಊರಿನ ವಿಷಯಗಳು ಅಷ್ಟು ಆಳವಾಗಿ ಗೊತ್ತಿರಲಿಲ್ಲ. ಭರ್ಮಣ್ಣ ಹಣದ ವಿಷಯದಲ್ಲಿ ಅಧಿಕಾರದ ಧೋರಣೆಯನ್ನು ಕಂಬಳ್ಳಿಯ ಪ್ರಪಂಚದಲ್ಲಿ ಕಾಣುತ್ತಾನೆ. ಮುಗ್ಧೆ ಹನುಮಕ್ಕನ ಕೌಟುಂಬಿಕ ದಾರಿಯನ್ನು ದಿಕ್ಕು ತಪ್ಪಿಸುವಲ್ಲಿ ಭರ್ಮಣ್ಣ ಯಶಸ್ವಿಯಾಗುತ್ತಾನೆ. ರಂಗವ್ವನ ಮೇಲೆ ಬರೀ ಆರೋಪದ ದ್ವೇಷದ ಸುರಿಮಳೆಯನ್ನೇ ಸುರಿಸಿ ಬೇರೆ ಕುಟುಂಬವನ್ನು ಹಾಳುಮಾಡಲು ಮುಂದಾಗುತ್ತಾನೆ.

ವ್ಯಾವಹಾರಿಕವಾಗಿ ಹನುಮಕ್ಕನ ಜೊತೆ ರಂಗವ್ವನ ಹಣದ ವ್ಯವಹಾರಗಳನ್ನು ಈ ರೀತಿ ವಿವರಿಸುತ್ತಾನೆ. "ಹೊಲೇರಿಗೆ ರಂಗಿಕೊಟ್ಟಿರೋ ಸಾವಿರ ರೂಪಾಯಿ ಹೋದಂಗೇ ಅಂತ ಬರೆದಿಟ್ಕೋ ಹನುಮಕ್ಕ ಜನ ರಕ್ತ ಹೀರೋದನ್ನ ಎಷ್ಟು ದಿನ ಸಹಿಸ್ತಾರೆ' ಅಂದ ಮತ್ತು ಅದೇ ರಾತ್ರಿ ಕರಿಯನೊಂದಿಗೆ ಕಾಡಿಗೆ ಹೋಗಿ ಮಂಜ ಮತ್ತು ಶಿವಲಿಂಗಪ್ಪನ ಕಳ್ಳಭಟ್ಟಿ ಪತ್ತೆಮಾಡಿ ಸರ್ಕಾರ ಅವರ ಮೇಲೆ ಎರಗುವಂತೆ ಮಾಡುವುದಾಗಿ ಹೇಳಿದ. ಬರೀ ಹೇಳಿಕೆಯಿಂದ

೧. ಪಿ.ಲಂಕೇಶ, ಮುಸ್ಸಂಜೆಯ ಕಥಾ ಪ್ರಸಂಗ, ಪುಟ. ೫೦.

ಉಪಯೋಗವಿಲ್ಲವೆಂದು ಅರಿತಿದ್ದವನಾಗಿದ್ದರಿಂದ ತನ್ನ ಗಬ್ಬು ಚಡ್ಡಿಯೊಳಕ್ಕೆ ಕೈಹಾಕಿ ಒಂದು ರೂಪಾಯಿ ತೆಗೆದು ಅವಳ ಕೈಗಿಟ್ಟು 'ನಿನ್ನ ಮಗ ಬದುಕಿ ಬಾಳೋ ಜವಾಬ್ದಾರಿ ನನಗಿರಲಿ ಹನುಮಕ್ಕ ನೀನೀಗ ಹೋಗಿ ಮಲಕ್ಕೋ ಎಲ್ಲ ಸರಿಯಾಗ್ತತಿ' ಎಂದು ಆಕೆಯನ್ನು ಬೀಳ್ಕೊಟ್ಟ ಕದ್ದು ಕರಿಯನಿಗೆ ಎರಡು ರೂಪಾಯಿ ಕೊಟ್ಟ"[೨] ಇಲ್ಲಿ ಭರ್ಮಣ್ಣನ ಸ್ವಾರ್ಥವಿರುವುದನ್ನು ಕಾಣಬಹುದು. ಕರಿಯನನ್ನು ಕಳ್ಳಬಟ್ಟಿ ವ್ಯವಹಾರವನ್ನು ಕಂಡುಹಿಡಿಯಲು ಹನುಮಕ್ಕನನ್ನು ನೇವರಿಸಿ ಕರಿಯನ ಬಳಕೆಗೆ ಭರ್ಮಣ ಹೂಡುವ ತಂತ್ರವಿದು. ಕರಿಯ ಇಲ್ಲಿ ಅಮಾಯಕನ ರೀತಿ ಕಾಣುತ್ತಾನೆ. ಅವನ ಭವ್ಯ ಭವಿಷ್ಯವನ್ನು ಹಾಳುಮಾಡುತ್ತಿರುವ ಸಮಾಜ. ಕಲ್ಲಹಳ್ಳಕ್ಕೆ ಕರಿಯ ರಾತ್ರಿ ಹೊತ್ತಲ್ಲಿ ಕಳ್ಳಬಟ್ಟಿ ವ್ಯವಹಾರವನ್ನು ಪತ್ತೆ ಹಚ್ಚಲು ಹೊರಡುತ್ತಾನೆ. ಕಾಡಲ್ಲಿ ಹುಲಿ ಕಿರುಬಗಳ ಬಾಯೊಳಕ್ಕೆ ಹೋಗಿಬಿಡಬಹುದೆಂಬ ಭಯಕ್ಕೆ ಅಲ್ಲಿಗೆ ಒಬ್ಬನೇ ಹೋಗುವ ಯೋಜನೆ ಅಪಥ್ಯವಾಗಿತ್ತು ಆದರೆ ಭರ್ಮಣ್ಣನಿಂದ ಪಡೆದ ಹಣಕ್ಕೆ ಹೋಗಲೇಬೇಕಾಯಿತು. ಹಣ ಮತ್ತು ಹಣದ ಅಭಾವ ಮನುಷ್ಯನನ್ನು ಎಂಥ ಅಸಹಾಯಕ ಸ್ಥಿತಿಗೆ ತರುವುದೆಂಬುವುದಕ್ಕೆ ಕರಿಯ ಉದಾಹರಣೆಯಾಗಿದ್ದಾನೆ. ಹೀಗೆ ಯಾರೆಂದರೆ ಅವರು ಉಪಯೋಗಿಸಿಕೊಂಡು ಎಸೆಯಲ್ಪಡುತಿದ್ದ ಕರಿಯ ಈ ಸಮಾಜದಲ್ಲಿನ ಅನಾಥಪ್ರಜ್ಞೆಯ ಪ್ರತೀಕವಾಗಿದ್ದ. ಈ ರೀತಿಯ ಸಂಶಯ ಮತ್ತು ಭಯ ಸದಾ ಅವನ ಕಣ್ಣಿನಲ್ಲಿರುತ್ತಿದ್ದವು. ಪ್ರತಿಸಲವೂ ಕರಿಯ ಓದುಗರಿಗೆ ದುರಂತ ವ್ಯಕ್ತಿಯಾಗಿ ಕಾಣುತ್ತಾನೆ. ಅವನು ಕಣ್ಣಿನ ದೃಷ್ಟಿಯನ್ನು ಕೂಡ ಕಳೆದುಕೊಳ್ಳುತ್ತಾನೆ.

ಕರಿಯನಂತೆಯೇ ಕಾದಂಬರಿಯ ವಿಶಿಷ್ಟ ಪಾತ್ರವೆಂದರೆ ಗಿಡ್ಡ ಮೇಷ್ಟ್ರ ಸಣ್ಣೀರಪ್ಪ ಊರಿನ ಎಲ್ಲಾ ಉಸ್ತುವಾರಿ, ಗೂಢಾಚಾರಿ ಕೆಲಸದ ಈತ ರಂಗವ್ವನಿಗೆ ಭಯಹುಟ್ಟಿಸಿ ಮಸ್ಕ ಹೊಡೆದು ಸಾಲ ಪಡೆಯಲು ಯತ್ನಿಸುವನು. ಬಾಳೆಹಣ್ಣು ಲಂಚಕೊಟ್ಟು ಕಾಸುತೆಗೆದುಕೊಳ್ಳದೇ ಆರೋಪದಿಂದ ಮುಕ್ತನಾಗುತ್ತಿದ್ದ ಈತ ಸ್ಕೂಲಿನ ಬಾಳೆಗೊನೆಯನ್ನು ಒತ್ತೆ ಇಡುವುದರಿಂದ ಹಿಡಿದು ವರದಕ್ಷಿಣೆ, ದಳ್ಳಾಳಿ, ಓಸಿ ಕಂಪನಿ ಷೇರು ಹೀಗೆ ದೇಶದ ರಾಜಕೀಯವನ್ನೆಲ್ಲಾ ರಹಸ್ಯವಾಗಿ ನಡೆಯುವ ಸ್ಥಳ ಗುತ್ಯವ್ವನ ಮನೆಯಲ್ಲಿ ಸಾಗುತ್ತದೆ.

"ಕಂಬಳ್ಳಿಯ ಎಲ್ಲ ಘಟನೆಗಳು ಮುಖ್ಯವಾಗಿ ಹಣ ಮತ್ತು ಪ್ರೇಮದಿಂದಾಗಿ ನಡೆಯುವಂಥವು. ಹಣದ ವಹಿವಾಟು ನಡೆಸುವ ವಿಧವೆ ರಂಗವ್ವನಿಂದ ಊರಿನಲ್ಲಿ ಅವರಿವರಿಗೆ ಹಣವನ್ನು ಸಾಲವಾಗಿ ಕೊಟ್ಟು ಅದನ್ನೂ ಬಡ್ಡಿಯ ಸಮೇತ ವಸೂಲುಮಾಡುವ ಈಕೆಯ ಜಿಗಟುತನವನ್ನು ಕಂಡ ಊರಿನ ಹಲವರಿಗೆ ಅಸೂಯೆ, ಮೂಲತಃ ಗಟ್ಟಿಗಳಾದ ಈಕೆ ಜಿಪುಣಿಯೂ ಹೌದು. ಊರಿನಲ್ಲಿ ಯಾರಿಗೂ ಹೆದರದೆ ಆಣೆಬಡ್ಡಿ ವ್ಯವಹಾರವನ್ನು ನಡೆಸಿಕೊಂಡು ತನ್ನ ಒಬ್ಬಳೇ ಮಗಳಾದ ಸಾವಂತ್ರಿಯೊಂದಿಗೆ ಎಲ್ಲರೂ ಅಚ್ಚರಿಪಡುವ ಹಾಗೆ

---

೨. ಪಿ.ಲಂಕೇಶ, ಮುಸ್ಸಂಜೆಯ ಕಥಾ ಪ್ರಸಂಗ, ಪುಟ. ೫೧.

ಜೀವಿಸುತ್ತಿದ್ದಳು. ಆದರೆ ಹಣಕಾಸಿನ ವ್ಯವಹಾರದಲ್ಲಿ ಚತುರರಾದ ಮೆಷಿನ್ ಭರ್ಮಣ್ಣನ ಹತ್ತಿರ ಬಡ್ಡಿಯ ವ್ಯವಹಾರದ ಜೊತೆಗೆ ಹಾಲುಮಾರಿ ಬಂದ ಹಣವನ್ನು ಕೂಡಿಟ್ಟಿದ್ದಳು. ಈ ಮಧ್ಯೆ ಹರೆಯ ತುಂಬಿದ ಸಾವಂತ್ರಿ ತನ್ನ ಅವ್ವನ ಕೈಕೆಳಗೆ ಸುಖ ಸ್ವಾತಂತ್ರ್ಯ ಕಾಣಲಾಗದೆ ಅಕಸ್ಮಾತ್ ಬ್ಯಾಡರ ಮಂಜನ ಜೊತೆ ಸ್ನೇಹ ಬೆಳೆಸುವಳು ಇದನ್ನು ಕಂಡೂ ಕಾಣದ ಹಾಗೆ ಇರುತ್ತಿದ್ದ ರಂಗವ್ವನಿಗೆ ಸದ್ಯಕ್ಕೆ ಅದೊಂದು ಮಹತ್ವದ ವಿಷಯವಾಗಿರಲಿಲ್ಲ".[೩] ಹಣ ಮತ್ತು ಅಧಿಕಾರ ಎಂಬುದು ಕಂಬಳ್ಳಿಯ ಕೌಟುಂಬಿಕ ಹಿನ್ನೆಲೆಯಲ್ಲಿ ಬೀರಿದ ಪರಿಣಾಮಗಳು, ಪ್ರಭಾವಗಳು ಅದರಿಂದಾಗುವ ಅನಾಹುತಗಳು, ದ್ವೇಷ, ಅಸೂಯೆ, ಸಣ್ಣತನ ಇವುಗಳೆಲ್ಲವೂ ಹಣದ ಹಿನ್ನೆಲೆಯಲ್ಲಿ ಉಂಟಾಗುವ ಸಮಸ್ಯೆಗಳಾಗಿ ಕಂಡುಬರುತ್ತದೆ.

ಬೆಂಗಳೂರಿನ ಹೈಗ್ರೌಂಡ್ಸ್ ಪ್ರದೇಶವಾದ ಕೊಳಗೇರಿಯಲ್ಲಿ ವಾಸವಾಗಿದ್ದ ದೇವೀರಿ ಮತ್ತು ಕ್ಯಾತರ ಕಥೆ 'ಅಕ್ಕ' ಕಾದಂಬರಿಯಲ್ಲಿ ಬರುವುದನ್ನು ಕಾಣಬಹುದು. ಹಣ ಮತ್ತು ಅಧಿಕಾರ ಕೌಟುಂಬಿಕ ಸಂಬಂಧಗಳನ್ನು ಕೊಳಗೇರಿಯ ಬದುಕಿನಲ್ಲಿ ತುಂಬಾ ಅದ್ಭುತವಾಗಿ ಕಟ್ಟಿಕೊಟ್ಟಿದ್ದಾರೆ ಲೇಖಕರು. ಕೊಳಗೇರಿಯಲ್ಲಿ ಬಡವರಿದ್ದಾರೆಂದರೆ ಅವರಿಗೆ ಜೀವನ ಸಂತೋಷಗಳೇನೂ ಇರಲಿಲ್ಲವೆಂದಲ್ಲ. ಅಲ್ಲಿಯೂ ನಾಟಕ ಆಡುವುದು ಮದುವೆ, ತಿಥಿ ಮುಂತಾದವನ್ನು ಸಾರ್ವಜನಿಕವಾಗಿ ಸಂಭ್ರಮದಿಂದ ಆಚರಿಸುತ್ತಿದ್ದರು. ಅವರಲ್ಲಿಯೂ ಪರಸ್ಪರ ಸ್ನೇಹ ಪ್ರೀತಿ, ವಿಶ್ವಾಸದ ಆತ್ಮೀಯ ಸಂಬಂಧವಿತ್ತು. ಒಮ್ಮೊಮ್ಮೆ ಮಾರಾಮಾರಿ ಜಗಳವೂ ನಡೆಯುತ್ತಿತ್ತು. ಹೊರಗಿನ ಗೂಂಡಾಗಳು ಬಂದು ಇಲ್ಲಿನವರನ್ನು ಬೆದರಿಸುವುದಿತ್ತು. ಕೊಳಗೇರಿ ಅಂದ್ರೆ ಕ್ಯಾತನ ದೃಷ್ಟಿಯಲ್ಲಿ ನರಕ ಮುಂಗಾರು ಮಳೆ ಏನಾದ್ರೂ ಬಂದ್ರಂತೂ ಕೊಚ್ಚೆ, ಕೊಳೆ, ದುರ್ವಾಸನೆ ಗುಡ್ಲೆಲ್ಲ ನೆಂದು ಸೆಗಣಿ, ಉಚ್ಚೆಗಲೀಜೆಲ್ಲ ಕೊಚ್ಚಿಕೊಂಡು ಹೋಗುತ್ತಿತ್ತು. ಕೊಳಗೇರಿ ಹೀಗೆ ಮನುಷ್ಯ ಲೋಕವೊಂದನ್ನು ತೆರೆದಿಡುತ್ತದೆ.

"ಕೊಳಗೇರಿಯ ಆಚೆಗಿರುವ ಈ ನಾಗರಿಕ ಪ್ರಪಂಚದ ಆಗುಹೋಗುಗಳು ಇಲ್ಲಿನ ಜೀವನ ಕ್ರಮವನ್ನು ಪ್ರಭಾವಿಸುತ್ತವೆ. ಆದರೆ ಇಲ್ಲಿನ ನೋವು, ಹಿಗ್ಗು ಕೊರಗು – ಇದಾವುದರ ಪರಿವೆಯೂ ಇಲ್ಲದೆ ಹೊರಗಣ ಪ್ರಪಂಚ ಬದುಕುತ್ತಿದೆ. ಕ್ಯಾತನಿಗೆ ಆಕಸ್ಮಿಕವಾಗಿ ಅವನ ಅಕ್ಕ ಐವತ್ತು ರೂಪಾಯಿ ನೋಟನ್ನು ಕೊಟ್ಟಾಗ ಅದನ್ನು ಅವನು ಹೇಗೆ ನಿರ್ವಹಿಸಿದನೆಂಬುದರ ಉಪಕಥೆಯೇ ಒಂದು ಅದ್ಭುತ ರೋಚಕ ಪ್ರಸಂಗವಾಗಿ ಕಾದಂಬರಿಯಲ್ಲಿ ನಿರೂಪಣೆಗೊಂಡಿದೆ. ಹಣವೇ ಹೊರಗಿನ ಜಗತ್ತಿನೊಂದಿಗೆ ಕೊಳಗೇರಿಗೆ ಸಂಪರ್ಕ ಕಲ್ಪಿಸುವ ಕೊಂಡಿ ಈ ಐವತ್ತು

೩. ಸಿ. ವೆಂಕಟೇಶ್, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮಸಮಾಜ, ಪುಟ. ೨೮.

ರೂಪಾಯಿಗಳಿಂದಾಗಿ ಅವನಿಗೆ ಕನ್ನಡ ಚಳುವಳಿಗಾರರೊಂದಿಗೆ ಸಂಪರ್ಕ ಬರುತ್ತದೆ. ಈ ಹೋರಾಟಗಾರರ ಪಂಚರಂಗಿ ಪ್ರಪಂಚದ ಅರಿವಾಗುತ್ತದೆ. ಇದೇ ಹಣವನ್ನು ಕದ್ದು ಅದನ್ನು ಕುದುರೆ ಜೂಜಿನ ರಂಗಜೆಟ್ಟಿಗೆ ಕೊಟ್ಟಾಗ ಅವನ ಮೂಲಕ ರೇಸಿನ ಮತ್ತೊಂದು ಸ್ವಾರಸ್ಯಕರ ಜಗತ್ತು ಅವನಿಗೆ ತೆರೆದುಕೊಳ್ಳುವುದು ಇಂತಹ ಹಲವು ಬಿಡಿ ಪ್ರಕರಣಗಳು ಕಾದಂಬರಿಯ ಓದನ್ನು ಉಲ್ಲಾಸದಾಯಕವಾಗಿರುವಂತೆ ನೋಡಿಕೊಳ್ಳುತ್ತವೆ."[೪]

ಇಲ್ಲಿ ಕೊಳಗೇರಿಯ ಮನುಷ್ಯ ಮಾದರಿಗಳನ್ನು ಲಂಕೇಶರು ತುಂಬಾ ಚೆನ್ನಾಗಿ ಕಟ್ಟಿದ್ದಾರೆ. ಅವರ ತಂತ್ರ, ಅಭಿವ್ಯಕ್ತಿ ಇಲ್ಲಿ ಹೊಸತು. ಅಂದರೆ ಕ್ಯಾತ ತನ್ನ ಬದುಕಿನಲ್ಲಿ ನಡೆದ ಘಟನೆಗಳನ್ನು ವರ್ತಮಾನದಲ್ಲಿ ಮಾತನಾಡುತ್ತಾ ಭೂತಕಾಲದ ಬದುಕನ್ನು ದಾಖಲಿಸುವುದು. ವಿಶಿಷ್ಟ ಬಗೆಯದು. ಎರಡನೆಯದಾಗಿ ವರ್ತಮಾನದಲ್ಲಿ ಕಥೆ ಬೆಳೆಸುತ್ತಿರುವ ಕ್ಯಾತ ಭೂತಕಾಲದಲ್ಲಿಯು ತನ್ನ ಕಥೆಯ ನಿವೇದನೆಯಲ್ಲಿ ತಾನು ಹೇಳುವ ವಿವರಗಳೇನಾದರೂ ಅಸ್ಪಷ್ಟ, ಗೊಂದಲ, ವಿಸ್ಮಯಗಳ ಅತಿರೇಕದಂತೆ ಕಂಡರೆ ಯಾರೂ ಅದನ್ನು ನಂಬಬೇಕಿಲ್ಲ. ಏಕೆಂದರೆ ಅದು ಕ್ಯಾತನ ಕಳೆದುಹೋದ ಬದುಕು ಅವನ ಬಾಲ ಬೋಧೆ ಹಾಗೂ ತನ್ನ ತಲೆಯಲ್ಲಿ ಅಳಿದುಳಿದ ಲೆಕ್ಕಾಚಾರಗಳ ತೀವ್ರವಾದ ತುಡಿತ ಒಮ್ಮೊಮ್ಮೆ ಅವನನ್ನು ಹಾಗೆ ಮಾತಾಡಿಸಿದೆ. ಹಾಗಾಗಿ ಓದುಗರು ಅದನ್ನು ಪೂರ್ಣವಾಗಿ ನಂಬಬೇಕಿಲ್ಲ. ಇಲ್ಲಿ ಲೇಖಕರ ಉದ್ದೇಶವೇ ಉದ್ದೇಶಪೂರ್ವಕ ಹಾಗೂ ಪ್ರಜ್ಞಾಪೂರ್ವಕ ಅಂದರೆ ಇಲ್ಲಿನ ಅಭಿವ್ಯಕ್ತಿಯ ವಿಧಾನ ವಸ್ತುವಿನ ವಿನ್ಯಾಸವನ್ನು ಆಧರಿಸಿರುವುದರಿಂದ ಕಥೆಗಿಂತ ನಿರೂಪಣೆಯೇ ದಟ್ಟವಾಗಿ ಆವರಿಸಿದಂತೆ ತರಲಾಗಿದೆ. ಕೊಳಗೇರಿಯನ್ನು ಬಿಟ್ಟು ಮನುಷ್ಯ ಮಾದರಿಗಳು ತೀರಾ ವೈವಿಧ್ಯಮಯವಾಗಿ ಕಾಣುವುದೇ ಕ್ಯಾತನ ಓಡಾಟದಿಂದ ಕಾಲಿಗೆ ಚಕ್ರ ಕಟ್ಟಿಕೊಂಡವನಂತೆ ಒಂದು ಪರಿಸರದಿಂದ ಮತ್ತೊಂದು ಪರಿಸರಕ್ಕೆ ಒಂದು ಮನೆಯಿಂದ ಮತ್ತೊಂದು ಮನೆಗೆ ಜುಗುಪ್ಸೆಗೊಂಡವನಂತೆ ಜಿಗಿಯುತ್ತಾ ಓಡಾಡುವ ಕ್ಯಾತ ತನ್ನೆಲ್ಲಾ ಪರಿಸರವನ್ನೂ ತೆರೆದ ಕಣ್ಣುಗಳಿಂದ ನೋಡುತ್ತಾ ಮನುಷ್ಯಲೋಕದ ಹೊಸ ಅನುಭವಗಳಿಗೆ ತನ್ನನ್ನು ತಾನು ತೆರಕೊಳ್ಳುತ್ತಾನೆ. ಕೆಲವು ಕಡೆ ಭಾವಾತಿರೇಕಗಳನ್ನು ಅನುಭವಿಸುತ್ತಾನೆ. ಪ್ರಖರವಾದ ಜೀವನೋತ್ಸಾಹವನ್ನು ಪ್ರಕಟಿಸುತ್ತಾನೆ.

ಕ್ಯಾತ ಮತ್ತು ದೇವೀರಿಯ ಕೌಟುಂಬಿಕ ಬದುಕು ಒಮ್ಮೊಮ್ಮೆ ಅತಿರೇಕಕ್ಕೂ ಹೋಗುತ್ತಿತ್ತು. ಲೇಖಕರು ಕ್ಯಾತನ ಮೂಲಕ ಇಡೀ ಕೌಟುಂಬಿಕ ಚಿತ್ರಣವನ್ನು ಬಿಚ್ಚಿಡುತ್ತಾರೆ. "ಕ್ಯಾತನಹಟ್ಟಿಯ ಐವತ್ತು ಗುಡಿಸಲುಗಳಲ್ಲಿಯ ಜನರೆಲ್ಲರೂ ಬದುಕುಳಿಯುವ ಹೋರಾಟದಲ್ಲಿ ನಾಗರಾಜ ನಾಯ್ಡುವಿನಂತೆ ಅವಮಾನಕರ ಜೀವನವನ್ನು ನಡೆಸುತ್ತಿರುವುದು ಕ್ಯಾತನಿಗೆ ಗೊತ್ತಿದೆ. ಆದರೂ

೪. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ, ಪುಟ. ೧೧೨.

ಹಟ್ಟಿಯ ಜೀವನವನ್ನೇ ಅವನು ಪ್ರೀತಿಸುತ್ತಾನೆ. ಕ್ರೂರವೆನಿಸುವಷ್ಟು ಒಳ್ಳೆಯತನವನ್ನು ಹೊಂದಿದ ಸಂಪೂರ್ಣಮ್ಮ, ರೇಸಾಡುವುದು ಕೆಟ್ಟದ್ದು ಎನ್ನುತ್ತಲೇ ಕುದುರೆಯ ಬಾಲಕ್ಕೆ ಹಣಕಟ್ಟಿ ಕಳೆದುಕೊಳ್ಳುವ ಅವಳ ಗಂಡ ರಂಗಜೆಟ್ಟಿ ಸಿನಿಮಾದ ಹುಚ್ಚು ಹಿಡಿದ ಶಂಕರನಾರಾಯಣನಂಥ ನೀಚರನ್ನು ಓಲೈಸುವ ಪದ್ದಿ ಇವರ ಜಗತ್ತೇ ಅವನ ಜಗತ್ತು ಇವರೆಲ್ಲರನ್ನು ಅವನು ಪ್ರೀತಿಸುತ್ತಾನೆ. ಹಟ್ಟಿಯ ನಾತಗಳು ಅವನಿಗೆ ಪ್ರೀತಿಯ ವಿಷಯವೇ 'ನಂಗೆ ಆ ನಾತ ಅಂದ್ರೆ ಬಲೆ ಇಷ್ಟ', ಪಾಸ್ಕಲ್‌ನಂತೂ ತನ್ನ ಓಣಿಯ ದುರ್ನಾತದ ಆಚೆಗೆ ತನ್ನನ್ನೊಯ್ದರೆ ತನಗೆ ಮರಣ ಯಾತನೆಯಾಗುತ್ತಿತ್ತು ಎಂದು ಹೇಳುತ್ತಾನೆ. ಇದಕ್ಕೆ ಕಾರಣವೆಂದರೆ ಕ್ಯಾತ ಮತ್ತು ಪಾಸ್ಕಲ್‌ರಿಗೆ ತಮ್ಮದೆನಿಸುವ Sence of belonging ಹುಟ್ಟಿಸುವ ಪರಿಸರವೇ ಈ ಪರಿಸರ"[೫]

ಕಾದಂಬರಿಯಲ್ಲಿ ಅಸಮಾನತೆಯ ವಿರುದ್ಧದ ಧ್ವನಿ ಸೂಕ್ಷ್ಮವಾಗಿ ಕಾಣುತ್ತದೆ. ವರ್ಣಭೇದ ನೀತಿ, ಹಣದ ಮಿತಿ, ಅದು ತಂದುಕೊಡುವ ಸಂತೋಷ ತಂದೊಡ್ಡುವ ಸಮಸ್ಯೆ ದುಃಖ ಸಂಕಟ ಅದರಿಂದ ಪಾರಾಗುವ ಜಾಣ್ಮೆ, ಹಣ ಕಾಣಿಸುವ ಅದ್ಭುತಲೋಕ ಹಣಕ್ಕಿರುವ ಗುಣ ದೌರ್ಬಲ್ಯಗಳು ಹಣದೆದುರು ಮನುಷ್ಯನ ಅಲ್ಪತೆ, ಅಸಹಾಯಕತೆ, ವಸೂಲಿತನ, ದಗಲಬಾಜಿತನ, ಹಾದರ, ಅನ್ಯಾಯ, ಅಪ್ರಾಮಾಣಿಕತೆ ಇವೇ ಮುಂತಾದ ಅಂಶಗಳು ಕಾದಂಬರಿಯಲ್ಲಿ ಹರಡಿಕೊಂಡಿವೆ. ಅಂದರೆ ಹಣ ಮನುಷ್ಯನ ಸಾಮಾಜಿಕ ಬದುಕಿನಲ್ಲಿ ಪ್ರಧಾನವಾಗಿದ್ದು ಮನುಷ್ಯನ ರೀತಿನೀತಿಯನ್ನು ಮೌಲ್ಯಪ್ರಜ್ಞೆಯನ್ನು ನಿರ್ಧರಿಸುವ ಮೂಲಕ ಸಾಮಾಜಿಕ ಸಂಬಂಧಗಳಲ್ಲಿ ಏರ್ಪಡುವ ಬಿಕ್ಕಟ್ಟುಗಳನ್ನು ತೆರೆದಿಡುತ್ತದೆ ಈ ಕಾದಂಬರಿ.

ಲಂಕೇಶರ ಆಲೋಚನೆಯ ಪಾತಳಿಯಲ್ಲಿ ಸಮಕಾಲೀನತೆ ಸ್ಥಾಯಿಯಾಗಿದೆ. ತಮ್ಮ ಜನಾಂಗಕ್ಕೆ ಸಂಬಂಧಿಸಿರದಿದ್ದನ್ನು ತಾವು ಹೇಳುವುದರಲ್ಲಿ ಅರ್ಥವಿಲ್ಲ ಎಂಬ ನಂಬಿಕೆ ಲಂಕೇಶರದು. ಆದ್ದರಿಂದ ಸಮಕಾಲೀನ ಸಮಾಜ ಅವರ ಕೃತಿಗಳ ಪ್ರಧಾನ ಆಶಯ. ಇದರಿಂದಾಗಿ ವ್ಯಕ್ತಿಗತ ದೃಷ್ಟಿಕೋನದಿಂದ ಬರೆಯಲಿ, ಸಮೂಹ ನಿಷ್ಠೆ ದೃಷ್ಟಿಕೋನದಿಂದ ಬರೆಯಲಿ, ಲಂಕೇಶರ ಬರೆವಣಿಗೆಯಲ್ಲಿ ಮನುಷ್ಯ ಬದುಕಿನ ಸ್ಪರ್ಶ ಹಾಗೂ ವ್ಯಕ್ತಿ ಸಮಾಜದ ಸಂಬಂಧಗಳ ಕೇಂದ್ರ ಕಾಳಜಿ ಇದ್ದೇ ಇರುತ್ತದೆ. ಇದು ಲೇಖಕರ ಬೌದ್ಧಿಕ ಸ್ಥರದಲ್ಲಿ ಸೂಕ್ಷ್ಮತೆಗೆ ನಿಲುಕಿದ ನಿಲುವು.

'ಬಿರುಕು' ಕಾದಂಬರಿಯ ಪರಿಸರ ಪ್ರಜ್ಞೆ ಕೌಟುಂಬಿಕ ನೆಲೆಯಲ್ಲಿ ಹಳ್ಳಿಯ ಹುಡುಗನೆಂದು ಕರೆದುಕೊಳ್ಳುವ ಬಸವರಾಜ ತಾನು ಹುಟ್ಟಿ ಬೆಳೆದ ಗ್ರಾಮೀಣ ಪರಿಸರದಿಂದ ಸಂಪೂರ್ಣವಾಗಿ ತಪ್ಪಿಸಿಕೊಂಡಿರುವುದೇ ಇಲ್ಲ. ಅದು ಅವನೊಳಗೆ ಜಾಗ್ರತವಾಗಿಯೇ ಇದ್ದು ನಾಗರಿಕ ಪರಿಸರಕ್ಕೆ ಅವನ ಪ್ರತಿಕ್ರಿಯೆಗಳನ್ನು ನಿಯಂತ್ರಿಸುತ್ತಲೇ ಇರುತ್ತದೆ. ಆದರೆ ಗ್ರಾಮೀಣ

---

೫. ಜಿ.ಎಸ್.ಆಮೂರ, ಕನ್ನಡ ಕಥನಸಾಹಿತ್ಯ : ಕಾದಂಬರಿ, ಪುಟ. ೩೩೧, ೨೦೧೬.

ಚೌಕಟ್ಟಿನೊಡನಿರುವ ಅವನ ಸಂಬಂಧದಲ್ಲಿ ಅವನ ನಾಗರಿಕ ಪರಿಸರಕ್ಕೆ ಹೊಂದಿದ ಸಂಬಂಧಗಳಲ್ಲಿ ಇರುವಂತೆಯೇ ಅವನಿಗೆ ದ್ವಂದ್ವಗಳಿವೆ.

ಬಸವರಾಜ ತನ್ನ ಗುರುಗಳಾದ ಪ್ರೊಫೆಸರ್ ರಂಗಯ್ಯನನ್ನು ಬಯ್ದುಕೊಳ್ಳುವುದು. ಬೆಂಗಳೂರಿನ ನಗರಕ್ಕೆ ಹೊಂದಿಕೊಳ್ಳಲು ಎಣಗಾಡುವುದು. ನಂತರದಲ್ಲಿ ತನ್ನ ತಾಯಿಯ ಆರೋಗ್ಯ ಕೈಕೊಟ್ಟಾಗ ಆತ ಚಡಪಡಿಸೋದು ಕೌಟುಂಬಿಕ ಯಾತನೆಯನ್ನು ಆತನು ಪಡುವ ಚಿತ್ರಣ ತಾಯಿಯನ್ನು ನೆನೆದಾಗ ಹಳೆಯದೆಲ್ಲಾ ನೆನಪಾಗುತ್ತದೆ. "ನನ್ನ ಜೀವನದಲ್ಲಿ ಅದೊಂದೇ ಸಾರ್ ದುಃಖ. ಅವಳಿಗೆ ಬೇಕಾದಾಗ ನಾನು ಹತ್ತಿರ ಇರೋಕಾಗಿಲ್ಲ. ಇಲ್ಲಿಗೆ ಬಂದು ಬಿಡವ್ವ ಅಂದೆ. ಅವಳಿಂದ ಇಲ್ಲಿ ಇರೋಕಾಗಲ್ಲ. ಬೇಸರ ಅಂತ ಚಡಪಡಿಸಿ ಅಳ್ತಿರ್ತಾಳೆ. ನಾನೇನು ಮಾಡ್ಲಿ ಹೇಳಿ. ನನ್ನವ್ವನಿಗೆ ಊರು ಬೇಕು. ನನಗೆ ಅಷ್ಟರಲ್ಲಿ ತೃಪ್ತಿ ಆಗೊಲ್ಲ. ಈಲಿಯೆಟ್ ಹೇಳೋ ಹಾಗೆ Explore ಮಾಡೋಕೆ ನನಗಿಷ್ಟ. ಆದರೆ ಯಾವುದು ಹೆಚ್ಚು ಅಂತ ಹ್ಯಾಗೆ ಹೇಳೋದು? ಒಂದೊಂದು ಸಲ ನಾನು ಓದಿದ್ದೇ ತಪ್ಪು ಅನ್ಸುತ್ತೆ. ನನಗೆ ನನ್ನ ಭಾಷೇನೇ ಮರೆತು ಹೋಗ್ತಿದೆ. ನನ್ನವ್ವ ನನಗಾಗಿ ಎಷ್ಟು ಕಷ್ಟಪಟ್ಳು: ಅದೆಷ್ಟು ಸಲ ಯಾರ್‍ಯಾರನ್ನ ಬೇಡಿ ಹಣ ಕಳಿಸಿದ್ಲೋ. ಇನ್ನೂ ನೆನಪಿದೆ."[೬] ಕೌಟುಂಬಿಕ ನೆಲೆಯಲ್ಲಿ ಬಸವರಾಜ ಬಾಲ್ಯಜೀವನದಲ್ಲಿ ತಾಯಿ ಹಣತಂದ ರೀತಿಯನ್ನು ನೆನೆಸಿಕೊಂಡು ಚಡಪಡಿಸುತ್ತಾನೆ. ನಗರಜೀವನದ ಸಿನಿಕತನ ಗ್ರಾಮೀಣಪರಿಸರದ ಆಪ್ಯಾಯಮಾನತೆ ಇವೆಲ್ಲವೂ ಆತನಿಗೆ ದ್ವಂದ್ವಕ್ಕೆ ಈಡುಮಾಡುತ್ತವೆ. ತನ್ನ ಊರಿನ ವೈಶಿಷ್ಟ್ಯತೆಗಳನ್ನು ತನಗೆ ಇಷ್ಟವಿಲ್ಲದಿದ್ದರೂ ಗ್ರಾಮ್ಯಭಾಷೆಯಲ್ಲಿ ವರ್ಣಿಸುವ ಈತ ಎಂದೂ ಯಾರನ್ನು ನಂಬಲಾರ ಏಕೆಂದರೆ ತನ್ನ ಸುತ್ತಲಿನ ಎಲ್ಲರೂ ಆಧುನಿಕ ಸಮಾಜ ಸೃಷ್ಟಿಸಿದ ವಿಕೃತರೂಪಗಳಾಗಿ ಕಾಣುತ್ತಾರೆ. ಹಣ, ಪ್ರಭಾವ, ಸಾಂಸ್ಕೃತಿಕ ಚಟುವಟಿಕೆಗಳು, ಸಾಮಾಜಿಕ ಪ್ರತಿಷ್ಠೆಗಳು ಇಂತಹವುಗಳ ನಡುವೆ ಬದುಕಲಾರದೆ ಒದ್ದಾಡುತ್ತಾನೆ.

ಹಣ ಮತ್ತು ಅಧಿಕಾರ ಕೌಟುಂಬಿಕ ಸಂಬಂಧಗಳನ್ನು ಲಂಕೇಶರ ಕಥೆಗಳಲ್ಲಿ ನೋಡಬಹುದು. ಸ್ವಾತಂತ್ರ್ಯೋತ್ತರ ಭಾರತದ ಬದಲಾಗುತ್ತಿರುವ ಗ್ರಾಮಸಮಾಜದಲ್ಲಿ ಸಾಂಪ್ರದಾಯಕ ಮೌಲ್ಯಪ್ರಜ್ಞೆಯತ್ತ ದೃಷ್ಟಿ ಇದೆ. ತಲತಲಾಂತರದಿಂದ ಬಂದಿರುವ ಜಾತಿ–ವರ್ಗಗಳ ಅಸಮಾನತೆಗಳು ಭಿನ್ನರೀತಿಯ ಮೌಲ್ಯಪ್ರಜ್ಞೆಯ ಘರ್ಷಣೆಯಿಂದಾಗಿ ಉಂಟುಮಾಡುವ ಹಿಂಸೆಗಳು ಇವರ ಕಥೆಗಳಲ್ಲಿ ಅನಾವರಣಗೊಂಡಿವೆ. ಈ ಎಲ್ಲಾ ಪಲ್ಲಟಗಳ ನಡುವೆಯೇ ಹಳ್ಳಿಯನ್ನು ಆಕ್ರಮಿಸುತ್ತಿರುವ ಹೊಸ ಮನೋಧರ್ಮಗಳು ಹುಟ್ಟುಹಾಕುತ್ತಿರುವ ಸಂಘರ್ಷದ ಅಶಾಂತಿಯ ಸಂಕ್ರಮಣ ಸ್ಥಿತಿಯ ಗ್ರಾಮ ಪ್ರಜ್ಞೆಯಿಂದಾಗಿ, ಸೃಷ್ಟಿಯಾಗುವ ತಲ್ಲಣಗಳು ಹಾಗೂ ಆಘಾತಕಾರಿ ಬದಲಾವಣೆಗಳು 'ಒಬ್ಬಂಟಿ' ಕತೆಯಲ್ಲಿ ಕಾಣಬಹುದಾಗಿದೆ.

---

೬. ಸಿ.ವೆಂಕಟೇಶ್, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮಸಮಾಜ, ಪುಟ. ೨೪.

ಗ್ರಹಿಕೆಗೆ ಸಿಗಲಾರದಷ್ಟು ಗೊಂದಲಕ್ಕೆ ಒಳಗಾಗಿರುವ ಗ್ರಾಮಮೌಲ್ಯಗಳಿಗೆ ಸಾಕ್ಷಿಯಾಗಿ ಅವಿದ್ಯಾವಂತ ಮಂಜಣ್ಣ ಹಾಗೂ ಆತನ ಮಗ ವಿದ್ಯಾವಂತ ಶಿವಲಿಂಗ ಚಿತ್ರಿತಗೊಂಡಿದ್ದಾರೆ. ಪ್ರಾಂಸರಿ ನೋಟಿನ ಅಗತ್ಯವಿಲ್ಲದೆ ಹಣಕೊಟ್ಟ ಮೇಲ್ಜಾತಿಯ ಅವಿದ್ಯಾವಂತ ಲೋಕಜ್ಞಾನ ಅರಿಯದ ಮಂಜಣ್ಣ ಹಾಗೂ ಜಾತಿಯ ಆಧಾರದಿಂದಲೇ ಅಧಿಕಾರ ಪಡೆದುಕೊಂಡ ಮಂಜಣ್ಣನಿಂದ ಹಣ ಪಡೆದ ಭಜ್ಯ ಇಬ್ಬರೂ ಗ್ರಾಮದ ಜನರ ಮುಂದೆ ಪ್ರಯಾಣ ಮಾಡುತ್ತಾರೆ.

"ಶುಕ್ರವಾರ ರಾತ್ರಿ ಭಜ್ಯನಂಥ ಪುಟಗೋಸಿ ಬಡ್ಡಿಮಗ ತಾನು ಕೊಟ್ಟ ಐನೂರು ರೂಪಾಯಿಗಳನ್ನು ಕೊಟ್ಟೇ ಇಲ್ಲ ಎಂದು ಹೇಳಿದ್ದು ತಾಂಡದ ಒಂದು ಪಿಳ್ಳೆ ಕೂಡ ತನ್ನ ಪರವಾಗಿ ಮಾತಾಡದೆ ಹೋದದ್ದು. ಭಜ್ಯನ ದವಡೆಗೆ ಹೊಡೆಯಲು ಎತ್ತಿದ ಕೈಯನ್ನು ಹತ್ತು ಜನ ಮುಂದೆ ನುಗ್ಗಿ ಹಿಡಿದುಕೊಂಡು ತನ್ನನ್ನು ಕುತ್ತಿಗೆಗೆ ಕೈಹಾಕಿ ತಾಂಡದಿಂದ ಹೊರಕ್ಕೆ ನೂಕಿದ್ದು ಎಲ್ಲವೂ ಆಗತಾನೆ ನಡೆದಹಾಗೆ ತೋರಿತು. ಮನುಷ್ಯ ಕೆಟ್ಟುಹೋದ. ಕಾಲ ಕೆಟ್ಟುಹೋಯಿತು. ಹಣ ಇಸಿದುಕೊಂಡು ಹೋಗುವಾಗ ಹೇಗೆ ನಾಯಿಯ ಹಾಗಿದ್ದ! ಅದೇ ಭಜ್ಯ ಧಿಮಾಕಿನಿಂದ ಹೇಗೆ ಸೆಟೆದು ನಿಂತ! 'ಪ್ರಾಂಸರಿ ಬೇಕಾದ್ರೆ ಬರಕೊಡ್ತೇನೆ ದೇವ್ರೂ' ಅಂದಿದ್ದ. ಭಜ್ಯನಿಗೂ 'ನೀವು ಕೊಟ್ಟಿದ್ರೆ ದಾವಾಹಾಕ್ಕೊಳ್ರಿ' ಅನ್ನುತ್ತಿರುವ ಭಜ್ಯನಿಗೂ ಎಷ್ಟು ವ್ಯತ್ಯಾಸ! ತನಗೂ ನಾಲ್ಕಕ್ಷರ ಬಂದಿದ್ದರೆ ಸಣ್ಣಪುಟ್ಟ ಕೆಲಸಕ್ಕೆಲ್ಲ ಪುಡಾರಿ ರಾಮಣ್ಣನ ಹತ್ತಿರಹೋಗುವ ಪ್ರಮೇಯವೂ, ದಾಖಲೆಯಿಲ್ಲದೆ ದುಡ್ಡುಕೊಡುವ ಅಪಾಯವೂ ಇರುತ್ತಿರಲಿಲ್ಲ. ಅನ್ನಿಸಿತು. ಆದರೆ ಅದಕ್ಕಿಂತ ಹೆಚ್ಚಾಗಿ ಮಂಜಣ್ಣನ ಮರ್ಯಾದೆ ಹೋಗಿತ್ತು. ತಾಂಡದ ಕೀಳು ಜನರೆದುರು ಅವಮಾನವಾಗಿತ್ತು. ಭಜ್ಯ ತನ್ನನ್ನು ಸುತ್ತುವರಿದ ನಾಯಿಗಳ ಗುಂಪಿಗೆ ಸೇರಿದ್ದ"[೭] ಇಲ್ಲಿ ಮಂಜಣ್ಣನ ವಿರುದ್ಧ ಕೇವಲ ಅವರ ಗ್ರಾಮ ಮಾತ್ರವಲ್ಲದೇ ಮಗ ಶಿವಲಿಂಗನೂ ಅಪ್ಪನ ಇಚ್ಛೆಗೆ ವಿರುದ್ಧವಾಗಿ ವರ್ತಿಸುತ್ತಾನೆ. ಮಗ ಶಿವಲಿಂಗನಿಗೆ ಅಪ್ರಮಾಣಿಕತೆ ಹಾಗೂ ಅವ್ಯವಹಾರ ನಡೆಸುವ ಆಧುನಿಕ ವ್ಯವಸ್ಥೆ ನೌಕರಿ ಒದಗಿಸಿಕೊಡುವುದು ನಾಗರಿಕತೆಯ ಯಶಸ್ಸು ನೈತಿಕ ಪ್ರಜ್ಞೆಯೇ ತನ್ನ ಬದುಕು ಪ್ರಸಿದ್ಧ ಎಂದು ಅರ್ಥೈಸಿಕೊಳ್ಳಲಾಗದ ಜಗತ್ತನ್ನು ಮಂಜಣ್ಣ ಪ್ರತಿನಿಧಿಸುತ್ತಾನೆ. ನಮ್ಮ ಸಾಮಾಜಿಕ ಸಂದರ್ಭಗಳಲ್ಲಿ ಹಣ ಉಳ್ಳವನಬಳಿ ಹಣವಿಲ್ಲದವನು ಕೇಳಿ ಪಡೆದುಕೊಂಡು ಹಿಂತಿರುಗಿಸುವುದು ರೂಢಿ. ಆದರೆ ಲಂಕೇಶರು ಚಿತ್ರಿಸಿರುವ ಕಥೆಯಲ್ಲಿ ಹಣ ಪಡೆದು ಹಿಂತಿರುಗಿಸದ ವ್ಯಕ್ತಿಗಳೇ ಪಾತ್ರಗಳಾಗುತ್ತಾರೆ. ಸಮಾಜ ಕೂಡ ಬದಲಾದ ಸನ್ನಿವೇಶದಲ್ಲಿ ಆವರೆಗಿನ ನಿಲುವಿಗಿಂತ ಭಿನ್ನವಾದ ನಿಲುವನ್ನೇ ಪ್ರತಿನಿಧಿಸುವುದನ್ನು 'ಒಬ್ಬಂಟಿ' ಕಥೆಯಲ್ಲಿ ನೋಡಬಹುದು.

---

೭. ಸಿ.ವೆಂಕಟೇಶ್, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮಸಮಾಜ, ಪುಟ. ೨೪.

'ಕುರುಡು ಕಾಂಚಾಣ' ಕಥೆ ಓರ್ವ ಉದಾರವಾದಿ, ಆದರ್ಶವಾದಿ ಕಾಲೇಜು ಪ್ರಾಧ್ಯಾಪಕನ ಉತ್ತಮಪುರುಷ ನಿರೂಪಣೆಯಲ್ಲಿದೆ. ಉದ್ದಾಮ ಓದುಗನಾದ ಇವನು ಓರ್ವ ವಿಮರ್ಶಕನು ಹೌದು ಇವನು ಮೈಲಿ ಮುಖದ ಸ್ವಭಾವತಃ ಮೌನಿಯಾದ ಕ್ಷೌರಿಕನೊಬ್ಬ ಗಿರಾಕಿ ಮಾತಿನ ಮೂಲಕ ಸಲಿಗೆ ಬೆಳೆಸಿ ಗಿರಾಕಿಗಳನ್ನು ತನ್ನತ್ತ ಸೆಳೆಯದ, ಗಿರಾಕಿಗಳ ಕ್ಷಣಿಕ ಸ್ನೇಹಕ್ಕಾಗಿ ಹಂಬಲಿಸದ ಇವರೊಂದಿಗೆ ತನಗೆ ವಿಚಿತ್ರರೀತಿಯ ಆತ್ಮೀಯತೆ ಬೆಳೆದಿತ್ತೆಂದು ನಿರೂಪಕ ಮೆಚ್ಚುಗೆಯಿಂದ ಹೇಳುತ್ತಾನೆ. ವರುಷಗಟ್ಟಲೆ ತನ್ನ ಅವನ ನಡುವಿನ ಮೌನಮುರಿದಿರಲಿಲ್ಲ. ತಿಂಗಳೊಂದರ ಒಂದನೆಯ ತಾರೀಖಿನಂದು ಅನಿರೀಕ್ಷಿತವಾಗಿ ಆ ಕ್ಷೌರಿಕನು ನಿರೂಪಕನ ಮನೆಗೆ ಬರುತ್ತಾನೆ. ನಿರೂಪಕನಿಗೆ ಎಷ್ಟು ಆಶ್ಚರ್ಯವಾಗುತ್ತದೆ ಎಂದರೆ ಅವನು ಕ್ಷೌರಿಕನ ನಮಸ್ಕಾರಕ್ಕೆ ಪ್ರತಿನಮಸ್ಕಾರವನ್ನು ಮಾಡುವುದಿಲ್ಲ. ಕತ್ತಿ, ಕತ್ತರಿ ಹಿಡಿದಾಗ ಮಾತ್ರ ಅವನನ್ನು ನೋಡಿದ್ದ ನನಗೆ ಅವನ ಸಿವಿಲಿಯನ್ ನಮಸ್ಕಾರ ಎಡವಟ್ಟಾಗಿ ಕಂಡಿತು. ತನ್ನ ತಾಯಿ ತೀರಿಕೊಂಡುದಾಗಿಯೂ ಹೆಣ ಹಾಗೆಯೇ ಬಿದ್ದುಕೊಂಡಿರುವುದಾಗಿಯೂ ತನಗೆ ಹದಿನೈದು ರೂಪಾಯಿ ಬೇಕಿತ್ತು ಎಂದು ಕ್ಷೌರಿಕ ಹೇಳುತ್ತಾನೆ. ನಿರೂಪಕ ಈ ರೀತಿ ಪ್ರತಿಕ್ರಿಯಿಸುತ್ತಾನೆ. "ಸಾಧಾರಣವಾಗಿ ನಾನು ಭಾವನೆಗಳನ್ನು ತೋರುವ ಮನುಷ್ಯನಲ್ಲ. ಸಣ್ಣ ಕಾರಣಕ್ಕಾಗಿ ಗೋಳೋ ಎಂದು ಅಳುವ ಜನ ನನಗೆ ಶತ್ರುಗಳ ಹಾಗೆ. ಈಗ ಕೂಡ ಮಾತಿನಲ್ಲೂ ಬದಲಾವಣೆ ತೋರದಿರಲು ಯತ್ನಿಸಿದೆ. ಅವನ ಒಣಗಿದ ಕೂದಲು ನನ್ನನ್ನು ನೋಡುತ್ತಿದ್ದ ಕಣ್ಣು ಹೆಗಲ ಮೇಲಿದ್ದ ಟವಲು ಕಾಲುಗಳನ್ನು ಬಳಸಿದ್ದ ಕೆಂಪು ಪಂಚೆಯನ್ನು ಗಮನಿಸಿ ನಿನ್ನೆಯ ಅವನ ಮಾತುಗಳನ್ನು ನೆನೆಸಿಕೊಂಡೆ ಅವನು ಅಂದ 'ಹೆಣ ಹಂಗೆ ಬಿದ್ದಿದೆ ಸಾರ್ ಒಂದು ಹದಿನೈದು ರೂಪಾಯಿ ಬೇಕಿತ್ತು'.

ನನ್ನ ಗಂಭೀರ ಪ್ರಕೃತಿಯ ಬಗ್ಗೆ ನನಗೆ ಹೆಮ್ಮೆ, ಸ್ವಲ್ಪವೂ ಉದ್ರೇಕಗೊಳ್ಳದೇ ಹೇಳಿದೆ, ಸಂಬಳ ತಗೊಂಡಿಲ್ಲಪ್ಪ ಮದ್ಯಾಹ್ನ ಬಾ ಸರಿಯ?"[೮] ಪರಸ್ಪರ ಯಾವ ನಿರೀಕ್ಷೆಗಳು ಇಲ್ಲದೆ ನನ್ನ ಪಾಲಿಗೆ ಅವನು ಯಂತ್ರ ಅವನ ಪಾಲಿಗೆ ನಾನು ಯಂತ್ರವಾಗಿದ್ದೆ. ಅದಕ್ಕಾಗಿಯೇ ಒಂದು ವಿಚಿತ್ರ ರೀತಿಯ ಆತ್ಮೀಯತೆ ಬೆಳೆದಿದ್ದ ಸಂಬಂಧದಲ್ಲಿ ಈಗ ಹಣದ ಪ್ರವೇಶವಾಗುತ್ತದೆ. ಹಿಂದಿನ ದಿನವಿಡೀ ತನ್ನೊಡನೆ ಕೂತು ತಿಂಗಳ ಬಜೆಟ್ ತಯಾರಿಸಿದ್ದ ತನ್ನ ಹೆಂಡತಿ ಪಾರ್ವತಿಗೆ ಕ್ಷೌರಿಕನು ಕೋರಿಕೆಯನ್ನು ತಿಳಿಸುವ ಪ್ರಕ್ರಿಯೆಯಲ್ಲೇ ಕಾಂಚಾಣದ ಪ್ರಸ್ತಾಪವು ನಿರೂಪಕನನ್ನು ವಿಚಲಿತಗೊಳಿಸಿದ ಮೊದಲ ಸೂಚನೆ ಕಾಣಸಿಗುತ್ತದೆ. "ಪಾರ್ವತಿ, ನೀನು ಏನಂತೀ ಅನ್ನೋದು ನನಗ್ಗೊತ್ತು. ಇದ್ದರೆ ಆ ಕ್ಷೌರದವನಿದ್ದಾನಲ್ಲ ಅವನಿಗೆ ಹತ್ತುರೂಪಾಯಿ ಕೊಡಲೇಬೇಕು. ಬೇಡ ಅಂದರೆ ನಿನ್ನಾಣೆ, ಎಂದು ಕಾರಣ ವಿವರಿಸಿದೆ. ಪಾರ್ವತಿಯನ್ನು

---

೮. ಪಿ. ಲಂಕೇಶ್, ಸಮಗ್ರ ಕಥೆಗಳು, ಪುಟ. ೬–೭.

ನೋಡಿದೊಡನೆ ಹದಿನೈದು ರೂಪಾಯಿಗೆ ಮಾತು ಕೊಟ್ಟದ್ದು ಹತ್ತಕ್ಕೆ ಇಳಿದಿದ್ದು ಕಂಡು ಸಂಕೋಚವಾಯಿತು. ಯಾರೋ ಒಬ್ಬ ನಿಷ್ಪ್ರಯೋಜಕ ದಾರಿಹೋಕ ಹಜಾಮನಿಗಾಗಿ ಸುಳ್ಳನ್ನೇಕೆ ಹೇಳುವುದು ಎಂದುಕೊಂಡು ಬಲಾತ್ಕಾರದಿಂದ 'ಹತ್ತಲ್ಲ ಹದಿನೈದು ರೂಪಾಯಿ' ಅಂದೆ"[೯] ಈ ಹಂತದಲ್ಲಿ ನಿರೂಪಕನನ್ನು ಒಂದು ಬಗೆಯ ಪ್ರಾಪಪ್ರಜ್ಞೆ ಪ್ರವೇಶಿಸಿದ ಹಾಗೆ ಕಾಣುತ್ತದೆ.

ಮುಂದೆ ನಿರೂಪಕನು ತನ್ನ ವರ್ತನೆಯನ್ನು ತನಗೇ ಸಮರ್ಥಿಸಿಕೊಳ್ಳತೊಡಗುತ್ತಾನೆ. ಐದು ರೂಪಾಯಿಯೇನು ಬಿಟ್ಟಿಬರುತ್ತದೆಯೇ ಎಂದು ತನ್ನನ್ನು ತಾನೇ ಕೇಳಿಕೊಳ್ಳುತ್ತಾನೆ ತಾಯಿಯ ಶವಸಂಸ್ಕಾರಕ್ಕೂ ಹಣ ಉಳಿಸಿರದ ಕ್ಷೌರಿಕನ ಬೇಜವಾಬ್ದಾರಿತನವನ್ನು ಕಂಡು ಸಿಟ್ಟೇ ಬರುತ್ತದೆ. ಸಂಜೆ ಗೇಟಿನ ಸಪ್ಪಳ ಕೇಳಿದೊಡನೆ ಹೆಂಡತಿಯನ್ನು ಪಿಸಪಿಸನೆ ಕರೆದು ನೋಡು ಆ ಹಜಾಮ ಬಂದಿದಾನೆ ಅಂತ ಕಾಣುತ್ತೆ ನಾನು ಮನೇಲಿಲ್ಲ ಎಂದು ಹೇಳಿಬಿಡು ಅನ್ನುತ್ತಾನೆ. ಆ ಗಳಿಗೆಯಲ್ಲಿ ತನ್ನ ಹೆಂಡತಿಗೋ ತನ್ನನ್ನು ಕಂಡು ಜುಗುಪ್ಸೆಯಾಗಿರಬೇಕು ಎಂದು ಅವನಿಗೆ ಅನ್ನಿಸಿಬಿಡುತ್ತದೆ. ತಾನು ಕಳ್ಳನ ಹಾಗೆ ವರ್ತಿಸಿದ್ದನ್ನು ಅರಿತು ತನ್ನ ಬಗ್ಗೆ ತಾನೇ ಅಸಹ್ಯಪಟ್ಟುಕೊಳ್ಳುತ್ತಾನೆ. ಸಂಸಾರದ ಸೌಖ್ಯ ಯಾವನೋ ಕಂಡರಿಯದ ಭಿಕಾರಿಯಿಂದ ನುಚ್ಚುನೂರಾಗುವುದು ಬೇಡ ನನ್ನ ಔದಾರ್ಯ ಮನೆಯ ಪರಿಮಿತಿಯಲ್ಲೇ ಶ್ರೀಮಂತವಾಗಿದ್ದರೆ ಸಾಕು ಎಂದೆಲ್ಲಾ ತನ್ನನು ತಾನೇ ವಂಚಿಸಿಕೊಂಡದ್ದರ ಬಗ್ಗೆ ಹೇಸಿಕೊಳ್ಳುತ್ತಾನೆ ಮತ್ತೆ ಆ ಕ್ಷೌರಿಕನಿಗೆ ಮುಖ ತೋರಿಸುವುದಕ್ಕೂ ನಾಚಿಕೆ ಹೆದರಿಕೆಯಾಗುತ್ತದೆ. ಬೇರೆ ಸೆಲೂನಿಗೆ ಹೋದರೆ ಅದು ಇನ್ನೊಂದು ತೆರನಾದ ಮೋಸ ಅನ್ನಿಸಿ ಕಸಿವಿಸಿಯಾಗುತ್ತದೆ. ಅವನಿಗೆ ನಿಜಕ್ಕೂ ತನ್ನ ಸಹಾಯ ಬೇಕಿದ್ದಿರಬಹುದು ಎಂಬ ಸಾಧ್ಯತೆಯೂ ನಿರೂಪಕನಲ್ಲಿ ಅಪಾರವಾದ ಪಾಪಪ್ರಜ್ಞೆಯನ್ನು ಉಂಟುಮಾಡುತ್ತದೆ. ಹಾಗಾಗಿ ಅವನ ಉತ್ತಮ ಪುರುಷ ನಿರೂಪಣೆಯ ಒಂದು ರೀತಿಯಲ್ಲಿ ಅವನ ಪಾಪನಿವೇದನೆಯೇ ಆಗಿಬಿಡುತ್ತದೆ. ಈ ತಪ್ಪೊಪ್ಪಿಗೆಯಲ್ಲಿ ಅವನು ತನ್ನ ವ್ಯಕ್ತಿತ್ವದ ನಿಜಕ್ಕೆ ತಾನೇ ಮುಖಾಮುಖಿಯಾಗುತ್ತಾನೆ. ತನ್ನ ಬಹಿರಂಗಕ್ಕೂ ಅಂತರಂಗಕ್ಕೂ ಇರುವ ಕಂದಕದ ಸ್ವರೂಪವನ್ನು ಅರಿಯುತ್ತಾನೆ. ಅರಿವು ಮತ್ತು ಇರವಿನ ನಡುವಣ ಇಕ್ಕಟ್ಟು ಬಿಕ್ಕಟುಗಳ ಸಾಕ್ಷಾತ್ಕಾರವೊಂದು ತನ್ನ ವೈಯಕ್ತಿಕ ಅನುಭವದ ಅಧಿಕೃತ ಸ್ಥಿತಿಯಲ್ಲೇ ಅವನಿಗೆ ಆಗಿಬಿಡುತ್ತದೆ. ತನ್ನ ಘೋಷಿತ ಆದರ್ಶಗಳಿಗೂ ವಾಸ್ತವದ ವರ್ತನೆಗಳಿಗೂ ಇರುವ ಅಂತರದಲ್ಲಿ ತನ್ನ ವ್ಯಕ್ತಿಸತ್ಯವನ್ನು ತನ್ನಲ್ಲಿ ತಾನೆ ಕಂಡುಕೊಳ್ಳುತ್ತಾನೆ. ಹಣ ಮತ್ತು ಅಧಿಕಾರ ಕೌಟುಂಬಿಕ ನೆಲೆಯಲ್ಲಿ ನಿಯಂತ್ರಣಕ್ಕೆ ಒಳಗುಮಾಡುವಲ್ಲಿ ಹಣಕೊಡಲು ಸಾಧ್ಯವಾಗದೇ ಇರುವ ಸ್ಥಿತಿಯನ್ನು ಕಾಣಬಹುದು.

---

೯. ಪಿ. ಲಂಕೇಶ್, ಸಮಗ್ರ ಕಥೆಗಳು, ಪುಟ. ೮.

ತನ್ನ ವ್ಯಕ್ತಿತ್ವದ ನಿಜಗಳನ್ನು ತಾನೇ ಮುಖಾಮುಖಿಯಾಗುವ ಪ್ರಕ್ರಿಯೆಯಲ್ಲಿ ಭಾಗವಹಿಸಿದ ಅನುಭವವಾಗುತ್ತದೆ. ಅಂದರೆ ನಿರೂಪಕನ ವರ್ತನೆಯ ಬಗ್ಗೆ ತೀರ್ಪುಕೊಡುವ ಚಪಲಹುಟ್ಟಿದೆ. ಅವನು ನಾನೇ ಅಥವಾ ನಾನೂ ಅವನಾಗಬಹುದಿತ್ತು ಎಂಬ ಸಾಧ್ಯತೆ ಹೊಳೆದುಬಿಡುತ್ತದೆ. 'ಕುರುಡುಕಾಂಚಾಣ'ದ ನಾನು ಸಾಧಾರಣೀಕರಣಗೊಳ್ಳುವ ಬಗೆ ಇದು. ತೀರಾ ವೈಯಕ್ತಿಕವಾದ ಸಂಗತಿ ಒಂದು ಮೂಲಭೂತ ಮನುಷ್ಯವರ್ತನೆಯನ್ನೇ ಸೂಚಿಸಿಬಿಡುವ ಒಂದು ಸೃಜನಶೀಲಕ್ರಮ ಇದು. ಸಾಧಾರಣೀಕೃತ ಸತ್ಯಗಳನ್ನು ಗ್ರಹೀತವಾಗಿ ಪಡೆಯುವ ಮಾರ್ಗಕ್ಕೆ ಬದಲಾಗಿ ಅಧಿಕೃತ ಅನುಭವದ ಸದ್ಯೋಜಾತ ಸ್ಥಿತಿಯಲ್ಲಿ ಸತ್ಯವನ್ನು ಸ್ವತಃ ಕಾಣಬಯಸಿದ ನವ್ಯಮಾರ್ಗದ ಆರಂಭಕಾಲದ ಬರವಣಿಗೆ ಇದು. ಮನುಷ್ಯ ಸ್ವಭಾವ ಮತ್ತು ಸಂಬಂಧಗಳ ಸ್ವರೂಪವನ್ನು ಹೊರಗಿನಿಂದ ಅವಲೋಕಿಸ ಹೊರಟಾಗ ಸತ್ಯದರ್ಶನ ಎಷ್ಟೇ ತೀವ್ರವಾಗಿದ್ದರೂ ಅದು ಬೇರೆಯವರ ಬದುಕಿನ ಸತ್ಯ. ನಾನು ಅದಕ್ಕೆ ಹೊರತಾದವನು ಎಂಬ ಸುರಕ್ಷಿತ ಭಾವವೊಂದನ್ನು ಓದುಗ ತನ್ನ ಸುತ್ತ ಕೋಟೆಯಂತೆ ಕಟ್ಟಿಕೊಳ್ಳುವ ಸಾಧ್ಯತೆಯೊಂದು ಯಾವಾಗಲೂ ಇರುತ್ತದೆ. ಅನುಭವವೊಂದರಲ್ಲಿ ನಾವೇ ಭಾಗಿಯಾಗುವಂಥ ಬರವಣಿಗೆಯ ಕ್ರಮವು ಇಂಥ ಸುರಕ್ಷಿತ ಭಾವವನ್ನು ನಮಗೆ ಕೊಡದೆ ಸತ್ಯಾನ್ವೇಷಣೆಯಲ್ಲಿ ಓದುಗರನ್ನು ಪಾಲುದಾರರನ್ನಾಗಿ ಮಾಡಿಬಿಡುತ್ತದೆ. ಲಂಕೇಶರ ಕುರುಡು ಕಾಂಚಾಣ ಇಂಥ ಒಂದು ಶೋಧಿತ ನೆಲೆಯಲ್ಲಿ ತನ್ನ ಚಿಂತನೆಯನ್ನು ಹೊರಹೊಮ್ಮಿಸುತ್ತದೆ.

'ನಮ್ಮ ನಡುವಿನ ಹುಡುಗ' ಕಥೆಯಲ್ಲಿನ ದಂಪತಿಗಳ ಮನೆಗೆಲಸಕ್ಕೆ ನೇಮಿಸಿಕೊಂಡಿದ್ದ ಬಡಹುಡುಗ ಅವರ ನಡುವೆಯಿದ್ದಾನೆ. ಈ ಹುಡುಗನ ಕಾರಣಕ್ಕೆ ಗಂಡಹೆಂಡಿರ ಸಂಬಂಧದಲ್ಲಿ ವಿರಸವುಂಟಾಗುವುದು. ಇಲ್ಲಿ ತಿಮ್ಮಿ ತನ್ನ ಮಗನಾದ ಮರುಳನನ್ನು ನಿರೂಪಕನ ಮನೆಗೆ ಕರೆದುಕೊಂಡು ಬಂದು ಇವನಿಗೆ ಕೆಲಸ ಮತ್ತು ಪಾಠ ಹೇಳಿಕೊಡಿ ಎಂದು ಒತ್ತಾಯಪಡಿಸಿದ್ದಳು. ನಿರೂಪಕರ ಹೆಂಡತಿಗೆ ಮರುಳ ಓದಲಿ ಆದರೆ ತಮ್ಮ ಮನೆಯಲ್ಲೇ ಉಳಿಯುವುದು ಬೇಡ ಎಂದಿದ್ದಳು. "ತನ್ನ ಹೆಂಡತಿಯ ಮಾತುಗಳನ್ನು ಆಕೆಯ(ತಿಮ್ಮಿ) ಮುಂದಿಟ್ಟ, ಪಾಪದ ಬಡವಿ ಮನೆಯಲ್ಲಿ ಅನ್ನವಿಲ್ಲದೆ, ಹಣವಿಲ್ಲದೆ ಯಾವುದೋ ಆಫೀಸಿನಲ್ಲಿ ಜವಾನಿಕೆ ಮಾಡುವ ಗಂಡನನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವಿಲ್ಲದೆ, ಊರಗಲ ಬಾಯಿಮಾಡಿ ಬೊಬ್ಬೆ ಹೊಡೆಯುವ ಆಕೆಗೆ ಹಟ್ಟಿಯ ಜನ ಇಟ್ಟ ಹೆಸರು ಹುಚ್ಚುತಿಮ್ಮಿ, ಆಕೆ ಹೇಳಿದಳು ನೀವು ಸಂಬಳ ಕೊಡೋದು ಬೇಡ ಕಣ್ರೀ 'ಅವನಿಗೆಲ್ಡು ಅಕ್ಷರ ಕೊಡ್ಸಿ' ತಲೆಯಲ್ಲಿ ನಿಲ್ಲಲಾರದೆ ಹಣೆಯ ಮೇಲೆ ಇಳಿದುಬೀಳುವ ಕೂದಲುಗಳನ್ನು ಮೇಲಕ್ಕೆ ಒತ್ತರಿಸಿ ಹಾಗೆನ್ನುವಾಗ ಆಕೆಯ ಕಣ್ಣಲ್ಲಿ ದೈನ್ಯ ಮನೆಮಾಡಿತ್ತು".[೧೦] ನಿರೂಪಕನಿಗೆ ಮರುಳ ಮನೆಯಲ್ಲಿ ಉಳಿಯುವುದು ಬೇಡ ಎಂದಾಗ

---

೧೦. ಪಿ. ಲಂಕೇಶ್, ಸಮಗ್ರ ಕಥೆಗಳು, ಪುಟ. ೩೫.

ಲೀಲಾಳ ಮಾತು ಕೇಳಿ ಬೇಸರವಾಯಿತು. ಇತ್ತ ತಿಮ್ಮಿಯ ಒತ್ತಡ ನಿರೂಪಕರಿಗೆ ಹೆಚ್ಚಾಯಿತು. ಮರುಳನಿಗೆ ಸಂಬಳ ಕೊಡಬೇಡಿ ಅಕ್ಷರ ಕಲಿಸಿ ಸಾಕು ಎನ್ನುವ ತಿಮ್ಮಿಯ ಅಸಹಾಯಕತೆಯಲ್ಲಿನ ಕೌಟುಂಬಿಕ ಬದುಕು ಎದ್ದುಕಾಣುತ್ತಿತ್ತು.

ನಿರೂಪಕರು ಲೀಲಾಳ ಆತ್ಮಾಭಿಮಾನಕ್ಕೆ ನೋವಾಗುವಂತೆ ಮಾತಾಡಿದ್ದರು. ಲೀಲಾ ತನ್ನ ಮನಸ್ಸು ಬದಲಾಯಿಸಿ ಮರುಳನನ್ನು ಶಾಲೆಗೆ ಕಳುಹಿಸಲು ಒಪ್ಪಿದ್ದಳು. ನಿರೂಪಕನ ಉದ್ದೇಶ ಹುಡುಗನನ್ನು ಚೆನ್ನಾಗಿ ನೋಡಿಕೊಂಡು ಅಕ್ಷರ ಕಲಿಸಿ ಉದ್ಧಾರ ಮಾಡಬೇಕೆಂಬ ಗಂಡನ ಸದುದ್ದೇಶ ಹೆಂಡತಿಗೆ ಒಪ್ಪಿಗೆಯಾಗುವುದಿಲ್ಲ. ಉಢಾಳನಂತೆ ಅಲೆಯುವುದರಲ್ಲಿಯೇ ಸಂತೋಷವಾಗಿರುವ ಹುಡುಗನಿಗೂ ಅಕ್ಷರ ಕಲಿತು ವಿದ್ಯಾವಂತನಾಗುವುದು ಬೇಕಿಲ್ಲ. ಅವನ ಉದ್ಧಾರಕನಾಗಬಯಸುವ ನಿರೂಪಕನಿಗೆ ಸದುದ್ದೇಶವಿದೆ. ತಾಳ್ಮೆಯಿಲ್ಲ ಪ್ರಾಮಾಣಿಕ ಕಾಳಜಿಯಿಲ್ಲ. ಈ ಮೂವರನ್ನು ಪರಸ್ಪರ ಅರ್ಥ ಮಾಡಿಕೊಳ್ಳುವುದೇ ಇಲ್ಲ. ಇಂತಹ ಒಂದು ಅಸಂಗತ ಸಂದರ್ಭ ಸ್ಥಿತಿಯಲ್ಲಿ ಕೌಟುಂಬಿಕ ಸಂಬಂಧಗಳ ನಿವಾರಣೆಯನ್ನು ನೋಡಬಹುದು. ಕಥೆಗಾರರು ನಿರೂಪಕರಲ್ಲಿರುವ ಅಹಂ ನಿರೂಪಕರ ಹೆಂಡತಿಯಲ್ಲಿರುವ ಅಸಂವಿಧಾನವನ್ನು ಲೀಲಾ ಸಹಿಸಿಕೊಳ್ಳುವುದನ್ನು ಸಮಾಜದಲ್ಲಿ ಎಷ್ಟೋ ಹೆಣ್ಣುಮಕ್ಕಳು ಅಸಹಾಯಕವಾಗಿ ಗಂಡನ ಅಹಂ ಅನ್ನು ಸಹಿಸಿಕೊಂಡು ಬಾಳುತ್ತಿದ್ದಾರೆ ಎಂಬುದು ಹೆಣ್ಣಿನ ಕೌಟುಂಬಿಕ ಅಸಹಾಯಕತೆಯನ್ನು ಬಿಂಬಿಸುತ್ತದೆ.

'ಮೃಗ ಮತ್ತು ಸುಂದರಿ' ಕಥೆಯಲ್ಲಿ ಸುಂದರಿ ರೂಪಕ್ಕೆ ಆದ್ಯತೆ ಕೊಡುವುದೇ ಈ ಕಥೆಯಲ್ಲಿ ಕಂಡುಬರುವ ಮುಖ್ಯ ವಸ್ತುವಾದರೂ ವರ್ತಕನ ವ್ಯಾಪಾರದ ಮನೋಭಾವ ನಷ್ಟವಾಗೋದು ಹಣದ ಅಭಾವ ಎದುರಾಗೋದು ಇದರಿಂದ ಕೌಟುಂಬಿಕ ಸಂಬಂಧ ಏರುಪೇರು ಆಗುವುದನ್ನು ನೋಡಬಹುದು. ವರ್ತಕನಿಗೆ ಮೂವರು ಹೆಣ್ಣುಮಕ್ಕಳಿದ್ದರು. ಮೊದಲ ಇಬ್ಬರು ಹೆಣ್ಣುಮಕ್ಕಳು ಬಹಳ ಅಹಂನ್ನು ಹೊಂದಿದ್ದರು. ಮೂರನೆಯವಳು ಮೃದು ಸ್ವಭಾವದ ಒಳ್ಳೆಯ ಗುಣಗಳನ್ನು ಹೊಂದಿದ್ದಳು ಹಾಗೂ ರೂಪವತಿಯಾಗಿದ್ದರಿಂದ ಸುಂದರಿ ಎಂದು ಕರೆಯುತ್ತಿದ್ದರು. ಇವರ ಪರಿಸ್ಥಿತಿಗನುಗುಣವಾಗಿ ಬದಲಾಗುವ, ಹೊಂದಿಕೊಳ್ಳುವ ಮನಸ್ಥಿತಿಗಳ ಚಿತ್ರಣ ಇಲ್ಲಿ ಕಂಡುಬರುತ್ತದೆ. ವರ್ತಕನ ವ್ಯಾಪಾರ ಕುಸಿದುಬಿದ್ದು ನಷ್ಟವಾಗತೊಡಗಿ ಕಷ್ಟಗಳು ಶುರುವಾದಾಗ ವರ್ತಕ ವಾಪಸ್ಸು ತಮ್ಮ ಹಳ್ಳಿಗೆ ಹೋಗಲು ತೀರ್ಮಾನಿಸುತ್ತಾನೆ. ಮೊದಲ ಇಬ್ಬರು ಹುಡುಗಿಯರಿಗೆ ಆಘಾತ, ನಿರಾಶೆ, ಹತಾಶೆ ಶುರುವಾಗಿ ಕೋಪಬಂದು ಹಳ್ಳಿಗೆ ಸುತಾರಾಂ ಬರುವುದಿಲ್ಲವೆಂದು ಹಠ ಹಿಡಿದು ಕಡೆಗೆ ಹೇಗೋ ಹಳ್ಳಿಗೆ ಹೋಗುತ್ತಾರೆ. ಸರಳಜೀವನ ನಡೆಸುತ್ತಿದ್ದ ಸುಂದರಿಗೆ ಬಡತನ ಯಾವುದೇ ತೊಂದರೆ ತರುವುದಿಲ್ಲ. ಶ್ರೀಮಂತಿಕೆಗೆ ಇದ್ದಾಗ ಮೊದಲೆರಡು ಹುಡುಗಿಯರ ಬಳಿ ಬಂದು

ಸರಸವಾಡುತ್ತಿದ್ದ ಹುಡುಗರು ಅವರತ್ತ ಸುಳಿಯುವುದಿಲ್ಲ. ಇದರಿಂದ ಮೊದಲೆರಡು ಹುಡುಗಿಯರಿಗೆ ಬದುಕು ಅಸಹನೀಯ ಅನ್ನಿಸುತ್ತದೆ.

ಒಮ್ಮೆ ವರ್ತಕ ಅಳಿದುಳಿದ ಹಡಗು ಬರುವಸುದ್ದಿ ತಿಳಿದು ನಗರಕ್ಕೆ ಹೋಗುತ್ತಾನೆ. ಆ ಹಡಗು ನೀರಲ್ಲಿ ಮುಳುಗಿಹೋದ ಸುದ್ದಿತಿಳಿದು ನಿರಾಶನಾಗಿ ಗಾಡಿಗೆ ಕಾಸುಕೊಡಲೂ ಇಲ್ಲದೆ ಕಾಲ್ನಡಿಗೆಯಲ್ಲೇ ಊರಿಗೆ ಹೊರಟು ದೊಡ್ಡ ಅಡವಿಯಲ್ಲಿ ದಣಿದು ಬಿದ್ದು ಕಾಡಿನ ನಡುವೆ ಇರುವ ಭವ್ಯ ಬಂಗಲೆ ನೋಡಿ ಚಕಿತನಾಗುತ್ತಾನೆ. ಅದರೊಳಗೆ ಪ್ರವೇಶಿಸಿ ಭಕ್ಷ್ಯ ಭೋಜನ ಮಾಡುತ್ತಾನೆ ಒಬ್ಬ ಸುಂದರ ಯುವಕನು ಶಾಪಗ್ರಸ್ಥನಾಗಿ ಮೃಗವಾಗಿರುತ್ತಾನೆ. ಈ ಮೃಗವು ವರ್ತಕನನ್ನು ಸುಂದರಿಯನ್ನು ಕಳುಹಿಸುವಂತೆ ಆಜ್ಞಾಪಿಸುತ್ತದೆ. ನೋವಾದರೂ ವರ್ತಕನು ಮೃಗದ ಅಣತಿಯಂತೆ ಸುಂದರಿಯನ್ನು ಅದರ ಬಳಿ ಕಳುಹಿಸುತ್ತಾನೆ. ಮೃಗವು ಸುಂದರಿಗೆ ನೋವಾಗದಂತೆ ಉಪಚಾರಮಾಡಿ ಆಕೆಯ ಪ್ರೀತಿ ಗಳಿಸಿ ರೂಪವಂತನಾಗಿ ಸುಂದರಿಯನ್ನು ವರಿಸುತ್ತಾನೆ. ಶ್ರೀಮಂತಿಕೆಯ ಲೋಲುಪತೆಯಲ್ಲಿ ಬೆಳೆದ ಮೊದಲೆರಡು ಹೆಣ್ಣುಮಕ್ಕಳಿಗೆ ಸಾಮಾನ್ಯ ವರಗಳು ಸಿಕ್ಕಿದರೆ ಕೋಮಲ ಮನಸ್ಸುಳ್ಳ ಸುಂದರಿ ರಾಜಕುಮಾರನನ್ನು ಮದುವೆಯಾಗುತ್ತಾಳೆ.

ಶ್ರೀಮಂತಿಕೆ ಇದ್ದಾಗ ಶೋಕಿ ಮಾಡುತ್ತಿದ್ದವರು ವರ್ತಕನಿಗೆ ನಷ್ಟವಾದಾಗ ಬಡತನ ಸ್ಥಿತಿಗೆ ಹೊಂದಾಣಿಕೆ ಆಗದೆ ಪರಿತಪಿಸುತ್ತಾರೆ. ಅದೇ ಸುಂದರಿ ಶ್ರೀಮಂತಿಕೆ ಇದ್ದಾಗಲೂ ಸರಳ ಜೀವನ ನಡೆಸುತ್ತಿದ್ದ ಕಾರಣ ನಷ್ಟವಾದಾಗ ಜೀವನ ಸಾಗಿಸಲು ಬೇಸರಪಡುವುದಿಲ್ಲ. ಅದೃಷ್ಟವಶಾತ್ ಅರಮನೆಯ ರಾಜಕುಮಾರನನ್ನೇ ವಿವಾಹವಾಗುತ್ತಾಳೆ. ಶ್ರೀಮಂತಿಕೆಯ ಪರಿತಪಿತ ಸರಳಜೀವನದ ಉದಾತ್ತ ಸ್ವಭಾವ ಕಥೆಯಲ್ಲಿ ಧ್ವನಿತವಾಗಿದೆ. ಇಲ್ಲಿ ಕಥೆಗಾರ ಆಧುನಿಕ ಸಮಾಜದ ವಿಷವರ್ತುಲಗಳಾದ ಹಣ ಇದ್ದಾಗ ಮೋಜುಮಸ್ತಿಯ ಆಕರ್ಷಣೆಗೆ ಒಳಗಾದವರು ಬದುಕು ಕೈಕೊಟ್ಟಾಗ ಹೊಂದಿಕೊಳ್ಳಲಾಗದೆ ಹೇಗೆ ಹೆಣಗಾಡುತ್ತಾರೆ. ಹಣ ಮತ್ತು ಹಣದ ಮದ ಹೇಗೆ ಮಾಡಿಸುತ್ತದೆ ಎಂಬುದನ್ನು ವಿಷದಪಡಿಸುತ್ತಾರೆ. ಹಾಗೆಯೇ ಶ್ರೀಮಂತಿಕೆಯಿದ್ದರೂ ಅದರ ಭ್ರಮೆಯಿಂದ ಹೊರಬಂದ ಸುಂದರ ಹುಡುಗಿ ಎಲ್ಲಾ ಕಾಲಕ್ಕೂ ಒಪ್ಪುವ ಸರಳಜೀವನಶೈಲಿಯನ್ನು ಒಗ್ಗಿಕೊಂಡು ಇರುವುದನ್ನು ತೋರಿಸುವ ಮೂಲಕ ಕೌಟುಂಬಿಕ ಸಂಬಂಧಗಳು ಹಣಕ್ಕೆ ಅಂಟಿಕೊಳ್ಳದೆ ಬಂದದ್ದು ಸ್ವೀಕರಿಸುವ ದೃಷ್ಟಿಕೋನದಲ್ಲಿ ಸಾಗಬೇಕು. ಇದೇ ಬದುಕುವ ರೀತಿ ಎಂದು ಬದುಕಿನ ಸ್ಥಿರತೆಯನ್ನು ಹಣದ ಹಿಂದೆ ಓಡಿಸಬಾರದು ಹಾಗೆ ಮಾಡಿದರೆ ಕೌಟುಂಬಿಕ ಸಂಬಂಧಗಳು ಹಾಳಾಗುತ್ತವೆ. ಸಮಸ್ಥಿತಿಯಲ್ಲಿ ಕಂಡರೆ ಬದುಕು ಚೆನ್ನ ಎಂಬ ನಿತ್ಯಸತ್ಯವನ್ನು ಈ ಕಥೆ ಶೋಧಿಸುತ್ತದೆ.

## ೬.೨. ಹಣ ಮತ್ತು ಅಧಿಕಾರ ಗಂಡಿನ ಯಜಮಾನಿಕೆಯ ಸಂಬಂಧಗಳು

'ಮುಸ್ಸಂಜೆಯ ಕಥಾಪ್ರಸಂಗ' ಇದು ಗಂಡಿನ ಯಜಮಾನಿಕೆಯ ವೈಯಕ್ತಿಕ ನೆಲೆಯ ಶೋಧವೇ? ಒಂದು ಅರ್ಥದಲ್ಲಿ ಹೌದು ಮಿಶನ್ ಭರ್ಮಣ್ಣ, ಬೂಸಿ, ಬಸ್ಯಾ, ರಾಚ, ಶಿವನಂಜ, ಸಣ್ಣೀರಪ್ಪ, ಉಡುಪ, ಕರಿಯ, ನಂದ್ಯಪ್ಪ ಇನ್ನು ಕೆಲವು ಪುರುಷಪಾತ್ರಗಳು ಕಾದಂಬರಿಯಲ್ಲಿ ಕಂಡುಬರುತ್ತವೆ. ಕೆಲವು ಪಾತ್ರಗಳು ಕೆಲವು ಸಂದರ್ಭಗಳಲ್ಲಿ ಯಜಮಾನಿಕೆಯ ನಿಲುವುಗಳನ್ನು ತಳೆಯುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಕಂಬಳ್ಳಿಯ ಗ್ರಾಮದಲ್ಲಿ ನಡೆಯುವ ಘಟನೆ ಗ್ರಾಮದಲ್ಲಿ ಮುಖ್ಯವಾಗಿ ಹಣ ಮತ್ತು ಪ್ರೇಮದಿಂದ ನಡೆದ ಘಟನೆಗಳು ಕೆಲವು ಬದಲಾವಣೆಗಳನ್ನು ಸಂಗ್ರಹಮಾಡಿ ದಾಖಲೆಮಾಡುತ್ತಾ ಹಣ ಮತ್ತು ಅಧಿಕಾರ ಗಂಡಿನ ಯಜಮಾನಿಕೆಯ ಸಂಬಂಧಗಳನ್ನು ಪಿ.ಲಂಕೇಶರು ದಾಖಲಿಸುತ್ತಾರೆ. "ಆಣೆಬಡ್ಡಿ ರಂಗವ್ವ ಗಟ್ಟಿಹೆಂಗಸು : ಗಂಡ ಸತ್ತಾಗ ಕೇವಲ ಎರಡು ದಿನ ಅತ್ತು ಆಕಳುಗಳನ್ನು ನೋಡಿಕೊಂಡು ಆಗ ಚಿಕ್ಕವಳಿದ್ದ ಸಾವಂತ್ರಿಯನ್ನು ಮಡಿಲಲ್ಲಿಟ್ಟುಕೊಂಡು ಸಾಕಿ ದೊಡ್ಡವಳು ಮಾಡಿದಳು. ಅವಳಿಗೆ ಅನೇಕ ಕಷ್ಟಗಳು ಬಂದಿವೆ. ಒಮ್ಮೆ ಅವಳ ಮೂರು ಎಮ್ಮೆಗಳು ಹುಲಿಬಾಯಿಗೆ ತುತ್ತಾದವು. ಅದೇ ವರ್ಷ ಕೊಂಡು ತಂದಿದ್ದ ಆಕಳು ರೈಲಿಗೆ ಸಿಕ್ಕಿ ಸತ್ತುಹೋಯಿತು. ಸಾಲಸೋಲಮಾಡಿ ಕಾಸಿಗೆ ಕಾಸು ಗಂಟಿಕ್ಕಿ ಹೇಗೋ ಜೀವನ ಸಾಗಿಸಿದ್ದಾಯಿತು. ಕಾಲರಾದಲ್ಲಿ ಗಂಡಸತ್ತ ನಾಲ್ಕು ವರ್ಗಕ್ಕೆ ಪ್ಲೇಗುಬಂತು. ಊರವರೆಲ್ಲ ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡು ಸಾವು ಎಂದು ಬರುತ್ತದೋ ಎಂದು ದಿಗ್ಭ್ರಾಂತರಾಗಿದ್ದಾಗ ರಂಗವ್ವ ತನ್ನ ಕೆಲಸ ತಾನು ಮಾಡಿಕೊಂಡು ಬೆಳಿಗ್ಗೆ ಮತ್ತು ಸಂಜೆ ದೇವರ ಪೂಜೆ ನಡೆಸುತ್ತಾ ಸುಮ್ಮನಿದ್ದಳು. ಪ್ಲೇಗು ಊರ ಹತ್ತಾರು ಜನರ ಬಲಿ ತೆಗೆದುಕೊಂಡು ಬಂದಷ್ಟೇ ವೇಗವಾಗಿ ಹೊರಟುಹೋಯಿತು. ಊರ ಜನರೊಂದಿಗೆ ಬಡ್ಡಿಯ ವ್ಯವಹಾರ ಇಟ್ಟುಕೊಂಡ ರಂಗವ್ವ ಮೌನವಾಗಿ, ಗಟ್ಟಿಯಾಗಿ ಸುಖವಾಗಿ ಇದ್ದಳು". [೧೧]

ರಂಗವ್ವ ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ವಿಧವೆಯಾದವಳು. ಚಿಕ್ಕ ಮಗಳು ಸಾವಂತ್ರಿಯನ್ನು ತನ್ನಂತೆಯೇ ಆತ್ಮವಿಶ್ವಾಸವಿರುವ ಹೆಣ್ಣನ್ನಾಗಿ ಬೆಳೆಸುತ್ತಾಳೆ. ಚಿಕ್ಕಪುಟ್ಟ ಆರ್ಥಿಕ ವಹಿವಾಟಿನ ಮೂಲಕ ಊರಿನಲ್ಲಿ ಸಾಮಾಜಿಕ ಪ್ರತಿಷ್ಠೆ ಬೆಳೆಸಿಕೊಂಡಿರುತ್ತಾಳೆ. ಊರಿನ ಮತ್ತೊಬ್ಬ ನಾಯಕ ಮೆಶಿನ್ ಭರ್ಮಣ್ಣನ ನಾಯಕತ್ವದಲ್ಲೇ ಮುನ್ನಡೆಯುತ್ತಿದ್ದ ಆಕೆ ತನ್ನ ಹಣಕಾಸಿನ ವ್ಯವಹಾರದಲ್ಲಿ ಸ್ವತಂತ್ರಳಾಗಲು ಪ್ರಯತ್ನಿಸಿದಾಗ ಭರ್ಮಣ್ಣ ಕೆರಳಿ ಅವಳ ವಿರುದ್ಧ ನಿಲ್ಲುವನು. ರಂಗವ್ವನ ಮಗಳು ಸಾವಂತ್ರಿ ತಾರುಣ್ಯ ಸಹಜ ಕುತೂಹಲದಿಂದ ಅನ್ಯಜಾತಿಯ ಮಂಜನೊಂದಿಗೆ ಸ್ನೇಹವಿಟ್ಟುಕೊಂಡಿದ್ದ ಪ್ರಸಂಗವು ಭರ್ಮಣ್ಣ ಮತ್ತವರ ಸಂಗಡಿಗರಿಗೆ ರಂಗವ್ವನನ್ನು ಮಟ್ಟಹಾಕಲು ಆಯುಧವಾಗಿ ಪರಿಣಮಿಸುತ್ತದೆ. ಪರಸ್ಪರರನ್ನು ಪೇಚಿಗೆ ಸಿಲುಕಿಸುವ ಸಣ್ಣ

---

೧೧. ಪಿ. ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೨.

ಪ್ರಮಾಣದ ಜಗಳವಾಗಿ ಈ ಕಲಹ ಅನಿರೀಕ್ಷಿತ ತಿರುವು ತೆಗೆದುಕೊಂಡು ಪ್ರಕ್ಷುಬ್ಧ ಘಟನಾವಳಿಗಳ ಮೂಲಕ ಬೆಳೆದು ದೊಡ್ಡ ಘರ್ಷಣೆಯಾಗಿ ಪರಿಣಮಿಸುತ್ತದೆ. ಈ ಘಟನೆಯ ಮೂಲಕ ರಂಗವ್ವನ ಕುಟುಂಬದ ಮೇಲೆ ಭರ್ಮಣ್ಣ ಎಂಬ ಗಂಡಿನ ಯಜಮಾನಿಕೆಯ ದಬ್ಬಾಳಿಕೆಯಾಗುವುದನ್ನು ನೋಡಬಹುದು. ಆದರೆ ಗಟ್ಟಿಗಿತ್ತಿಯಾಗಿರುವ ಹೆಣ್ಣು ಸೆಟೆದು ನಿಲ್ಲಲು ಪ್ರಯತ್ನಿಸುತ್ತಾಳೆ. ಅವಳ ಮುಂದೆ ಭರ್ಮಣ್ಣನ ಗ್ರಹಿಕೆಗಳಲ್ಲಿ ಯಾವುದೇ ಬಗೆಯ ಸಾಂಘಿಕ ನೆಲೆಯ ಚಿಂತನಾ ವೈವಿಧ್ಯಗಳು ಕಾಣುವುದಿಲ್ಲ. ಅಲ್ಲಿ ಕೌಟುಂಬಿಕ ರಾಜಕಾರಣದ ಮೊಗಸಾಲೆಯಲ್ಲಿ ನಿಂತ ರಂಗವ್ವ ಸಾವಂತ್ರಿಯರನ್ನು ಇವರು ಕೆರಳಿಸುವುದರಿಂದ ಕಂಬಳ್ಳಿಯ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಗಂಡಿನ ಯಜಮಾನಿಕೆಯ ದೃಷ್ಟಿಯಿಂದ ಪರೋಕ್ಷವಾಗಿ ಭರ್ಮಣ್ಣನೂ ಕಾರಣನಾಗುತ್ತಾನೆ. ಇಲ್ಲಿ ನಡೆಯುವ ಸಹಜ ಪ್ರಕ್ರಿಯೆಯನ್ನು ಲೇಖಕರು ಮಿತಿಗೊಳಿಸುವುದಿಲ್ಲ. ಈ ಸೇಡಿನ ಹಿನ್ನೆಲೆಯೊಳಗೆ ಅಂತರ್ಜಾತಿ ವಿವಾಹಕ್ಕೆ ಶುದ್ಧ ಧರ್ಮಗೊಡ್ಡು ರಂಗವ್ವನಂಥವಳನ್ನು ಪ್ರೇರೇಪಿಸುತ್ತದೆಯೆಂದರೆ ಅದು ಸಾಮಾನ್ಯವಲ್ಲ. ಭರ್ಮಣ್ಣನ ಆಂತರಿಕ ಶೋಷಣೆಯೇ ಇವಳಲ್ಲಿ ಕಿಚ್ಚು ಹೆಚ್ಚಿಸಲು ಕಾರಣ ಆಣೆಬಡ್ಡಿವ್ಯವಹಾರದ ಮನಸ್ಸೊಂದು ಮನನೊಂದು ಪ್ರತೀಕಾರದ ಬೇಗೆಯಲ್ಲಿ ಶಾಶ್ವತ ಪ್ರಗತಿಗಾಮಿತನಕ್ಕೆ ಒಗ್ಗಿಕೊಳ್ಳುತ್ತದೆಂದರೆ ವ್ಯಕ್ತಿತ್ವದ ಸ್ಥಾನ ಪಲ್ಲಟಗಳು ಹೇಗೆ ಹೊಸ ಜೀವನ ಚಿಂತನಾಕ್ರಮವನ್ನು ತಾಳುತ್ತದೆ. ಒಂದು ವ್ಯಕ್ತಿತ್ವವನ್ನು ಒಡೆದುನೋಡಿ ಪುನರ್ ಸಂಘಟಿಸುವ ಆಶಯದಂತೆ ಸರಳವಾಗಿ ನಡೆದುಹೋಗುತ್ತದೆ ಎಂಬುದಕ್ಕೆ ಕಾದಂಬರಿಕಾರರಿಗೆ ಇಲ್ಲಿ ಒಂದು ಖಚಿತತೆಯಿದೆ. ಬೂಸಿ ಬಸ್ಯನಂಥವನು ಕೂಡ ತರಲೆ ಮಾಡುತ್ತಾ, ಮಾಡಿಕೊಳ್ಳುತ್ತಾ ತಂಗಿಯ ಸಂದರ್ಭದಲ್ಲಿ ಬದುಕಿಗೆ ಒಲಿಯುವ ರೀತಿಯನ್ನು ಲಂಕೇಶರು ಗ್ರಹಿಸುವ ಸೂಕ್ಷ್ಮವನ್ನು ಇಲ್ಲಿ ಗಮನಿಸಬೇಕು. ಕೆಟ್ಟದ್ದನ್ನೇ ಮಾಡಹೊರಟ ಆ ಮೂಲಕ ಗಂಡಿನ ಯಜಮಾನಿಕೆಯನ್ನು ಪ್ರದರ್ಶಿಸುತ್ತಾ ಭರ್ಮಣ್ಣ ಮತ್ತು ಅವನ ಗುಂಪು ಪೂರ್ಣವಾಗಿ ಅದಕ್ಕೆ ಆತುಕೊಳ್ಳುವುದಿಲ್ಲ.

ಇಂಥ ಸ್ಥಾಪಿತ ಆವರಣದೊಳಗೆ ಯಾವ ತಾಪತ್ರಯವೂ ಇಲ್ಲದಂತೆ ಕಟ್ಟಿಕೊಂಡು ಬಿಡಬಹುದಾದ ತನ್ನ ಸೋದರಮಾವ ಶಿವನಂಜನನ್ನು ತಿರಸ್ಕರಿಸಿ ಪ್ರತಿರೋಧದ ನಡುವೆಯೂ ಭರ್ಮಣ್ಣನ ಅಪಾಯಗಳ ಪರಿವೆಯಿದ್ದರೂ ಮಂಜನಿಗೆ ತನ್ನನ್ನು ತಾನು ಕೊಟ್ಟುಕೊಳ್ಳುವ ತೀರ್ಮಾನಕ್ಕೆ ಬಂದುಬಿಡುತ್ತಾಳೆ. ಇಲ್ಲಿ ತಾಯಿ ರಂಗವ್ವನ ಪ್ರವೇಶವಾಗುತ್ತದೆ. ಆತ್ಮಿಕವಾದ ಪ್ರೀತಿ ಪ್ರಕರ್ಷಾವಸ್ಥೆಯ ಮಾನವ ಸಂಬಂಧಗಳನ್ನು ನಿರ್ವಹಿಸಿಕೊಳ್ಳುವ ಸಂದರ್ಭದಲ್ಲಿ ಹೇಗೆ ವ್ಯಕ್ತಿತ್ವಗಳು ಗಂಡುತನದಲ್ಲಿ ವರ್ತಿಸುತ್ತವೆ ಎಂಬುದು ತಿಳಿಯುತ್ತದೆ. "ಮುಸ್ಸಂಜೆಯಲ್ಲಿ ನಾಯಕ ನಾಯಕಿಯರಿಲ್ಲ ಎಂದು ಲಂಕೇಶರು ಹೇಳಿದ್ದರೂ ರಂಗವ್ವನಲ್ಲಿ ಕತೆಯ ಕೇಂದ್ರವನ್ನು ಸಹಜವಾಗಿ ಗುರುತಿಸಬಹುದು. ಅವಳ ಮತ್ತು ಅವಳನ್ನು ನಾಶಮಾಡಲು ಪ್ರಯತ್ನಿಸುವ ಭರ್ಮಣ್ಣ ಹಾಗೂ ಅವನ ಸಹಕಾರಿಗಳ ಗಂಡಸುತನದಲ್ಲಿ ಕಾದಂಬರಿ ಕ್ರಿಯೆ ಹುಟ್ಟಿಕೊಳ್ಳುತ್ತದೆ. ಕಂಬಳ್ಳಿಯ

ಅತ್ಯಂತ ಪ್ರಭಾವಶಾಲೀ ಮನೆತನವೆಂದರೆ ಶ್ರೇಷ್ಠಿಯ ಮನೆತನ. ಆದರೆ ಶ್ರೇಷ್ಠಿಯ ಅತಿರೇಕಗಳಿಂದಾಗಿ ಆ ಮನೆತನ ತನ್ನ ಸ್ಥಾನವನ್ನು ಕಳೆದುಕೊಂಡಿರುತ್ತದೆ. ಶ್ರೇಷ್ಠಿಗೆ ನಿಷ್ಠರಾಗಿ ಉಳಿದ ಕೆಲವೇ ಜನರಲ್ಲಿ ಮುಖ್ಯನಾದ ನಂದ್ಯಪ್ಪ ಈ ಮಾತನ್ನು ಸ್ಪಷ್ಟವಾಗಿಯೇ ಆಡಿತೋರಿಸುತ್ತಾನೆ. ನಂದ್ಯಪ್ಪ ಕಾದಂಬರಿಯ ನೈತಿಕ ಕೇಂದ್ರವೊಂದನ್ನು ಪ್ರತಿನಿಧಿಸುತ್ತಾನಾದರೂ ಆತನಲ್ಲಿ ಬರಲಿಲ್ಲ. ಕಂಬಳ್ಳಿಯನ್ನು ಆಳುವ ಶಕ್ತಿಗಳನ್ನು ಎದುರಿಸುವ ಸಾಮರ್ಥ್ಯ ಅವನಲ್ಲಿರುವುದಿಲ್ಲ. ರೋಗಿಷ್ಠ ಹೆಂಡತಿ, ಮದುವೆಯಾಗದ ಮಗಳು ಶಿವಿ, ಸಣ್ಣೀರಪ್ಪ ಮೇಷ್ಟ್ರುವಿನಂತ ಕುತಂತ್ರಿಗಳು ಇಂತವರುಗಳಿಂದಾಗಿ ಆತ ನಿರ್ವಿಣ್ಣನಾಗಿದ್ದಾನೆ. ಆದರೂ ಸ್ಫೋಟದ ಒಂದುಕ್ಷಣದಲ್ಲಿ ಆತ ಶ್ರೇಷ್ಠಿಯನ್ನು ಎದುರಿಸುತ್ತಾನೆ. 'ಹೌದು ನನ್ನಂಥೋರಿಂದ್ಲೇ ನಿನಗೆ ಈ ಗತಿ ಬಂದಿರೋದು. ಈ ಊರ ಹೊಲ್ಯಾರ ಹಟ್ಯಾಗೆ ಹುಟ್ಟಿದ ಚಂದೊಳ್ಳೋ ಹೆಣ್ಣನ್ನೆಲ್ಲ ತಲೆತಲಾಂತರದಿಂದ ಕೆಡಿಸಿದೋರು ಈ ಮನೆಯ ಜನ ಅಲ್ಲ. ನಾನು ಅವರಿಗೆ ಹೆಂಡದ ಚಟಹತ್ತಿಸಿ ನೆಲಾನೆಲ್ಲ ಒರೆಸಿಕೊಂಡು ಉಪ್ಪರಿಗೆ ಮನೆ ಕಟ್ಟಿಸಿದೋನು ನಾನು. ಅಯ್ಯೋ ನನಗಲ್ಲವೇ ಸ್ವಾಮಿ ದೇವರು ಶಿಕ್ಷೆ ಕೊಡಬೇಕಾದ್ದು'. ಶ್ರೇಷ್ಠಿಯ ಸ್ಥಾನವನ್ನು ತುಂಬುವ ಮಹತ್ವಾಕಾಂಕ್ಷೆ ಹೊತ್ತವನು ಲಿಂಗಾಯತನೇ ಆದ ಭರ್ಮಣ್ಣ. ಊರಿಗೇ ಮೊದಲು ಮೆಶಿನ್ ತಂದ ಹೆಮ್ಮೆ ಅವನಿಗಿದೆ. ಆದರೆ ಅವನಿಗೆ ಧನಬಲವಿಲ್ಲ. ರಂಗವ್ವ ಅವನಲ್ಲಿಟ್ಟ ಹಣವನ್ನು ಜೋರುಮಾಡಿ ತೆಗೆದುಕೊಂಡು ಹೋದಾಗ ಅವನಲ್ಲಿ ಸೇಡಿನ ಭಾವನೆ ಜಾಗ್ರತವಾಗುತ್ತದೆ. ತನ್ನ ಊರಿನ ಕೆಲಸಕ್ಕೆ ಬಾರದ ಭಾವಜೀವಿ ಬೂಸಿಬಸ್ಯಾ, ತ್ಯಾಜವಳ್ಳಿಯ ಸಹಪಾಠಿ ರಾಚ, ಉಡಾಳತನಕ್ಕೆ ಹೆಸರಾದ ಹುಡುಗ ಕರಿಯ ಇವರನ್ನು ಒಳಗೆ ಹಾಕಿಕೊಂಡು ರಂಗವ್ವನ ಮೇಲೆ ಹತೋಟಿ ಸಾಧಿಸುವ ಯೋಜನೆ ಹೂಡುತ್ತಾನೆ. ಈ ಯೋಜನೆಗೆ ಎರಡು ಮುಖಗಳು ಒಂದು ರಂಗವ್ವನ ಸಾಲಗಾರರನ್ನೆಲ್ಲ ಅವಳ ವಿರುದ್ಧ ನಿಲ್ಲಿಸಿ ಅವಳ ಹಣವನ್ನು ಮುಳುಗಿಸುವಂತ ಆರ್ಥಿಕ ಯೋಜನೆ, ಇನ್ನೊಂದು ಬ್ಯಾಡರ ಮಂಜನೊಡನೆ ರಂಗವ್ವನ ಮಗಳು ಸಾವಂತ್ರಿ ಬೆಳೆಸಿದ್ದ ಪ್ರಣಯವನ್ನೇ ನೆಪಮಾಡಿ ಅವಳನ್ನು ಕೆಡಿಸಿ ಜಾತಿಯಿಂದ ಹೊರಗೆ ಹಾಕುವ ಧಾರ್ಮಿಕ ಯೋಜನೆ"[೧೨] ಇಲ್ಲಿ ರಂಗವ್ವನ ಸಾಲದಿಂದ ಮುಕ್ತರಾಗಲು ಗಂಡಿನ ಯಜಮಾನಿಕೆಯನ್ನು ಪ್ರದರ್ಶಿಸುತ್ತಾರೆ. ಸಾಲ ತೆಗೆದುಕೊಂಡವರೆಲ್ಲಾ ಅವಳ ವಿರುದ್ದ ತಿರುಗಿಬೀಳಲು ಸಿದ್ದರಾಗುತ್ತಾರೆ. ಈ ಮೂಲಕ ಇದು ಗಂಡುಸುತನವನ್ನು ಪ್ರದರ್ಶಿಸೋದು. ಆದರೆ ಎರಡನೆಯದು ಅಷ್ಟು ಸುಲಭವಲ್ಲ ಜಾತಿಯನ್ನು ಕೆಡಿಸೋದು.

ಸಣ್ಣೀರಪ್ಪ ಕೂಡ ರಂಗವ್ವನನ್ನು ಶೋಷಣೆ ಮಾಡುತ್ತಾನೆ. ಆಕೆ ಕೊಡುವ ಹಣವನ್ನು ಗೇಲಿಮಾಡುತ್ತಾ 'ರಂಗವ್ವ ಮನುಷ್ಯ ಇವತ್ತು ಇದ್ದು ನಾಳೆ ಸಾಯ್ತಾನೆ ಹಣ ಕೊಡಬಾರದು'

---

೧೨. ಡಾ. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ : ಕಾದಂಬರಿ, ಪುಟ. ೩೨೬.

ಅದರ ಬದಲು ಕಂಪನಿಗೆ ಹಣಕೊಡು ಎಂದು ಅವಳನ್ನು ಗೇಲಿಮಾಡುತ್ತಾನೆ. ಜೊತೆಗೆ ದಾವಣಗೆರೇಲಿ ಸ್ಪಿನ್ನಿಂಗ್ ಮಿಲ್ ಒಂದು ಆಗುತ್ತೆ. ಶೇರು ತೆಗೋತಾರೆ ಕಟ್ಟು ಅಲ್ಲಿ ನೂರು ರೂಗೆ ಮೂವತ್ತು ರೂ ಬಡ್ಡಿಕೊಡ್ತಾರೆ ಅಂತ ಹೇಳಿ ಹಣದ ಪ್ರೀತಿಯನ್ನು ತೋರುತ್ತಾನೆ. ಆ ಮೂಲಕ ಯಜಮಾನಿಕೆಯನ್ನು ಮೆರೆಯಲು ಪ್ರಯತ್ನಿಸುತ್ತಾನೆ. "ನಾನೇನು ಬೇವಾರ್ಸಿ ಅಂದ್ಕೊಂಡೆಯ ರಂಗಮ್ಮ ನಿನ್ನನ್ನು ನಾನು ಹಣ ಕೇಳಿದ್ದು ಖರೆ. ಆದರೆ ಅದೀಗ ನನಗೆ ಬೇಕಿಲ್ಲ. ಗೊತ್ತಾತ ಬೇಕಿಲ್ಲ ನೀನು ಶರಣು ಹೊಡೆದು ನನಗೆ ಕೊಟ್ರೂ ಬ್ಯಾಡ. ನಿನ್ನ ಓಸೀನಲ್ಲಿ ನನಗೆ ಐನೂರು ರೂಪಾಯಿ ಬಂತು ತಿಳೀತ ಐನೂರು ರೂಪಾಯಿ ಬರೆ ಒಂದು ರೂಪಾಯಿಗೆ ಬಂತು. ದೇವರು ತನ್ನ ಪರ ಇದಾನೆ ರಂಗವ್ವ. ನೀನು ಹೆಣ್ಣು ಹೆಂಗ್ಸು ಒಂದು ಹೋಗಿ ಇನ್ನೊಂದು ಆದಾತು. ಅಂತ ನಾನು ನಿನಗೆ ಸಹಾಯ ಮಾಡಾನ ಅಂತ ಅಂದೆ. ನಾನಿಂಥ ಸಾವಿರಗಳಿಸಿದೇನೆ, ಸಾವಿರ ಕಳೆದಿದೇನೆ, ನನ್ನ ಮಾತು ಅಂದ್ರೆ ಕಸಕ್ಕಿಂತ ಕಡೆಯಾಗಿ ನೀನು ಕಂಡದ್ರಿಂದ ಹೇಳ್ತಿದೇನೆ"[೧೩] ಸಣ್ಣೀರಪ್ಪನ ಯಜಮಾನಿಕೆ ಗಂಡಿನ ನೆರವಿಲ್ಲದ ರಂಗವ್ವನ ಬೌದ್ಧಿಕ ಚಿಂತನೆಯನ್ನು ತನ್ನತ್ತ ಸೆಳೆಯುತ್ತಿದ್ದಾನೆ. ಅಂದರೆ ಅವನು ಹೇಳಿದ ಹಾಗೆ ಆಕೆ ಕೇಳಬೇಕು ಎಂದು ಆತ ನಿರೀಕ್ಷಿಸುತ್ತಿದ್ದಾನೆ. ಆ ಮೂಲಕ ಆಕೆಯ ಹಣವನ್ನು ಲಪಟಾಯಿಸುವ ಒಳಸುಳಿಯನ್ನು ಅರಿಯಲು ಪ್ರಯತ್ನಿಸುತ್ತಿದ್ದಾನೆ. ಇವು ಗಂಡಿನ ಯಜಮಾನಿಕೆಯ ಸಂಬಂಧವನ್ನು ತಿಳಿಸುತ್ತದೆ.

"ನನ್ನಂತ ಮೇಷ್ಟ್ರ ನಿನ್ನಂತ ಹೆಣ್ಣೆಂಗ್ಸು ಊರಲ್ಲಿ ಇರಬೇಕಾದ್ರೆ ಅಧಿಕಾರಬೇಕು ರಂಗವ್ವ ಇವತ್ತಿನವರೆಗೆ ನಿಂಗೆ ಹಣದ ಬಲ ಇತ್ತು. ಇನ್ನು ರಾಜಕೀಯ ಅಧಿಕಾರ ಬೇಕು ಎಂದು ಹೇಳಿ ಅದು ಅವಳಿಗೆ ತಿಳಿದಿರಲಾರದೆಂದು ಬರಲಿದ್ದ ಪಂಚಾಯ್ತಿ ಚುನಾವಣೆಯ ಬಗ್ಗೆ ಮಾತಾಡಬೇಕೆನ್ನಿಸಿದರೂ ಸಮಯ ಅದಕ್ಕೆಲ್ಲ ಸರಿಯಲ್ಲವೆಂದುಕೊಂಡು ಅಲ್ಲಿಂದ ಕಾಲುಕಿತ್ತ"[೧೪] ಸಣ್ಣೀರಪ್ಪ ಸೈಡ್ ವ್ಯವಹಾರ ಮಾಡಿಕೊಂಡು ರಂಗವ್ವನಿಗೆ ಅಧಿಕಾರದ ರುಚಿ ಅತ್ತಿಸಲು ಪ್ರಯತ್ನಿಸಿ ಅವಳ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಿಸುತ್ತಾನೆ. ಇನ್ನು ಬೂದಿಬಸ್ಯ ಅವನ ಮುಖ್ಯ ಚಟವೆಂದರೆ ಕೈಯಲ್ಲಿ ನೂರಾರು ರೂಪಾಯಿ ಇಟ್ಟುಕೊಂಡದ್ದೂ ಅದನ್ನು ತಿಂಗಳಿಗೆ ಹಲವಾರುಸಲ ಊರವರಿಗೆಲ್ಲ ತೋರಿಸಿ ತನ್ನ ಮೇಲ್ಮೆಯನ್ನು ಬಣ್ಣಿಸಿಕೊಳ್ಳುವುದು. ಈ ಮೂಲಕ ತನ್ನ ಕಳೆಯನ್ನು ಊರಲ್ಲಿ ಹೆಚ್ಚಿಸಿಕೊಳ್ಳಲು ಪ್ರಯತ್ನಿಸುವಾತ ಇವನು ಗುತ್ಯವ್ವನ ವಿಷಯದಲ್ಲಿ ಮಹಾನ್ಯಾಯಾಧೀಶನ ರೀತಿಯಲ್ಲಿ ಪಂಚಾಯ್ತಿ ಯಜಮಾನಿಕೆಯನ್ನು ಮಾಡಲು ಹೋಗುತ್ತಾನೆ.

---

೧೩. ಡಾ. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ : ಕಾದಂಬರಿ, ಪುಟ. ೩೨೬.
೧೪. ಪಿ.ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೬೪.

ಈ ರೀತಿಯಾಗಿ ಕಂಬಳ್ಳಿಯ ಘಟನೆಗಳು ಹಲವಾರು ವಿವರಗಳಲ್ಲಿ ಚದುರಿಹೋಗಿವೆ. ಎಲ್ಲ ವಿವರಗಳನ್ನು ಒಂದು ಕೇಂದ್ರಕ್ಕೆ ತಂದು ಹೇಳಲು ಪ್ರಯತ್ನಿಸುವ ಲಂಕೇಶರ ಆಶಯವು ಕಂಬಳ್ಳಿಯ ವೈವಿಧ್ಯತೆಯಂತೆಯೇ ಬಹುರೂಪಿ ನೆಲೆಗಳಲ್ಲಿ ಯಶಸ್ವಿಯಾಗಿವೆ. ಈ ಹಳ್ಳಿಯ ಮನುಷ್ಯ ಸಂದರ್ಭದ ಸಾಂಸ್ಕೃತಿಕ ಗ್ರಹಿಕೆಗಳು ಯಾವುದೇ ಒಂದು ಘಟ್ಟದಲ್ಲಿ ಕೇಂದ್ರೀಕೃತವಾಗದಂತೆ ನೋಡಿಕೊಂಡಿರುವ ಕೃತಿಯ ಸಂಕೀರ್ಣತೆಗೆ ಹೆಚ್ಚು ಸಹಾಯಕವಾಗಿದೆ. ಲಂಕೇಶರು ವ್ಯಕ್ತಗೊಳಿಸಬೇಕಾದ ಸಾಹಿತ್ಯಕ ಸಾಧ್ಯತೆಗಳನ್ನು ಹೆಚ್ಚು ಖಚಿತಗೊಳಿಸುವ ನಿಟ್ಟಿನಲ್ಲಿ ನೋಡುವುದಾದರೆ ಬದುಕನ್ನು ಪೊರೆಯಲೇಬೇಕೆಂಬ ರಂಗವ್ವನ ಛಲ, ಕೌಟುಂಬಿಕ ಆವರಣದೊಳಗೇ ತನ್ನ ಸಾಧ್ಯತೆಗಳನ್ನು ಮುಖಾಮುಖಿಗೊಳಿಸುವ ನಂದ್ಯಪ್ಪ, ಗಂಡಿನ ಒಡನಾಟವನ್ನು ಹಚ್ಚಿಕೊಂಡೂ ಅದನ್ನೇ ಒಂದು ರಮ್ಯ ಭಾವನೆಯಾಗಿ ನೆಲೆಯಾಗಿಸಿಕೊಳ್ಳುವ ಸಾವಂತ್ರಿ ಸಾಮಾಜಿಕ ಸ್ಥಿರತೆಯನ್ನು ಉಳಿಸಿಕೊಳ್ಳಬೇಕೆಂದು ಕೆಟ್ಟದನ್ನೇ ಮಾಡಲು ಪ್ರಯತ್ನಿಸಿ ಪೂರ್ಣವಾಗಿ ಅದಕ್ಕೆ ಆತುಕೊಳ್ಳದ ಭರ್ಮಣ್ಣ ಮತ್ತು ಗುಂಪು ಇಂಥ ಪ್ರಕ್ರಿಯೆಗಳನ್ನು ಲೇಖಕರು ಹೆಚ್ಚು ತನ್ಮಯತೆಯಿಂದ ಯಾವುದೇ ಸೀಮಿತ ಮೌಲ್ಯಕ್ಕೆ ಜೋತುಬೀಳದೆ ಅದು ಹರಿಯುವ ಸರಳ ದಾರಿಯಲ್ಲೇ ನಡೆಸಿಕೊಳ್ಳುವ ಸೂಕ್ಷ್ಮ ಚಿಂತನೆಯನ್ನು ನೋಡಬಹುದು.

'ಬಿರುಕು' ಕಾದಂಬರಿ ಮೇಲುನೋಟಕ್ಕೆ ಹಳ್ಳಿಯಿಂದ ಬೆಂಗಳೂರಿಗೆ ಬಂದು ಹೊಸ ಪರಿಸರಕ್ಕೆ ಹೊಂದಿಕೊಳ್ಳಲು ಒದ್ದಾಡುತ್ತಿರುವ ಯುವಕನೊಬ್ಬನ ಕಥೆ. ಆದರೆ ಇವನ ಮೂಲಕ ಬೆಂಗಳೂರಿನ ಮೇಲ್ವರ್ಗದ ಜೀವನಕ್ರಮದ ಕೆಲವು ಮಾದರಿಗಳು ರಾಜಕಾರಣ ಮತ್ತು ಆಡಳಿತಶಾಹಿಯ ನೋಟಗಳು ಯಶಸ್ಸಿನ ಹಲವು ಬಗೆಗಳು ಅನಾವರಣಗೊಳ್ಳುತ್ತ ಒಂದು ಸಂಕೀರ್ಣ ಜೀವನ ಸಂದರ್ಭದ ಪ್ರತಿಮಾ ಸರಣಿ ಈ ಕಾದಂಬರಿಯಲ್ಲಿ ಸೃಷ್ಟಿಯಾಗುತ್ತದೆ. ಬಸವರಾಜನು ಹೋಟೆಲ್‌ನಲ್ಲಿ ನಾಯಕ ಮತ್ತು ಅವನ ಗೆಳೆಯರಿಂದ ಅನುಭವಿಸುವ ಅಕಾರಣ ಹಿಂಸೆ ಮತ್ತು ಮುಜುಗರಗಳನ್ನು ಕಾಣಬಹುದು. ನಗರಜೀವನದಲ್ಲಿ ಅಂತರ್ಗತವಾಗಿರುವ ಕಾರ್ಯದ ದರ್ಶನದ ಜೊತೆಗೆ ಬಸವರಾಜನು ಬೆಂಗಳೂರಿನ ಪರಿಸರವನ್ನು ಹೊಂದಿಸಿಕೊಳ್ಳುವುದನ್ನು ಕಾದಂಬರಿಯಲ್ಲಿ ಕಾಣಬಹುದು.

'ಅಕ್ಕ' ಕಾದಂಬರಿಯು ಕೊಳಗೇರಿಯಲ್ಲಿ ಸ್ವತಃ ಬದುಕಿದ ಕ್ಯಾತ ತಾನು ಕಂಡಿದ್ದು ಅನುಭವಿಸಿದ್ದನ್ನು ನಮ್ಮೆದುರಿಗೆ ಬಿಚ್ಚಿಡುತ್ತಿದ್ದಾನೆ. ಅವನು ಕಾದಂಬರಿ ಬರೆಯುತ್ತಿರುವ ಅಂದರೆ ನಮಗೆ ತನ್ನ ಕಥೆ ಹೇಳಿಕೊಳ್ಳುತ್ತಿರುವ ಈ ಹೊತ್ತಿನಲ್ಲಿ ಅವನು ಕೊಳಗೇರಿಯಲ್ಲಿ ವಾಸಿಸುತ್ತಿಲ್ಲ. ಅನಾಥಾಶ್ರಮವೊಂದರಲ್ಲಿ ಗುಮಾಸ್ತನಾಗಿ ಕೆಲಸಮಾಡುತ್ತಿದ್ದಾನೆ. ಅವನು ಕಂಡ ಕೊಳಗೇರಿಯ ಸಮಾಜ ಅತ್ಯಂತ ಜಟಿಲವೂ, ಸ್ವಾರ್ಥಲೋಲುಪತೆ ತುಂಬಿದ ಕುಟುಂಬಗಳು ಇರುವ ಹೊಸ ವಾತಾವರಣದಿಂದ ಕೂಡಿದೆ. ಇಲ್ಲಿ ಕ್ಯಾತ ಕಥೆ ಹೇಳುವುದರಿಂದ ಸ್ವತಃ ಲಂಕೇಶರು ಚಿತ್ರಿಸಿರುವ

ಕ್ಯಾತನ ಜಗತ್ತಲ್ಲಿ ಇರುವ ಹಣ ಮತ್ತು ಅಧಿಕಾರಯುತ ಗಂಡಿನ ಯಜಮಾನಿಕೆಯ ಸಂಬಂಧಗಳನ್ನು ಕಥೆಯಲ್ಲಿ ಅಲ್ಲಲ್ಲಿ ಕಾಣುತ್ತೇವೆ.

ಕೊಳಗೇರಿಯ ಮನುಷ್ಯ ಮಾದರಿಗಳನ್ನು ಕಟ್ಟಿಕೊಡುವ ನೆಪದಲ್ಲಿ ಲಂಕೇಶ್ ಸೃಷ್ಟಿಸಿದ ಅಭಿವ್ಯಕ್ತಿಯ ತಂತ್ರ ಇಲ್ಲಿ ಹೊಸದು. ಅಂದರೆ ಕ್ಯಾತ ತನ್ನ ಬದುಕಿನಲ್ಲಿ ನಡೆದ ಘಟನೆಗಳನ್ನು ವರ್ತಮಾನದಲ್ಲಿ ಮಾತಾಡುತ್ತಾ ಭೂತಕಾಲದ ಬದುಕನ್ನು ದಾಖಲಿಸುವುದು ವಿಶಿಷ್ಟ ಬಗೆಯದು. ಕ್ಯಾತ ಮನುಷ್ಯ ಲೋಕದ ಹೊಸ ಅನುಭವಗಳಿಗೆ ತನ್ನನ್ನು ತಾನು ತೆರೆದುಕೊಳ್ಳುತ್ತಾನೆ. ಬಾಲ್ಯದ ಅನುಭವದ ಒಂದು ಪ್ರಸಂಗ ಹೀಗಿದೆ. "ಗೋಲಿ ಆಡಾನ ಬಾ ಅಂದ ಸುಧೀರ. ಆದರೆ ಕ್ಯಾತನ ಹತ್ತಿರ ಗೋಲಿ ಇರಲಿಲ್ಲ. ಯಾವಾಗಲೂ ತನ್ನಂತೆಯೇ ಒಳ್ಳೆ ಬಟ್ಟೆ ಹಾಕಿಕೊಳ್ಳುವವರೊಡನೆ ಆಡ್ತಿದ್ದ ಸುಧೀರ ಇವತ್ತು ಯಾಕೋ ಒಬ್ಬಂಟಿಯಾಗಿದ್ದ. ಕ್ಯಾತನಿಗೂ ಅವನನ್ನು ನೋಡಿ ಅಯ್ಯೋ ಅನ್ನಿಸಿತು. ಕ್ಯಾತ ಸೂಳೆಮಗನೆ ನಿನ್ನಷ್ಟು ದೈನೇಶಿ ಮನುಷ್ಯ ಬ್ರಹ್ಮಾಂಡದಾಗೇ ಇಲ್ಲ. ಸುಧೀರನಿಗೆ ಪಾಪ ಅಂತೀಯ ಎಂದು ಕ್ಯಾತ ಬೈದುಕೊಂಡ. ಸುಧೀರ ಕ್ಯಾತನಿಗೂ ಗೋಲಿ ಕೊಡುವುದಾಗಿ ಹೇಳಿದ ಕ್ಯಾತನಿಗೆ ಇಷ್ಟವಾಗಲಿಲ್ಲ. ದೈನೇಶಿ ಪಡೆದಗೋಲಿ ಗೆದ್ದರೆಸ್ಟು ಸೋತರೆಷ್ಟು ಅನ್ನಿಸಿತು".[೧೫] ಇಲ್ಲಿ ಕ್ಯಾತ ಆರ್ಥಿಕವಾಗಿ ಸಬಲನಲ್ಲದಿದ್ದರೂ ಸುಧೀರನ ಹತ್ತಿರ ಗೋಲಿ ಗೆದ್ದುಕೊಳ್ಳುವ ಆಸೆಗೆ ಹೋಗಲಿಲ್ಲ. ಕ್ಯಾತನ ಮನಸ್ಸು ತುಂಬಾ ಸೂಕ್ಷ್ಮವಾದದ್ದು ಮುಂದಾಗುವ ಅನಾವುತಗಳು, ಆತಂಕಗಳು, ಮಾತುಗಳು ಎಲ್ಲವನ್ನು ತನ್ನ ಒಳಮನಸ್ಸಿನಿಂದ ವೀಕ್ಷಿಸಬಲ್ಲವನಾಗಿದ್ದನು ಕ್ಯಾತ.

ಕ್ಯಾತ ಓದುವುದು ಎಂದರೆ ದೇವೀರಿಗೆ ಎಲ್ಲಿಲ್ಲದ ಕುಸಿ ಆತನನ್ನು ಚೆನ್ನಾಗಿ ಓದಿಸಿ ಬುದ್ಧಿವಂತನನ್ನಾಗಿ ಮಾಡಬೇಕೆಂಬುದು ಅವಳ ಆಸೆ. ಪ್ರೀತಿ ಎಂದರೆ ಅವಳಿಗೆ ಮೈಮೇಲೆ ದೇವರು ಬಂದಹಾಗೆ ಒಂದೊಂದು ಸಲ ಹೆಚ್ಚಾಗಿ ಪ್ರೀತಿ ಮಾಡ್ತಿದ್ಲು. ಮತ್ತೊಂದು ಸಲ ಕತ್ತೆ ಹೊದ್ದ ಹಾಗೆ ಆಡ್ತಿದ್ಲು. ಇದು ಅವಳ ಮನೋ ಅಂತರಂಗದಲ್ಲಾಗುತ್ತಿದ್ದ ಬದಲಾವಣೆ ಒಮ್ಮೆ ರಾಮಪ್ಪ ಕ್ಯಾತನ ಮನೆಗೆ ಎಲೆಕ್ಟ್ರಿಕ್ ದೀಪ ಕೊಡಿಸ್ತೇನೆ ಎಂದು ಹೇಳಿದ್ದ ಆದರೆ ಕೊಡಿಸಿರಲಿಲ್ಲ. ಅದು ಅವನು ಎಲೆಕ್ಷನ್ ಸಮಯದಲ್ಲಿ ಹೇಳುತ್ತಿದ್ದ ಊಹಾಪೋಹ ರಾಮಪ್ಪ ಪ್ರಸ್ತುತ ರಾಜಕಾರಣದ ಕನ್ನಡಿಯಂತಿದ್ದ. ರಾಮಪ್ಪ ಎಲ್ಲಾ ರಾಜಕಾರಣಿಗಳಂತೆ ದೇವೀರಿ – ಕ್ಯಾತನಿಗೆ ಆಶ್ರಯ ಕೊಡುವುದು ತನ್ನ ಜನನಾಯಕ ಸಿದ್ದಾಂತದ ರೂಪುರೇಷೆಗಳನ್ನು ಗಟ್ಟಿಗೊಳಿಸಿಕೊಳ್ಳಲಿಕ್ಕಾಗಿಯೇ ಎಂಬ ಸ್ವಾರ್ಥದಮೂಲಕ ಅಪನಂಬಿಕೆಯನ್ನು ಲಂಕೇಶರು ಪ್ರಕಟಿಸುತ್ತಾರೆ. ಶಕ್ತಿರಾಜಕಾರಣದ ಪ್ರಾಯೋಗಿಕ ಸ್ಥಿತಿಯಲ್ಲಿಯೇ ಇರುವ ಕೊಳಗೇರಿ ರಾಜಕೀಯ ಇವತ್ತಿಗೂ ಬದಲಾಗಿಯೇ ಇಲ್ಲದಿರಬಹುದು. ರಾಮಪ್ಪ ಅಲ್ಲಿನ ಬಡತನ,

---

೧೫. ಪಿ.ಲಂಕೇಶ್, ಅಕ್ಕ, ಪುಟ. ೧೦

ಹಸಿವುಗಳನ್ನು ಬಂಡವಾಳವಾಗಿಸಿಕೊಂಡು ಗಂಡಿನ ಯಜಮಾನಿಕೆಯನ್ನು ತೋರಿದ್ದಾನೆ. ಕಾರಣ ಹಣಬಲ ಮತ್ತು ಅಧಿಕಾರಬಲದ ದಾಹದಿಂದ. ಇವುಗಳ ಮೂಲಕ ಸಾಮಾಜಿಕ ಪರಿಸರವು ಬದಲಾಗುವ ಯಾವ ಚಹರೆಗಳು ಇಲ್ಲದಿರುವುದನ್ನು ಕಾದಂಬರಿ ಹೇಳುತ್ತದೆ. ಕಾದಂಬರಿಯಲ್ಲಿ ರಾಮಪ್ಪನನ್ನು ಅನುಮಾನದಿಂದಲೇ ಲೇಖಕರು ನೋಡುತ್ತಾರೆ. ಇನ್ನು ಪದ್ದಿಯ ಜೊತೆಗೆ ಸಿನಿಮಾ ಮಾಡುವ ಡೈರೆಕ್ಟರ್ ನಡೆದುಕೊಳ್ಳುವ ರೀತಿ ನೋಡಿ ಕ್ಯಾತನಿಗೆ ತುಂಬಾ ಮನಸ್ಸಿಗೆ ನೋವುಂಟಾಯಿತು ಮತ್ತು ಹಣಬಲದ ಜನರಿಗೆ ದ್ವೇಷದ ಭಾವನೆವುಂಟಾಗುತ್ತದೆ. "ಕ್ಯಾತ ದಂಗಾಗಿ ನೋಡ್ತಾನೆ, ಪದ್ದಿ ಆ ಹಡಬೆ ನನ್ಮಗನ ಕೈ ಮ್ಯಾಜಿಕ್ ಅನ್ನೋಹಂಗ ಮುಗುಳ್ನಗ್ತಿದಾಳೆ. ನಾಗ್ರಾಜನಾಯ್ಡು ಸ್ವರ್ಗಕ್ಕೆ ಮೂರೇಗೇಣು ಅನ್ನೋಹಂಗೆ ತುಟಿಗೆ ಕಿವಿತಾಗೋ ಹಂಗೆ ನಗ್ತಾ ಕೈ ಕೈ ಹೊಸೀತಿದಾನೆ. ಕ್ಯಾತನಿಗೆ ಒಂತರಾ ಅಸಕ್ಯ ಆತು ಸಾರ್, ಆದರೆ ಆ ಐನಾತಿ ಡೈರೆಕ್ಟರ್ ನನ್ಮಗ ಪದ್ದಿಯ ಹೆಗಲಿಗಿಟ್ಟ ಕೈನ ಅವಳ ಬೆನ್ನಿಗೆ ಕಳಿಸ್ತಾ "ಬಾಯ್"! ಅಂತ ಕ್ಯಾತನತ್ತ ಕೂಗಿದ.

'ಏನ್ ಸಾರ್'? ಅಂತಾನೆ ಕ್ಯಾತ.

'ಅಲ್ಲಿ ನನ್ನ ಗ್ಲಾಸಿದೆ ತಗೊಂಬಾ ಹಂಗೇ ಸಿಗರೇಟು ತರ್ತ್' ಅಂತಾನೆ. ಕ್ಯಾತ ಮಿಂಚಿನಂತೆ ಹೋಗಿ ಬೆಳಕಿನಲ್ಲಿ ಮಿನಮಿನ ಅಂತಿದ್ದ ಕುಡಿಯೋ ಗ್ಲಾಸು, ಬಾಟ್ಲಿ, ಸಿಗರೇಟು, ಬೆಂಕೀ ಪಟ್ನಾನೆಲ್ಲಾ ತಂದು ಅವನ ಕೈಗೆ ಇಟ್ಟ.

'ಒಳ್ಳೇ ಹುಡುಗ ಚುರುಕಾಗಿದಾನೆ ಗುಡ್‌ಬಾಯ್' ಅಂತಾನೆ ಆ ತಿಕ್ಕಲು ನನ್ಮಗ. ನಾನು ಗುಡ್ ಬಾಯ್ ಅಂತೆ! ಹ್ಯಂಗಿದೆ ರೀಲು!" [೧೬] ಹಣಬಲವುಳ್ಳ ನಾಗರಾಜನಾಯ್ಡು ಪದ್ದಿಗೆ ಸಿನಿಮಾ ತೆಗೆಸುವ ನೆಪದಲ್ಲಿ ಆಕೆಯನ್ನು ಮರಳು ಮಾಡೋದು ಹಣವನ್ನು ನೀಡಿ ಆಕೆಯನ್ನು ಹೇಳಿದಂತೆ ಕೇಳುವ ಹಾಗೆ ಮಾಡೋದು ಗಂಡಿನ ಯಜಮಾನಿಕೆಯ ದೃಷ್ಟಿಕೋನ ಇವನಲ್ಲಿ ಕಾಣುತ್ತದೆ.

"ಈ ರಂಗಜಟ್ಟಿ ಗೊತ್ತಲ್ಲ. ರೇಸ್ ಕುದುರೆಯ ಅಸಾಮಿ. ಆಗಲೇ ಕುಡುದು ಬುಗುರಿ ಹಂಗೆ ತಿರುಗ್ತಿದಾನೆ. ಕ್ಯಾತನಿಗೆ ಬಲೆ ಪಿಚ್ಚನ್ನೆಸಿ ಹಂಗೇ ಹುಳದಂಗೆ ಒಳಗೆ ಹೋದ್ರೆ ಅಲ್ಲಿ ರೇಸ್ಮಿ ಮಲಕ್ಕೊಂಡಿದಾಳೆ ಸಂಪೂರ್ಣಮ್ಮ ಕೆಮ್ತಿದಾಳೆ ಈ ಸಂಪೂರ್ಣಮ್ಮ ಇದ್ದಕ್ಕಿದ್ದಂಗೆ ಈ ಬಡಕ್ಯಾತನ ಮೇಲೆ ನಿಗಾವಹಿಸಿ ಅದೂ ಇದೂ ಮಾಡಿಬಿಟ್ರು ರಾಮಾಯ್ಣವಾದೀತಂತ ಬಂದಂಗೇ ಹೊರಗೆ ಬಂದ ಕ್ಯಾತ. ಅಷ್ಟರಲ್ಲಿ ಕ್ಯಾನ ಗುಡ್ಲು ಗದ್ದಲದಿಂದ ಹೊತ್ತಿಕೊಂಡು ಉರಿಯೋಹಂಗೆ ಕಾಣ್ತು. ನಾಗ್ರ ಸಿಮೆಂಟ್ ಚೀಲದತರ ಹೊರಗೆಬಿದ್ದ. ಖಡವಾ ಅರ್ಧರೇಗು,

---

೧೬. ಪಿ.ಲಂಕೇಶ್, ಅಕ್ಕ, ಪುಟ. ೪೨

ಅರ್ಧ ನೋವಿನಿಂದ ಗಟ್ಟಿಯಾಗಿ ತಿಣುಕಿದಂಗೆ ಕಾಣಿಸ್ತು. ಹೊಸ ನಾಲ್ಕಾರು ಧ್ವನಿಗಳು 'ಬೇವಾರ್ಸಿ ನನ್ಮಗನ – ನಿನ್ನಕ್ಕನ' ಅಂತ ಹೇಳ್ತಿದ್ದವು. ಕ್ಯಾತನಿಗೆ ತಡಿಯಾಕಾಗ್ಲಿಲ್ಲ. ಇದಲ್ಲವಾ ಸಾರ್ ಫಜೀತಿ. ಹೆದರಿಕೆಯಿಂದ ಓಡಿದ ಕ್ಯಾತನಿಗೆ ಜಗಳ ನೋಡಬೇಕು. ಖಡವನಿಗೆ ನಾಲ್ಕು ಗೂಸ ಬಿದ್ರೆ ಕಣ್ಣಾರ ನೋಡಬೇಕು ಅಂತ ಬಲೆ ಆಸೆ ಆಗಬೇಕಾ? ಕೂಡಲೇ ಸರಸರ ನಡೀತ ಕ್ಯಾತಗುಡ್ಲಿಗೆ ಬಂದ. ನೋಡ್ತಾನೆ ಆ ತರಲೆ ನನ್ಮಕ್ಕಳಲ್ಲಿ ಅತೀದೊಡ್ಡವನಾಗಿದ್ದವ, ಸಿಲ್ವ ಅಂತ ಕಾಣುತ್ತೆ. ಖಡವನಿಗೆ ನಿಂತ ತಾವಿಂದಲೇ ಅಡಿ ಜಾಡಿಸಿ ಇಕ್ಕಿದ ಖಡವಾ ತಪಿಸ್ಕಂಡು ಮೂಲೆಗೆ ಹೋದ. ಅಲ್ಲಿ ದೇವೀರಿ ನಿಹಿದು, ತಮಿಳು ಸಿನಿಮಾದಲ್ಲಿ ಶ್ರೀದೇವಿ, ಲತಾ ಇವರೆಲ್ಲ ಡಿಶುಂ ನೋಡಲ್ಲವಾ ಸಾರ್, ಹಂಗೆ ನಿಂತು ಸಾಯೋಳಂಗೆ ಕಾಣ್ತಿದ್ಲು. ಖಡವಾನ ಕುತ್ತಿಗೆ ತಾವ ರಕ್ತ ಚಿಮ್ಮಿ ಬಂತು ಮೂತಿ ಒಡೆದು ಸೋರ್ತು. ಸಿಲ್ವ ಕೊನೇ ನಾಲ್ಕು ಏಟುಕೊಟ್ಟು ದೇವೀರಿಯನ್ನು ತಿರುಗಿಸಿ ಕುಂಡಿಗೆ ವದ್ದ. ಆಕೆ ಖಡವಾನ ಹಂಗೆ ಚೇರಿಕೊಳ್ಳದೆ ಹಿಂದಕ್ಕೆ ತಿರುಗಿ ಹೊಡೆಯಾಕೆ ಹೋದ್ಲು"[೧೭]

ಕೊಳಗೇರಿಯಲ್ಲಿ ಎಲ್ಲವೂ ಅಯೋಮಯ ಇಲ್ಲಿ ಬದುಕಿನ ಸಂಬಂಧಗಳಿಗೆ ಬೆಲೆಯೇ ಇಲ್ಲ. ಮನಸ್ಸಿಗೆ ಬಂದಂಗೆ ನಡೆದುಕೊಳ್ಳುವ ಜನ ಯಾರಮೇಲೆ ಯಾರಿಗೂ ಮಮಕಾರ ಆತ್ಮೀಯತೆ ಇಲ್ಲ. ಅದು ಬರುವುದು ಕುಡಿದಾಗ ಮಜಾಮಾಡುವಾಗ ಮಾತ್ರ. ಗಂಡಿನ ಯಜಮಾನಿಕೆಯ ಧೋರಣೆಗಳು ಕ್ಯಾತನ ನಿರೂಪಣೆಯಲ್ಲಿ ಕಾದಂಬರಿ ಯುದ್ದಕ್ಕೂ ಕಾಣಬಹುದು. ಇವುಗಳೇ ಅಲ್ಲದೇ ಕನ್ನಡದ ಹೆಸರಿನಲ್ಲಿ ನಡೆಯುವ ಚಳವಳಿ 'ರೋಲ್‌ಕಾಲ್' ಚಳುವಳಿಯಾಗಿ ರೂಪುಗೊಂಡ ಘಟನೆಗಳನ್ನು ಕ್ಯಾತನ ಪ್ಯಾದೆ ನಗೆಯಲ್ಲೇ ಬೆತ್ತಲು ಮಾಡುವ ಲಂಕೇಶ್ ಎಂದಿನಂತೆ ತಮ್ಮ ವಿಡಂಬನೆಗೆ ವೇದಿಕೆಯಾಗಿಸಿಕೊಳ್ಳುತ್ತಾರೆಯಾದರೂ ಪ್ರಸ್ತುತ ಕನ್ನಡ ಚಳವಳಿಗಳು ಕೂಡ ಅದೇ ಮಾದರಿಯಲ್ಲಿ ಸಾಗುತ್ತಿರುವ ರೋಗಗ್ರಸ್ಥ ಲಕ್ಷಣಗಳನ್ನು ಸಾಂಸ್ಥೀಕರಿಸಿದ ವಾಸ್ತವತೆ ಇಲ್ಲಿ ಸಾಧ್ಯವಾಗುತ್ತದೆ. ಹಣಕ್ಕಿರುವ ಗುಣ ದೌರ್ಬಲ್ಯಗಳು ಅದು ತಂದೊಡ್ಡುವ ಸಮಸ್ಯೆಗಳು ಮತ್ತು ಅದರ ಅನಿವಾರ್ಯತೆಗಳು ಕೊಳಗೇರಿಯ ಸಮಾಜದಲ್ಲಿ ಹೇಗೆ ವಿಜೃಂಭಿಸುತ್ತದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಅಸಹಾಯಕತೆ, ವಸೂಲಿತನ, ದಗಲ್‌ಬಾಜಿತನಗಳು, ಹಾದರ, ಅನ್ಯಾಯಗಳು, ಹಣದ ಆಮಿಷಗಳು, ಅಪ್ರಮಾಣಿಕತೆಗಳು ವೈಯಕ್ತಿಕವೇ ಆದರೂ ಮನುಷ್ಯ ಸಂಬಂಧಗಳ ಸ್ವಾರ್ಥ ಮತ್ತು ರಾಜಕಾರಣದಿಂದ ಮುಕ್ತವಾಗಿಲ್ಲವೆಂಬುದು ಇಲ್ಲಿ ಖಾತ್ರಿಯಾಗುತ್ತದೆ. ಕ್ಯಾತನಂಥ ಸಣ್ಣಪ್ರಾಯದ ಹುಡುಗನಿಗೆ ರಾಮಪ್ಪನ ರಾಜಕಾರಣದ ಸೂಕ್ಷ್ಮಾತಿಸೂಕ್ಷ್ಮ ಲೆಕ್ಕಾಚಾರಗಳ ಅರಿವಿಲ್ಲದ ಕಾರಣ ಅದು ಕ್ಯಾತನ ಮಿತಿಯೆಂಬುದನ್ನು ಕಾದಂಬರಿ ಹೇಳುತ್ತದೆ. ಆ ಕಾರಣಕ್ಕೆ ರಾಮಪ್ಪನ ಬಗ್ಗೆ

---

೧೭. ಅದೇ., ಪುಟ. ೫೦

ಕ್ಯಾತನಿಗೆ ಗೌರವ ಹುಟ್ಟಲಿಕ್ಕೆ ಕಾರಣವಾಗಿದೆ. ಸಿನಿಮಾ ರಂಗದಂತಹ ಸಾಂಸ್ಕೃತಿಕ ಲೋಕ ತನ್ನ ತಾಂತ್ರಿಕ ನಾವಿನ್ಯತೆಯ ಕಾರಣ ತನ್ನ ಆಕರ್ಷಣೆಯನ್ನು ಹೆಚ್ಚಿಸಿಕೊಂಡಿದೆ. ಆ ಆಕರ್ಷಣೆಗೆ ಸುಲಭವಾಗಿ ಒಳಗಾಗುವ ಕೊಳಗೇರಿಯ ಪದ್ದಿಯಂಥವರ ಆಸೆಗಳು, ಅವಳ ಅಪ್ಪನ ಭ್ರಮೆಗಳು ಇವರಿಬ್ಬರ ಸಿನಿಮಾ ದೌರ್ಬಲ್ಯಗಳನ್ನು ಚೆನ್ನಾಗಿ ಬಳಸಿಕೊಳ್ಳುವ ಶಂಕರನಾರಾಯಣನ ಚಾಲಾಕಿತನಗಳು, ಶೂಟಿಂಗ್ ಹೆಸರಲ್ಲಿ ನಡೆಯುವ ಶೋಷಣೆಗಳು, ಕೊಳಗೇರಿಯ ಸಾಮಾಜಿಕ ಪರಿಸರದ ವಿದ್ಯುಕ್ತ ಉದಾಹರಣೆಗಳಾಗಿ ದಾಖಲಾಗಿವೆ. ಈ ನಿಟ್ಟಿನಲ್ಲಿ ನಾಗರಾಜನಾಯ್ಡುವಿನ ಸಣ್ಣತನ, ರಂಗಜಟ್ಟಿಯ ಕುಡಿತ ಮತ್ತು ಜೂಜಿನ ಖಯಾಲಿ ಕ್ಯಾತನನ್ನು ಎಡೆಬಿಡದೆ ಕಾಡುತ್ತವೆ. ಒಟ್ಟಾರೆ ಕೊಳಗೇರಿಯ ಬದುಕು ತೀರಾ ಅಸಹನೀಯ ಮತ್ತು ಗಂಡಿನ ಯಜಮಾನಿಕೆಯ ಸಂಬಂಧಗಳು ಎಲ್ಲರಲ್ಲೂ ಎದ್ದುಕಾಣುವ ಅಂಶಗಳೇ ಈ ಸ್ಥಿತಿ ಕ್ಯಾತನ ಕಣ್ಣಲ್ಲಿ ಕುಣಿಯುತ್ತದೆ.

ಕ್ರೂರ ವ್ಯವಸ್ಥೆಯ ಭ್ರಷ್ಟತೆಯಲ್ಲಿ ಮುಗ್ಧ, ನಿರ್ಗತಿಕ, ನಿರಪರಾಧಿ ವೃದ್ಧೆಯೊಬ್ಬಳ ಬದುಕಿನ ನೋವನ್ನು ಹಾಗೂ ವಿಪರೀತ ಮಾನವೀಯ ಅನುಕಂಪವನ್ನು ಚಿತ್ರಿಸುವ ಕಥೆ 'ಒಂದು ಬಾಗಿಲು' ಇಲ್ಲಿ ಮಾನವೀಯ ಅನುಕಂಪವನ್ನು ಚಿತ್ರಿಸುವಾಗ ಲೇಖಕರು ಸರಳತೆಯಲ್ಲಿಯೇ ಸಂಕೀರ್ಣವಾದ ನೇರ ನಿರೂಪಣೆಯನ್ನು ಕೊಡುತ್ತಾ ಹೋಗುವುದು ಕಂಡುಬರುತ್ತದೆ. ಈ ಕಥೆಯು ಮೇಲುನೋಟಕ್ಕೆ ವರದಿ ವೃತ್ತಾಂತವೆಂಬಂತೆ ಭಾಸವಾದರೂ ಇದು ವರದಿಯಂತೆ ಏಕಮುಖ ಉದ್ದೇಶವುಳ್ಳದ್ದಾಗಿರದೇ ಇಂದಿನ ಸಮಾಜದ ಸಂದರ್ಭಕ್ಕೆ ಆಲೋಚನೆಯ ತೆಕ್ಕೆಗೆ ಒಳಪಡಿಸುವಂಥದ್ದಾಗಿದೆ. ನಿರ್ದೇಶಕನ ಇಚ್ಛೆಯಂತೆ ಒಂದು ಮನೆಕಟ್ಟುವ ಆಶಯದೊಂದಿಗೆ ಈ ಕಥೆ ಪ್ರಾರಂಭವಾಗುತ್ತದೆ. ಇದು ಮನೆಕಟ್ಟುವ ಕೆಲಸಗಾರನ ಬದುಕಿನ ಅರ್ಥವನ್ನು ಸಾಂಕೇತಿಕವಾಗಿ ರೂಪಿಸುತ್ತಾ ಹೋಗುತ್ತದೆ. ಈ ಕೆಲಸಗಾರ ವರ್ಗದಲ್ಲಿ ಮೇಸ್ತ್ರಿ ದಾಸ್, ಪೆರುಮಾಳ, ಮುನಿರಾಜ, ಯಮುನಮ್ಮ, ರಾಜಮ್ಮ, ಮುನಿಯಮ್ಮ, ಚಿನ್ನಮ್ಮಾ ಎಂಬಂತಹ ಹೆಸರುಗಳಲ್ಲಿ 'ಚಿನ್ನಮ್ಮಾ' ಎದ್ದುಕಾಣುವ ಹೆಸರು ವ್ಯವಸ್ಥೆಯ ಘಟನೆಯೊಂದರ ವಿವರಗಳನ್ನು ಕಥೆಗಾರರು ಚಿನ್ನಮ್ಮನ ಬದುಕಿನ ದುರಂತದಲ್ಲಿ ಮಡುಗಟ್ಟಿಸಲು ಪ್ರಯತ್ನಿಸಿದ್ದಾರೆ.

ಹೆಚ್ಚು ಚುರುಕಾಗಿ ಹಾಗೂ ಲವಲವಿಕೆಯಿಂದ ಕೆಲಸಮಾಡುವ ಮುದುಕಿ ಚಿನ್ನಮ್ಮ ಅವಳ ನಿರ್ಗತಿಕ ಬದುಕಿನ ಮೇಲೆ ನಿವೇದಕನಿಗೆ ಕರುಣೆ ಹುಟ್ಟುತ್ತದಲ್ಲದೆ, ವಿಪರೀತ ಅನುಕಂಪ ಬೆಳೆಯುತ್ತದೆ. ಆಕೆಯ ಅಳಲಿನಂತೆ ಅವಳ ಗುಡಿಸಲಿಗೊಂದು ಬಾಗಿಲನ್ನು ಮಾಡಿಸಿಕೊಟ್ಟು ಅದರಿಂದ ಬೇಗ ನಿರ್ಲಿಪ್ತನಾಗಬೇಕೆಂಬ ಮನದಾಸೆಯುಳ್ಳವನಾಗಿದ್ದಾನೆ. ಆದರೆ ಕ್ರೂರ ಪರಿಸರ ವ್ಯವಸ್ಥೆ ಇದನ್ನು ಸಹಿಸುತ್ತಿಲ್ಲ. ಇದನ್ನು ಹಾಸ್ಯಾಸ್ಪದ ಸಂಗತಿಯೆಂದು ತಿಳಿದು ಸಂತೋಷಪಡುವ ಜನರಿದ್ದಾರೆ. ಮೇಸ್ತ್ರಿ ದಾಸ್, ಮುನಿರಾಜು ಮುಂತಾದ ಕೆಲಸಗಾರರಂತಹ ಗುಂಪೇ ನಮ್ಮಲ್ಲಿದೆ ಎಂಬುದನ್ನು ಈ ಕಥೆಯು ಮಾರ್ಮಿಕವಾಗಿ ಗಂಡಿನ ಯಜಮಾನಿಕೆಯನ್ನು ಚಿತ್ರಿಸುತ್ತದೆ. ಆದರೆ

ನಿವೇದಕನ ಔದಾರ್ಯದಲ್ಲಿ ಒಂದು ದಿಟ್ಟತನವಿದೆ. ಆತ್ಮವಿಶ್ವಾಸವಿದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ ಸನ್ನಿವೇಶವೊಂದರಲ್ಲಿ ಚಿನ್ನಮ್ಮನ ಬಗ್ಗೆ ಕೆಲಸಗಾರರು ಆಡಿಕೊಳ್ಳುವ ಮಾತನ್ನು ತಿಳಿದಾಗ ನಿವೇದಕನು ವ್ಯಂಗ್ಯವಾಗಿ ನಕ್ಕು "ನೂರಾರು ಘಟ್ಟಗಳಲ್ಲಿ ಅಪರಾಧಿಗಳೂ ನೀಚರೂ ಆದ ಈ ಜನರಲ್ಲಿ ಚಿನ್ನಮ್ಮನದೂ ಒಂದು ಘಟ್ಟವಲ್ಲವೆ ಎಂದು ಕೇಳಿಕೊಳ್ಳುವಾಗ ಸಹ ಆಕೆಯ ಕುಳ್ಳದೇಹ, ಬದುಕುವ ಆಸೆಯಿಂದ ಎಲ್ಲರಿಗಿಂತ ಹೆಚ್ಚು ಚುರುಕಾಗಿ ಕೆಲಸಮಾಡುವ ಅನಿವಾರ್ಯತೆ ಮನಸ್ಸು ತುಂಬಿತು."[೧೮]

ಸಾಮಾಜಿಕ ಅನುಭವಗಳಲ್ಲಿರುವ ಮೌಲ್ಯಗಳ ಸಂಬಂಧಗಳನ್ನು ನಿವೇದಕ ತನ್ನ ಅನುಭವದ ಮೂಲಕವೇ ಗುರುತಿಸುತ್ತಾ ಹೋಗುತ್ತಾನೆ. ಯಾಕೆಂದರೆ ಲಂಕೇಶರ ಕಥಾಸಾಹಿತ್ಯದ ಒತ್ತು ಇರುವುದು ಮನುಷ್ಯನ ವೈಯಕ್ತಿಕ ಪಾತಳಿಯ ಮೇಲೆ ವ್ಯವಸ್ಥೆಯ ಬಗ್ಗೆ ಅವರಲ್ಲಿರುವ ಪ್ರಾಮಾಣಿಕ ಅನುಮಾನ, ಕ್ರೌರ್ಯ, ಭ್ರಷ್ಟತೆಗಳನ್ನು ಅವರು ಥಟ್ಟನೆ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ನನ್ನ ಹುಚ್ಚಿನಲ್ಲಿ ಕೆಲಸತ್ಯ ಹೊಳೆಯುತ್ತೆ, ಈ ಚಿನ್ನಮ್ಮ ಕಳ್ಳಿ ಅಲ್ಲ ಅನಿಸ್ತಿದೆ. ಈ ತಬ್ಬಲಿಗೆ ನಾನೇನೂ ಮಾಡೋಕೆ ಆಗ್ತಿಲ್ಲ ಆದರೆ ನಿನಗೆ ಮಾಡ್ತೇನೆ. ಅಂದೆ 'ಏನ್ಸಾರ್'? ನೀನು ನಾಳೆ ಬೆಳಿಗ್ಗೆ ಆಕೆಯ ಬಾಗಿಲು ಕದವನ್ನು ಹಿಂದಿರುಗಿಸದೇ ಇದ್ರೆ ನಿನ್ನ ಮೇಲೆ ಕಂಪ್ಲೆಂಟ್ ಕೊಡ್ತೆನೆ ಪೋಲಿಸಿಗೆ ಆತ ತಬ್ಬಿಬ್ಬಾದ ಏನೇನೋ ಸದ್ದು ಮಾಡತೊಡಗಿದ ಅವನ ಕೆನ್ನೆಗೆ ನಾಲ್ಕು ಬಾರಿಸಿದೆ. ಅಳತೊಡಗಿದ. ತೆಲುಗಿನಲ್ಲಿ ದಾಸ್‌ನನ್ನು ಬೈಯ್ಯತೊಡಗಿದ. ನಾನು ಏದುಸಿರು ಬಿಡುತ್ತಾ ಹೇಳಿದೆ ಎಂದು ನಿವೇದಕ ಮುನಿರಾಜುಗೆ ಗದರಿಸಿದಾಗ ಸತ್ಯ ಹೊರಬರುತ್ತೆ. ನಿವೇದಕನ ಆತ್ಮಸಾಕ್ಷಿಗೆ ಬೆಲೆ ಸಿಗುತ್ತೆ. ಕಾಣದ ಕೈಗಳು ನಡೆಸಿದ ಕೈಚಳಕ ಹೊರಬರುತ್ತದೆ. ಈ ಅನುಭವ ತೀವ್ರತೆಯೇ ನೈಜಜೀವನಕ್ಕೆ ನಾಂದಿಯಾಗುತ್ತದೆ. ಲಂಕೇಶರು ಜೀವನವನ್ನು ನಿಷ್ಠುರವಾಗಿ, ತೀಕ್ಷ್ಣವಾಗಿ, ಕಟುವಾಗಿ ನೋಡುವ ಎದೆಗಾರಿಕೆಯನ್ನು ಮೆರೆಯುತ್ತಾರೆ ಎಂಬುದಕ್ಕೆ ಈ ಕಥೆ ಉತ್ತಮ ನಿದರ್ಶನವಾಗಬಲ್ಲದು.

ಸಮಾಜದಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದವರ ಬದುಕನ್ನು ಅದಕ್ಕಿರುವ ಶೋಷಣೆಯ ವಿಭಿನ್ನ ನೆಲೆಗಳನ್ನು ಲೇಖಕರು ಇಲ್ಲಿ ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಅಷ್ಟಲ್ಲದೇ ಸುತ್ತಲಿನ ಪರಿಸರವನ್ನು ಗಮನಿಸದೆ ತರಾತುರಿಯಿಂದ ಕೈಗೊಂಡ ಸಹಾಯವು ಎಂಥ ಹಾಸ್ಯಾಸ್ಪದವಾಗಬಲ್ಲುದೆಂಬುದನ್ನು ಅದಕ್ಕೆ ತೆಗೆದುಕೊಳ್ಳಬೇಕಾದ ನಿರ್ಧಾರದ ಬಗ್ಗೆ ಸ್ಪಷ್ಟ ಅರ್ಥವನ್ನು ಸೂಚಿಸಿದ್ದಾರೆ.

ಗಂಡಿನ ಯಜಮಾನಿಕೆ, ದರ್ಪ, ಗೈರತ್ತೇ ಅಂತಿಮವಲ್ಲ ಮತ್ತು ಶಾಶ್ವತ ಕೂಡ ಅಲ್ಲ. ಬದಲಿಗೆ ಜೀವನ ದೃಷ್ಟಿಯನ್ನು ಮಾಗಿಸಿ ವಿನಯವೆಂಬುದು ಒಂದು ಮುಖ್ಯ ಮೌಲ್ಯವಾಗುವಂತೆ

---

೧೮. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೧೨.

ಬದುಕಿನಲ್ಲಿ ಅದರ ಸಾಫಲ್ಯತೆಯನ್ನು ತಿಳಿಸುವ ಮತ್ತೊಂದು ಪ್ರಮುಖವಾದ ಕಥೆಯೆಂದರೆ 'ತೋಟದವನು' ಮನುಷ್ಯರು ಜೀವನದಲ್ಲಿ ತಮ್ಮ ಸ್ವಾರ್ಥಕ್ಕಾಗಿ ನಡೆಸುವ ಜಿದ್ದಿನ ಒಳನೋಟವನ್ನು ಲೇಖಕರು ಈ ಕಥೆಯಲ್ಲಿ ಪ್ರತಿಬಿಂಬಿಸಿದ್ದಾರೆ. ಇಲ್ಲಿ ತಮ್ಮಣ್ಣ ನಾಯಕನಂತೆ ಕಂಡರೆ, ಬಸವಯ್ಯ ಪ್ರತಿನಾಯಕನಂತೆ ಕಂಡುಬರುತ್ತಾನೆ. ಇಲ್ಲಿನ ಕಥಾತಂತ್ರದ ವಿಶೇಷತೆಯೆಂದರೆ ಲೇಖಕರು ತಮ್ಮಣ್ಣನ ಪಾತ್ರದ ಮೂಲಕ ಈ ಕಥೆಯನ್ನು ಪ್ರಾರಂಭಿಸಿದರೂ ಕಥೆಯು ಒಂದು ಹಂತಕ್ಕೆ ತಲುಪಿದಾಗ ಕಥೆಯಲ್ಲಿ ಕಥೆಯೆಂಬಂತೆ ತಮ್ಮಣ್ಣನೇ ಕಥೆಗಾರನಾಗಿ ತನ್ನ ಜೀವನ ವೃತ್ತಾಂತವನ್ನು ಹಿನ್ನೋಟದ ಮುಖಾಂತರ ಬಿಚ್ಚಿಕೊಳ್ಳುತ್ತಾ ಹೋಗುವುದು ಕುತೂಹಲ ಕೆಳಿಸುವಂಥದ್ದು. ಒಂದುರೀತಿಯಲ್ಲಿ ಇದು ಜಾನಪದ ಕಥೆಯ ಪ್ರಾರಂಭದ ಧಾಟಿಯನ್ನು ನೆನಪಿಗೆ ತಂದುಕೊಡುತ್ತದೆ.

ಬಸವಯ್ಯನು ತಮ್ಮಣ್ಣನ ಭೂಮಿಯನ್ನು ಅನ್ಯಾಯದಿಂದ ಕಬಳಿಸಿ ಸಮಾಜದಲ್ಲಿ ಪ್ರತಿಷ್ಠೆಯಿಂದ ಮೆರೆಯುವಾಗ, ತಮ್ಮಣ್ಣನು ಅವನ ಎದುರಾಳಿಯಾಗಿ ಜಿದ್ದಿನ ಬದುಕನ್ನು ನಡೆಸದೆ ಅವನ ಮೇಲಿದ್ದ ದ್ವೇಷ, ಅಸೂಯೆ, ನಿರ್ವೀರ್ಯತೆ, ತನ್ನ ಹಣ, ಸಂಪತ್ತು, ಪ್ರತಿಷ್ಠೆ ಎಲ್ಲದಕ್ಕೂ ವಿದಾಯ ಹೇಳಿ ನಿರ್ಲಿಪ್ತನಾಗುತ್ತಾನೆ. ಆ ಸೇಡಿಗಾಗಿ ಅಹಿಂಸಾ ಮಾರ್ಗವನ್ನು ತುಳಿದು ಸ್ವಚ್ಛಂದ ಬದುಕನ್ನು ಬಯಸುತ್ತಾನೆ. ಇಲ್ಲಿ ಲೇಖಕರಿಗೆ ಗಾಂಧೀಜಿಯ ಅಹಿಂಸಾ ಚಳುವಳಿಯು ತಣ್ಣನೆಯ ಪ್ರಭಾವನ್ನುಂಟು ಮಾಡಿದೆ. ಈ ಅನುಭವವನ್ನು ಲಂಕೇಶರು ತಮ್ಮಣ್ಣನ ವ್ಯಕ್ತಿತ್ವದ ಮುಖಾಂತರ ತೋರುತ್ತಿದ್ದಾರೆ. "ತಮ್ಮಣ್ಣ ಈ ಧೂರ್ತ ಬಸವಯ್ಯನನ್ನು ಪೂರ್ತಿ ಹತ್ತಿಕ್ಕುವ ಮಾರ್ಗಕ್ಕಾಗಿ ಹುಡುಕಿದ. ತನ್ನೆಲ್ಲಾ ಅನುಭವವನ್ನು ಲಾವಣಿ ಮಾಡಿ ಹಾಡತೊಡಗಿದ. ತಮ್ಮಣ್ಣ ಮತ್ತು ಬಸವಯ್ಯನ ಸ್ಪರ್ಧೆ ಕಣ್ಣಿಗೆ ಕಾಣುವ ವಿಷಯಗಳಿಂದ ಕಾಣದ ವಿಷಯದತ್ತ ಸಾಗತೊಡಗಿತ್ತು. ಬಸವಯ್ಯನಲ್ಲಿ ಇದಕ್ಕೆ ಉತ್ತರವಿರಲಿಲ್ಲ. ತಾನೂ ಹಾಡಲು ಯತ್ನಿಸಿದಹಾಗೆ ಆಗಲಿಲ್ಲ. ಜಮೀನನ್ನು ಇನ್ನೂ ಚೆನ್ನಾಗಿ ಕೃಷಿ ಮಾಡಿದ, ಇದು ತಮ್ಮಣ್ಣನಿಗೆ ಉತ್ತರವಾಗಲಿಲ್ಲ. ತಮ್ಮಣ್ಣನ ಖ್ಯಾತಿ ಎಲ್ಲೆಲ್ಲೂ ಹರಡತೊಡಗಿತು. ಬಸವಯ್ಯನ ಕ್ರೌರ್ಯ, ನೀಚತನ ಕೂಡ ತಮ್ಮಣ್ಣನ ಹಾಡಿನಲ್ಲಿ ಬರತೊಡಗಿದವು. ಸಮಾಜದ ಗಣ್ಯರು, ರಾಜಕಾರಣಿಗಳು ತಮ್ಮಣ್ಣನನ್ನು ನೋಡಲು ಬರತೊಡಗಿದರು. ಜಾನಪದ ವಿದ್ವಾಂಸರು ದುಂಬಾಲು ಬಿದ್ದಿದ್ದರು"[೧೯] ಬಸವಯ್ಯನ ಸಾಚಾತನ ಹಾಗೂ ಕ್ರೌರ್ಯಗಳನ್ನು ಹಿಂಸೆಯಿಂದ ಎದುರಿಸಲಾರದೆ ಲಾವಣಿ ರೂಪದಲ್ಲಿ ಕಟ್ಟಿಹಾಡುವ ತಮ್ಮಣ್ಣ ಒಬ್ಬ ಸಂತನಂತೆ ಕಂಡುಬರುತ್ತಾನೆ.

ತಮ್ಮಣ್ಣನ ಕಾಯಿಲೆ ಬಸವಯ್ಯನಿಗೆ ಆರೋಗ್ಯ ಎಂಬಂತೆ ಬಸವಯ್ಯ ಇನ್ನೂ ಸಹಿಸದಾಗ ತಮ್ಮಣ್ಣ ಮತ್ತೊಂದು ಮಾರ್ಗವನ್ನು ಹಿಡಿಯುತ್ತಾನೆ. ಅವನೇ ಹೇಳುವಂತೆ ಒಂದು ದಿನ

---

೧೯. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೭೨

ಎಲ್ಲವನ್ನೂ ಬಿಟ್ಟು ಹೊರಟುಬಿಟ್ಟೆ. ನಾನು ಹೊರಟುಬಂದ ಕೆಲದಿನಗಳಲ್ಲೇ ಬಸವಯ್ಯ ತೀರಿಕೊಂಡ. ಜೀವನ ಸಾಗಿಸೋದಕ್ಕೆ ಅವನಲ್ಲಿ ಕಾರಣಗಳೇ ಉಳಿದಿರಲಿಲ್ಲ ಎಂಬಲ್ಲಿ ತಮ್ಮಣ್ಣನ ಗೆಲುವಿದೆ. ಅವನ ವಿನಯಕ್ಕೆ ಅಥವಾ ಸಂತಗುಣಕ್ಕೆ ಒಂದು ಮೌಲ್ಯಬರುತ್ತದೆ. ಇಲ್ಲಿ ತಮ್ಮಣ್ಣನ ಮಾಗಿದ ಮನಸ್ಸು ಜೀವನದ ಹುಳಿಯನ್ನು ಕಳೆದುಕೊಂಡು ಮಧುರವಾಗುತ್ತದೆ.

ಹೀಗೆ ಕಥೆಯು ಬದುಕಿನಲ್ಲಿ ಸಂಪತ್ತು; ಹಣ, ಅಧಿಕಾರ, ಪ್ರತಿಷ್ಠೆಗಾಗಿ ಇನ್ನೊಬ್ಬರೊಂದಿಗೆ ದ್ವೇಷಭರಿತ ಜೀವನವನ್ನು ನಡೆಸಲಾರದೆ ಸಮಾಜದಲ್ಲಿಯ ಮೋಸ, ವಂಚನೆ ನೀಚತನ ಇವೆಲ್ಲವುಗಳನ್ನು ಸಹಾನುಭೂತಿಯಿಂದ ಕಂಡು ಸತ್ಯ ಅಹಿಂಸೆಯಿಂದ ಕೂಡಿದ ಸಹಜ ಸ್ವಚ್ಛಂದ ಬದುಕು ನಮ್ಮದಾಗಬೇಕೆಂಬ ಆಶಯವನ್ನು ತನ್ನ ಅಂತರಂಗದಲ್ಲಿ ಹುದುಗಿಸಿಕೊಂಡಿದೆ. ಲೇಖಕರ ಅನುಭವನಿಷ್ಠ ಸತ್ಯಕ್ಕೆ ಇದು ಹತ್ತಿರವಾಗಿದೆಯಲ್ಲದೆ ಅವರ ಮಾಗಿದ ಪ್ರತಿಭೆಗೆ ಸಾಕ್ಷಿಯಾಗಿದೆ.

'ರುದ್ರಾಣಿಯ ಸುಪ್ತಕತೆ' ಒಂದು ಕುಟುಂಬದ ದುರಂತವನ್ನು ಹೇಳುತ್ತದೆ. ರುದ್ರಾಣಿಯ ತಂದೆ ತಾಯಿ ಮತ್ತು ತಮ್ಮ ಸಾವನ್ನಪ್ಪಿದಲ್ಲಿ ಒಂದು ದುರಂತವಾದರೆ ರುದ್ರಾಣಿ ಕೆಲಸಮಾಡುತ್ತಿದ್ದ ಕಾಲೇಜಿನ ಪ್ರಿನ್ಸಿಪಾಲ್ ಮೀನಾಕ್ಷಮ್ಮ ಸತ್ತದ್ದು ಮತ್ತೊಂದು ದುರಂತ. ಕಾಲೇಜಿನ ಅಧ್ಯಕ್ಷ ಮುತ್ತಣ್ಣ – ಮೀನಾಕ್ಷಮ್ಮರ ಸಂಬಂಧ ನಿಗೂಢವಾದದ್ದು ಆಕೆ ಸತ್ತಿರುವುದಾಗಿ ಮುತ್ತಣ್ಣ ಸುದ್ದಿ ನೀಡಿರುತ್ತಾನೆ. ಜೊತೆಗೆ ಆಕೆಯ ಆಸ್ತಿ ಲಪಟಾಯಿಸುವ ಹುನ್ನಾರವನ್ನು ನಡೆಸಿರುತ್ತಾನೆ. ಮುತ್ತಣ್ಣನ ಈ ಕುಟಿಲತೆಯನ್ನು ಬಯಲುಮಾಡುವ ರುದ್ರಾಣಿ ಒಂದೆಡೆ ದಿವ್ಯಮೌನಿಯಾದರೆ ಮತ್ತೊಂದೆಡೆ ನಿದಾಕ್ಷಿಣ್ಯ ಭಾಷಿಣಿಯಾಗಿರುತ್ತಾಳೆ. ಮೀನಾಕ್ಷಮ್ಮನ ಸ್ಮಶಾನಯಾತ್ರೆಯ ದಿನ ರುದ್ರಾಣಿ ಸಾವಿನ ನಿಗೂಢತೆಯ ಬಗ್ಗೆ ಮಾತಾಡಿ ಮುತ್ತಣ್ಣ ತತ್ತರಿಸುವಂತೆ ಮಾಡುತ್ತಾಳೆ. ಇದನ್ನು ಅರ್ಥಮಾಡಿಕೊಂಡ ಮುತ್ತಣ್ಣ ರುದ್ರಾಣಿಯನ್ನು ಕಾಲೇಜಿನ ಮುಖ್ಯಸ್ಥೆಯನ್ನಾಗಿ ಮಾಡಿ ಕಾಲೇಜಿಗೆ ಸವಲತ್ತು ಒದಗಿಸುವಲ್ಲಿ ಆಸಕ್ತನಾಗುತ್ತಾನೆ.

ಕಥೆಯಲ್ಲಿ ರುದ್ರಾಣಿಯ ರೊಚ್ಚು, ಅನ್ಯಾಯ ಎಸಗಿದವರ ಬಗ್ಗೆ ಕೆಂಡಾಮಂಡಲಳಾಗಿ ಪ್ರತಿಭಟಿಸಿ ನ್ಯಾಯ ದೊರಕಿಸುವ ಕೆಚ್ಚು, ಒಬ್ಬ ಭರ್ಜರಿ ಗಂಡಸನ್ನು ಮುದುರಿ ಕೂರಿಸಬಲ್ಲ ಆತ್ಮಸ್ಥೈರ್ಯ ಇವೆಲ್ಲ ಕಾಣಬರುತ್ತದೆ. ಕೌಟುಂಬಿಕ ಸಂದರ್ಭದಲ್ಲಿ ಹೆತ್ತವರ ಸಾವನ್ನು ಮೌನದಲ್ಲಿ ನುಂಗಿದಳು. ಸಾಮಾಜಿಕ ಸಂದರ್ಭದಲ್ಲಿ ಏರ್ಪಟ್ಟ ಶೋಷಣೆಯ ವಿರುದ್ಧ ಕಿಡಿಕಾರುತ್ತಾಳೆ. ಮುತ್ತಣ್ಣ – ಮಂದಣ್ಣರಂಥವರಿಗೆ ಬುದ್ಧಿ ಕಲಿಸುತ್ತಾಳೆ. ಹಿಂಸೆಗೆ ಹಿಂಸೆಯ ಪ್ರತಿರೂಪವಾಗುತ್ತಾಳೆ.

'ಜಯಂತನ ಸ್ವಗತ' ಕಥೆಯಲ್ಲಿ ತಂದೆ ಮತ್ತು ಮಗನ ಜೀವನ ಪ್ರೀತಿಗಳು ತದ್ವಿರುದ್ಧವಾದಂತಹವು. ಯಾಕೆಂದರೆ ತಂದೆ ಯಜಮಾನಿಕೆಯ ಸಂಕೇತವಾಗಿ ಸ್ವಾತಂತ್ರ್ಯವನ್ನು

ಅನುಭವಿಸುತ್ತಿದ್ದರೆ. ಮಗ ಆ ಸ್ವಾತಂತ್ರ್ಯದ ಕಾರಣದಿಂದ ಪರಾಧೀನತೆಯನ್ನು ಅನುಭವಿಸುತ್ತಿರುತ್ತಾನೆ. ಜಯಂತನದು ಮಾನಸಿಕ ಅಸ್ವಸ್ಥತೆಯಲ್ಲ. ಇದು ತನ್ನ ತಂದೆಯ ವರ್ತನೆಯಿಂದ ತಾನು ಅನುಭವಿಸುತ್ತಿರುವ ಪರಾಧೀನತೆಯ ವಿರುದ್ಧವಾಗಿ ಅವನಲ್ಲಿ ಹುಟ್ಟಿದ ಅಸಹನೆ ಎಂಬುದು ಸ್ಪಷ್ಟ ತಾನು ೭೦ ವರ್ಷದ ಮುದುಕನಾದರೂ ಲವಲವಿಕೆ, ಜೀವನೋತ್ಸಾಹ, ಜೀವನಪ್ರೀತಿ ಚಿಮ್ಮುತ್ತ ಬದುಕುತ್ತಿರುವ ತಂದೆ ಇಲ್ಲಿ ಜಯಂತನ ಅಸ್ವಸ್ಥತೆಗೆ ಯಾವುದೇ ಸಾಮಾಜಿಕ ಕಾರಣಗಳಿಲ್ಲ. ಅಂದರೆ ವ್ಯಕ್ತಿಗತ ನೆಲೆಯ ಸಮಸ್ಯೆ ಇಲ್ಲಿ ಎರಡು ಪೀಳಿಗೆಗಳ ನಡುವಿನ ವೈದೃಶ್ಯಗಳಲ್ಲಿ ವ್ಯಕ್ತವಾಗುತ್ತಿದೆಯೇ ಹೊರತು ಸಾಮಾಜಿಕ ಸಂಚಲನದ ಆಧುನಿಕತೆಯ ಕಾರಣಕ್ಕಾಗಿ ಅಲ್ಲ. ಈ ವೈದೃಶ್ಯವೂ ಕೂಡ ಲೋಕರೂಢಿಯಂತೆ ಸಹಜ ನೆಲೆಯದ್ದಲ್ಲ. ಅಪ್ಪನಿಗಿರಬೇಕಾದ ಗುಮಾನಿ, ಸಿಡುಕುತನಗಳು ಇಲ್ಲಿ ಮಗನಿಗಿದೆ. ಮಗನಿಗೆ ಇರಬೇಕಾದ ಉಲ್ಲಾಸ ಸಂಭ್ರಮ, ಜೀವನಪ್ರೀತಿಗಳು ಇಲ್ಲಿ ಅಪ್ಪನಿಗಿವೆ. ಇಲ್ಲಿ ಮಗನಿಗಿರಬೇಕಾದ ಜೀವನಪ್ರೀತಿ ಅಪ್ಪನಿಗಿದೆ ಮತ್ತು ಮಗನಿಗೆ ಆ ಜೀವನ ಪ್ರೀತಿ ಕ್ಷೀಣಿಸಲು ತಂದೆಯೇ ಕಾರಣ. "ಅದನ್ನ ಹೇಳೋಕೆ ಇಷ್ಟೆಲ್ಲ ಹೇಳಿದ್ದು! ಏನಂದ್ರೆ ನನ್ನ ಅಪ್ಪ–ಅಮ್ಮ ನನ್ನಲ್ಲಿ ಆದ ಬದಲಾವಣೆ ನೋಡಿ ಖುಷಿ ಪಟ್ರು ಅಂತಿನಲ್ಲ. ಖುಷಿಯೇನೋ ಸರಿ. ಅವರಲ್ಲಿದ್ದ ಭಯ ಮಾತ್ರ ಭಯಂಕರ ಮಗ ಬದಲಾಗಿದ್ದಾನೆ. ಮತ್ತೆ ಗಾಂಜಾ ಸೇದೋದಕ್ಕೆ ಶುರು ಮಾಡಿದ್ರೆ ಗತಿ ಏನು ಅಂತ ಹೆದರಿಕೊಂಡ್ರು. ನಾನು ಚಿಕ್ಕವನಾಗಿದ್ದಾಗ ಇದ್ದ ಅಪ್ಪ–ಅಮ್ಮನ ಥರ ಆದ್ರು. ಅಪ್ಪನ ಐಲುಕಮ್ಮಿ ಆಯಿತು. ಅಪ್ಪ ನಿಜಕ್ಕೂ ತುಂಬ ಶಿಸ್ತಿನ ಮನುಷ್ಯ. ಇಡೀ ಭಾನುವಾರ ಕಾರ್ ತೊಳೆದು, ಮನೇನೆಲ್ಲ ಕ್ಲೀನ್ ಮಾಡಿ ಪುಸ್ತಕಾನೆಲ್ಲ ಜೋಡಿಸಿ...... ಓ್ಞ ಮರೆತಿದ್ದ ಈ ಜಾನೆಟ್ ನೆನಪಿನ ಜೊತೇಗೆ ಇನ್ನೊಂದು ನೆನಪಾಗುತ್ತೆ. ಅಪ್ಪ ಇಂಜಿನಿಯರ್ ಮತ್ತು ಕವಿ. ಅದೆಷ್ಟೋ ಡ್ಯಾಮ್‌ಕಟ್ಟಿದ್ದಾನಂತೆ ಅವನ ಕಾವ್ಯಕ್ಕೆ ಎಷ್ಟೋ ಅವಾರ್ಡ್ ಬಂದಿವೆಯಂತೆ. ಮುಂಚೆ ಇದನ್ನೆಲ್ಲ ಕೇಳಿ ಜನಕ್ಕೆ ಬುದ್ಧಿ ಇಲ್ಲ ಅಪ್ಪ ಅವರಿಗೆ ಗೊತ್ತಿಲ್ಲ. ಅನ್ನಿಸ್ತಿತ್ತು ಈಗ ಅವನ ಆನಂದ ಮತ್ತು ಹೆದರಿಕೆ ನೋಡಿ ಅಯ್ಯೋ ಅನ್ನಿಸ್ತು"[೨೦] ಅದಕ್ಕಾಗಿ ತನ್ನ ತಂದೆಯ ಬಗ್ಗೆ ಹೇಳಲು ಪ್ರಾರಂಭಿಸುವುದೇ ನನ್ನಪ್ಪ ಎನ್ನುವ ಮೂಲಕ ಹೀಗೆ 'ಜಯಂತನ ಸ್ವಗತ' ಕಥೆ ತಂದೆ ಮತ್ತು ಮಗ ಒಂದೇ ಕುಟುಂಬದಲ್ಲೇ ಇದ್ದರೂ ಒಲ್ಲದ ಮನಸ್ಸುಗಳಿಂದ ಹೇಗೆ ಜೀವನ ಸಾಗಿಸುತ್ತಿರುತ್ತಾರೆ ಎಂಬುದರ ವಿಚಾರ ಅವಿಭಕ್ತ ಕುಟುಂಬಗಳ ಛಿದ್ರೀಕರಣದ ಜೊತೆ ಆದರ್ಶ ಕುಟುಂಬಗಳ ಛಿದ್ರೀಕರಣವೂ ಇಲ್ಲಿ ಹೇಗೆ ನಡೆಯುತ್ತದೆ ಎಂಬುದರ ಪರಿಧಿಯಲ್ಲೇ ಬಿಚ್ಚಿಕೊಳ್ಳುತ್ತದೆ.

---

೨೦. ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರೆ ಕತೆಗಳು, ಪುಟ. ೧೫

ಪರಸ್ತ್ರೀ ಸಂಬಂಧ, ಜೂಜು, ಮಧ್ಯಸೇವನೆ ಇವೆಲ್ಲವೂ ಆದರ್ಶ ಕುಟುಂಬದ ವಿರುದ್ಧವಾದ ಅಂಶಗಳು ಆದರೆ ನವ್ಯದ ಸಂದರ್ಭಕ್ಕೆ ಮನುಷ್ಯ ಸಂಪೂರ್ಣವಾಗಿ ಇವುಗಳಲ್ಲಿ ತೊಡಗಿಸಿಕೊಂಡು ಗಂಡಿನ ಯಜಮಾನಿಕೆಯನ್ನು ತಂದೆ-ಮಗ ಇಬ್ಬರೂ ನಿಭಾಯಿಸಲು ಮುಂದಾಗುತ್ತಾರೆ. ಇವುಗಳಿಗಾಗಿಯೇ ಪರಿತಪಿಸುವಂತಹ ಆರೋಪವೂ ನವ್ಯಕಥೆಗಾರರ ಮೇಲೆ ಇತ್ತೆಂಬುದು ನಿಜ. ಜಯಂತನ ಆದಿಯಾಗಿ ನಿರೂಪಿತವಾಗುತ್ತದೆ. ಮನುಷ್ಯ ಸಂಬಂಧದಲ್ಲಿ ಗಂಡು ನಿರೂಪಿತ, ಸ್ಥಾಪಿತ ಮೌಲ್ಯಗಳು ನಿರ್ಣಯವಾಗುತ್ತವೆ.

### ೬.೩. ಹಣ ಮತ್ತು ಅಧಿಕಾರ ಶೋಷಣಾ ನೆಲೆಯ ಸಂಬಂಧಗಳು

ಲಂಕೇಶರ ಸೃಜನಶೀಲವಾದ ಸಾಹಿತ್ಯ ಕೃಷಿಯಲ್ಲಿ ಕಥೆ ಕಾದಂಬರಿ, ಆತ್ಮಕಥೆ, ನಾಟಕ ಇವುಗಳಲ್ಲಿ ಲಂಕೇಶರು ಗ್ರಾಮೀಣ ಪರಿಸರದ ಜೀವನ ಬದುಕಿನ ವಿಚಾರಗಳನ್ನು ಪ್ರಮುಖವಾಗಿ ಬರೆಯುತ್ತಾ ಅಲ್ಲಿ ನಡೆಯುವ ಹಣ ಮತ್ತು ಅಧಿಕಾರದ ಚಿಂತನೆಗಳು ಶೋಷಣೆಗಳು ಎಗ್ಗಿಲ್ಲದೆ ನಡೆಯುತ್ತಿರುತ್ತವೆ. ಇವುಗಳನ್ನು ತನ್ನ ಬಾಲ್ಯದಿಂದಲೂ ಕಂಡು ಮನಸ್ಸು ಕರಗಿ ಅವುಗಳನ್ನು ಸಾಹಿತ್ಯರೂಪದಲ್ಲಿ ಕಟ್ಟಿದ್ದಾರೆ. ಲಂಕೇಶರ ಸೃಜನಶೀಲವಾದ ಸಾಹಿತ್ಯಕೃಷಿಗೆ ಮೂಲ ಪ್ರೇರಕಶಕ್ತಿ ಗ್ರಾಮೀಣ ಪರಿಸರ ಅವರು ಯಾವುದೇ ಪ್ರಮಾಣದಲ್ಲಿ ಪಾಶ್ಚಾತ್ಯದ ಪ್ರಭಾವಕ್ಕೆ ಒಳಗಾಗಿದ್ದರೂ ನಗರದ ಆಕರ್ಷಣೆಯ ಪ್ರಭಾವಕ್ಕೆ ಒಳಗಾಗಿ ಆಧುನಿಕತೆಗೆ ತಮ್ಮನ್ನು ತಾವು ತೆರೆದುಕೊಂಡರೂ ಗ್ರಾಮೀಣ ಅನುಭವವನ್ನು ಅಲ್ಲಿ ನಡೆಯುವಂತಹ ಶೋಷಣೆಯನ್ನು ಇವುಗಳನ್ನು ನಿರೂಪಿಸುವಾಗ ಮಾತ್ರ ಅವರು ಹೆಚ್ಚು ಹತ್ತಿರವಾಗುತ್ತಾರೆ. 'ಹುಳಿಮಾವಿನ ಮರ' ಆತ್ಮಕಥನದಲ್ಲಿ ಗ್ರಾಮೀಣ ಬದುಕಿನ ಅನುಭವವನ್ನು ಬಿಚ್ಚಿಡುವಾಗ ಬಾಲ್ಯದಿಂದಲೂ ಅನುಭವಿಸಿದ ಸುತ್ತಮುತ್ತಲ ಪರಿಸರದಲ್ಲಿ ನೋಡಿದ ನೆನಪುಗಳ ಹಿನ್ನೆಲೆಯನ್ನು ಬಿಚ್ಚಿಡುತ್ತಾರೆ. ಅವರು ತಮ್ಮ ಬದುಕನ್ನು ವೈಭವೀಕರಿಸಿಕೊಳ್ಳಬೇಕು ಎಂದಾಗಲೀ ಓದುಗರಿಗೆ ರೋಚಕ ಅನುಭವ ಉಂಟಾಗಲಿ ಎಂಬ ಬಾಲಿಷ ತಿಳುವಳಿಕೆಯಾಗಲೀ ಅವರಿಗೆ ಇದ್ದಂತೆ ಕಾಣುವುದಿಲ್ಲ. ತಾವು ಬಾಲ್ಯದ ದಿನಗಳಲ್ಲಿ ಹರಯದ ದಿನಗಳಲ್ಲಿ ಹೇಗಿದ್ದಿರಬಹುದು. ಹೇಗಿದ್ದೀತು ಎನ್ನುವುದರ ಸೂಕ್ಷ್ಮ ಪರಿಚಯವನ್ನು ಸ್ಥೂಲರೂಪದಲ್ಲಿ ಕಟ್ಟಿಕೊಡಲು ಯತ್ನಿಸಿದ್ದಾರೆ. ಕೃತಿಗಳು ಓದುಗರಿಂದ ಓದಿಸಿಕೊಳ್ಳುವ ಮುಖೇನ ಹಲವು ಸೂಕ್ಷ್ಮತೆಗಳನ್ನು ತೆರೆದಿಡುವ ಕೃತಿಗಳಲ್ಲಿ ವಸ್ತು ವಿಷಯಗಳು ಮೂಡಿ ಬಂದಿವೆ.

ಒಂದು ಗ್ರಾಮೀಣ ಪರಿಸರದಲ್ಲಿ ಏನೆಲ್ಲವನ್ನು ನಿರೀಕ್ಷಿಸಬಹುದಾದ ಜಾತಿ, ಮತ, ಹಣ, ಅಧಿಕಾರ, ಶೋಷಣೆ, ಸಿನಿಮಾ, ಕುಸ್ತಿ, ಓದು ಹೀಗೆ ಹತ್ತು ಹಲವು ವಿಷಯಗಳು ಲೇಖಕರನ್ನು ಚಕಿತರನ್ನಾಗಿ ಮಾಡುತ್ತವೆ. ಗ್ರಾಮೀಣ ಬದುಕು, ಸಂತೆಯ ನಂಟು, ಅಲ್ಲಿನ ವಹಿವಾಟು, ಲೇವಾದೇವಿ, ಜಗಳಗಂಟಿ ಅವ್ವ ಹೀಗೆ ನೆನಪಿನ ಸಾಮ್ರಾಜ್ಯವೇ ಅವರ ಸ್ಮೃತಿಪಟಲದಿಂದ

ಒಂದೊಂದಾಗಿ ತೆರೆದುಕೊಳ್ಳುತ್ತವೆ. ಅವರು ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸಿರುವ ಮನುಷ್ಯ ಸಂಬಂಧಗಳ ಬಿರುಕುಗಳು ಬಾಲ್ಯದಲ್ಲಿನ ಅನುಭವಗಳೇ ಆಗಿವೆ. ಗ್ರಾಮೀಣರ ಮುಗ್ಧ ಪ್ರೀತಿ, ಅವ್ವನ ತವರಿನ ಸಂಬಂಧ, ತವರಿನಲ್ಲಿ ನಡೆಯುವ ಹಬ್ಬ, ಜಾತ್ರೆ, ಸಂತೆ ಹಾಗೆಯೇ ನೋಣಬ, ಕ್ಷೌರಿಕ, ಕಮ್ಮಾರ, ಲಿಂಗಾಯತ, ಹರಿಜನ ಇತ್ಯಾದಿ ಜಾತಿ ಸಂಬಂಧಿತ ಆಚಾರವಿಚಾರಗಳು ಇವುಗಳೆಲ್ಲದರ ನಡುವೆಯೇ ಬೆಳೆಯುತ್ತಾ, ಸಾಮಾಜಿಕ ಪರಿಸರ ಹಾಗೂ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುತ್ತಾ ಅವಲೋಕಿಸುತ್ತಾ ಅಲ್ಲಿನ ಆಟಗಳು, ಅರಮನೆ, ಬೇಸಾಯ ವೃತ್ತಿ, ಮದುವೆ, ಮುಂಜಿ, ದಿಬ್ಬಣ, ಶಿಕಾರಿ, ಬಾಲ್ಯದಲ್ಲಿನ ಲೈಂಗಿಕ ಪ್ರಜ್ಞೆ, ನಂಬಿಕೆ ಇತ್ಯಾದಿ ಹಲವು ವಿಚಾರಗಳು ಇಲ್ಲಿ ಪ್ರಸ್ತಾಪವಾಗಿದ್ದು ಒಂದೊಂದು ಒಂದೊಂದು ರೀತಿಯ ಅನುಭವಗಳನ್ನು ಕಟ್ಟಿಕೊಡುತ್ತವೆ. ಮಾತ್ರವಲ್ಲ ಸಹೃದಯ ಓದುಗರನ್ನು ಕಚಗುಳಿಗೆ ಒಳಗು ಮಾಡುತ್ತವೆಂದರೆ ಅತಿಶಯೋಕ್ತಿಯಾಗಲಾರದು.

ಸ್ವಾತಂತ್ರ್ಯೋತ್ತರದ ಆ ನಂತರದಲ್ಲಿ ಆಧುನಿಕತೆ ಉಂಟುಮಾಡಿದ ವಿಚಿತ್ರ ಪರಿಣಾಮಗಳು ನಮ್ಮ ಗ್ರಾಮ ಸಮಾಜದ ಮೇಲೆ ತೀವ್ರತರವಾದ ತಲ್ಲಣಗಳನ್ನು ತಂದವು. ಅದನ್ನು ಲಂಕೇಶರು ಗ್ರಹಿಸಿದ ರೀತಿ ನವ್ಯದ ಮಾದರಿಯಲ್ಲಿದ್ದರೂ ಅದನ್ನು ಅಭಿವ್ಯಕ್ತಿಸಿದ ವಸ್ತು ಸ್ಥಿತಿ ಮಾತ್ರ ನವ್ಯೋತ್ತರದ ಮಾನದಂಡದಂತಿತ್ತು. ಈ ಹಿನ್ನಲೆಯಲ್ಲಿ ಅವರ 'ಮುಸ್ಸಂಜೆಯ ಕಥಾ ಪ್ರಸಂಗ' ಸಾಂದರ್ಭಿಕ ಸತ್ಯವಾಗಿದ್ದು ಅದನ್ನಿಲ್ಲಿ ಪ್ರತಿಯೊಂದು ಸಂಗತಿಯನ್ನು ವಿಮರ್ಶಾತ್ಮಕವಾಗಿ ಕಥಾನಕದ ಹಿನ್ನಲೆಯಲ್ಲಿ ವಿವೇಚಿಸಲಾಗಿದೆ.

ಲಂಕೇಶರು 'ಮುಸ್ಸಂಜೆಯ ಕಥಾ ಪ್ರಸಂಗ' ಕಾದಂಬರಿಯ ಮೂಲಕ ಕಟ್ಟಿಕೊಡುವ ಕಂಬಳ್ಳಿ ಇಡೀ ಭಾರತೀಯ ಗ್ರಾಮ ಸಮಾಜದ ಸಮಷ್ಟಿ ಪ್ರಜ್ಞೆಯಾಗಿದೆ. ಕಂಬಳ್ಳಿಯ ಗ್ರಾಮಸಮಾಜ ಆಧುನಿಕತೆಯ ನವ ವಸಾಹತುಶಾಹಿಗೆ ಗುರಿಯಾಗಿಸಿಕೊಂಡು ಬದಲಾವಣೆಗೆ ಸಾಕ್ಷಿಯಾಗುತ್ತದೆ. ಈ ಹಿನ್ನಲೆಯಲ್ಲಿ ಭಾರತದ ಗ್ರಾಮ ಸಮಾಜದ ತಲ್ಲಣಗಳನ್ನು ಕಂಬಳ್ಳಿಯ ವಸ್ತು ಸ್ಥಿತಿಯೊಡನೆ ಕಟ್ಟಿಕೊಡುವ ಲಂಕೇಶರು ಆ ಮೂಲಕ ಕಂಬಳ್ಳಿಯನ್ನು ಆವರಿಸಿರುವ ಜಾತಿ, ವರ್ಗ, ಹಣ, ರಾಜಕೀಯ, ಅಸೂಯೆ, ಅಧಿಕಾರ, ಶೋಷಣೆ, ದ್ವೇಷ, ಮೋಸ ಮುಂತಾದವುಗಳನ್ನು ಅನಾವರಣಗೊಳಿಸುತ್ತಾರೆ.

ಕಾದಂಬರಿಯ ಪ್ರಾರಂಭದಲ್ಲಿ ಹೇಳಿರುವಂತೆ ವಾಚಕ ಮಹಾಶಯರಿಗೆ ಆನಂದದಾಯಕ ವಾಗಬಲ್ಲ ಕಥಾವಸ್ತುಗಳಿಂದ ಹಣ, ವಿದ್ಯೆ, ಜಾತಿ, ಕುಸ್ತಿ ಮತ್ತು ಪ್ರೇಮವನ್ನು ಕುರಿತ ಈ ವೃತ್ತಾಂತ ನಡೆದದ್ದು ಕಂಬಳ್ಳಿ ಎಂಬ ಗ್ರಾಮದಲ್ಲಿ ಕುಂಸಿಯಿಂದ ಐದಾರು ಮೈಲಿ ಈಚೆಗೆ ಶಿವಮೊಗ್ಗದಿಂದ ಹತ್ತಾರು ಮೈಲಿ ಆಚೆಗೆ ಕಾಡಿನ ನಡುವೆ ನಡೆದ ಕೆಲವು ಘಟನೆಗಳು ಮತ್ತು

ಕೆಲವು ಬದಲಾವಣೆಗಳು ಆದಷ್ಟು ಸಂಗ್ರಹವಾಗಿ ದಾಖಲೆಗೊಳಿಸುವುದು ಲೇಖಕರ ಉದ್ದೇಶವಾಗಿದೆ. ಮನುಷ್ಯನ ಬದುಕಿನ ಆಸಕ್ತಿ ವಿಷಯಗಳನ್ನು ಮತ್ತು ಕುತೂಹಲಕರವಾದ ಸಂಗತಿಗಳನ್ನು ಕೇಂದ್ರವಾಗಿ ಇರಿಸಿಕೊಂಡಿರುವ ಲಂಕೇಶರು ಗ್ರಾಮಪರಿಸರದಲ್ಲಿ ಉಂಟಾಗುವ ಸಂಘರ್ಷ, ಶೋಷಣೆ ಮತ್ತು ಬದಲಾವಣೆಗಳನ್ನು ಸೂಕ್ಷ್ಮವಾಗಿ ಗ್ರಹಿಕೆಗೆ ಒಳಪಡಿಸಿದ್ದಾರೆ.

'ಮುಸ್ಸಂಜೆ ಕಥಾ ಪ್ರಸಂಗ'ಕ್ಕೆ ಒಂದು ಕೇಂದ್ರ ಪಾತ್ರವಿಲ್ಲ ನಾಯಕ, ನಾಯಕಿಯರ ಸರಳ ಸೂತ್ರವಿಲ್ಲ, ಕಂಬಳ್ಳಿಯ ಸಮಸ್ತ ಜನರ ಬದುಕನ್ನು ಕಥೆಯ ಹಂದರವಾಗಿಸುವ ಪ್ರಯತ್ನವಿದೆ. ಅನೇಕ ಜನರಿರುವ ಈ ಕಂಬಳ್ಳಿಯನ್ನು ಕೆಲವೇ ಪಾತ್ರಗಳಿಗೆ ಇಳಿಸುವುದಾಗಲೀ, ಕೇಂದ್ರದ ಪಾತ್ರವೆನ್ನಿಸಿಕೊಳ್ಳುವ ಒಬ್ಬ ನಾಯಕ ನಾಯಕಿಯ ಹಂಗಿಗೆ ಒಳಗಾಗಿ ಅವನ ಅಥವಾ ಅವಳ ಸುತ್ತ ಮಿಕ್ಕಿದ್ದನ್ನು ಹೆಣೆಯುವಾಗಲಿ ಕಂಬಳ್ಳಿಯ ಒಟ್ಟಾರೆ ಗುಣಕ್ಕೆ ಅನ್ಯಾಯ ಮಾಡಿತು ಎಂಬ ನಂಬಿಕೆಯಿಂದ ಹಲವಾರು ಜನ ಮನುಷ್ಯ ಕ್ರಿಯೆಗಳನ್ನು ಕ್ರಿಯಾಶಾಲಿಗಳಲ್ಲದ ಮನುಷ್ಯರ ಅನಿಸಿಕೆಗಳನ್ನು ಮುಂದೆ ಕೊಡಲಾಗಿದೆ ಎನ್ನುವ ಲಂಕೇಶರ ಕಥೆಯ ಹರಹು ಇಡೀ ಹಳ್ಳಿಗೆ ವಿಸ್ತರಿಸಿಕೊಂಡಿರುವುದರಿಂದ ಒಂದು ಸೂತ್ರಕ್ಕೆ ತಂದು ಒಟ್ಟಾಗಿ ನಿರೂಪಿಸುವ ಮುಂದಾಲೋಚನೆಯಿಂದ ಪ್ರತಿಯೊಂದು ಅಧ್ಯಾಯಕ್ಕು ಉಪಶೀರ್ಷಿಕೆಯನ್ನು ನೀಡಿ ಕಥೆಯನ್ನು ಒಟ್ಟಂದವಾಗಿ ಗ್ರಹಿಸಲು ಓದುಗರಿಗೆ ನೆರವಾಗುತ್ತಾರೆ ಮಾತ್ರವಲ್ಲ ಶೀರ್ಷಿಕೆಯ ಮೂಲಕವೇ ಆಯಾ ಪ್ರಕರಣದ ಸ್ವಾರಸ್ಯವನ್ನು ತಿಳಿಸುವ ಲಂಕೇಶರು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಅನುಸರಿಸುವ ನಿರೂಪಣಾ ಕ್ರಮಗಳನ್ನು ಅಳವಡಿಸಿಕೊಂಡಿರುವರೇನೋ ಅನ್ನಿಸುತ್ತದೆ.

ರಂಗವ್ವ ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ವಿಧವೆಯಾದವಳು. ತನ್ನ ಮಗಳಾದ ಸಾವಂತ್ರಿಯನ್ನು ತನ್ನಂತೆಯೇ ಆತ್ಮವಿಶ್ವಾಸ ಉಳ್ಳವಳಾಗಿ ಬೆಳೆಸುತ್ತಾಳೆ. ಈಕೆ ಹಾಲು ಮಾರಿ ಸಂಪಾದಿಸಿದ ಹಣವನ್ನು ಚಿಕ್ಕಪುಟ್ಟದಾಗಿ ಬಡ್ಡಿ ಸಾಲ ನೀಡುವ ರಂಗವ್ವ ಈ ಮೂಲಕವೇ ಊರಿನಲ್ಲಿ ತನ್ನ ಪ್ರತಿಷ್ಠೆ ಬೆಳೆಸಿಕೊಳ್ಳುತ್ತಾಳೆ. ತನ್ನ ಜಾತಿ ಸಂಬಂಧಿಯಾದ ಭರ್ಮಣ್ಣನ ಸಹಕಾರವನ್ನು ಪಡೆದಿದ್ದಾಳೆ. ಹೀಗಿರುವಾಗ ಭರ್ಮಣ್ಣ ತನಗೆ ಹಣದ ಲೆಕ್ಕದ ವಿಚಾರದಲ್ಲಿ ಮೋಸ ಮಾಡುತ್ತಿರುವನೆಂಬ ಸಂಶಯ ಉಂಟಾದಾಗ ತನ್ನ ಹಣಕಾಸಿನ ವ್ಯವಹಾರದಲ್ಲಿ ಸ್ವತಂತ್ರಳಾಗಲು ಯತ್ನಿಸುತ್ತಾಳೆ. ಅದು ಭರ್ಮಣ್ಣನಿಗೆ ಸಹಿಸದಾಗುತ್ತದೆ. ರಂಗವ್ವ ಮತ್ತು ಸಾವಂತ್ರಿಯ ಮೇಲೆ ಕಾಮ ಮಿಶ್ರಿತ ಭಾವನೆಯನ್ನು ಹೊಂದಿದ್ದ ಭರ್ಮಣ್ಣನಿಗೆ ರಂಗವ್ವನ ಆಕಸ್ಮಿಕ ಘರ್ಷಣೆಯಿಂದ ತನ್ನೆಲ್ಲಾ ಕನಸುಗಳು ಭಗ್ನವಾಗಿ ಅವಮಾನ ನಿರಾಶೆಗಳಿಗೆ ಕಾರಣವಾಗುತ್ತದೆ. ಪರಿಣಾಮದಲ್ಲಿ ರಂಗವ್ವನನ್ನು ಎದುರಿಸುವ ಏಕೈಕ ಅಸ್ತ್ರವಾಗಿ ಸಾವಂತ್ರಿ ಮಂಜನ ಮೇಲೆ ಪ್ರೇಮ ಸಂಬಂಧವನ್ನು ಇಟ್ಟುಕೊಂಡು ಜಿದ್ದನ್ನು ಸಾಧಿಸುತ್ತಾನೆ. ಇದಕ್ಕೆ ವೀರಶೈವ ಸಮುದಾಯದ ಸಹಕಾರವನ್ನು ಪಡೆದುಕೊಳ್ಳುತ್ತಾನೆ. ಇದರಿಂದ ರಂಗವ್ವ ಕೊಂಚ ಅಧೀರಳಾದರೂ ಅದನ್ನು ತೋರಿಸಿಕೊಳ್ಳದೆ

ಆತನನ್ನು ಮೀರಿ ನಿಲ್ಲುತ್ತಾಳೆ. ಹಣವನ್ನು ಕಳೆದುಕೊಂಡ ಭರ್ಮಣ್ಣ ತನಗಾದ ಅವಮಾನಕ್ಕೆ ರಂಗವ್ವನ ಮೇಲೆ ಸೇಡು ತೀರಿಸಿಕೊಳ್ಳಲು ಶೋಷಣೆಗೆ ಮುಂದಾಗಲು ತನ್ನ ಮನೋಧರ್ಮದವರೇ ಆದ ಬೂಸಿ, ರಾಚ, ಶಿವಾಜಿ, ಅಂಜನಿ ಮುಂತಾದವರ ಸಹಕಾರ ಪಡೆಯುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಪರಸ್ಪರ ಸಂಬಂಧಗಳು ಸರಿಯಾಗಿರುವವರೆಗೂ ಎಡೆತಾಕದ ಮತಧರ್ಮಗಳು ಅನಂತರದಲ್ಲಿ ದ್ವೇಷ ಸಾಧನೆಯ ಸಾಧನಗಳಾಗಿ ಸೃಷ್ಟಿಯಾಗುತ್ತವೆ. ವೀರಶೈವ ಕೋಮಿಗೆ ಸೇರಿದ ರಂಗವ್ವನ ಮಗಳು ಸಾವಂತ್ರಿ ಬ್ಯಾಡರ ಮಂಜನ ಜೊತೆಗಿನ ಪ್ರೇಮ ಭರ್ಮಣ್ಣ ಮತ್ತು ಸಂಗಡಿಗರಿಗೆ ಧರ್ಮದ್ರೋಹದ ಮಹಾಪರಾಧವಾಗಿ ಕಾಣುತ್ತದೆ. ರಂಗವ್ವನನ್ನೂ ಆರ್ಥಿಕವಾಗಿ ಮಟ್ಟ ಹಾಕಲು ಇಂತಹ ಸಂದರ್ಭವನ್ನು ಬಳಸಿಕೊಳ್ಳಲು ಹೊಂಚು ಹಾಕುತ್ತಾರೆ. ಇದು ಶೋಷಣೆಯ ಪ್ರತೀಕಾರವೇ ಆಗುತ್ತದೆ.

ಈ ನಡುವೆ ಭರ್ಮಣ್ಣ ರಂಗವ್ವನ ಮನೆಯಿಂದ ಹಣದ ಪೆಟ್ಟಿಗೆ ಕದಿಯಲು ಹನುಮಕ್ಕನ ಮಗನಾದ ಕರಿಯನನ್ನು ಬಳಸಿಕೊಳ್ಳುವನು. ಆದರೆ ಪ್ರಯತ್ನ ವಿಫಲವಾದಾಗ ಅವನನ್ನು ಬೇರೆ ಕೆಲಸಕ್ಕೆ ನೇಮಿಸುವನು ಕರಿಯ ವಯಸ್ಸಿನಲ್ಲಿ ಇನ್ನೂ ಹದಿನೈದು ವರ್ಷಗಳನ್ನು ದಾಟಿರದಿದ್ದರೂ ಅವನು ಕಲಿಯುತ್ತಿದ್ದ ತರಗತಿಗೆ ಅದು ಮೀರಿದ್ದಾಗಿತ್ತು. ಅಲ್ಲದೆ ಭರ್ಮಣ್ಣ ಸೇರಿದಂತೆ ಹಲವರು ಕರಿಯನನ್ನು ವಯಸ್ಸಿಗೂ ಮೀರಿದ ಕೆಲಸಗಳಲ್ಲಿ ಭಾಗಿಯಾಗುವಂತೆ ಸಿದ್ಧಪಡಿಸುತ್ತಾರೆ. ಈ ವ್ಯವಹಾರಕ್ಕೆ ಸಿಗುತ್ತಿದ್ದ ಪುಡಿಗಾಸಿಗಾಗಿ ಕರಿಯ ತನ್ನ ಈ ಓದನ್ನು ಮರೆತು ಅಡ್ಡದಾರಿ ಹಿಡಿದಿದ್ದ. ಕರಿಯನಿಗೆ ಅರಿಯದಂತೆ ಅವನ ಬದುಕೆ ಶೋಷಣೆಯಿಂದ ಕಳೆದು ಹೋಗುತ್ತಿತ್ತು. ಒಮ್ಮೆ ಭರ್ಮಣ್ಣ ಕರಿಯನನ್ನು ಕೆಲಸದ ನಿಮಿತ್ತ ತಯಾರಿ ಮಾಡುತ್ತಿದ್ದಾಗ ಆಕಸ್ಮಾತ್ ಹನುಮಕ್ಕ ಅಲ್ಲಿ ಪ್ರತ್ಯಕ್ಷಳಾಗಿ ಆಡುವ ಮಾತುಗಳು ಕರಿಯನ ಬದುಕಿನ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಅವಳು ಅಂದುಕೊಳ್ಳುವಂತೆ "ತನ್ನ ಮಗನನ್ನು ಕೆಡಿಸುತ್ತಿರುವುದಾಗಿಯೂ, ಅವನು ಓದಲಿಕ್ಕೆ ಬರೆಯಲಿಕ್ಕೆ ಕಾಲವಿಲ್ಲದಂತೆ ಅವನನ್ನು ಕೆಲಸಗಳ ಮೇಲೆ ಕಳಿಸಿ ಹಾಳು ಮಾಡುತ್ತಿರುವುದಾಗಿಯೂ ಈ ಊರಿನಲ್ಲಿರುವಷ್ಟು ಕೀಳು ಮನಸ್ಸಿನ ಹಾಳಾಗಿ ಹುಳುಬಿದ್ದು ಕೊಳೆಯುತ್ತಿರುವ ಜನ ಬೇರೆಲ್ಲೂ ಇಲ್ಲವೆಂದೂ ಇಂಥ ಊರಿಗೆ ಮಾರಿ ಬಡಿದಿರುವುದಾಗಿಯೂ ಕೂಗಿ ಕೊಳ್ಳುವುದು ಸಹಜವೇ ಆಗಿವೆ."[೨೧] ಅವಳ ಕೂಗು ಕೇವಲ ಬಜಾರಿಯೊಬ್ಬಳ ಕೂಗಾಗಿರದೆ ಆ ಕೂಗಿನಲ್ಲಿ ಸತ್ಯಾಂಶವಿತ್ತು ಮಾತ್ರವಲ್ಲ. ನೊಂದ ತಾಯೊಬ್ಬಳ ಅಳಲು ಕೂಡ ಇದೆ ಎನ್ನುವುದು ಸ್ಪಷ್ಟವಾಗಿದೆ. ಕರಿಯನ ಬದುಕು ಹಾಳಾಗುತ್ತಿರುವುದರ ಜೊತೆಗೆ ಕೂಲಿನಾಲಿ ಮಾಡಿಕೊಂಡು ಸರಳವಾಗಿ ಇರಬಲ್ಲ ಮಗನಿಗಾಗಿ ಆಶಿಸಿದ್ದ ಆಕೆ ಹೀಗೆ ದೊಡ್ಡವರ ಜೊತೆ

---

೨೧. ಪಿ.ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ, ಪುಟ. ೪೦.

ಬಿದ್ದು ಕಾಸು ಮಾಡಿ ಹಾಳಾಗುವ ಕರಿಯನ ಬಗ್ಗೆ ಏನು ಯೋಚಿಸುವುದೆಂದು ಗೊತ್ತಿಲ್ಲದೆ ಮನಸ್ಸಿನ ತುಂಬ ವಿರೋಧಾಭಾಸದ ಭಾವನೆಗಳನ್ನು ತುಂಬಿಕೊಳ್ಳುತ್ತಾಳೆ. ಭರ್ಮಣ್ಣನ ಜಾಣತನವಾಗಲೀ, ಶ್ರೇಷ್ಠಿಯವರ ಸನ್ಯಾಸತ್ವವಾಗಲೀ ಅವಳಿಗೆ ಸಮಾಧಾನ ತರುವ ಹಾಗಿರಲಿಲ್ಲ ಕರಿಯ ಅವಳಿಗೆ ಶೋಷಣೆ ಗೊಳಗಾದ ಮುಗ್ಧ ಹುಡುಗನಂತೆ ಏನೂ ಅರಿಯದ ಕೂಸಾಗಿ ಕಂಡನು.

ಕಾದಂಬರಿಯ ಪಾತ್ರಗಳಾದ ಗಿಡ್ಡ, ಮೇಷ್ಟ್ರು, ಸಣ್ಣೀರಪ್ಪ, ಶಿವನಂಜ, ಬೂಸಿ, ಶಿವಾಜಿ, ಅಂಜನಿ ಇವರೆಲ್ಲ ಒಂದಲ್ಲಾ ಒಂದು ರೀತಿಯಲ್ಲಿ ಶೊಷಣೆಗೆ ಒಳಗಾದವರೆ ತಮಗೆ ಅರಿವಿದ್ದೋ ಇಲ್ಲದೆಯೋ ಅವರು ಮಾಡಬೇಕಾದ ಕೆಲಸ ಸರಿನಾ? ತಪ್ಪಾ? ಎಂದು ತಿಳಿಯದೆ ಆಸೆಗೋಸ್ಕರ ಅವರು ತಮ್ಮನ್ನು ತಾವು ಮೋಸಗೊಳಿಸಿಕೊಂಡವರು. ಹೀಗೆ ಕಂಬಳ್ಳಿಯನ್ನು ಆವರಿಸಿಕೊಂಡಿರುವ ದಟ್ಟವಾದ ಹಿಂಸೆಯ ನಡುವೆಯೂ ಅಧಿಕವಾಗಿ ಬದುಕನ್ನು ಪ್ರೀತಿಸುವ ರಂಗವ್ವ, ಸಾವಂತ್ರಿಯರ ಹಾಗೆ ನಂದ್ಯಪ್ಪ ಇನ್ನೂ ಅನೇಕರನ್ನು ಕಾಣಬಹುದು.

'ಅಕ್ಕ' ಕಾದಂಬರಿಯ ಪ್ರಧಾನ ಪಾತ್ರ ದೇವೀರಿಯದೇ ಆದರೂ ಕ್ಯಾತನೇ ಇಲ್ಲಿ ನಾಯಕ, ನಿರೂಪಕ, ಅವನ ಸ್ವಗತ ಲಹರಿಯಲ್ಲಿ ಬೆಳೆಯುವ ಕಥಾ ವಿಸ್ತಾರ ಕೊಳಗೇರಿಯ ಬದುಕು ಬೆಂಗಳೂರಿನ ಕೊಳಗೇರಿಯ ರಾಜಕಾರಣ ಹಿಕ್ಮತ್ತುಗಳ ನರಕ ದರ್ಶನವನ್ನು ಮಾಡಿಸುತ್ತದೆ. ಕೊಳಗೇರಿಯಲ್ಲಿ ನಡೆಯುವ ಶೋಷಣೆಯನ್ನು ಕಣ್ಣಮುಂದೆ ತಂದು ನಿಲ್ಲಿಸುತ್ತದೆ. ಒಮ್ಮೊಮ್ಮೆ ದೇವೀರಿಯೇ ಕ್ಯಾತನನ್ನು ಶೋಷಣೆ ಮಾಡಿರುವ ಸಂದರ್ಭಗಳು ಕಾದಂಬರಿಯಲ್ಲಿ ಎದುರಾಗುತ್ತದೆ. ಅವಳಿಂದ ಕ್ಯಾತ ಹಸಿವನ್ನು ಸಹಿಸಿಕೊಂಡು ಸುಣ್ಣವಾಗಿದ್ದಾನೆ. "ಮೂಲೆಯಲ್ಲಿ ಈ ಕ್ಯಾತನನ್ನು ಬಿಸಾಕಿದಳು ದೇವೀರಿ. ಆಗಲೇ ಬ್ರೆಡ್ಡು, ರೊಟ್ಟಿಯನ್ನು ಗಂಗಾಳ ಕೈ ಹಾಕಿದಳು. ಕ್ಯಾತನಿಗೆ ಹಸಿವಾಗಿತ್ತು. ಕ್ಯಾತ ಹೊರಗೆ ಕಿವಿ ಆಲಿಸಿದ. ಎಲ್ಲ ತಂಬಲವಾಗಿತ್ತು. ದೇವೀರಿ ಸಿಟ್ಟಿನಿಂದಲೋ ಬ್ಯಾಸರದಿಂದಲೋ ಇವತ್ತು ಸುಮ್ಮನಿದ್ದಳು. ರಾತ್ರಿ ಬಾಳ ಹೊತ್ತಾಗಿರಬೇಕೆಂದು ಕ್ಯಾತನಿಗೆ ಅನ್ನಿಸಿತು. ಹೊಟ್ಟೆ ಭಯಂಕರ ತಾಳಹಾಕ್ತಿತ್ತು. 'ತಿನ್ನು' ಅಂತ ಹೇಳಿ ದೇವೀರಿ ಒಳ್ಳೆ ಸೀರೆ ಉಗುಚಿ ಬೇರೆ ಸೀರೆ ಸುತ್ತಿಕೊಂಡಳು. ಆಕೆಗೆ ಇಲ್ಲ ಅನ್ನಲು ಕ್ಯಾತನಿಗೆ ಆಗಲಿಲ್ಲ. ಹೊಟ್ಟೆ ಬ್ಯಾರೆ ಬಡಕೊಳ್ಳಿತ್ತು."[೨೨] ಕ್ಯಾತನ ಹಸಿವನ್ನು ನೀಗಿಸದೆ ಅವನ ಆಂತರ್ಯವನ್ನು ಅರಿಯದೆ ದೇವೀರಿ ಸಣ್ಣ ಹುಡುಗನ ಮೂಲಭೂತ ಅವಶ್ಯಕತೆಯನ್ನು ನಿವಾರಿಸುವಲ್ಲಿ ಕೆಲವೊಮ್ಮೆ ಸೋಲುತ್ತಾಳೆ.

ತನ್ನ ಸುತ್ತಲ ಪರಿಸರವನ್ನು ಕೇವಲ ಅಧಿಕೃತವಾಗಿ ಚಿತ್ರಿಸುವುದು ಕ್ಯಾತನ ಉದ್ದೇಶವಲ್ಲ. ನಿಜ ಅವನು ತನ್ನ ಅಕ್ಕನ ಬಗ್ಗೆ ಕೊಳಗೇರಿಯ ಇನ್ನೂ ಅನೇಕ ವ್ಯಕ್ತಿಗಳ ಬಗ್ಗೆ ಅಲ್ಲಿನ

---

೨೨. ಪಿ.ಲಂಕೇಶ್, ಅಕ್ಕ, ಪುಟ. ೧೯.

ಪುಡಾರಿಗಳ ಬಗ್ಗೆ ಅವರು ಮಾಡುವ ಅನ್ಯಾಯಗಳ ಬಗ್ಗೆ, ಅನೀತಿಗಳ ಬಗ್ಗೆ, ಶೋಷಣೆಗಳ ಬಗ್ಗೆ, ಕೊಳಗೇರಿಯ ನಾತದ ಬಗ್ಗೆ ಬರೆಯುತ್ತಿದ್ದಾನೆ. ಈ ಎಲ್ಲ ವಿವರಗಳು ತನ್ನ ಬದುಕಿಗೆ ಹೇಗೆ ಒದಗಿ ಬರುತ್ತಿವೆ. ತನ್ನ ಪ್ರಜ್ಞೆಯ ಮೇಲೆ ಏನು ಪರಿಣಾಮ ಮಾಡುತ್ತವೆ ಎಂಬುದರ ಬಗ್ಗೆ ಎಚ್ಚರ ಉಳ್ಳವನಾಗಿದ್ದಾನೆ. ತನ್ನ ಸುತ್ತಲ ಪರಿಸರವನ್ನು ಚಿತ್ರಿಸುತ್ತಲೇ ಅದಕ್ಕೂ ತನ್ನ ಪ್ರಜ್ಞೆಗೂ ಇರುವ ಸಂಬಂಧವನ್ನು ಪರಿಶೀಲಿಸಿಕೊಳ್ಳುತ್ತಿದ್ದಾನೆ. ಒಮ್ಮೆ ಐವತ್ತು ರೂಪಾಯಿಯನ್ನು ಕ್ಯಾತ ಕಳೆದುಬಿಟ್ಟಿರುತ್ತಾನೆ. ಆ ಸಂದರ್ಭದಲ್ಲಿ ಆದ ಮಾನಸಿಕ ಶೋಷಣೆಯನ್ನು ಸ್ವತಃ ಅವನೇ ಅನುಭವಿಸುತ್ತಾನೆ. "ದೇವೀರಿಗೆ ಐವತ್ತು ರೂಪಾಯಿ ಹ್ಯಂಗೆ ಬಂತು? ಆಕೆ ಬೆವರು ಸುರಿಸಿ ದುಡಿದಿದ್ಲ? ಅದು ಸೈತ ನರಸಿಂಹ ಮೇಸ್ತ್ರಿ ಕಡಿಂದ ಬಂದಿದ್ದಲ್ವ, ಆ ಹರಕು ಮೀಸೆಯ ಬೋಸುಡಿ ಮಗ ಮೇಸ್ತ್ರಿ ಮಹಾ ಬೆವರು ಸುರಿಸಿ ದುಡಿದಿದ್ನ? ಅತವಾ ನರಸಿಂಹ ಮೇಸ್ತ್ರಿಗೆ ಐವತ್ತು ರೂಪ್ಯೆ ಕೊಟ್ಟವನಾದರೂ ಬೆವರು ಸುರಿಸಿ ದುಡಿದಿದ್ನ?"[೨೩] ಹೀಗೆ ಯೋಚಿಸುತ್ತಾನೆ ಕ್ಯಾತ ಆ ಸಂದರ್ಭದಲ್ಲಿ ಆತನಿಗೆ ಕಣ್ಣೀರು ಬರುತ್ತವೆ. ಲಂಕೇಶರು ಕಟ್ಟಿಕೊಡುವ ಕಾದಂಬರಿಯ ಪ್ರತಿಯೊಂದು ಪ್ರಸಂಗವೂ ಕೂಡ ಓದುಗರನ್ನು ಮೂಕವಿಸ್ಮಿತರಂತೆ ಸೂಕ್ಷ್ಮ ಪ್ರಜ್ಞೆಯತ್ತ ತೇಲಿಸಿಬಿಡುತ್ತದೆ. ದೇವೀರಿ ಬಂದೊಡನೆ ನನಗೆ ಎಲ್ಲಿಲ್ಲದ ಭಯ ಶುರುವಾಗಬಹುದು ಕಾರಣ ಐವತ್ತು ರೂನ ಕಥೆ ಏನು ಮಾಡೋದೆಂದು ಮನದಲ್ಲಿ ಯೋಚಿಸುತ್ತಾ. "ದೇವೀರಿಯ ಗರ್ಜನೆ ಕೇಳಿದೊಡನೆ ತಟಕ್ಕನೆ ಬಂದ ಯೋಚನೆ ಅಲ್ಲಿಂದ ಪಿಶಾಚಿಯಂತೆ ಮಾಯವಾಗುವುದು. ದೇವೀರಿಯ ಕೈಗೆ ಸಿಕ್ಕು ಇನ್ನಷ್ಟು ಪಡಿಪಾಟಲು ಪಡುವುದಕ್ಕೆ ಬದಲು ನೆಲದಲ್ಲಾದ್ರೂ ಇಳಿದುಬಿಡಬೇಕೆನಿಸಿತು. ಆದರೆ ಕ್ಯಾತನಿಗೆ ಆಕಾಸದಲ್ಲಿ ಜಾಗವಿಲ್ಲ, ನೆಲದಲ್ಲೂ ಜಾಗವಿಲ್ಲ. ರಂಗಜೆಟ್ಟಿಯ ಗುಡ್ಲಲ್ಲಿ ಅವಿತುಕೊಳ್ಳಲು ಅಂತ ಜಾಗವಿರಲಿಲ್ಲ. ನಡುವೆ ನಿಲ್ಲಿಸಿದ ತಟ್ಟಿಯ ಆಚೆಗೆ ಅಡುಗೆ ಮನೆ, ಅಲ್ಲಿ ಸಂಪೂರ್ಣಮ್ಮ ರೇಸ್ಮಿ ಕೂತಿದ್ದರು. ಈ ಸಿಂಬಳಬುರುಕಿ ರೇಸ್ಮಿ ಗೋಂದ್‌ಬಾಟ್ಲ್ ತರ, ಕಾಣಬಾರದ್ ಅಂತ ಕಡೆಗೆ ಕಣ್ಣಿಗೆ ಕಟ್ಟುವಂತೆ ಕೂತಿರುತ್ತಾಳೆ ಅಡಿಗೆ ಕೆಲಸದಲ್ಲಿ ಮುಳುಗಿದ್ದ ಸಂಪೂರ್ಣಮ್ಮನಿಗೆ ಕ್ಯಾತನ ಭಯ ಅರ್ಥವಾಯಿತು. 'ಬಾರೋ ಕೀಚ್ಕ ಇಲ್ಲಿ ಮಾಯ ಅಗು' ಅಂದು ದೊಡ್ಡ ಮಣ್ಣಿನ ಹರವಿ ತೋರಿಸಿದಳು. ಕ್ಯಾತ ಅಲ್ಲಿ ಕೂತ. ಅವನು ಹರವಿಯ ಹಿಂದಿನಿಂದ ಸಾವಿನಿಂದ ತಪ್ಪಿಸಿಕೊಳ್ಳುವಂತೆ ಕಣ್ಣು ಬಿಟ್ಟುಕೊಂಡು ಕೂತದ್ದು ನೋಡಿ ಸಂಪೂರ್ಣಮ್ಮನಿಗೆ ಪಾಪ ಅನ್ನಿಸಿತು. ಅವನ ಕಸ್ಟಗಳೆಲ್ಲ ಆಕೆಗೆ ಗೊತ್ತಿದ್ದವು. ಅವನು ತನ್ನ ರಂಗಜೆಟ್ಟಿಗೆ ಐವತ್ತು ರೂಪಾಯಿ ಕೊಟ್ಟು ಕಳೆದುಕೊಂಡದ್ದು ಆಕೆಗೆ ಗೊತ್ತಿತ್ತು. ಗುಡ್ಲಿನೊಳಗೆ ಇಣಿಕಿದ ದೇವೀರಿ ಕ್ಯಾತ ಇಲ್ಲ ಅಂದುಕೊಂಡು ಹೊರಟು ಹೋದ ಮೇಲೆ ಅವನನ್ನು ಸಂಪೂರ್ಣಮ್ಮ ತೋಳು ಹಿಡಿದು ಎಳೆದುಕೊಂಡು ಕೆನ್ನೆ ಚಿವುಟಿ 'ಭಂಡಮೂಳ'

---

೨೩. ಅದೇ., ಪುಟ. ೪೦.

ಎಂದು ಕುಪ್ಪಸದಿಂದ ಇಪ್ಪತ್ತರ ನೋಟ್ ತೆಗೆದು ಅವನ ಕೈಯಲ್ಲಿಟ್ಟಳು"[೨೪] ಸಂಪೂರ್ಣಮ್ಮನ ಪ್ರೀತಿ ಕ್ಯಾತನಲ್ಲಿ ಬದುಕಿನ ಆಶಾಕಿರಣವನ್ನು ಕಳಿಸಿದರೆ ಪದ್ದಿಯ ಪ್ರೀತಿ ಕ್ಯಾತನ ಬದುಕಿನ ಪ್ರೀತಿಯನ್ನು ಹುಟ್ಟಿಸುತ್ತದೆ. ಕಾದಂಬರಿಯಲ್ಲಿ ಬರುವ ಖಡವಾ ನಾಗ್ರ, ರಂಗಜೆಟ್ಟಿ, ನಾಗರಾಜನಾಯ್ಡು, ರಾಮಪ್ಪ ಇವರ ಮೂಲಕ ಒಂದಲ್ಲ ಒಂದು ತರದ ಶೋಷಣೆಯನ್ನು ಅನುಭವಿಸುವ ಕೊಳಗೇರಿಯ ಬದುಕಿನ ಜನ ತಲ್ಲಣಕ್ಕೆ ಒಳಗಾಗಿ ಮತ್ತೆ ಉತ್ಸಾಹದ ಬದುಕನ್ನು ಕಟ್ಟುವ ಕೆಲಸವನ್ನು ಮಾಡುವುದನ್ನು ನೋಡಬಹುದು.

ಲಂಕೇಶರ ಕಥೆಗಳಲ್ಲಿ ಹಣ ಮತ್ತು ಅಧಿಕಾರ ಶೋಷಣಾ ನೆಲೆಯನ್ನು ಗುರುತಿಸಹೊರಟರೆ 'ರೊಟ್ಟಿ' ಕಥೆಯಲ್ಲಿ ರೈಲ್ವೆ ನಿಲ್ದಾಣದಲ್ಲಿ ನಡೆಯುವ ಘಟನೆಯನ್ನು ನೋಡಿದಾಗ ಶೋಷಣೆ ನಡೆಯುವುದು ಗಮನಿಸಬಹುದು. ಕುರುಡು ಕಾಂಚಾಣದ ಕ್ಷೌರಿಕನಿಗೆ ಹಣದ ಉಪಯೋಗವಿದ್ದಾಗ ನಿರೂಪಕ ನಡೆದುಕೊಳ್ಳುವ ಪರಿ ಶೋಷಣಾ ಮುಖವೇ ಆಗಿದೆ. ಈ ನಿದರ್ಶನಗಳ ಮೂಲಕ ಲಂಕೇಶರು ತಮ್ಮ ಕಥಾ ಸಾಹಿತ್ಯದ ಸೃಜನಶೀಲ ಸಂದರ್ಭದಲ್ಲಿ ಆಯಾಯ ಕಾಲಕ್ಕೆ ನಡೆದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ವಸ್ತು ಪಾತ್ರ ತಂತ್ರಗಳನ್ನಾಗಿಸಿದ ಸಾಧ್ಯತೆಗಳನ್ನು ಗುರುತಿಸಬಹುದಾಗಿದೆ. 'ಮಾರಲಾಗದ ನೆಲ'ದಲ್ಲಿ ತಾನು ಜೀತಗೈದ ಭೂಮಿಯನ್ನು ತನ್ನದಾಗಿಸಿಕೊಳ್ಳಲು ಪ್ರಯತ್ನಿಸಿದ 'ದುರುಗ'ನ ಬಯಕೆ 'ಉಳುವವನೇ ಭೂಮಿಗೆ ಒಡೆಯ' ಸಿದ್ಧಾಂತದ ಆಶಯದಿಂದ ಮೂಡಿದೆ. ದಲಿತನಾದ ದುರುಗನ ಅಜ್ಞಾನ ದೇವರ ಬಗೆಗಿನ ಅಪಾರ ನಂಬಿಕೆ ಕುಡಿಯುವ ಚಟಗಳನ್ನು ರುದ್ರಮೂರ್ತಿ ದುರುಪಯೋಗಪಡಿಸಿಕೊಂಡು ಸ್ವಾರ್ಥಿಯಾಗುವ ಪ್ರಸಂಗವು ವರ್ಗ–ವರ್ಣಗಳ ಶ್ರೇಣೀಕೃತ ವ್ಯವಸ್ಥೆಯ ಶೋಷಣೆಯ ರೀತಿಯಾಗಿದೆ.

ವಿದ್ಯೆ, ಉದ್ಯೋಗ, ವಯಸ್ಸು ಮನುಷ್ಯನಿಗೆ ಪ್ರೌಢತೆಯನ್ನು ನೀಡುತ್ತದೆ. ಆದರೆ 'ಎಂಟು ಮೂವತ್ತು ಐವತ್ತು' ಕಥೆಯಲ್ಲಿ ಮೂವತ್ತು ವರ್ಷದ ಬಾಡಿಗೆದಾರನ ಸಣ್ಣತನ, ಐವತ್ತರ ಮಾಲೀಕನ ಪ್ರತಿಷ್ಠೆ ಅನುಮಾನದ ಸ್ವಭಾವ, ಇಪ್ಪತ್ತೈದರ ಮಲತಾಯಿ ಇವರ ನಡುವೆ ನಲುಗುವ ಎಂಟರ ಪುಟ್ಟ ಬಾಲಕಿಯ ಮನಸ್ಥಿತಿಯ ಚಿತ್ರಣವಿದೆ. ಪತ್ನಿಯನ್ನು ಕಳಕೊಂಡು ತನ್ನಮನೆಗೆ ಬಾಡಿಗೆಗೆ ಬಂದಿರುವಾತ ನನ್ನ ಎರಡನೆಯ ಹೆಂಡತಿಯ ಬಗೆಗೆ ಇರಿಸಿಕೊಂಡ ಕಾಳಜಿಗಳಲ್ಲಿ ನಾನಾ ಅರ್ಥವನ್ನು ಕಾಣುತ್ತಾ ಗುಮಾನಿಯಿಂದ ಒಣಪ್ರತಿಷ್ಠೆಯಿಂದ ಸಣ್ಣತನವನ್ನು ಪ್ರದರ್ಶಿಸುತ್ತಾನೆ. ಮಾಲೀಕನ ಸ್ವಭಾವದಿಂದ ರೋಸಿಹೋದ ಬಾಡಿಗೆದಾರ, ಮಾಲೀಕನ ಮಗಳಾದ ಎಂಟು ವರ್ಷದ ಗೌರಿಯನ್ನು ಅವಳ ಸ್ನೇಹವನ್ನು ನಿರಾಕರಿಸುತ್ತಾನೆ. ಆದರೆ ಅವಳು ಗಂಭೀರವಾಗಿ ವರ್ತಿಸಿದಾಗ ತನ್ನ ಒರಟುತನದ ಬಗ್ಗೆ ತನಗೆ ಬೇಸರ ಎನಿಸಿ ನಾನು

---

೨೪. ಪಿ.ಲಂಕೇಶ್, ಅಕ್ಕ, ಪುಟ. ೬೪.

ಕೊಲೆಗಡುಕ ಅವಳ ಸಂತೋಷವನ್ನು ಕಸಿದುಕೊಂಡು ಅವಳನ್ನು ತಬ್ಬಲಿ ಮಾಡಿದೆ ಎನಿಸುತ್ತದೆ. ನಾನತ್ವದ ಹಾಗೂ ಕಾಳಜಿಗಳ ದ್ವಂದ್ವದಲ್ಲಿ ತೊಳಲುವ ವ್ಯಕ್ತಿಯ ಆತ್ಮಶೋಧನೆ ಮಾಲೀಕ ಹಾಗೂ ಬಾಡಿಗೆದಾರನ ಮೂಲಕ ನಡೆದಿದೆ. ಪ್ರೌಢತೆ ಹಾಗೂ ಪಕ್ವತೆಗಳನ್ನು ಹೊಂದಿರಬೇಕಾದ ವಯಸ್ಸಿನಲ್ಲಿ ಮುಗ್ಧ ಗೌರಿಗೆ ಮಾದರಿಯಾಗಬೇಕಾದ ಸಂದರ್ಭದಲ್ಲಿ ಕ್ಷುಲ್ಲಕ ಕಾರಣಗಳಿಗಾಗಿ ಮನಸ್ಸನ್ನು ಕೆಡಿಸಿಕೊಂಡು ಸಣ್ಣವರಾಗುತ್ತಾರೆ. ಹೀಗೆ ಪರಸ್ಪರರ ಗುಮಾನಿ ವೈಯಕ್ತಿಕತೆಗೆ ಧಕ್ಕೆ ತರುವ ಜೊತೆಗೆ ಸಾಮಾಜಿಕವಾಗಿ ಬೆಳೆಯಬಲ್ಲ ಮನುಷ್ಯ ಸಂಬಂಧಗಳನ್ನು ನಾಶಮಾಡುತ್ತಾ ಹೋಗುತ್ತದೆ. ವಿವಿಧ ವ್ಯಕ್ತಿಗಳ ವೈವಿಧ್ಯಮಯವಾದ ಮನಸ್ಸಿನ ವಕ್ರತೆಗಳನ್ನು ಅಲ್ಲಿ ನಡೆಯುವ ಮಾನಸಿಕ ಶೋಷಣೆಯನ್ನು ಈ ಕಥೆ ಚಿತ್ರಿಸುತ್ತದೆ.

ಪ್ರಬಲವಾದ ವ್ಯಕ್ತಿತ್ವ ದುರ್ಬಲವಾದ ವ್ಯಕ್ತಿತ್ವವನ್ನು ಆಕ್ರಮಿಸಿಕೊಂಡು ತನ್ನತನವನ್ನು ಸಾಧಿಸುವ ವಿವರವನ್ನು 'ವಾಮನ' ಕಥೆ ನೀಡುತ್ತದೆ. ಪ್ರತಿ ವ್ಯಕ್ತಿಯಲ್ಲೂ ಏಕಕಾಲಕ್ಕೆ ನಾನಾ ಭಾವಗಳಿರುತ್ತವೆ. ಆದರೆ ಅವುಗಳಲ್ಲಿನ ಬಲಿಷ್ಠ ಭಾವವೊಂದು ವ್ಯಕ್ತಿಯ ವ್ಯಕ್ತಿತ್ವದಮೇಲೆ ಹತೋಟಿಯನ್ನು ಸಾಧಿಸುತ್ತದೆ. ಈ ಸಂದರ್ಭದ ಭಾವಗಳ ಮೇಲಾಟಗಳಲ್ಲಿ ನರಳುವ ನಾಯಕನ ಇಬ್ಬಂದಿತನವನ್ನು 'ವಾಮನ' ಕಥೆಯು ಸ್ಪಷ್ಟಪಡಿಸುತ್ತದೆ. ಸಾಹಿತಿಯ ಸಾಹಿತ್ಯವನ್ನು ಮೆಚ್ಚಿ ಅವನ ಸಾಧನೆಯನ್ನು ಅಭಿನಂದಿಸಲು ಬರುವ ವ್ಯಕ್ತಿಯೇ ಸಾಹಿತಿಯ ವ್ಯಕ್ತಿತ್ವವನ್ನು ಆವರಿಸಿಕೊಳ್ಳುತ್ತಾನೆ. ಸಾಹಿತಿಯ ದೌರ್ಬಲ್ಯಗಳು ಅತಿಥಿಯ ಆಕ್ರಮಣಕ್ಕೆ ಸೂಕ್ತ ಅವಕಾಶವನ್ನು ಒದಗಿಸಿಕೊಡುತ್ತದೆ. ಸ್ನೇಹಿತನಂತೆ ಬಂದು ಸಾಹಿತಿಯ ವೈಯಕ್ತಿಕ ಕೊರತೆ ಕೌಟುಂಬಿಕ ತೊಂದರೆ ಇತ್ಯಾದಿಗಳನ್ನು ಅರ್ಥೈಸಿಕೊಳ್ಳುತ್ತಾ ಸಾಹಿತಿಯನ್ನು ಕುಗ್ಗಿಸುತ್ತಾ ಹಂತಹಂತವಾಗಿ ಬೆಳೆಯುತ್ತಾನೆ. ಅತಿಥಿ ತ್ರಿವಿಕ್ರಮನಂತೆ ಬೆಳೆದು ಕತಾನಾಯಕ 'ವಾಮನ'ನಾಗುವ ವ್ಯಕ್ತಿಯ ಮಾನಸಿಕ ಸ್ಥಿತ್ಯಂತರದ ಪ್ರಾತಿನಿಧಿಕ ಕಥೆಯಾಗಿ ಯಶಸ್ವಿಯಾಗಿದೆ.

ವರ್ಗ, ವರ್ಣಗಳ ಶ್ರೇಣೀಕೃತ ಸಮಾಜದಲ್ಲಿನ ಜಾತಿ, ವಿದ್ಯೆ, ಅಂತಸ್ತು, ಉದ್ಯೋಗವನ್ನು ಸ್ನೇಹದ ಸಂಬಂಧ ಹಾಗೂ ಆಧುನಿಕ ಪ್ರಜ್ಞೆಯ ಅಪರಿಪೂರ್ಣತೆಯಿಂದ ಸೃಷ್ಟಿಯಾಗುವ ತಲೆಮಾರಿನ ಸಂಘರ್ಷವನ್ನು 'ಒಂದು ಸಂಬಂಧದ ದಾಖಲೆ' ಕಥೆ ಚಿತ್ರಿಸುತ್ತದೆ. ಜಾತಿ, ಅಂತಸ್ತು, ವಿದ್ಯೆ, ಹಣ, ಇವುಗಳನ್ನು ಸಾಧಿಸಿದ ರುದ್ರಮೂರ್ತಿಗೆ ಬಾಲ್ಯದ ಗೆಳೆಯ ಕರಿಯಣ್ಣ ಬಹು ಆಪ್ತ ಪರಸ್ಪರ ಗೆಳೆತನ ಅವರ ಬದುಕಿನ ಅನನ್ಯ ಭಾಗವಾಗಿತ್ತು. ನಿವೃತ್ತನಾದ ರುದ್ರಮೂರ್ತಿಗೆ ಮುಪ್ಪಿನ ಕಿರಿಕಿರಿ "ನನಗೆ ಅರವತ್ತು ವರ್ಷ ತುಂಬಿದ ಮೇಲೆ ಹಳೇ ಚಪ್ಪಲಿ, ಬಳಸಿದ ಬ್ಲೇಡು, ಹರಿದ ಪುಸ್ತಕ, ಬಣ್ಣ ಮಾಸಿದ ಬಟ್ಟೆಗಳು, ಮುಚ್ಚಳ ಸರಿ ಇಲ್ಲದ ಶೀಸೆಗಳು ಕಿರಿಕಿರಿ ಉಂಟು ಮಾಡುತ್ತವೆ. ಇದು ವಯಸ್ಸಾಗುತ್ತಿರುವುದರ ಲಕ್ಷಣ ಇರಬಹುದು. ಹೊಸ ವಸ್ತುಗಳನ್ನು ಇಡುವುದಕ್ಕೆ ಜಾಗವೇ ಇಲ್ಲದಂತಾಗಿ ಉಸಿರು ಕಟ್ಟಿದಂತಹ ಭಾವನೆ ಬರುವುದರಿಂದ

ಇರಬಹುದು."[೨೫] ಮುಪ್ಪು ರುದ್ರಮೂರ್ತಿಯ ಪಾಲಿಗೆ ಸಾವಿನ ಸಂಕೇತ, ಆದ್ದರಿಂದಲೇ ಮುಪ್ಪನ್ನು ಮುಂದೂಡಿ ಸಾವನ್ನು ನಿರಾಕರಿಸುವ ಪ್ರಯತ್ನ ಈ ಹೇಳಿಕೆಯಲ್ಲಿದೆ. ಇದು ಮಾನಸಿಕ ಶೋಷಣೆ ಹಣ ಮತ್ತು ಅಧಿಕಾರ ಅನುಭವಿಸಿಯೂ ಕೂಡ ಸಾವು ಈತನ ದೃಷ್ಟಿಯಲ್ಲಿ ಮಾನಸಿಕ ಶೋಷಣೆಯನ್ನು ಮಾಡುತ್ತದೆ. ವಿದ್ಯಾವಂತ ರುದ್ರಮೂರ್ತಿಯ ಅವಿದ್ಯಾವಂತ ಗೆಳೆಯ ತಳವಾರ ಕರಿಯಣ್ಣ ಬದುಕನ್ನು ಬಂದಂತೆ ಸ್ವೀಕರಿಸಬಲ್ಲ, ಅಂತೆಯೇ ಎದುರಿಸಬಲ್ಲ ಆತ್ಮಸ್ಥೈರ್ಯವುಳ್ಳವನು. ರುದ್ರಮೂರ್ತಿ ಮುಪ್ಪಿನ ಸಂಕೇತವಾದ ಹಳೆಯ ಸ್ವೆಟರನ್ನು ಗೆಳೆಯನಿಗೆ ನೀಡಿ ಕರಿಯಣ್ಣನ ಮಗ ಸುರೇಶನಿಂದ ಬೆದರಿಕೆಗೆ ಬಲಿಯಾಗಿ ಕೆಟ್ಟ ಕನಸುಗಳಿಂದ ನರಳುತ್ತಾನೆ. ಸ್ಥಾಪಿತ ಸಮಾಜದ ವರ್ಗ-ವರ್ಣ, ಅಸಮಾನತೆ ತಾನು ಉದಾರವಾದಿ ಎಂದುಕೊಂಡು ತನ್ನ ಹಳೆಯ ಹರಿದ ಸ್ವೆಟರ್‌ನ್ನು ಸ್ನೇಹಿತ ಕರಿಯಣ್ಣನಿಗೆ ಕೊಡುವ ಸಣ್ಣತನ ಹಾಗೂ ಕರಿಯಣ್ಣನ ಮಗ ಸುರೇಶನ ಭಯಗಳೆಲ್ಲಾ ಕನಸಾಗಿ ಮೂಡಿ ಬಂದಿದೆ. ಕನಸಿನಲ್ಲಿ ಆದ ಮಾನಸಿಕ ಗಾಯ ಶೋಷಣೆಯ ನೆಲೆಯನ್ನು ಸಣ್ಣತನಗಳನ್ನು ಅವನ ಮಾನಸಿಕ ಡೈರಿಯಲ್ಲಿ ದಾಖಲಿಸುತ್ತದೆ.

ಮನುಷ್ಯನ ಸ್ವಾರ್ಥ ಪ್ರೇರಿತ ಮೂಲ ಪ್ರವೃತ್ತಿಗಳನ್ನು ಶೋಧಿಸುವ ಮತ್ತೊಂದು ಕಥೆ 'ಅಧಿಕಾರಿಗಳು ಮತ್ತು ಕೆಲಸದವ' ಸೃಜನಶೀಲತೆಯಲ್ಲಿ ಹೊಸ ಸಾಧ್ಯತೆಗಳನ್ನು ಹುಡುಕುವ ಪ್ರಯತ್ನ ಇಲ್ಲಿ ಲೇಖಕರ ಮುಖ್ಯ ಕಾಳಜಿಯಂತೆ ಕಂಡಿದೆ. ಇಬ್ಬರು ಸಹೋದ್ಯೋಗಿ ನಿವೃತ್ತಿ ಅಧಿಕಾರಿಗಳು ಸ್ವಾರ್ಥ ಜೀವನಕ್ಕಾಗಿ ಕೆಲಸಗಾರನೊಬ್ಬನನ್ನು ತಮ್ಮ ಕಪಿಮುಷ್ಟಿಯಲ್ಲಿರಿಸಿಕೊಂಡು ಹಸಿವನ್ನು ನೀಗಿಸಿಕೊಳ್ಳುವ ಪರಿಯನ್ನು ಈ ಕಥೆಯು ಮಾರ್ಮಿಕವಾಗಿ ಚಿತ್ರಿಸುತ್ತದೆ. ಇದರ ಜೊತೆಯಲ್ಲಿಯೇ ಸಮಾಜದಲ್ಲಿ ನಡೆಯುವ ಸುಳ್ಳು, ಮೋಸ, ವಂಚನೆ, ದರ್ಪ, ಕ್ರೌರ್ಯ ಹಾಗೂ ಆಕ್ರಮಣಗಳಂಥ ದುಷ್ಟ ಶಕ್ತಿಗಳನ್ನು ಲಂಕೇಶರು ಈ ಕಥೆಯಲ್ಲಿ ಸೆರೆ ಹಿಡಿದಿದ್ದಾರೆ. ಇದಕ್ಕೆ ಹಿನ್ನೆಲೆಯಾಗಿ ಗುಲಾಮಗಿರಿಯ ಜನಜೀವನವೂ ಲೇಖಕರ ಗಮನ ಸೆಳೆದಿದೆ. ಹಿರಿಯ ಅಧಿಕಾರಿ ಹಾಗೂ ಬರಿಯ ಅಧಿಕಾರಿ ಮತ್ತು ಸೇವಕ ಇವು ಕಥೆಯ ಕೇಂದ್ರ ಬಿಂದುಗಳು. ಅಧಿಕಾರಿಗಳ ಕೈಯಲ್ಲಿ ಕೆಲಸಗಾರನು ಶೋಷಿತನಾಗಿದ್ದರೂ ಅದು ಅವನ ಅನುಭವಕ್ಕೆ ಬಾರದೆ ಇರುವ ಚಿತ್ರಣ. ಮನಮಿಡಿಯುವಂಥದ್ದು. ಮೀನು ತಯಾರಿಸುವ ಸಂದರ್ಭ ಅದಕ್ಕೆ ಉಪ್ಪು ಹುಳಿ ಹಚ್ಚುವಂಥಾದ್ದು ಕೆಲಸಗಾರನದೇ ಇನ್ನೊಂದು ಪ್ರಸಂಗದಲ್ಲಿ ಅಧಿಕಾರಿಗಳ ಮನೆಗೆ ಕೆಲಸಗಾರನು ಬಂದಾಗ ಹಸಿವೆಯಿಂದ ಬಳಲುತ್ತಿರುತ್ತಾನೆ. ಆಗ ರೊಟ್ಟಿಯ ಚೂರನ್ನು ಎಸೆಯುತ್ತಾರೆ. ತಿಂದು ಮಲಗು ಎನ್ನುವಂತದ್ದರಲ್ಲಿ ಶೋಷಣೆ ಎದ್ದು ಕಾಣುತ್ತದೆ. ಈ ರೀತಿಯಿಂದ ಶೋಷಣೆಗೆ ಒಳಗಾಗುತ್ತಾನಾದರೂ ತನ್ನ ಗುಣವಂತಿಕೆಯಿಂದ ದೊಡ್ಡವನಾಗಿ

---

೨೫. ಪಿ.ಲಂಕೇಶ್, ಮಂಜು ಕವಿದ ಸಂಜೆ ಮತ್ತು ಇತರ ಕತೆಗಳು, ಪುಟ. ೨೪.

ಕಾಣುತ್ತಾನೆ. ಅಧಿಕಾರಿಗಳು ತಮ್ಮ ಸ್ವಾರ್ಥದ, ಸಣ್ಣತನದ ಗುಣಗಳಿಂದ ಸಣ್ಣವರಾಗಿಯೇ ಕಾಣುತ್ತಾರೆ.

ಲಂಕೇಶರ ಕಥನ ಸಾಹಿತ್ಯದಲ್ಲಿ ಎದ್ದು ಕಾಣುವುದು ಸಮಾಜದಲ್ಲಿ ಮನುಷ್ಯನ ಆಸೆ-ನಿರಾಸೆ, ದೊಡ್ಡತನ, ಸಣ್ಣತನ ಕ್ಷುಲ್ಲಕ ವಿಚಾರಗಳು, ಸುಳ್ಳು, ಮೋಸ, ವಂಚನೆ ಇತ್ಯಾದಿ ಅಂಶಗಳಿಂದ ಕೂಡಿದ ಕ್ರೂರ ವ್ಯವಸ್ಥೆಯ ಬದುಕನ್ನು ತಿಳಿಸುವಲ್ಲಿ ಮುಖ್ಯರಾಗುತ್ತಾರೆ. ಹಣ ಮತ್ತು ಅಧಿಕಾರದ ದೃಷ್ಟಿಯಲ್ಲಿ ಶೋಷಣೆಗೆ ಒಳಗುಮಾಡುವ ಸಂದರ್ಭಗಳನ್ನು ಈ ಮೇಲಿನ ಚಿಂತನಶೀಲ ನಿಲುವುಗಳಲ್ಲಿ ಗುರುತಿಸಬಹುದು.

### ೬.೪. ಹಣ ಮತ್ತು ಅಧಿಕಾರ ಮಹಿಳಾ ಶೋಷಣೆಯ ಆಯಾಮಗಳು

ಸಾಮಾಜಿಕ ಜೀವನದಲ್ಲಿ ಸೇರಿಹೋಗಿರುವ ಪರಂಪರಾನುಗತವಾಗಿ ಜಾತಿಬದ್ಧ ಗ್ರಾಮೀಣ ಸಮಾಜದಲ್ಲಿನ ಮನುಷ್ಯ ಸಂಬಂಧಗಳು ಅದರ ಹಿನ್ನಲೆಯಲ್ಲಿ ನಡೆಯುವ ಹಣ ಮತ್ತು ಅಧಿಕಾರ ಮಹಿಳಾ ಶೋಷಣೆಯ ಆಯಾಮಗಳನ್ನು ಕಾಣಬಹುದು. ಇದು ಲಂಕೇಶರ 'ಮುಸಂಜೆ'ಯ ಕಥಾ ವಸ್ತುವಿನಲ್ಲಿ ಪ್ರಕಟಗೊಳ್ಳುತ್ತದೆ. ಹಾಗೆ ಪ್ರಕಟಗೊಳ್ಳುತ್ತಲೇ ವ್ಯವಸ್ಥೆ ಪಲ್ಲಟಗೊಳ್ಳುವ ಸೂಚನೆಯನ್ನು ಚರ್ಚಿಸುತ್ತದೆ. ಇಲ್ಲಿ ಕಾದಂಬರಿಯ ಉದ್ದಕ್ಕೂ ಹೆಣ್ತನದ ಮನಸ್ಸುಗಳು ಶೋಷಣೆಗೆ ಒಳಗಾಗುವುದು ಒಂದಲ್ಲಾ ಒಂದು ರೀತಿಯಲ್ಲಿ ನಿರೂಪಿತವಾಗುತ್ತದೆ. ಜೊತೆಗೆ ಶೋಷಣೆಯನ್ನು ಅನುಭವಿಸಿದ ಮನಸ್ಸು ಮನನೊಂದು ಬಂಡಾಯದ ದನಿಯಾಗಿ ಪರಿವರ್ತನೆಯಾಗುವ ರೀತಿ ಆ ಕಾಲಮಾನಕ್ಕೆ ಆ ಜಾಯಮಾನಕ್ಕೆ ಕಾದಂಬರಿಯ ಕಥಾ ಹಂದರಕ್ಕೆ ಹೊಸದು. ಭರ್ಮಣ್ಣನ ಹೆಂಡತಿ ರಾಮಿ, ರಂಗವ್ವನ ಮಗಳು ಸಾವಂತ್ರಿ, ಶ್ರೇಷ್ಠಿಯ ಮಗಳು ದೇವಿ ಇವರೆಲ್ಲ ತಮ್ಮ ಜೀವನ ಕಲಿಸಿದ ಅನುಭವದಿಂದಷ್ಟೇ ತಿಳುವಳಿಕೆ ಪಡೆದವರು. 'ಬಿರುಕು'ವಿನ ಬಸವರಾಜುವಿನಂತೆ ವಿಶ್ವವಿದ್ಯಾನಿಲಯದ ವಾತಾವರಣದಲ್ಲಿ ಬೆಳೆದ ಹೆಣ್ಣುಮಕ್ಕಳೆಲ್ಲ ತಮ್ಮ ತಮ್ಮ ಅಸ್ತಿತ್ವವನ್ನು ತಮಗೇ ಅರಿವಿಲ್ಲದಂತೆ ಪುರುಷ ಸಮಾಜದ ವೈರತ್ವವನ್ನು ಕಟ್ಟಿಕೊಂಡವರು.

ಕಾದಂಬರಿಯಲ್ಲಿ ಮಹಿಳಾ ಶೋಷಣೆಯ ಆಯಾಮಗಳು ಎದ್ದುಕಾಣುವಂತಹ ಸಂದರ್ಭಗಳಿಗೆ ಭರ್ಮಣ್ಣ ಶೋಷಣೆಯ ಪ್ರತಿನಿಧಿಯಾಗಿ ಮುಖ್ಯವಾಹಿನಿಯಲ್ಲಿ ನಿಲ್ಲುತ್ತಾನೆ. ಭರ್ಮಣ್ಣ ರಂಗವ್ವಳನ್ನು ಆರ್ಥಿಕವಾಗಿ ದುರ್ಬಲಗೊಳಿಸಲು ಕರಿಯಣ್ಣನಿಗೆ ಹಣನೀಡಿ ರಂಗವ್ವಳ ಕಬ್ಬಿಣದ ಪೆಟ್ಟಿಗೆಯನ್ನೇ ಕದಿಸುತ್ತಾನೆ. ಅದರಲ್ಲಿ ವಿಫಲನಾದ ನಂತರ ರಂಗವ್ವಳಿಗೆ ಸಾಲ ಕೊಡಬೇಕಾಗಿದ್ದ ರಾಚ, ಬಸ್ಯರಂತಹವರನ್ನು ಎತ್ತಿಕಟ್ಟಿ ಹಣ ತೆಗೆದುಕೊಂಡೇ ಇಲ್ಲ ಎಂದು ನಿರೂಪಿಸುವ ಸಂಚನ್ನು ಸೃಷ್ಟಿಸುತ್ತಾನೆ. ಇದಕ್ಕೆ ಹೆದರದೆ ಬದುಕುತ್ತಿದ್ದ ರಂಗವ್ವಳಿಗೆ ಸಾವಂತ್ರಿಯ ಪ್ರೇಮ ಪ್ರಸಂಗದಿಂದ ಸೇಡುತೀರಿಸಿಕೊಳ್ಳುವ ಪ್ರಯತ್ನಿಸುವ ಹಿನ್ನಲೆಯಲ್ಲಿ ಶಿವಾಜಿ ಭರಣ್ಣನ ಎರಡನೇ

ಹೆಂಡತಿಯನ್ನು ಕದ್ದುಕೊಂಡು ಹೋಗುತ್ತಾನೆ. ಅದನ್ನು ಮುಚ್ಚಿಹಾಕಲು ಯತ್ನಿಸುವ ಭರ್ಮಣ್ಣ ಸಾವಂತ್ರಿ ಮಂಜರನ್ನು ಸಾರ್ವಜನಿಕವಾಗಿ ಅವಮಾನಿಸಲು ಹಣ, ಜಾತಿ, ಧರ್ಮ, ಲಿಂಗ ಇಂತಹ ಎಲ್ಲವನ್ನು ಬಳಸಿ ನಡೆಸುವ ದೌರ್ಜನ್ಯಗಳು ನೋಡುಗರಿಗೆ ಭರ್ಮಣ್ಣ ಎಷ್ಟು ನೀಚ, ಭ್ರಷ್ಟ ಎಂಬುದು ತಿಳಿಯುತ್ತದೆ. ಅದೇ ರೀತಿ ರಂಗವ್ವನ ನೆರೆಹೊರೆಯಲ್ಲಿದ್ದ ನಂದ್ಯಪ್ಪ ನಿಂಗವ್ವನ ಕುಟುಂಬದಲ್ಲಿ ಜೀವಸಂವೇದನೆಯ ಎಲ್ಲ ಆಶಯಗಳಿಗೆ ಪೆಟ್ಟುಬಿಳುವಂಥಾ ಘಟನೆಗಳೆ ನಡೆಯುತ್ತವೆ. ನಂದ್ಯಪ್ಪನ ಮಗಳು ಶಿವಿ ಓದಿದವಳು ವಿದ್ಯಾವಂತೆ, ತಿಳುವಳಿಕೆ ಇದ್ದವಳು. ಓದಿದ ಹುಡುಗನಿಗೆ ಅವಳನ್ನು ಮದುವೆ ಮಾಡಬೇಕೆಂಬ ನಿರ್ಣಯಕ್ಕೆ ಬಂದ ಕುಟುಂಬ ಅವಳಿಗಾಗಿ ಉದ್ಯೋಗಸ್ಥ ಹುಡುಗನನ್ನು ಒಪ್ಪಿಕೊಳ್ಳುತ್ತಾರೆ. ಅವರಪ್ಪ ಕೇಳಿದ ವರದಕ್ಷಿಣೆಯನ್ನು ಕೊಡಲು ಸಿದ್ಧರಾಗುತ್ತಾರೆ. ಜ್ವರದ ಅನಾರೋಗ್ಯದಿಂದ ಬಳಲುತ್ತಿದ್ದ ಶಿವಿಯನ್ನು ಆಕೆಯ ಆರೋಗ್ಯದ ಹಾರೈಕೆಗಿಂತ ಹುಡುಗನಿಗೆ ಹೆಣ್ಣು ತೋರಿಸುವುದನ್ನೇ ಪ್ರಥಮ ಆದ್ಯತೆಯಾಗಿ ಪರಿಗಣಿಸಿದ ಕುಟುಂಬ, ಕಂಬಳ್ಳಿಗೆ ವಾಪಸ್ಸು ಬರುವುದೇ ಇಲ್ಲ. ಅಂದರೆ ಸ್ವಾಭಾವಿಕವಾಗಿ ನೈಸರ್ಗಿಕ ನಿಯಮಗಳನ್ನು ಗಾಳಿಗೆ ತೂರಿ ನಮ್ಮ ನಮ್ಮ ಪರಂಪರೆಯ ರೂಢಿವ್ಯವಸ್ಥೆಯೇ ಅಂತಿಮ ಎಂದು ಪ್ರಯೋಗ ಮಾಡಹೊರಟ ಕುಟುಂಬಕ್ಕೆ ಶಿವಿಯ ಸಾವು ಸೂತಕದ ಸೂಚಕವಾಗುತ್ತದೆ.

ಸಮಕಾಲೀನ ಕಥಾ ಲೇಖಕಿಯಾದ ಸಾರಾ ಅಬೂಬಕರ್‌ರವರ 'ನಿಯಮನಿಯಮಗಳ ನಡುವೆ' ಎಂಬ ಕಥೆ ಇಲ್ಲಿ ಉಲ್ಲೇಖ ಮಾಡಬಹುದು. ಇಲ್ಲಿ ತಾಯಿ ಅಮೀನ ತಲಾಖ್ ಪಡೆದ ಮಗಳನ್ನು ಮರುಮದುವೆ ಮಾಡಲು ಸಿದ್ಧತೆ ನಡೆಸಿರುವಾಗಲೇ ಊರಿನ ನಾಟಿ ವೈದ್ಯರಿಂದ ಔಷಧಿ ಕೊಡಿಸಿ ನಿಸರ್ಗದ ನಿಯಮಕ್ಕೆ ವಿರುದ್ಧವಾಗಿ ಮಗಳು ಜೋಹರಾಳು ಅಸ್ವಾಭಾವಿಕ ಋತುಮತಿಯಾಗುವಂತೆ ಮಾಡುತ್ತಾಳೆ. ನಿಸರ್ಗ ನಿಯಮಕ್ಕೆ ಸೆಡ್ಡು ಹೊಡೆದು ತಮ್ಮ ಧರ್ಮದ ಧಾರ್ಮಿಕ ವಿಧಿವಿಧಾನಗಳ ಪ್ರಕಾರ 'ಒಬ್ಬತ್' ಮಾಡಲು ಹೊರಟು ಕಡೆಗೆ ವಿಪರೀತ ರಕ್ತಸ್ರಾವವಾಗಿ ಮಗಳನ್ನೇ ಕಳೆದುಕೊಳ್ಳುವ ಅಮೀನ ನಿಯಮಗಳ ನಡುವೆ ತಮ್ಮ ಇಸ್ಲಾಂ ಮತಧರ್ಮಕ್ಕೆ ಅನುಗುಣವಾಗಿ ಋತುಚಕ್ರವನ್ನೇ ತಿರುಗಿಸ ಹೊರಡುವ ಪ್ರಸಂಗದ ಕಡೆಗೆ ಮಗಳಾದ ಜೊಹರಾ ತನ್ನ ಇಬ್ಬರು ಮಕ್ಕಳನ್ನು ಬಿಟ್ಟು ನಿಸರ್ಗದ ನಿಯಮಕ್ಕೆ ವಿರುದ್ಧವಾಗಿ ಹೊರಟು, ಹೋರಾಟ ಫಲಿಸದೆ ಸಾಯುತ್ತಾಳೆ. ಒಜ್ಜತ್ ನಡೆಯುವುದಿಲ್ಲ. ತನ್ನ ಅಳಿಯ ಖಾದರ್ ಅವಳ ಮಗಳ ಸ್ಥಿರ ಸಂಸಾರ, ಮಗ ಶಾಫಿಯ ಕ್ಷೇಮವನ್ನು ಚಿಂತಿಸುವ ಅಮೀನ, ನಿಸರ್ಗದ ಸಹಜ ನಿಯಮಗಳ ಬಗೆಗೆ ಆಲೋಚಿಸದೆ ಮಗಳನ್ನು ಕಳೆದುಕೊಳ್ಳುವ ಕಥೆ ಇಲ್ಲಿ ಶಿವಿಯ ಪ್ರಸಂಗಕ್ಕೆ ತಾಳೆ ನೋಡಬಹುದು,.

ಆಣೆ ಬಡ್ಡಿಯನ್ನು ವಸೂಲು ಮಾಡಲಾಗದ ರಂಗವ್ವ ಅಲ್ಲಿನ ಜನರಿಂದ ಮೋಸ ಹೋಗುತ್ತಾಳೆ. ಸಣ್ಣೀರಪ್ಪನ ಪ್ರಕರಣದಲ್ಲೂ ಕೋಪಗೊಳ್ಳುವ ರಂಗವ್ವ ಹಣ ಹಿಂತಿರುಗಿಸದಿದ್ದರೆ ಜಗಳ ಮಾಡುವುದಾಗಿ ಸೂಚಿಸುತ್ತಾಳೆ. ಮುಂದುವರೆದು ಬೂಸಿಬಸ್ಯ ಸಾವಂತ್ರಿಯನ್ನು ಕಿಚಾಯಿಸುವ ಪ್ರಸಂಗ ಬರುತ್ತದೆ. ಸಾವಂತ್ರಿಯನ್ನು ದೈಹಿಕವಾಗಿ ಅನುಭವಿಸಬೇಕೆಂಬ ಆಸೆ ಉಂಟಾಗಿ ಅವಳ ಹತ್ತಿರ ಬಂದು ಅವರವ್ವನ ಬಡ್ಡಿ ವ್ಯವಹಾರವನ್ನು ಪ್ರಸ್ತಾಪಿಸುತ್ತಾ ಸಾವಂತ್ರಿಯ ಸೊಂಟವನ್ನು ಮುಟ್ಟುತ್ತಾನೆ. ಆ ಸಂದರ್ಭದಲ್ಲಿ "ನಾಮರ್ದ ನಾಮರ್ದ – ಅವ್ವಗೆ ಕೊಡೋ ಇನ್ನೂರು ರೂಪಾಯಿ ಮಡಗು ಅಂದಳು. ಆತನ ಕಣ್ಣಿಗೆ ಕತ್ತಲು ಕವಿದು 'ನಿಂಗೆ ಬೇಕಾದ್ರೆ ಕೊಡ್ತೀನಿ' ಅಂದ, ಮತ್ತು ಇನ್ನೂ ಉಚಾಯಿಸಿ ನಡುಗುತ್ತಲೇ ಅವಳ ಮೊಲೆಗೆ ಕೈ ಹಾಕಿದೊಡನೆ ಅವಳು ಸಿಟ್ಟಿನಿಂದ ಕೂಗಿ ಅವನನ್ನು ವದರಿದಳು. ಆತ ಅಸಹ್ಯ ಸದ್ದು ಮಾಡುತ್ತಾ ವಗೆಯುವ ದೋಣಿಯಿಂದ ಕೆಳಗೆ ಮೋರಿಗೆ ಬೀಳಲು ಸಾಗುತ್ತಿದ್ದ ಸಮಯಕ್ಕೆ ಸರಿಯಾಗಿ ಮಂಜ ಬಂದು ಅವನ ಕೈ ಹಿಡಿದುಕೊಂಡ ಮಂಜ 'ಬೋಳಿಕೆ' ಎಂದು ಕೂಗಾಡುತ್ತಿದ್ದಾನೆ. ಸಾವಂತ್ರಿ ಒಳಗೊಳಗೇ ನಗುತ್ತ ಮೇಲೆ ಮೇಲೆ ಎಂಜಲು ತಿನ್ನೋ ಮಂಗ್ಯ ನಿನಗೆ ಪಂಚಾಯಿತಿ ಮಾಡಿಸ್ತೀನಿ ಅವ್ವಗೆ ಹೇಳಿ ನಿನ್ನ ಚಮಡ ಸುಲಿಸ್ತೇನೆ ಎಂದು ಕೂಗಾಡಿದಳು."[೨೬] ಇವೆಲ್ಲವೂ ಒಂದಲ್ಲಾ ಒಂದು ರೀತಿಯಲ್ಲಿ ನಡೆಯುವ ಮಹಿಳಾ ಶೋಷಣೆಗಳೇ ಇಷ್ಟೆಲ್ಲಾ ರಾದ್ಧಾಂತ ನಡೆಯಲು ಭರ್ಮಣ್ಣನೇ ಮೂಲ ಕಾರಣ ಪುರುಷನಾಗುತ್ತಾನೆ.

ಲಂಕೇಶರು ಭರ್ಮಣ್ಣ ಸಾಮಾಜಿಕವಾಗಿ ಎಸಗುವ ಪ್ರತಿಯೊಂದು ಸಂದರ್ಭವನ್ನು ತುಂಬಾ ತಾತ್ವಿಕವಾದ ಸಾಮಾಜಿಕ ಸಿದ್ಧಾಂತವಾಗಿ ರೂಪಿಸಿಕೊಳ್ಳಲು ಬಳಸಿಕೊಳ್ಳುವರು. ಅಲ್ಲಿಗೆ ಭರ್ಮಣ್ಣನ ಜೀವಿತದಿಂದಲೇ ಭ್ರಷ್ಟಾಚಾರ ಎಂಬುದು ಇನ್ನೊಬ್ಬರನ್ನು ನಾಶಪಡಿಸುವ ಮೊದಲು ಭ್ರಷ್ಟನಾದವನನ್ನೇ ಮೊದಲು ಕಬಳಿಸಿ ನಾಶಗೊಳಿಸುತ್ತದೆ ಎಂಬುದಕ್ಕೆ ಭರ್ಮಣ್ಣನಿಗಿಂತ ಬೇರೆ ನಿದರ್ಶನ ಬೇಕಿಲ್ಲ. ಇಂತಹ ನೀಚತನ ಸಮಾಜದಲ್ಲಿ ಹೆಚ್ಚಿದಷ್ಟು ಸಮಾಜ ತನ್ನತನವನ್ನು ಕಳೆದುಕೊಂಡು ಅಜಾಗರೂಕತೆಗೆ ಸಾಕ್ಷಿಯಾಗುತ್ತದೆ. ಆಗ ಸಾಮಾಜಿಕ ಕಳಕಳಿಯುಳ್ಳ ಜನ ಬದಲಾವಣೆಗೆ ತಮ್ಮನ್ನು ತಾವು ತೆರೆದುಕೊಳ್ಳುತ್ತಲೇ ಇಂತಹ ನೀಚರಿಗೆ ಸಾರ್ವತ್ರಿಕವಾಗಿ ಮುಖಭಂಗಗೊಳಿಸುವ ಸಂದರ್ಭವನ್ನು ಲಂಕೇಶರು ಕಾದಂಬರಿಯ ಅಂತ್ಯದಲ್ಲಿ ಸಂದೇಶವಾಗಿಯೇ ನೀಡಿದ್ದಾರೆ.

'ಅಕ್ಕ' ಕಾದಂಬರಿಯಲ್ಲಿ ಬರುವ ದೇವೀರಿ, ಪದ್ದಿ ಸಂಪೂರ್ಣಮ್ಮ ಇವರೆಲ್ಲರೂ ಶೋಷಣೆಗೆ ಒಳಗಾದ ಪಾತ್ರಗಳೇ ಒಂದಲ್ಲ ಒಂದು ರೀತಿಯಲ್ಲಿ ಕಾದಂಬರಿಯಲ್ಲಿ ಕಾಣುವ ಸಂದರ್ಭಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯ ಮೇಲೆ ಮಾಡುವ ಅತ್ಯಾಚಾರ, ಅನಾದರ

---

೨೬. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೭೩

ಇವುಗಳು ಅವರುಗಳ ಅನಿವಾರ್ಯ ಸ್ಥಿತಿಯಲ್ಲಿ ನಿರ್ಮಾಣ ಮಾಡುವ ಸಂಗತಿಗಳೇ ಆಗಿವೆ. ದೇವೀರಿ ಇಟ್ಟಿಗೆ ಒತ್ತು ಕೂಲಿ ಮಾಡುತ್ತಿದ್ದಳು ಆದರೆ ಅವಳ ವಯಸ್ಸು ಸೌಂದರ್ಯವನ್ನು ಅರಿತ ಕೆಲ ವ್ಯಕ್ತಿಗಳು ಅವಳನ್ನು ಬಳಸಿಕೊಳ್ಳುತ್ತಿದ್ದುದು ಯಾವುದಕ್ಕೋ ಅದಕ್ಕೆ ಪ್ರತಿಯಾಗಿ ಹಣ ನೀಡುತ್ತಿದ್ದರು ಅವಳಿಗೆ. ಕ್ಯಾತನ ಬಾಯಿಂದ ಈ ನಿರೂಪಣೆಯನ್ನೆಲ್ಲಾ ಲಂಕೇಶರು ಹೇಳಿಸುತ್ತಾರೆ ಮತ್ತೊಂದು ಪ್ರಸಂಗದಲ್ಲಿ ನೋಡುವುದಾದರೆ "ಕ್ಯಾತನಿಗೆ ಬಹಳ ಹೊತ್ತು ನಿದ್ರೆ ಬರಲಿಲ್ಲ, ಹರಕಲು ಮೀಸೆಯ ನರಸಿಂಹ ಮೇಸ್ತ್ರಿಯ ಬಗ್ಗೆ, ಖಡವಾ, ನಾಗ್ರ, ಹರಿ, ಆರಾಧ್ಯ, ಗಿರಿಯ ಬಗ್ಗೆ ಅವನ ತಲೆ ಬಿಸಿಯಾಯಿತು. ಏನು ಮಾಡಿದರೂ ಅವರು ತಲೆಯಿಂದ ಹೋಗಲೊಲ್ಲರು, ಏನು ನನ್ಮಕ್ಕಳು ಸಾರ್ ರಾಮಪ್ಪನವರ ಎದುರು ಮಲೇರಿ ಬಂದ ಮಂಗಗಳ ಹಂಗೆ ಕುಂತಿರ್ತಾರೆ. ಆದ್ರೆ ನಮ್ಮ ಹಟ್ಟಿಗೆ ಬಂದ್ರೆ ಬಲೆ ಎಗರಾಡ್ತಾರೆ. ನರಸಿಂಹ ಮೇಸ್ತ್ರಿಗೆ ಇತ್ತಿತ್ತಲಾಗೆ ಮೇಸ್ತ್ರಿ ಅಂದ್ರೆ ಸಿಟ್ಟು, ಅಣ್ಣಾ ಅನ್ನಬೇಕಂತೆ, ಅಣ್ಣಾವ್ರೆ ಅನ್ನಬೇಕಂತೆ. ಅವನೀಗ ಮಾಡ್ತಿರೋದು ಮೇಸ್ತ್ರಿ ಕೆಲಸವಲ್ಲಂತೆ, ಕಂತ್ರಾಟಂತೆ ಈ ಹಲ್ಕಾ ಮೇಸ್ತ್ರಿ ನನಗೆ ಗೊತ್ತಿಲವೇ ಸಾರ್ ಅವನು ಮಾಡ್ತಿರೋದು ಮೇಸ್ತ್ರಿ ಕಂತ್ರಾಟೂ ಅಲ್ಲ ಎಂತದು ಅಲ್ಲ ಹಲ್ಲಂಡೆ ಕೆಲಸ. ನಾನು ಮೈಮೂಳೆ ದುಡಿದ್ರೆ ನನ್ನ ದುಡ್ಡು ನಂಗೆ ಕೊಡಾಕೆ ಸತಾಯಿಸ್ತಾನಲ್ಲ ಅಂತ ಎಷ್ಟೋ ಸಲ ದೇವೀರಿನೇ ಹೇಳಿಲ್ವ ಸಾರ್ ಹೀಗೆ ಯೋಚನೆ ಮಾಡಿದ ಕೂಡ್ಲೆ ತುಂಬಾದುಕ್ಕ ಬಂತು. ದೇವೀರಿ ಇಟ್ಟಿಗೆ ಕೆಲಸ ಮಾಡ್ತಿದಾಳೆ ಅಂತ ಧೈರ್ಯವಾಗಿ ನನ್ನಿಂದ ಹೇಳಾಕೆ ಆಗಾಕಿಲ್ಲ ಅನ್ನಿಸಿ ನಿದ್ರೆ ಹೋದೆ. ನಂಗೆ ತುಂಬ ದುಕ್ಕವಾದಾಗಲೆಲ್ಲ ಸ್ಪೀಡಾಗಿ ನಿದ್ರೆ ಬಂದುಬಿಡತ್ತೆ ಸಾರ್"[೨೭] ಸರಿಯಾಗಿ ದುಡಿದ ದುಡ್ಡು ಕೊಡದೆ ಆಕೆಗೆ ದೈಹಿಕ ಶೋಷಣೆಯಾಗಿರುವುದನ್ನು ನೋಡಬಹುದು. ಇನ್ನು ಪದ್ದಿಯ ಪಾತ್ರದಲ್ಲಿ ಸಿನಿಮಾ ಶೂಟಿಂಗ್ ನೆಪದಲ್ಲಿ ಸಾಕಷ್ಟು ಶೋಷಣೆಯನ್ನು ಅನುಭವಿಸಿದ ಹೆಣ್ಣು ಪದ್ದಿಯಾಗಿದ್ದಾಳೆ. ಕ್ಯಾತ ಭಾಷಿಕವಾಗಿ ಗ್ರಾಮೀಣ ಮೂಲದವನಾಗಿದ್ದು ಅವನ ಚಿಂತನೆಯಲ್ಲಿ ಮಾತ್ರ ಇಡೀ ಲೋಕವೇ ಅಚ್ಚರಿಪಡುವ ರೀತಿಯಲ್ಲಿ ತನ್ನ ನಿಲುವುಗಳನ್ನು ಶೋಷಣೆಗಳನ್ನು ಆತ ಗುರುತಿಸುವ ಕೈಂಕರ್ಯದಲ್ಲಿ ನಿರತನಾಗಿರುತ್ತಾನೆ. ಲಂಕೇಶರು ಮನುಷ್ಯ ಸಂಬಂಧಗಳಲ್ಲಿ ಏರ್ಪಡುವ ಹಣ ಮತ್ತು ಅಧಿಕಾರ ಮಹಿಳಾ ಶೋಷಣಾ ನೆಲೆಯ ಆಯಾಮಗಳನ್ನು ಕ್ಯಾತನ ಮೂಲಕ ಹೇಳಿಸುವುದು ಇದೊಂದು ವಿಶಿಷ್ಟವಾದ ಕ್ರಮವಾಗಿದೆ.

ಬದುಕಿನ ಸಾಫಲ್ಯ – ವೈಫಲ್ಯವನ್ನು ಸ್ತ್ರೀಮುಖ ಸಂವೇದನೆಯೊಂದಿಗೆ ಚಿತ್ರಿಸುವ ಕಥೆ 'ಕಣ್ಮರೆ' ಈ ಕಥೆಯ ನಾಯಕಿ ಸಾವಿತ್ರಿ ಮತ್ತು ಅವಳ ಗೆಳತಿ ಭ್ರಮರಾ ಇವರಿಬ್ಬರು ಸಮಾಜದ ವಿಭಿನ್ನಸ್ತರದ ವ್ಯಕ್ತಿತ್ವಕ್ಕೆ ಹೊಂದಿಕೊಂಡವರು. ತಂತಮ್ಮ ಸುಪ್ತಕಾಮನೆಗಳ ಪ್ರಕಟಣೆಯಲ್ಲಿ

---

೨೭. ಪಿ.ಲಂಕೇಶ್, ಅಕ್ಕ, ಪುಟ. ೨೨

ಸಮಾಜದಲ್ಲಿ ಭಿನ್ನ ಭಿನ್ನ ಹಾದಿ ತುಳಿದು ವಿಶಿಷ್ಟರೂಪದ ಜೀವನದರ್ಶನಕ್ಕೆ ತಮ್ಮನ್ನು ಅರ್ಪಿಸಿಕೊಂಡವರು ಈ ವಿಭಿನ್ನ ತರಹದ ವ್ಯಕ್ತಿತ್ವಗಳನ್ನು ವಾಸ್ತವದ ತಳಹದಿಯಲ್ಲಿಡುವುದರ ಮೂಲಕ ಲೇಖಕರು ಬಲುಜಾಣತನದಿಂದ ಕಥೆಯನ್ನು ಮುನ್ನಡೆಸಿಕೊಂಡುಹೋಗುತ್ತಾರೆ. ಶೋಷಣೆಯ ವಿಭಿನ್ನ ಆಯಾಮಗಳು ಕಥೆಯ ಸೂಕ್ಷ್ಮತೆಯಲ್ಲಿ ಎಳೆಎಳೆಯಾಗಿ ಇರುವುದನ್ನು ಕಾಣಬಹುದು.

ಸಂಪ್ರದಾಯಸ್ಥ ಮನೆತನದಲ್ಲಿ ಹುಟ್ಟಿದ ಸುಶಿಕ್ಷಿತಳಾದ ಹರೆಯದ ಹೆಣ್ಣು ಸಾವಿತ್ರಿ ತಂದೆ–ತಾಯಿ ನಡೆಸುವ ಮದುವೆಯ ಲೆಕ್ಕಾಚಾರಕ್ಕೆ ಕಿವಿಗೊಡದೆ ತನ್ನ ಮನಸ್ಸಿನ ಹಂಬಲಕ್ಕೆ ಬಲಿಯಾದವಳು. ಕಾರಣ ಅವಳ ಕಣ್ಣಿಗೆ ಕಂಡದ್ದು ತನ್ನ ಕ್ಲಾಸ್‌ಮೇಟ್ ಶಂಕರ, ಆದರೆ ಅವನು ತನ್ನಲ್ಲಿನ ಬಯ – ಸಂಕೋಚಗಳು ತುಂಬಿದ ವ್ಯಕ್ತಿಯಂತಾಗಿ ಸಾವಿತ್ರಿಯ ಕನಸಿಂದ ಕಣ್ಮರೆಯಾಗುತ್ತಾನೆ. ನಂತರ ಸಾವಿತ್ರಿಗೆ ಕಂಡದ್ದು ಗೆಳತಿ ಭ್ರಮರಾಳ ಮದುವೆ ಮತ್ತು ಅವಳ ಮುಂದಿನ ಬದುಕು. ಇಲ್ಲಿ ಭ್ರಮರಾಳ ಬದುಕಿನ ಹಂಬಲವೇ ಬೇರೆ, ಸಾವಿತ್ರಿ ಬದುಕಿನ ಹಂಬಲವೇ ಬೇರೆಯಾದರೂ ಸಮಸ್ಯೆಗಳ ತಾಕಲಾಟ ಮಾತ್ರ ಒಂದೇ ಆಗಿದೆ. ಭ್ರಮರಾಳ ಸಮಸ್ಯೆಗಳಿಗೆ ಗೂಡಾರ್ಥವನ್ನು ಪಡೆದ ಬಣ್ಣದ ಹೊದಿಕೆಯಿದೆ. "ಭ್ರಮರಾಂಬ ಇದನ್ನೆಲ್ಲ ಕೇಳಿ ನಕ್ಕಿದಳು ಒಮ್ಮೊಮ್ಮೆ ಸಾವಿತ್ರಿಯ ರಂಗುರಂಗಿನ ಲೋಕಕ್ಕೆ ಮಣಿದಂತೆ ಕಾಣುತ್ತಿದ್ದಳು. ಆದರೆ ಭ್ರಮರಾಳ ಹಿನ್ನೆಲೆ ಗೋಡೆಯಂತಿತ್ತು. ಅವಳನ್ನು ಈಗ ಜಗ್ಗುತ್ತಿರುವ ಒಡವೆ, ಝುಳಪಿಸುವ ರೇಷ್ಮೆ ಸೀರೆ, ನವಿರಾಗಿ ಆವರಿಸಿದ ಸುಗಂಧ, ಅರಿಶಿನಗಳ ನಡುವೆ ಅವಳ ಸ್ತನಗಳು, ಯೋನಿ, ನಡುತಮ್ಮ ಸರದಿಗಾಗಿ ಕಾಯುವ ಸೇವಕರಂತಿದ್ದವು. ಸಾವಿತ್ರಿಯೇ ಅವಳ ಲೋಕಕ್ಕೆ ಮರುಳಾದಂತಿತು.

'ತುಂಬಒಳ್ಳೆಯವನಾ?' ಅಂದಳು ಸಾವಿತ್ರಿ. ಆಕೆಯ ಕಿವಿಯಲ್ಲಿ; ಮತ್ತೆ ಭ್ರಮರಾ ಜೋರಾಗಿ ನಕ್ಕಳು 'ತುಂಬ ಹೆಲ್ತಿಯಾಗಿ ಕಾಣ್ತಾನೆಕಣೆ – ಒಳ್ಳೆಯವನೋ ಎಂಥವನೋ ಹಾಳಾದವನು ಗೊತ್ತಿಲ್ಲ' ಅಂದಳು. ಮತ್ತೆ ಆಕೆಯ ಕಿವಿಯಲ್ಲಿ 'ನೀನು ತುಂಬ ಸ್ಟುಪಿಡ್ ಕಣೇ' ಅನ್ನುವ ಮನಸ್ಸಾಯಿತು. ಆದರೆ ಮಾತು ಸಾವಿತ್ರಿಯ ಗಂಟಲಲ್ಲಿ ಉಳಿಯಿತು"[೨೮] ಎಂಬ ಮಾತುಗಳಲ್ಲಿ ಭ್ರಮರಾಳ ಬದುಕಿನ ನಿಗೂಢತೆಯ ಸ್ಪಷ್ಟ ಅರ್ಥ ಸಿಗುತ್ತದೆ. ಆಕೆಯ ಬದುಕು ಸಮಾಜ ವ್ಯವಸ್ಥೆಯ ಯಾವುದೋ ಒತ್ತಡಕ್ಕೆ ಮಣಿದ ಜೀವಂತ ಹೆಣದ ಬದುಕಿನಂತೆ ತತ್ತರಿಸಿ ಹೋಗಿದೆ.

ಇದರಂತೆ ಸಾವಿತ್ರಿ ಕೂಡ ತನ್ನ ಬದುಕಿಗಾಗಿ ಇಡುವ ಪ್ರತಿಯೊಂದು ಹೆಜ್ಜೆಯೂ ವಿಫಲವಾಗುತ್ತಾ ಹೋಗುವುದನ್ನು ಕಾಣುತ್ತೇವೆ. ಇದಕ್ಕಾಗಿ ಭ್ರಮರಾಳಿಗೆ ಬರೆಯುವ ಪತ್ರದ

---

೨೮. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೧೯

ಮುಖಾಂತರ ಕಥೆ ಹೊಸತಿರುವು ಪಡೆಯುತ್ತದೆ. ತನ್ನ ಗ್ರಹಿಕೆಗೆ ಅಳವಡದಷ್ಟು ಸಂಕೀರ್ಣ ಅನುಭವಗಳೆಂದು ತಿಳಿದ ಸಾವಿತ್ರಿಯ ಬದುಕಿನ ಪಯಣ ಒಂದು ಪುಸ್ತಕದಂತೆ ಕಾಣುತ್ತದೆ. "ಪುಸ್ತಕದಂತೆ ಇನ್ನೊಬ್ಬರನ್ನು ಓದಲು ಆಗುವುದೇ ಇಲ್ಲವಲ್ಲ. ನಾನೀಗ ಬರೆಯುತ್ತಿರುವುದು ನಿಮ್ಮ ನಿಗೂಢದ ಬಗ್ಗೆ ನಮ್ಮನ್ನು ನಾವು ಓದಿಕೊಳ್ಳಲು ಆಗುವುದೇ ಇಲ್ಲ. ಒಂದು ಪುಟ ತೆರೆದೊಡನೆ ಮುಂದಿನ ಪುಟ ಕಾದಿರುತ್ತದೆ. ಹಿಂದಿನ ಪುಟವನ್ನು ಮರೆಸುವ ಮಬ್ಬು ಕವಿದುಕೊಳ್ಳುತ್ತದೆ. ನಗಬೇಡ ಆತನ ಹೆಸರು ಕೃಷ್ಣ. ನಿನಗೆ ಈಗಾಗಲೇ ಇದೆಲ್ಲ ಗೊತ್ತಾಗಿರಬಹುದಾದರೂ ಹೇಳುತ್ತಿದ್ದೇನೆ. ಆತನನ್ನು ನಾನು ನೋಡದೆ ಮಾತಾಡಿಸದೆ ಮದುವೆಗೆ ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ನನಗೆ ಅಚ್ಚರಿಯೆಂದರೆ ನನ್ನನ್ನು ಚೆನ್ನಾಗಿಬಲ್ಲ ನನ್ನ ಅಪ್ಪ ಇದನ್ನೆಲ್ಲ ನಿರೀಕ್ಷಿಸಿದ್ದರು. ನಮ್ಮಿಬ್ಬರನ್ನೇ ಬಿಟ್ಟು ಆತನ ಕಡೆಯವರೂ ನಮ್ಮ ಮನೆಯವರೂ ಕಣ್ಮರೆಯಾಗಿದ್ದರು. ನಾನು ಯಾವುದೇ ಅಲಂಕಾರ ಮಾಡಿಕೊಳ್ಳದೆ ನನ್ನ ಹಳೆಯ ಚೂಡಿದಾರ್ ಹಾಕಿಕೊಂಡು (ನಸುನೀಲಿಯ, ಅಲ್ಲಲ್ಲಿ ಮಾಸಲಾದ ಆ ಚೂಡಿದಾರ್ ನೀನು ಅಣಕಿಸಿದ್ದೀ) ಅವನನ್ನು ನೋಡಲು ನಡುಮನೆಗೆ ಬಂದೆ ಕೃಷ್ಣನನ್ನು ಬಿಟ್ಟು ಯಾರೂ ಇರಲಿಲ್ಲ. ಎಲ್ಲರೂ ನಮ್ಮನ್ನು ಇಣುಕಿ ನೋಡುತ್ತಿರಬಹುದೆಂದು ಅನುಮಾನವಾಗಿ ಸುತ್ತ ನೋಡಿ ಬಂದೆ. ಯಾರೂ ಇರಲಿಲ್ಲ. ತೋಟಕ್ಕೆ ಹೋಗಿದ್ದರೆಂದು ಅಮೇಲೆ ತಿಳಿಯಿತು. ನಾನು ನಡುಮನೆಗೆ ಬಂದೊಡನೆ ಆತ ಎದ್ದ ತುಸು ಸಂಕೋಚದ ಆತ ನಮಸ್ಕರಿಸಿದ. ನಾನು ನಮಸ್ಕರಿಸಿದೆ. ನವವಧುವಿಗೆ ಬೇಕಾದ ಲಜ್ಜೆ ನನ್ನಲ್ಲಿ ಎಷ್ಟಿತ್ತೋ ಗೊತ್ತಿಲ್ಲ. ಆದರೆ ನನ್ನ ಭಯ ಮತ್ತು ಸಂಕೀರ್ಣ ಅವನನ್ನು ತಲುಪಿತ್ತು. ನಾನು ಹೆಚ್ಚು ಮಾತಾಡಲಿಲ್ಲ. ಮುಗುಳ್ನಕ್ಕು ನೆಲನೋಡುತ್ತಾ ಕುಂತೆ. ಸೈಕಾಲಜಿ ಓದಿದ ಇಂಜಿನಿಯರ್, ಮನಃಶಾಸ್ತ್ರ ಆತನ ಹಾಬಿ ಅಂತೆ – 'ನಾನು ಇಂಜಿನಿಯರಿಂಗ್ ಹಾಬಿ ಅಂತ ತಿಳಿದಿದ್ದೆ' ಅಂದೆ. ಆತ ದೊಡ್ಡದಾಗಿ ನಕ್ಕ"[೨೯] ಇದು ಕೇವಲ ಸಾವಿತ್ರಿಯ ಪಾಡಲ್ಲ. ಪ್ರಸ್ತುತ ಸಮಾಜದಲ್ಲಿ ಸ್ತ್ರೀಯರು ತಮ್ಮ ಬದುಕಿನಲ್ಲಿ ಅನುಭವಿಸುವ ಪರಿಪಾತವೆ ಆಗಿದೆ.

ಸಾವಿತ್ರಿಯ ಬದುಕಿಗೆ ಜೀವಂತ ಪ್ರತಿಕ್ರಿಯೆಯಂತೆ ತೋರುವ ಕೃಷ್ಣನ ಪ್ರವೇಶವು ಇಲ್ಲಿ ಗಮನಾರ್ಹ. ತಾನು ಫ್ಯಾಕ್ಟರಿಯೊಂದರಲ್ಲಿ ಕೆಲಸದವನಾಗಿದ್ದರೂ ಇಂಜಿನಿಯರ್ ಎಂದು ಹೇಳಿ ಸಾವಿತ್ರಿಯನ್ನು ಬಲೆಗೆ ಹಾಕಿಕೊಂಡು ಸಮಾಜದ ದುರಂತಮಯ ಮೌಢ್ಯವನ್ನು ತೊರೆದು ಸರಳ ವಿವಾಹವಾಗುವನು. ಇವನಿಂದ ತನ್ನ ಬದುಕಿನಲ್ಲಿ ಚೇತೋಹಾರಿ ತೋಟವೊಂದನ್ನು ತೆರೆದಂತೆ ಭಾಸವಾಗಿ, ಪ್ರೀತಿಯ ಭ್ರಮೆಯಲ್ಲಿ ಸಿಲುಕುವ ಸಾವಿತ್ರಿ ಮೊದಲು ಅವನಲ್ಲಿ ಕಂಡದ್ದು. ಪ್ರಾಣಿಗಳ ತೀವ್ರ ಪ್ರೀತಿ ಮತ್ತು ಸ್ನೇಹ ಸಮ್ಮಿಳನ. ಆದರೆ ಇದು ಅಂತರ ಪರಿವೀಕ್ಷಣೆಗೆ ಮೀರಿ

---

೨೯. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೨೧

ನಿಲ್ಲುವಂತದ್ದಾಗಿದೆಯಾದರೂ ಇದು ಕೇವಲ ಮಾನಸಿಕ ಸ್ತರದಲ್ಲಿ ಮಾತ್ರ ಸಫಲವಾಗುತ್ತದೆ. ಪಾಪ ಪ್ರಜ್ಞೆ ಕಾಡುತ್ತದೆ. ಇದರಿಂದ ಮುಕ್ತವಾಗಲು ಅವನು ಸಾವನ್ನು ಒಪ್ಪಿಕೊಳ್ಳುತ್ತಾನೆ. ಆದರೆ ಸಾವಿತ್ರಿಗೆ ಮಾತ್ರ ಅವನ ಸಾವು ಬದುಕಿನ ದುರಂತವಾಗಿ ಪರಿಣಮಿಸುತ್ತದೆ.

ಸಾವಿತ್ರಿಯ ತಾಯಿ ತನ್ನ ಗಂಡನ ಜೊತೆ ಅನೈತಿಕ ಸಂಪರ್ಕಹೊಂದಿರುವ ಮಾದೇವಿಯನ್ನು ಆಪಾದಿಸುವುದರಲ್ಲೇ ತನ್ನ ಜೀವನ ಕಳೆದಿದ್ದಳು. ಈ ರೀತಿಯಿಂದ "ಸಾವಿತ್ರಿ ಮತ್ತು ಭ್ರಮರಾ ಇವರಿಬ್ಬರದು ಎರಡು ವಿಭಿನ್ನ ದಿಕ್ಕಿನಲ್ಲಿ ನಡೆಯುವ ಪ್ರಯೋಗಗಳು, ಭ್ರಮರಾ ತನ್ನ ವ್ಯಕ್ತಿತ್ವಕ್ಕಿಂತ ಸಮಾಜದ ನೆಲೆಗೆ ಹೆಚ್ಚು ಮಹತ್ವಕೊಟ್ಟು ತನ್ನನ್ನು ಅರ್ಪಿಸಿಕೊಂಡವಳು. ಸಾವಿತ್ರಿ ತನ್ನ ವ್ಯಕ್ತಿತ್ವಕ್ಕೆ ಹೆಚ್ಚು ಅರ್ಪಿತಳಾದವಳು. ಸಾಮಾಜಿಕ ನೆಲೆಯ ಬಗ್ಗೆ ಅವಳದು ಉಪೇಕ್ಷೆಯ ನಿಲುವು. ಆದರೆ ಈ ಎರಡೂ ವ್ಯಕ್ತಿತ್ವಗಳು ಆ ಸಫಲತೆಯತ್ತ ದುರಂತದತ್ತ ಚಲಿಸುವಲ್ಲಿ ಮನುಷ್ಯ ಮೂರು ಮುಖ್ಯವಾದ ಸೆಳೆತಗಳ ನಡುವೆ ಸಿಕ್ಕು ಹಾಕಿಕೊಂಡಿರುವುದರ ಅರಿವು ಮೂಡುತ್ತದೆ"[೩೦] ಎಂಬ ರಾಘವೇಂದ್ರ ಪಾಟೀಲರ ಅಭಿಪ್ರಾಯವು ಸತ್ಯಕ್ಕೆ ಹತ್ತಿರವೆನಿಸುತ್ತದೆ.

'ದಾಳಿ' ಕಥೆಯಲ್ಲಿ ರಜಾಕಾರರು ಗಿಣೀಕೆರೆ ಮೇಲೆ ದಾಳಿಮಾಡಿ ಅಲ್ಲಿನ ಸಂಪತ್ತೆಲ್ಲವನ್ನು ಲೂಟಿಮಾಡಿ ಹೆಂಗಸರೂ ಮಕ್ಕಳಾದಿಯಾಗಿ ಅವರ ಎಲ್ಲ ಅಂಗೋಪಾಂಗಗಳೆಲ್ಲವನ್ನು ಮುಟ್ಟಿ ಸಿಕ್ಕಿದೆಲ್ಲವನ್ನು ದೋಚುತ್ತಾರೆ. ಶೀಲ ಮಾನಹರಣ ಮಾಡಿರುತ್ತಾರೆ. ಈ ವಿಷಯ ಮುದವೀಡು ಗ್ರಾಮಕ್ಕೆ ತಗುಲಿ ಅಲ್ಲನ ಜನತೆ ದಿಗ್ಭ್ರಾಂತರಾಗಿ ಗಿಣೀಕೆರೆ, ಸೀತಾಪುರ, ಮುದವೀಡು ಒಂದೆ ಹೊಟ್ಟೆಯಲ್ಲಿ ಹುಟ್ಟಿದಂತೆ ತಲ್ಲಣಕ್ಕೆ ಒಳಗಾಗುತ್ತವೆ. ಮುದವೀಡುಗ್ರಾಮದ ಸ್ತ್ರೀಯರು ರಜಾಕಾರರ ದಾಳಿಯಿಂದ ಭಯಭೀತಿಯಿಂದ ನಡುಗಿಹೋಗಿದ್ದರು. ಬಸವನ ನೇತೃತ್ವದಲ್ಲಿ ಸಿಟಿಗೆ ಹೋಗಿ ಶಸ್ತ್ರಾಸ್ತ್ರ ತಂದು ವಿಶೇಷ ಕವಾಯತು ಮಾಡಿದರು. ಅಮವಾಸ್ಯೆ ಹುಣ್ಣಿಮೆಯೆಂದು ರಜಾಕಾರರು ಊರಿನ ಮೇಲೆ ದಾಳಿಮಾಡುವ ಸೂಚನೆಯಿಂದ ಸಂಗಣ್ಣ, ಗುರುಬಸವಣ್ಣ, ಬುಡೇನ್ ಸಾಹೇಬ್ರು ಎಲ್ಲರೂ ಮೂರು ಹಡೇವುಗಳನ್ನು ದುರಸ್ತಿ ಮಾಡಿಸಿ ಊರಿನ ಭದ್ರವಾದ ಮಕ್ಕಳನ್ನು ಇನ್ನಷ್ಟು ಭದ್ರಗೊಳಿಸಿ ಮಾತುಕತೆಯಂತೆ ಕಾರ್ಯಕೈಗೊಳ್ಳುತ್ತಾರೆ. ಮಲ್ಲಿ, ಮಲ್ಲಿಯ ತಾಯಿ ಈರವ್ವ, ಇಂಥ ಭಯದ ವಾತಾವರಣದಲ್ಲಿ ಜೀವಹಿಡಿದುಕೊಂಡು ಜೀವಿಸತೊಡಗಿದ್ದರು. ಯೌವ್ವನ ತುಂಬಿದ ಮಲ್ಲಿ ನೋಡುಗರಿಗೆ ಬೆರಗು ತರಿಸುವಂತಿದ್ದಳು. ಸಂಗನಗೌಡನ ಮಗ ಬಸವನು ಬಾವಿಯಿಂದ ಮಲ್ಲಿಯು ನೀರುತರುವ ವೇಳೆ ಹಿಂಬಾಲಿಸುತ್ತಿರುವುದು ಆಕೆಯ ಅರಿವಿಗೆ ಬಂದು ಹೆಜ್ಜೆ ಚುರುಕುಗೊಳಿಸಿದಳು. ಅವನೂ ಚುರುಕುಗೊಳಿಸಿದ ಅವನ ಕಣ್ಣುಗಳು ಮಲ್ಲಿಯ ಸುಂದರ ಹಿಂಭಾಗದ ನಡು, ತೋಳು ಕೆನ್ನೆಯನ್ನೆಲ್ಲ ರಾಚುತ್ತಿರುವಂತೆ ಆಕೆಗೆ ಅನ್ನಿಸಿ ಅವನನ್ನು

---

೩೦. ರಾಘವೇಂದ್ರ ಪಾಟೀಲ, ವಾಗ್ವಾದ, ಪುಟ. ೧೩೫

ಹೆದರಿಸಿರುವುದೇ ಸರಿ ಎಂದು ನಿಂತು ಹಿಂದೆ ತಿರುಗಿ ಏನೋ ಬಸವಣ್ಣ? ಹ್ಯಂಗಿದ್ದೀ?' ಎಂದಳು.

ನಾನು ಸತ್ತೋಗ್ತಿನಿ ನಾನು ಸತ್ತೋಗ್ತಿನಿ! ಎನ್ನುತ್ತಾನೆ ಬಸವ. ಮುಂದುವರೆದು ಕುಡಿದ ಅಮಲಿನಲ್ಲಿ ಕೈಕಾಲು ನೇತಾಡಿಸಿಕೊಂಡು ಅವನು ಕುಡಿದಿದ್ದ ತನ್ನ ಮೂತಿಯನ್ನು ಅವಳ ಹತ್ತಿರ ತಂದು ನನ್ನಿಂದ ಕಾಯಾಕಾಗಲ್ಲ! ಆ ಕಳ್ಳರಿಗಾಗಿ ಇನ್ನೂ ಕಾಯಾಕಾಗಲ್ಲ ಎಂದು ಕುತ್ತಿಗೆಗೆ ಕೈಹಾಕಲು ಮುಂದಾದಾಗ ಮಲ್ಲಿ ಗಂಭೀರವಾಗಿ ದೂರಸರಿಯುತ್ತಾಳೆ. ಈ ಸನ್ನಿವೇಶದಲ್ಲಿ ಬಸವನ ಬಗ್ಗೆ ಮಲ್ಲಿಗೆ ಅನುಕಂಪ ಪ್ರೀತಿ ಅಂಕುರಿಸಿ ಅವನು ಇನ್ನೊಂದು ಕ್ಷಣ ಹತ್ತಿರ ಬಂದಿದ್ದರೆ ಅಪ್ಪಿಕೊಂಡು ಜೋಳದ ಹೊಲಕ್ಕೆ ಎಳೆದೊಯ್ಯುತ್ತಿದ್ದೆ ಎನ್ನುತ್ತಾಳೆ. ಮಲ್ಲಿಯು ಯೌವ್ವನ ತುಂಬಿದವಳಂತೆಯೂ ತನ್ನ ದೈಹಿಕ ಬಯಕೆಗಳನ್ನು ಸಹಿಸಲಾಗದ ಸ್ಥಿತಿಯಲ್ಲಿದ್ದಳೆಂಬುದನ್ನೂ ನೋಡಬಹುದು.

ಹೀಗಿದ್ದಾಗ ಒಂದು ಸರಿರಾತ್ರಿ ಮಲ್ಲಿಯ ಅವ್ವ ಈರವ್ವ ಇದ್ದಕ್ಕಿದ್ದಂತೆ ಬೀದಿಯಲ್ಲಿ ಓಡುತ್ತಾ ಬಂದ್ರು – ಬಂದ್ರು! ಎಂದು ಚೀರಿಕೊಂಡು ಓಡತೊಡಗುತ್ತಾಳೆ. ರಜಾಕಾರರು ಆಗಲೇ ಊರಿನ ಮೇಲೆ ದಾಳಿ ಮಾಡಲು ಪ್ರಾರಂಭಿಸಿದ್ದರು. ಮಲ್ಲಿ ಅಟ್ಟ ಹತ್ತಿ ಚಿಕ್ಕ ಕಿಟಕಿಯನ್ನು ತೆರೆಯಲು ಪ್ರಯತ್ನಿಸಿ ಅಲ್ಲಿಯೇ ಕುಳಿತುಕೊಳ್ಳುತ್ತಾಳೆ. ಗುಂಡಿನ ಸದ್ದು ಕಮ್ಮಿಯಾದಂತೆ ಜನರ ಚೀತ್ಕಾರ ಕೂಡ ಕಡಿಮೆಯಾಗುತ್ತದೆ. ಮಲ್ಲಿ ಇದ್ದ ಮನೆಯ ಬಾಗಿಲು ಇದ್ದಕ್ಕಿದ್ದಂತೆ ಒದ್ದು ತೆರೆದಂತಾಗುತ್ತದೆ. ಕಗ್ಗತ್ತಲ ಭಯದಿಂದ ನಡುಗುತ್ತಾ ನೋಡುತ್ತಾಳೆ. ಒಬ್ಬ ರಜಾಕಾರರ ಹುಡುಗ ದೊಂದಿಯೊಂದಿಗೆ ಬರುತ್ತಿದ್ದಾನೆ. ಅವನ ತೊಡೆ ಎದೆಗೆ ಗಾಯವಾಗಿ ರಕ್ತ ಸುರಿಯುತ್ತಿರುವುದನ್ನು ಈಕೆ ಗಮನಿಸುತ್ತಾಳೆ. ನೋಡಲಾಗದೆ ಚೀರಲಾಗದೆ ಕಣ್ಣು ಮುಚ್ಚಿಕೊಳ್ಳುತ್ತಾಳೆ. ಯಾರೋ ಕಾಲನ್ನು ಮುಟ್ಟಿಸಿದಂತೆಯೇ ಆಗಿ ಬೆಚ್ಚುತ್ತಾಳೆ. ಕಣ್ಣುಬಿಟ್ಟು ನೋಡಿದಾಗ ಆ ಹುಡುಗ ಕಾಲು ಹಿಡಿದುಕೊಂಡಿದ್ದ. ಬೇರೇನೇನೋ ಮುಟ್ಟಲು ಯತ್ನಿಸದೆ ಮಲ್ಲಿಯನ್ನೇ ನೋಡುತ್ತಿರುತ್ತಾನೆ. ದೂರದಲ್ಲಿದ್ದ ದೊಂದಿಯ ಬೆಳಕಲ್ಲಿ ಮಲ್ಲಿ ತುಂಬಿದ, ನೀಳ ಕುತ್ತಿಗೆಯ, ಮೋಹಕ ಮುಖದ ಕತ್ತಲೆಗೆ ಹುಚ್ಚು ಹಿಡಿಸುವ ಸ್ತನ ತೊಡೆಗಳ ಮಲ್ಲಿ ವಿಚಿತ್ರ ಜೀವಂತಿಕೆಯಿಂದ ಕಂಗೊಳಿಸುತ್ತಾಳೆ. ಘೋರ ತಪ್ಪುಮಾಡಿದ ಪಶ್ಚಾತ್ತಾಪ ಹುಡುಗನ ವಿಶಾಲ ಕಣ್ಣುಗಳಲ್ಲಿ ಹೊಮ್ಮುತ್ತಿರುತ್ತದೆ. ಮಲ್ಲಿಗೆ ಭಯವೆಲ್ಲ ಹೊರಟುಹೋಗುತ್ತದೆ. ಆ ಹುಡುಗ ತನ್ನನ್ನು ಆತುಕೊಂಡು ನನ್ನ ಹೆಸರು ಸಲೀಂ ಎನ್ನುತ್ತಾನೆ. ಮಲ್ಲಿ ತನ್ನ ಹೆಸರನ್ನು ಹೇಳದೆ ಇಬ್ಬರೂ ಪರಸ್ಪರ ಅನುರಕ್ತರಾಗಿ ದೈಹಿಕ ಸುಖ ಅನುಭವಿಸುತ್ತಾರೆ. ಅನಂತರ ಸಲೀಂ ಮುದವೀಡು ಜನತೆಯ ಕೈಗೆ ಸಿಕ್ಕಿ ದೇವಾಲಯದ ಕಂಬಕ್ಕೆ ಕಟ್ಟಿಹಾಕುತ್ತಾರೆ. ಮಲ್ಲಿ ತನ್ನ ಬಯಕೆಯನ್ನು ವ್ಯಕ್ತಪಡಿಸದೆ ಆಗಲೂ ಸುಮ್ಮನೇ ಇರುತ್ತಾಳೆ. ಸಲೀಂ ಸಜೀವ

ದಹನಕ್ಕೊಳಗಾಗುತ್ತಾನೆ. ಮನುಷ್ಯನ ಅಸ್ತಿತ್ವವಾದಿ ಧೋರಣೆಗೆ ಈ ಪ್ರಸಂಗ ಒಂದು ಉತ್ತಮ ಉದಾಹರಣೆಯಾಗಿ ನಿಲ್ಲುತ್ತದೆ.

ಮಲ್ಲಿ ತನ್ನ ದೇಹವನ್ನು ದಾಳಿಕಾರನಿಗೆ ಒಪ್ಪಿಸಿದ ಕಾರಣದಿಂದಲೇ ಆತನನ್ನು ರಕ್ಷಿಸಿಕೊಳ್ಳುವ ಹಾಗೂ ಆತನೊಡನೆ ಜೀವನ ಮಾಡುವ ಅವಕಾಶ ಕಳೆದುಕೊಂಡು ಊರಿನ ಎಲ್ಲರೂ ತಿಳಿದಂತೆ ಅತ್ಯಾಚಾರಕ್ಕೆ ಒಳಗಾದವಳೆಂದು ಬಿಂಬಿತಳಾಗುವ ಮನೋ ವ್ಯಾಕುಲತೆಗಳು ಸಾಮಾಜಿಕ ಸಂದರ್ಭದಲ್ಲಿ ಸಂದಿಗ್ಧತೆ ಸೃಷ್ಟಿಸುತ್ತವೆ.

'ನಾನಲ್ಲ' ಕಥಾಸಂಕಲನದ 'ವಾಸನೆ' ಕಥೆಯಲ್ಲಿನ ಬಸವರಾಜಯ್ಯನ ಹೆಂಡತಿ ಸಾಕಮ್ಮ ರಾಜಕೀಯ ಜಂಜಾಟದಲ್ಲಿ ದಣಿದವರಿಗೆ ಹಾಸಿಗೆಯಲ್ಲಿ ಸುಖಕೊಡುವ ವಸ್ತುವಾಗಿಯೂ, ಮಕ್ಕಳನ್ನು ಸಾಕುವ ಪೋಷಕಳಾಗಿಯೂ ಕಂಡು ಚಿನ್ನ, ರನ್ನ ಎಂದು ಬಸವರಾಜಯ್ಯ ರಮಿಸುತ್ತಲೇ ಇರುತ್ತಾನೆ. ಬಸವರಾಜಯ್ಯ ಉಪವಾಸ ಸತ್ಯಾಗ್ರಹ ಮಾಡಲು ಮುಂದಾದಾಗ ತಟಸ್ಥಳಾಗುತ್ತಾಳೆ. ಬಸವರಾಜಯ್ಯ ವಾಸನೆ ನಿರ್ಮೂಲನೆಗೆ ಉಪವಾಸ ಸತ್ಯಾಗ್ರಹ ಮಾಡಿ ಸಾವನ್ನಪ್ಪಿದರೆ ಸಾಕಮ್ಮ ಗೌರವಾನ್ವಿತಳಾಗಿ ಮುಂದಿನ ಬಾಳ್ವೆ ನಡೆಸುತ್ತಾಳೆ. ಪುರುಷ ನಡೆಯಲ್ಲಿ ಸ್ವಾತಂತ್ರ್ಯವಿಲ್ಲದೇ ಇಲ್ಲಿ ಸಾಕಮ್ಮ ಬದುಕು ಸಾಗಿಸುತ್ತಾಳೆ. ನಾಗರಾಜಯ್ಯನೂ ತನ್ನ ಗಡಿಬಿಡಿಯಲ್ಲಿ ಜೀವನಸಾಗಿಸುತ್ತಾನೆ. ಒಟ್ಟಾರೆ ವ್ಯಕ್ತಿ ಸ್ವಾತಂತ್ರ್ಯಗಳು ತಂತಮ್ಮ ಅಭಿವ್ಯಕ್ತಿಕ್ರಮದ ಗೊಂದಲದ ನಡುವೆಯೂ ಸಹಜವಾಗಿ ವರ್ತಿಸುವುದನ್ನು ಕಥೆಗಾರರು ಇಲ್ಲಿ ಗುರುತಿಸುತ್ತಾರೆ.

'ರೊಟ್ಟಿ' ಕಥೆಯ ಮಹಿಳೆ ಮುಗ್ಧಳಾಗಿದ್ದು ಸಮಾಜಘಾತುಕರಿಂದ ಕಳ್ಳನಿಂದ ವಂಚನೆಗೆ ಒಳಗಾಗುತ್ತಾಳೆ. ರೈಲುನಿಲ್ದಾಣದ ಬಳಿ ತಾನು ಮಗಳ ಮನೆಯಿಂದ ತಂದಿದ್ದ ಪಾಕೆಟ್ಟು ತೆರೆದು ತಿಂಡಿ ತಿನ್ನುವ ವೇಳೆಯಲ್ಲಿ ಹಸಿವಿನಿಂದ ಪಕ್ಕದಲ್ಲೇ ಕುಳಿತ್ತಿದ್ದ ಕಳ್ಳನೊಬ್ಬನು ಆ ಪೊಟ್ಟಣಗಳನ್ನು ಕಿತ್ತುಕೊಂಡು ತಿಂಡಿ ತಿಂದುಕೊಳ್ಳುವಾಗ ಕಳ್ಳ ಕಳ್ಳ ಎಂದು ಚೀರಿಕೊಳ್ಳುತ್ತಾಳೆ. ಅಮಾಯಕಳಾದ ಆಕೆಯನ್ನು ಅವಳನ್ನೇ ಸುತ್ತುವರೆದ ಜನ ಬೈಯ್ಯುತ್ತಾರೆ. ಆ ಜನಸಂದಣಿ ಹೆಚ್ಚಾಗಿ ಯಾರೋ ಪೋಲೀಸರಿಗೆ ಪೋನು ಮಾಡಿದಾಗ ಸ್ಥಳಕ್ಕಾಗಮಿಸಿದ ಪೊಲೀಸರು ತಲೆಯಲ್ಲಿ ರಕ್ತ ಚಿಮ್ಮುತ್ತಿದ್ದ ಭಿಕ್ಷುಕನನ್ನು ಕಂಡು ಈಕೆಯಿಂದಲೇ ಅನಾಹುತವಾಗಿರಬಹುದೆಂದು ತಿಳಿದು ಆಕೆಯನ್ನು ಎಳೆದುಕೊಂಡು ಹೋಗುವಾಗ ಆಕೆಯ ಅಂಗೋಪಾಂಗಗಳನ್ನು ಮುಟ್ಟಿ ಅವಮಾನಗೊಳಿಸುತ್ತಾರೆ. ಬಡತನ ಅನ್ನೋದು ಕಷ್ಟಗಳ ಮೂಲಕವೇ ಇರುತ್ತದೆ. ವ್ಯವಸ್ಥೆಯಿಂದ ಮತ್ತು ಪೊಲೀಸರಿಂದ ಮುದುಕಿ ಶೋಷಣೆಗೆ ಒಳಗಾಗುವುದು ಈ ಕಥೆಯಲ್ಲಿ ಕಂಡುಬರುತ್ತದೆ.

'ಗುತ್ತಿ ಗೀತಾ ಆದದ್ದು' ಒಂದು ಸಾಮಾಜಿಕ ವ್ಯವಸ್ಥೆಯು ಹೆಣ್ಣೊಬ್ಬಳ ಅವನತಿಗೆ ಕಾರಣವಾಗುವ ಕಥೆ. ಇಲ್ಲಿಯ ಚಿತ್ರ ದುರಂತಮಯವಾದುದು. ಗುತ್ತಿಹಳ್ಳಿಯ ಮುಗ್ಧಹುಡುಗಿ ಆಕೆ ಪೇಟೆಗೆ ತನ್ನ ಅವ್ವನ ಜೊತೆಬರುತ್ತಾಳೆ. ಅಲ್ಲೇ ಎಲ್ಲೊ ಹೋದ ಅವ್ವ ಬರುವುದನ್ನೇ

ಕಾಯುತ್ತಾ ನಿಂತಿರುತ್ತಾಳೆ. ಆಗ ತಮ್ಮ ತಮ್ಮ ಸ್ವಾರ್ಥ ಸಾಧನೆಗಾಗಿ ಆಕೆಯನ್ನು ಸಮಾಜದ ಕೆಲವ್ಯಕ್ತಿಗಳು ನಿರ್ದಯವಾಗಿ ನಡೆಸಿಕೊಳ್ಳುತ್ತಾರೆ. ಸಮಾಜದ ರಕ್ಷಕರಾದ ಪೋಲೀಸ್ ರಾಜಕಾರಣ ವ್ಯವಸ್ಥೆಗಳು ಸಮಾಜವನ್ನು ಹೇಗೆ ಭಕ್ಷಿಸುತ್ತವೆ. ಮನುಷ್ಯರನ್ನು ಹೇಗೆ ಸುಲಿಯುತ್ತವೆ ಎಂಬುದರ ಚಿತ್ರಣ ಈ ಕಥೆಯಲ್ಲಿದೆ.

'ಚಂದ್ರಪ್ಪಗೌಡರಿಗೆ ಬಿದ್ದ ಕನಸು' ರತ್ನಮ್ಮ ಸಮಾಜಸೇವಕಿಯಾಗಿ, ರಾಜಕಾರಣಿಯಾಗಿ ವಿಶೇಷ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾಳೆ. ರತ್ನಮ್ಮನ ಗಂಡ – ಚಂದ್ರಪ್ಪ ಇವರ ತೋಟದ ಕೆಲಸದ ಆಳು ನಿಂಗ, ಇವನ ಹೆಂಡ್ತಿ ಮಂಜಿ, ಮನೆಕೆಲಸದವಳು ಸಿದ್ದಿ ಮುಂತಾದ ಪಾತ್ರಗಳಿವೆ. ಮಹಿಳಾ ಪಾತ್ರಗಳು ಅತೃಪ್ತ ಮನಸ್ಸಿನಿಂದ ನರಳುತ್ತವೆ ಈ ಕಥೆಯಲ್ಲಿ ಮತ್ತು ಶೋಷಣೆಗೆ ಒಳಗಾಗುತ್ತವೆ. ರತ್ನಮ್ಮ ಮತ್ತು ಮಂಜಿಯ ಪಾತ್ರಗಳು ಕಥೆಯಲ್ಲಿ ಪ್ರಮುಖವಾಗಿವೆ. ರತ್ನಮ್ಮ ಮತ್ತು ಮಂಜಿ ತಮ್ಮ ಕಾಮವನ್ನು ಪರಪುರುಷರಲ್ಲಿ ಈಡೇರಿಸಿಕೊಂಡಿದ್ದಾರೆ.

ಚಂದ್ರಪ್ಪ ರತ್ನಮ್ಮರ ವೈವಾಹಿಕ ಜೀವನ ಚೆನ್ನಾಗಿತ್ತು. ಚಂದ್ರಪ್ಪ ರತ್ನಮ್ಮಳಿಗೆ ರಾಜಕೀಯ ಪ್ರವೇಶಿಸಿಲು ಅವಕಾಶ ನೀಡಿದ್ದರು. ರತ್ನಮ್ಮ ರಾಜಕೀಯದಲ್ಲಿ ತಮ್ಮನ್ನು ಬಹಳವಾಗಿ ತೊಡಗಿಸಿಕೊಂಡಿದ್ದರು. ಮಂತ್ರಿಗಳು ಹೊಗಳುವಷ್ಟು ಮಟ್ಟದಲ್ಲಿ ರತ್ನಮ್ಮ ರಾಜಕೀಯದಲ್ಲಿ ಕೆಲಸ ಮಾಡುತ್ತಿದ್ದಳು. ಜಿಲ್ಲಾ ಪಂಚಾಯತ್‌ಗೆ ಆರಿಸಿದ್ದರು. ಇದನ್ನು ಸಹಿಸದ ಅನೇಕರು ರತ್ನಮ್ಮಳ ಹೆಸರು ಕೆಡಿಸಲು ಪ್ರಯತ್ನಿಸಿ ವಿಫಲರಾಗಿದ್ದರು.

ಚಂದ್ರಪ್ಪ ಮಧ್ಯರಾತ್ರಿ ಮಗ್ಗುಲಲ್ಲಿ ನೋಡಿದಾಗ ರತ್ನಮ್ಮ ಇರಲಿಲ್ಲ. ಶೌಚಕ್ಕೆ ಹೋಗಿರಬೇಕೆಂದು ಭಾವಿಸಿದ್ದ. ಆದರೆ ರತ್ನಮ್ಮ ಗಸಗಸೆ ಗಿಡದ ಆಚೆಗೆ ಬೇರೊಬ್ಬನ ಅಪ್ಪುಗೆಯಲ್ಲಿದ್ದುದನ್ನು ನೋಡಿದ್ದನು. "ಕಗ್ಗತ್ತಲಿನ ರಾತ್ರಿ. ಅದೆಷ್ಟನೇ ಸಲವೋ ನೆನೆದುಕೊಂಡು ಕತ್ತಲಲ್ಲಿ ಕಣ್ಣುಬಿಟ್ಟು ಸುತ್ತಾ ನೋಡಿದರು. ಎದ್ದದ್ದೇಕೆಂದು ಕೇಳಿಕೊಂಡೊಡನೆ ತಿಳಿಯಿತು. ಕಾರೊಂದು ನಿಂತ ಸದ್ದು ಚಂದ್ರಪ್ಪನವರನ್ನು ಎಬ್ಬಿಸಿತು. ಸಂದಿಗ್ದಸ್ಥಿತಿ, ಸತ್ಯವನ್ನು ಸುಳ್ಳನ್ನೂ ಎದುರಿಸಲು ಶಕ್ತಿಯೇ ಇಲ್ಲದ ಸ್ಥಿತಿ. ಅದರಿಂದಾಗಿಯೇ ಸುಮ್ಮನೆ ಕತ್ತಲು ನೋಡುತ್ತಾ ಜ್ಞಾಪಿಸಿಕೊಳ್ಳತೊಡಗಿದ್ದು ನಿಮಿಷಗಳಲ್ಲಿ ಅದಾಗಿಯೇ ಗೊತ್ತಾಯಿತು; ರತ್ನ ಮಗ್ಗುಲಲ್ಲಿರಲಿಲ್ಲ. ಎದ್ದು ದೀಪ ಹಾಕದೆ ಬಾಗಿಲಿಗೆ ಬಂದರು. ಯಾರೂ ಇರಲಿಲ್ಲ. ರತ್ನ ಶೌಚಕ್ಕೆ ಹೋಗಿರಬಹುದು ಎಂದು ಯಾಕೋ ಮನಸ್ಸು ಯೋಚಿಸುತ್ತಿಲ್ಲ. ಸಲ್ಲದ ಅಪಾಯದ ದಾರಿಯಲ್ಲಿ ಚಿಂತನೆ ಸಾಗಿದೆ ಕಾಲುಗಳು ಮನೆಯ ಕಾಂಪೌಂಡಿನಲ್ಲಿ ಸಾಗುತ್ತಿವೆ. ವಿಶಾಲ ಕಾಂಪೌಂಡಿನ ಹೊರಗೆ ಕಾರೊಂದು ನಿಂತಿದೆ. ಗೇಟಿನ ಲೈಟ್ ಇರುವ ಕಡೆ ದೇಹ ಸಾಗುತ್ತದೆ. ಅಲ್ಲಿ ಗಸಗಸೆ ಗಿಡದ ಆಚೆಗೆ ರತ್ನ ಗಂಡಿನೊಬ್ಬನ ಅಪ್ಪುಗೆಯಲ್ಲಿದ್ದಾಳೆ"[೩೧] ಚಂದ್ರಪ್ಪನು

---

೩೧. ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕಥೆಗಳು, ಪುಟ. ೫, ೬.

ಅತಿಯಾದ ಕಾಮ ಭಾವನೆಯನ್ನು ಹೊಂದಿದ್ದನು. ನಿಂಗ ತನ್ನ ಹೆಂಡತಿಗೆ ಕುಡಿದು ಬಂದು ಬಾಯಿಗೆ ಬಂದಂತೆ ಚೆನ್ನಾಗಿ ಬೈಯ್ಯುತ್ತಿದ್ದನು. ಈ ವಿಚಾರವನ್ನು ಮಂಜಿ ಚಂದ್ರಪ್ಪನಿಗೆ ತಿಳಿಸಿ ತನ್ನ ಗಂಡನಿಗೆ ಬುದ್ಧಿಹೇಳಲು ಬೇಡಿಕೊಳ್ಳುತ್ತಿದ್ದಳು. ಚಂದ್ರಪ್ಪ ಈ ಕಾರಣವಾಗಿಯೋ ಏನೋ ಮಂಜಿಯನ್ನು ಭೋಗಿಸಿದ್ದನು. ಮಂಜಿಯು ಆನಂದಿಸತೊಡಗಿದ್ದಳು.

ದೇವೀರಿ, ಸುಭದ್ರ, ಮಲ್ಲಿ ಮತ್ತು ರತ್ನಮ್ಮ ಹಾಗೂ ಮಂಜಿಯ ಸ್ತ್ರೀಪಾತ್ರಗಳಲ್ಲಿ ತಮ್ಮ ಕಾಮವನ್ನು ಪರಪುರುಷರಲ್ಲಿ ಈಡೇರಿಸಿಕೊಳ್ಳುವುದನ್ನು ಚಿತ್ರಿಸಿದ್ದಾರೆ. ಗಂಡಿನಂತೆ ಸ್ತ್ರೀಗೂ ಲೈಂಗಿಕ ಸ್ವಾತಂತ್ರ್ಯವನ್ನು ಕಥೆಯಲ್ಲಿ ನೀಡಿದ್ದಾರೆ. ಲಂಕೇಶರು ಚಿತ್ರಿಸಿರುವ ಮಹಿಳಾ ಪ್ರಜ್ಞೆಯ ದೃಷ್ಟಿಕೋನ ಬದುಕಿನ ಛಿದ್ರತೆ, ಸಂಸಾರಗಳ ಛಿದ್ರತೆಯ ಮುಖೇನ ಜಡ–ಜೀವಂತಿಕೆಗಳೆರಡರ ಚಿತ್ರಣದೊಂದಿಗೆ ಸ್ತ್ರೀಯನ್ನು ಮತ್ತು ಆಕೆಯ ಸಾಧ್ಯತೆಗಳನ್ನು ಮುಖ್ಯವಾಗಿರಿಸಿಕೊಂಡು ಕನಸು, ವಾಸ್ತವಗಳ ಮೂಲಕ ಹೆಣ್ಣಿನ ಯಜಮಾನ್ಯವನ್ನು ಒಂದೆಡೆ ತನ್ನ ಗಂಡ ಚಂದ್ರಪ್ಪ, ಮಂಜಿಯರ ಸಮಾಗಮ, ಮತ್ತೊಂದೆಡೆ ಚಂದ್ರಪ್ಪನ ಹೆಂಡತಿ ರತ್ನ ರಾಜಕಾರಣಿ ರಾಜಾರಾಂ ಜೊತೆಗಿನ ಅಪ್ಪುಗೆ ಹೀಗೆ ಕೊನೆಗೂ ತನ್ನ ಇಷ್ಟೋತ್ತರಗಳನ್ನು ಈಡೇರಿಸಿಕೊಳ್ಳುವವಳು ಹೆಣ್ಣೇ ಆಗುತ್ತಾಳೆ ಈ ಕಥೆಯಲ್ಲಿ. 'ನನ್ನ ಅಣ್ಣನ ನೆನಪು' ಕಥೆಯು ಅಪ್ಪನ ಅನೈತಿಕ ಸಂಬಂಧದಿಂದ ಅವ್ವನ ಸೊರಗುವಿಕೆ ಹಾಗೂ ಮಗಳ ಪ್ರೇಮವಿವಾಹದ ಯಶಸ್ಸು ಈ ಕತೆಯ ಮುಖ್ಯವಸ್ತು ನಿರೂಪಕಿ ಮೀನಾಕ್ಷಿ ಈಕೆಯ ಅವ್ವ, ಅಪ್ಪ, ಚಿಕ್ಕಮ್ಮ – ಗಂಗೂ ಜಕ್ಕಮ್ಮ ಹಾಗೂ ಅಪ್ಪನ ಜೊತೆ ಅನೈತಿಕ ಸಂಬಂಧ ಹೊಂದಿರುವ ಸರಸಿ ಮುಂತಾದ ಪಾತ್ರಗಳನ್ನು ಈ ಕತೆಯಲ್ಲಿ ಕಾಣಬಹುದು. ನಿರೂಪಕ ಮತ್ತು ನಿರೂಪಕಿಯ ಅವ್ವನ ಪಾತ್ರ ಕಥೆಯಲ್ಲಿ ಪ್ರಮುಖವಾದುದು.

ನಿರೂಪಕಿಯ ಅಪ್ಪ ಸರಸಿ ಎಂಬುವವಳ ಜೊತೆ ಅನೈತಿಕ ಸಂಬಂಧ ಹೊಂದಿದ್ದನು. ಇದನ್ನು ಗ್ರಹಿಸಿದ ಅವ್ವ ಕೂಗಾಡಲಿಲ್ಲ. ಚಕಾರ ಎತ್ತಲಿಲ್ಲ. ತಣ್ಣಗೆ ಭೂಮಿ ತ್ಯಜಿಸಿದವಳು. ಸಮಾಜದಲ್ಲೇ ಅನೇಕ ಸ್ತ್ರೀಯರು ಗಂಡನ ಅನೈತಿಕ ಸಂಬಂಧದಿಂದ ಅಸಹಾಯಕರಾಗಿ ತಮ್ಮ ಜೀವನವನ್ನು ಕಳೆದುಕೊಳ್ಳುವ ಚಿತ್ರಣವನ್ನು ನಿರೂಪಕಿಯ ಅಮ್ಮನ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ನಿರೂಪಕಿ ತನ್ನ ಸಹೋದ್ಯೋಗಿ ಮೂರ್ತಿಯನ್ನು ಪ್ರೀತಿಸುತ್ತಿದ್ದಳು. ಮೂರ್ತಿ ನಿರೂಪಕಿಯ ಅಪ್ಪನಿಗೆ ತಮ್ಮ ಪ್ರೀತಿಯ ವಿಚಾರ ತಿಳಿಸಿದ್ದನು. ನಿರೂಪಕಿಯ ಅಪ್ಪ ನಿರೂಪಕಿಯ ಜೊತೆ ಮಾತನಾಡುತ್ತಾ ಈಗ ನಿನಗೆ ಮದುವೆಯ ವಯಸ್ಸಲ್ಲ ಎಂದು ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಿದ್ದನು. ನಿರೂಪಕಿ ಮೂರ್ತಿಯನ್ನು ತಾನೇ ಮದುವೆಯಾದಳು. ಕತೆಗಾರರು ಇಲ್ಲಿ ಹಿರಿಯ ತಲೆಮಾರಿನಲ್ಲಿ ಅಸಹಾಯಕತೆಯನ್ನು ಬಿಂಬಿಸಿ ಕಿರಿಯ ತಲೆಮಾರಿನಲ್ಲಿ ಅಸಹಾಯಕತೆಯನ್ನು ಹೋಗಲಾಡಿಸಿ ಆಧುನಿಕ ಪ್ರಗತಿಪರರಾಗಿ

ಮಹಿಳಾ ಸಬಲೀಕರಣದ ನೆಲೆಯಲ್ಲಿ ಚಿಂತಿಸಿದ್ದಾರೆ. ಆದ್ದರಿಂದಲೇ ಇತ್ತೀಚಿನ ಸಮಾಜದಲ್ಲಿ ಸ್ತ್ರೀವಾದ ಪರಿಕಲ್ಪನೆಯು ವಿಶಿಷ್ಟ ಸಂವೇದನೆಗೆ ಒಳಗಾಗಿದೆ.

ಹಣ ಮತ್ತು ಅಧಿಕಾರ ಮಹಿಳಾ ಶೋಷಣೆಯ ಆಯಾಮಗಳನ್ನು ಮೇಲೆ ಚರ್ಚಿಸಿದ ಹಾಗೇ ಪಿ.ಲಂಕೇಶರು ಕಥನಸಾಹಿತ್ಯದಲ್ಲಿ ವಿವರಿಸಿರುವ ಬಗೆಯನ್ನು ಕಾಣಬಹುದು. ಲೇಖಕರು ಸ್ತ್ರೀಯರಿಗೆ ಆಗುವ ಶೋಷಣೆಯನ್ನು ಮತ್ತು ಸ್ತ್ರೀ ಸ್ವಾತಂತ್ರದ ಕಾಳಜಿಯನ್ನು ಅಭಿವ್ಯಕ್ತಿಪಡಿಸುತ್ತಾರೆ. ತಮ್ಮ ಸಾಹಿತ್ಯದಲ್ಲಿ ಸ್ವಾತಂತ್ರ್ಯ ವ್ಯಕ್ತಿತ್ವವುಳ್ಳ ಗಂಡಿಗೆ ಸಾಟಿಯಾಗುವ ಅವಳ ವೈಯಕ್ತಿಕ ಬಯಕೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಮತ್ತು ತನ್ನ ಸುತ್ತಲಿನ ಪರಿಸರದಲ್ಲಿ ಆಕೆಯು ಉಂಡ ನೋವನ್ನು ನಲಿವನ್ನು ಲಂಕೇಶರು ಕಥನಸಾಹಿತ್ಯದಲ್ಲಿ ಸೂಚಿಸಿರುವುದನ್ನು ನೋಡಬಹುದು.

*****

## ಅಧ್ಯಾಯ ಏಳು

# ಜಾತಿ ಮತ್ತು ಧರ್ಮ : ಮನುಷ್ಯ ಸಂಬಂಧಗಳ ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯ ಸಂಸ್ಕೃತಿಯಲ್ಲಿ ಎಚ್ಚರದ ಪ್ರಜ್ಞೆಯಾಗಿರುವ ಪಿ.ಲಂಕೇಶರು ಅಚ್ಚರಿ ಹುಟ್ಟಿಸುವಂತಹ ಬರಹದಿಂದ ಕನ್ನಡ ಓದುಗರ ಮನಗೆದ್ದ ಅವರು ತಮ್ಮ ಬದುಕು – ಬರಹಗಳೆರಡರಿಂದಲೂ ವೈವಿಧ್ಯಮಯವಾದ, ಅನ್ಯೋನ್ಯವಾದ ಸಂಬಂಧವನ್ನು ಕಂಡುಕೊಂಡವರು 'ಸೃಷ್ಟಿಶೀಲ ಮನಸ್ಸಿನ ಮೇಲೆ ಕಣ್ಣೀರಿನ ಮೂಲಸ್ಥಾನ' ಎಂಬ ನಂಬಿಕೆಯಿಂದ ಬರವಣಿಗೆಯ ತಾತ್ವಿಕ ಅರ್ಥವನ್ನು ಕಂಡುಕೊಂಡು 'ಓದುಗನನ್ನು ತನ್ನ ಅನುಭವದಿಂದ ಬೆಚ್ಚಿ ಬೀಳಿಸದೆ ಇರುವ ಲೇಖಕ ಎಂಥದನ್ನೂ ಮಾಡಲಾರ' ಎಂಬ ಧೋರಣೆಯ ಹಿನ್ನೆಲೆಯಲ್ಲಿ ಸಾಗಿದವರು. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯವನ್ನು ತಮ್ಮ ಕಲಾ ಪ್ರತಿಭೆಯಿಂದ ವೈವಿಧ್ಯಮಯವಾಗಿ ವಿಸ್ತರಿಸುವಲ್ಲಿ ಅವರ ಕೊಡುಗೆ ವಿಶಿಷ್ಟವಾದುದು ಮತ್ತು ಅಪರೂಪದ್ದಾಗಿದೆ. ಬದುಕಿನ ನಿಜವಾದ ಅಂತಃಸತ್ಯವನ್ನು ಅಂದಂದಿನ ಸಾಹಿತ್ಯ ನಿರ್ಮಿಸುತ್ತದೆಂಬ ಮಾತುಸತ್ಯ. ಯಾಕೆಂದರೆ ಜೀವನಬಿಟ್ಟು ಸಾಹಿತ್ಯವಿರಲಾರದು. ಸಾಹಿತ್ಯ ಬಿಟ್ಟು ಜೀವನವಿರಲಾರದು. ಒಂದು ಸಾಹಿತ್ಯ ಕೃತಿಯು ತನ್ನ ಕಾಲಸಂದರ್ಭದ ಬದುಕಿಗೆ ಹಿಡಿದ ಕನ್ನಡಿಯಾಗಬಹುದು. ಇಲ್ಲವೇ ಅದು ಸರ್ವಕಾಲಿಕ ಮೌಲ್ಯಗಳನ್ನು ಹೊತ್ತು ಮುನ್ನಡೆಯಬಹುದು. ಲಂಕೇಶರ ಕಥನಸಾಹಿತ್ಯವು ಬದುಕಿನ ಅನೇಕ ಸಮಸ್ಯೆಗಳತ್ತ ಬೆಳಕುಚೆಲ್ಲುತ್ತದೆ. ಜೊತೆಗೆ ಮನುಷ್ಯ ಸಂಬಂಧಗಳ ಸ್ವಭಾವಕ್ಕೆ ಪಾತಾಳಗರಡಿ ಹಾಕುವುದರ ಮೂಲಕ ಆ ಸ್ವಭಾವದ ಮೂಲೆಮೂಲೆಗೂ ನುಗ್ಗಬಲ್ಲ ಶಕ್ತಿಯನ್ನು ಪಡೆದಿದೆ. ಹೊಲಸು ತುಂಬಿಕೊಂಡು ಕೊಳಕು ನಾರುತ್ತಿರುವ ಇಂದಿನ ಸಮಾಜದಲ್ಲಿ ಅಸ್ಪೃಶ್ಯತೆ, ಜಾತಿ, ಧರ್ಮ, ಲಿಂಗ ವರ್ಗಭೇದಗಳು ತಾಂಡವವಾಡುತ್ತಿವೆ. ಎಲ್ಲೆಲ್ಲೂ ಶೋಷಣೆ, ಭ್ರಷ್ಟಾಚಾರ, ಕ್ರೌರ್ಯ ದೌರ್ಜನ್ಯಗಳು ಹೆಚ್ಚಾಗುತ್ತಲಿವೆ. ಮನುಷ್ಯನ ಸಣ್ಣತನ, ಕೀಳರಿಮೆ, ಸಂಸಾರದ ಜಂಜಾಟಗಳು, ದ್ವಂದ್ವನೀತಿಗಳು, ಮಾನವೀಯ ಸಂಬಂಧಗಳಲ್ಲಿನ ಬಿರುಕು ಈ ಮೊದಲಾದ ಸಮಸ್ಯೆಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಅವೆಲ್ಲವುಗಳ ವಿರುದ್ಧ ಸಂಯಮದಿಂದ ದನಿಯೆತ್ತುವುದರ ಮೂಲಕ, ಬದುಕಿನ ಅಸ್ತಿತ್ವವನ್ನು ಹುಡುಕುವಲ್ಲಿ ತನ್ನ ವಿಸ್ತೃತ ರೂಪವನ್ನು ಪಡೆದುಕೊಳ್ಳುವಲ್ಲಿ ಲಂಕೇಶರ ಕಥನಸಾಹಿತ್ಯ ಮುಖ್ಯವಾಗುತ್ತದೆ.

ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ, ಸ್ತ್ರೀವಾದ ಸಾಹಿತ್ಯ ಪಂಥಗಳಲ್ಲಿ ಜಾತಿ–ಧರ್ಮ ಮನುಷ್ಯ ಸಂಬಂಧಗಳ ಸ್ವರೂಪವನ್ನು ಕಾಣಬಹುದು. ಈ ಪಂಥಗಳ ಲೇಖಕರು ರಚಿಸಿರುವ ಕಥನಸಾಹಿತ್ಯದಲ್ಲಿ ಖಚಿತವಾದ ನಂಬಿಕೆಗಳಿದ್ದವು, ವ್ಯಕ್ತಿ ಮತ್ತು ಸಮಾಜದ ನಡುವೆ ಸಾವಯವ ಸಂಬಂಧಗಳಿದ್ದವು. ಸಾಮಾಜಿಕ ಮೌಲ್ಯಗಳಲ್ಲಿ ಗೌರವಗಳಿದ್ದವು. ಈ ಸಂದರ್ಭದ ಬರಹಗಾರರು ಬದುಕಿನಲ್ಲಿ ತಾವು ಕಂಡ ಅರ್ಥ ಸ್ವೀಕರಿಸಿದ ಮೌಲ್ಯ ಇವುಗಳನ್ನು

ಪ್ರತಿಪಾದಿಸುವ ಸಾಧನವಾಗಿ ಕಥನವನ್ನು ಬಳಸಿಕೊಂಡರು. ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಕಾದಂಬರಿಗಳಲ್ಲಿ ಹಾಗೂ ಅವರ ಕಥೆಗಳಲ್ಲಿ ಜಾತಿ-ಧರ್ಮ ಮನುಷ್ಯ ಸಂಬಂಧಗಳ ಸ್ವರೂಪವನ್ನು ಚಿತ್ರಿಸಿರುವುದನ್ನು ನೋಡಬಹುದು. ಶಿವರಾಮಕಾರಂತ, ಬೇಂದ್ರೆ, ಪು.ತಿ.ನ, ಮಾಸ್ತಿ, ಅ.ನ.ಕೃ, ತ.ರಾ.ಸು, ಬಸವರಾಜಕಟ್ಟೀಮನಿ, ನಿರಂಜನ, ಯು.ಆರ್.ಅನಂತಮೂರ್ತಿ, ಯಶವಂತಚಿತ್ತಾಲ, ಪೂರ್ಣಚಂದ್ರತೇಜಸ್ತಿ, ಶ್ರೀಕೃಷ್ಣ ಆಲನಹಳ್ಳಿ, ದೇವನೂರ ಮಹಾದೇವ, ಬೆಸಗರಹಳ್ಳಿ ರಾಮಣ್ಣ ಇವರೆಲ್ಲರೂ ಜಾತಿ-ಧರ್ಮಗಳ ಹಿನ್ನೆಲೆಯಲ್ಲಿ ವ್ಯಕ್ತವಾಗಿರುವ ಮನುಷ್ಯ ಸಂಬಂಧಗಳ ಹಿನ್ನೆಲೆಯಲ್ಲಿ ಕೃತಿ ರಚಿಸಿರುವುದನ್ನು ನೋಡಬಹುದು.

ಲಂಕೇಶರು ತಮ್ಮ ಕಥನಸಾಹಿತ್ಯದಲ್ಲಿ ತಾಂತ್ರಿಕವಾಗಿ ರೂಪಿಸಿರುವ ಪ್ರಧಾನತೆ ಪಾತ್ರ ಸಂಬಂಧಗಳನ್ನು ಹೆಣೆಯುವುದು ಅವರ ಕಥನಸಾಹಿತ್ಯದ ತಂತ್ರವಾಗಿದೆ. 'ಬಿರುಕು', 'ಅಕ್ಕ', 'ಮುಸ್ಸಂಜೆಯ ಕಥಾಪ್ರಸಂಗ' ಈ ಮೂರು ಕಾದಂಬರಿಗಳನ್ನು ವ್ಯಕ್ತಿಕೇಂದ್ರಿತವಾದ ಮತ್ತು ಮನುಷ್ಯಕೇಂದ್ರಿತವಾದ ನೆಲೆಗಟ್ಟಿನಲ್ಲಿ ವಾಸ್ತವವನ್ನು ಅನಾವರಣಗೊಳಿಸುತ್ತಾ ಸಾಗುವ ಕಥಾನಕಗಳು. ಇಲ್ಲಿ ಸಮಾಜ, ಸಂಸ್ಕೃತಿ, ಧರ್ಮ, ಜಾತಿ, ವಿವಾಹ ಇನ್ನೂ ಮುಂತಾದವು-ಗಳನ್ನು ಮನುಷ್ಯ ಪ್ರೇರಣೆಗಳಾಗಿ ಬಿಂಬಿಸುವ ಕಥನಕಾರರು ವ್ಯಕ್ತಿ ಹಾಗೂ ಮನುಷ್ಯ ಪ್ರಧಾನತೆಗೆ ಹೆಚ್ಚು ಮನ್ನಣೆಯನ್ನು ನೀಡಿದ್ದಾರೆ. ಇದು ನವ್ಯ ಕಾಲ ಚಿಂತನೆಯ ರೂಪಾತ್ಮಕತೆ ಎಂದು ಅಂದುಕೊಂಡಾಗಲು ಮನುಷ್ಯನ ಮೂಲಕವೇ ನಿರ್ಮಿಸಲ್ಪಡುವ ಸಮಾಜ, ಸಂಸ್ಕೃತಿ, ಧರ್ಮ-ಜಾತಿ ಇನ್ನು ಮುಂತಾದವು ಬದಲಾಗುವ ಮನುಷ್ಯ ಚಿಂತನೆಗಳೇ ಹೊರತು ಅವು ಸ್ಥಿರವಾದುವಲ್ಲ ಎಂಬ ಸತ್ಯವನ್ನು ಓದುಗನಿಗೆ ಮನವರಿಕೆ ಮಾಡಿಸುತ್ತವೆ.

ಸ್ವಾತಂತ್ರ್ಯಪೂರ್ವದ ತುಡಿತಗಳನ್ನು ಕುವೆಂಪು, ಕಾರಂತ, ಮಾಸ್ತಿ, ಬೇಂದ್ರೆಯವರಲ್ಲಿ ಕಂಡರೆ, ಸ್ವಾತಂತ್ರೋತ್ತರದ ತುಡಿತಗಳನ್ನು ಅನಂತಮೂರ್ತಿ, ಪೂರ್ಣಚಂದ್ರ ತೇಜಸ್ವಿ, ಲಂಕೇಶ್, ಶಾಂತಿನಾಥ ದೇಸಾಯಿ ಮುಂತಾದವರಲ್ಲಿ ಕಾಣುತ್ತೇವೆ. ಸ್ವಾತಂತ್ರ್ಯಪೂರ್ವದ ಚಿಂತನೆಗಳು ರಾಷ್ಟ್ರೀಯತೆಯನ್ನು ಒಳಗೊಂಡಂತೆ ಸಮಷ್ಟಿಯಕಡೆಗೆ ವ್ಯಕ್ತಿನಿಷ್ಠತೆಗೆ ಹೆಚ್ಚು ಒತ್ತುಕೊಟ್ಟಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕೃಷಿ ಪ್ರಾಧಾನ್ಯದ ಮೂಲಕ ಸಮಗ್ರ ಸಾಮಾಜಿಕ ವ್ಯವಸ್ಥೆಯನ್ನು ವ್ಯಾಖ್ಯಾನಿಸುವ ತೇಜಸ್ವಿಯವರು ತಮ್ಮ 'ಕರ್ವಾಲೋ', 'ಜುಗಾರಿಕ್ರಾಸ್', 'ಚಿದಂಬರರಹಸ್ಯ' ಮುಂತಾದ ಕಥನಗಳಲ್ಲಿ ರೈತ ಮತ್ತು ಆತನಿಗಿರುವ ಸವಾಲು ಸಂದಿಗ್ಧತೆಗಳನ್ನು ಆಧುನಿಕತೆ ಮತ್ತು ಮೌಢ್ಯ ಎರಡರ ಮೂಲಕ ಇಡೀ ಸಾಮಾಜಿಕ ಸಂದರ್ಭಗಳು ಜಾತಿ ಮತ್ತು ಧರ್ಮದ ಅಂಶಗಳು ಅವ್ಯವಹಾರಗಳನ್ನು ಕಟ್ಟಿಕೊಡುತ್ತಲೇ ಆ ಕ್ಷೇತ್ರದಲ್ಲಿನ ಒಳಬಿರುಕುಗಳನ್ನು ಮನಗಾಣಿಸುತ್ತಾರೆ. ಅದೇ ಯು.ಆರ್.ಅನಂತಮೂರ್ತಿಯವರು ತನ್ನ ಬ್ರಾಹ್ಮಣ ವ್ಯವಸ್ಥೆಯ

ವಿರುದ್ಧವೇ ಅಸಮಾಧಾನವನ್ನು ವ್ಯಕ್ತಪಡಿಸುವ ಅವರು ಧರ್ಮಸಂಕಟದ ಚಿತ್ರಣವನ್ನು ತರುತ್ತಾರೆ. 'ಸಂಸ್ಕಾರ', 'ಭಾರತೀಪುರ', 'ಅವಸ್ಥೆ', 'ಘಟಶ್ರಾದ್ಧ' ಮುಂತಾದ ಕಥೆಗಳಲ್ಲಿ ಅದನ್ನು ಕಾಣಬಹುದು. ಆದರೆ ಲಂಕೇಶರು ಇವರಿಬ್ಬರಿಗಿಂತಲೂ ಭಿನ್ನರಾಗಿದ್ದು, ವ್ಯಕ್ತಿಯ ಕನಸು ಮತ್ತು ಕಾಮನೆಗಳು ಏನೆಲ್ಲ ಆಮಿಷಗಳೊಂದಿಗೆ ಮನುಷ್ಯ ಸಂಬಂಧದಲ್ಲಿ ಸಂವಹನ ಸಾಧಿಸಿಕೊಳ್ಳುವಲ್ಲಿ ವಿಫಲಗೊಳ್ಳುತ್ತಾ ಸೋಲುಗಳೇ ಪ್ರಧಾನವಾಗುತ್ತಾ ಅವರೆಲ್ಲರ ನಡುವೆ ಭವಿಷ್ಯದ ಬೆಳಕಿಗಾಗಿ ತಡಕಾಡುತ್ತ ತನ್ನ ಅಸ್ತಿತ್ವಕ್ಕಾಗಿ ಅನವರತ ಪ್ರಯತ್ನಿಸುತ್ತ ಹೀಗೆ ಮುಂದೆ ಸಾಗುವ ಮನುಷ್ಯರೇ ಲಂಕೇಶರ ಕಥಾನಾಯಕರಾಗುತ್ತಾರೆ. ಲಂಕೇಶರು ಎಲ್ಲಿಯೂ ಭಾವಪರವಶರಾಗಿ ಬರೆಯುವುದಿಲ್ಲ. ವಾಸ್ತವತೆ ಅವನಿಗೆ ಮುಖ್ಯವಾಗಿದೆ. ಅಷ್ಟೇ ಮಾತ್ರವಲ್ಲದೆ ವಾಸ್ತವತೆ ತನ್ನಲ್ಲಿ ಉಂಟುಮಾಡಿದ ತಲ್ಲಣಗಳೇನು ಎಂಬುದು ಕೂಡ. ಹೀಗಾಗಿ ಅದನ್ನೇ ನಂಬಿ ಬರೆದವರು. ಇದರಿಂದಾಗಿ ಅವರ ಕಥನಗಳಲ್ಲಿ ಏರ್ಪಡುವ ಸಿನಿಕತನ, ಪರಕೀಯತೆ, ಅವಮಾನ, ತಿರಸ್ಕಾರ, ಅನಾಥಪ್ರಜ್ಞೆ, ಜಾತಿ–ಧರ್ಮ ಮುಂತಾದ ನೆಲೆಗಳಲ್ಲಿ ಅವರು ಸಮರ್ಥವಾಗಿ ಅದನ್ನು ನಿಭಾಯಿಸುತ್ತಾರೆ. 'ಬಿರುಕು', 'ಮುಸ್ಸಂಜೆಯ ಕಥಾಪ್ರಸಂಗ' 'ಅಕ್ಕ' ಕಾದಂಬರಿಗಳಿಗೆ ಹಾಗೂ 'ದಾಹ', 'ಮುಟ್ಟಿಸಿಕೊಂಡವನು', 'ಕಲ್ಲುಕರಗುವ ಸಮಯ' ಇನ್ನೂ ಮುಂತಾದವುಗಳಲ್ಲಿ ಅದನ್ನು ಕಾಣಬಹುದು. ಆಧುನೀಕರಣವನ್ನು ವಿರೋಧಿಸುವ ಅವರು ಗ್ರಾಮದಲ್ಲಿರುವ ಮೂಲ ಸಂಸ್ಕೃತಿಯನ್ನು ಬಯಸುವುದನ್ನು ಕಾಣುತ್ತೇವೆ. ಇವರ ಕಥನಗಳಲ್ಲಿ ವ್ಯಷ್ಠಿ ಜೊತೆಗೆ ಸಮಷ್ಟಿಯು ಕಟ್ಟಿಕೊಂಡಿದ್ದು ಮೂಢನಂಬಿಕೆಯ ಬಗೆಗಿನ ತಿರಸ್ಕಾರವು ಪ್ರತಿಬಿಂಬಿತವಾಗಿದ್ದು ತಮ್ಮ ಸಮಕಾಲೀನ ಸಂದರ್ಭದ ನವ್ಯ ಬರಹಗಾರರಲ್ಲಿ ವಿಭಿನ್ನವಾಗಿ ಗುರ್ತಿಸಿಕೊಳ್ಳುತ್ತಾರೆ.

ಲಂಕೇಶರು ತಮ್ಮನ್ನು ತಾವು ಶೋಧನೆಗೆ ಹಚ್ಚಿಕೊಳ್ಳುತ್ತಲೇ ಬೇರೆಲ್ಲರಿಗಿಂತಲೂ ವಿಭಿನ್ನವಾಗಿ ಗುರುತಿಸಿಕೊಳ್ಳುತ್ತಾರೆ. ಲಂಕೇಶರ ಕೃತಿಗಳಲ್ಲಿ ಗ್ರಾಮೀಣವಾದ, ಸ್ತ್ರೀವಾದ ಸಮಾಜವಾದ, ದಲಿತವಾದ ಮುಂತಾದ ಅನೇಕ ವಾದಗಳ ಬದ್ಧತೆಗಳಿದ್ದು ಇವೆಲ್ಲವನ್ನು ನಿರೂಪಿಸುತ್ತಲೇ ಬಹುತೇಕವಾಗಿ ಬದುಕಿನ ನಿರರ್ತಕತೆಗಿಂತ ಸಾರ್ಥಕತೆಯನ್ನು ಪರೋಕ್ಷವಾಗಿ ಸಾರುತ್ತವೆ. ಮನುಷ್ಯ ಎಚ್ಚರ ತಪ್ಪಿದರೆ ಸಾಮಾಜಿಕವಾಗಿ ತಾನು ಹೇಗೆ ನಾಶವಾಗುತ್ತಾನೆ ಎನ್ನುವುದನ್ನು 'ಮುಸ್ಸಂಜೆಯ ಕಥಾಪ್ರಸಂಗ'ದ ಭರ್ಮಣ್ಣನ ಮೂಲಕ ಸಾಮಾಜಿಕ ಎಚ್ಚರವನ್ನು ಮೂಡಿಸುತ್ತಾರೆ. ಆಧುನೀಕರಣ ಹಾಗೂ ನಗರೀಕರಣಕ್ಕೆ ತೆತ್ತುಕೊಂಡ ಪರಿಣಾಮ ಕಂಬಳ್ಳಿಯಗ್ರಾಮ ಸಮಾಜದ ನಾಶ, ಹೆಂಡ, ಜೂಜು, ಪುಡಾರಿತನಗಳ ಪ್ರಭಾವದಿಂದ ತನ್ನ ಎಂದಿನ ಮುಗ್ಧತೆಗಳು ಇಲ್ಲವಾದ ಹಾಗೂ ಜಾತಿಗಳ ವೈಷಮ್ಯದಿಂದ ಉಂಟಾಗಿರಬಹುದಾದ ಸೌಹಾರ್ದ ಮನೋಭಾವದ ಕೊರತೆ – ಹೀಗೆ ಏನೆಲ್ಲವನ್ನು ಹೇಳುತ್ತಲೇ ಗ್ರಾಮ ಸ್ವರಾಜ್ಯದ ಬದ್ದತೆಯನ್ನು ಸಾರುತ್ತಾರೆ. ಒಟ್ಟಾರೆ ರೈತರು, ಕೂಲಿ ಕಾರ್ಮಿಕರು, ದಲಿತರು, ಬುಡಕಟ್ಟಿನವರು

ಸಮಾಜದ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಳ್ಳಬೇಕೆಂಬುದು ಲಂಕೇಶರ ದೂರದೃಷ್ಟಿಯ ಆಸೆಯೂ ಕೂಡ. 'ಮುಸ್ಸಂಜೆಯ ಕಥಾಪ್ರಸಂಗ'ದ ರಂಗವ್ವನ ಸಾವಂತ್ರಿಯ ಪಾತ್ರಗಳಲ್ಲಿ ಜಾತಿ, ಲಿಂಗ, ವರ್ಗಗಳ ಆಧಾರಿತವಾದ ಪುರುಷ ಪ್ರಾಧಾನ್ಯತೆಯನ್ನು ಮೀರಿ ತಮ್ಮ ಬದುಕನ್ನು ಕಟ್ಟಿಕೊಳ್ಳಬಯಸಿದ ಸಂಗತಿಯಿದ್ದರೆ, 'ಅಕ್ಕ' ಕಾದಂಬರಿಯು ಇದಕ್ಕೆ ಹೊರತಾದ ಕೊಳಗೇರಿ ಸಂಸ್ಕೃತಿಯನ್ನು ಕಟ್ಟಿಕೊಡುತ್ತಲೇ ದಲಿತವಾದ ಹಾಗೂ ಸಮಾಜವಾದದ ಆಶಯಕ್ಕೆ ಹತ್ತಿರವಾಗುತ್ತದೆ. ಹಾಗೆ ನೋಡಿದರೆ ಜಗತ್ತಿನಲ್ಲಿ ಬದುಕು ಮುಖ್ಯವಾಗುತ್ತದೆ. ಲಿಂಗತಾರತಮ್ಯ, ಜಾತಿ, ಧರ್ಮ, ದ್ವೇಷ, ಕ್ರೌರ್ಯಗಳನ್ನು ಮೀರಿದ ಮಾನವೀಯ ಮೌಲ್ಯಗಳನ್ನು ಸಾರುತ್ತದೆ.

ನಿರೂಪಕರಾದ ಕತೆಗಾರ ತೆರೆಯ ಮರೆಯಲ್ಲಿ ನಿಂತು ಕಂಬಳ್ಳಿಯ ಆಧುನಿಕವಾದ ಪ್ರಭಾವಳಿಗಳನ್ನು ಹಣ, ಪ್ರೀತಿ, ರಾಜಕೀಯ, ದ್ವೇಷ, ಅಸೂಯೆ, ಜಾತಿ, ಧರ್ಮ ವಿನಾಶಗಳನ್ನು ಬಿಡಿಕಥನಗಳ ಮೂಲಕ ಚಿತ್ರಣಗೊಳಿಸಿರುವ ನಿರೂಪಕರ ಅಭಿವ್ಯಕ್ತಿ ಸ್ವರೂಪವನ್ನು ಕಾಣಬಹುದು. ಇಲ್ಲಿ ಎಲ್ಲೂ ಕೂಡ ಕತೆಗಾರ ಒತ್ತಡಗಳನ್ನು ಅನುಭವಿಸಿದಂತೆ ಕಾಣದಿದ್ದರೂ ನಿರೂಪಕರ ಮನೋವೃತ್ತಿಯನ್ನು ಕಾರ್ಯಗತಗೊಳಿಸುವ ದೂರದೃಷ್ಟಿ ಕೆಲಸಮಾಡಿದಂತೆ ಕಂಡುಬರುತ್ತದೆ. ಸಮಾಜ ಸಂಸ್ಕೃತಿ, ಜಾತಿ, ಧರ್ಮ ಇನ್ನೂ ಮೊದಲಾದವು ಮನುಷ್ಯನ ಮೂಲಕ ನಿತ್ಯ ಪರಿವರ್ತನೆಗೊಳ್ಳಬೇಕಾದ ಸ್ಥಿತಿ ವಾಸ್ತವ ಸಮಾಜಕ್ಕೆ ಅವಶ್ಯಕವಾಗಿದೆ. ಅಲ್ಲದೆ ಈ ಯಾವುವು ಸ್ಥಿರವಾದುವಲ್ಲ ಮನುಷ್ಯನ ಆಶೋತ್ತರಗಳಿಗೆ ಅನುಗುಣವಾಗಿ ಅವು ಬದಲಾಗಬಹುದು. ವಾಸ್ತವದಲ್ಲಿ ಅವು ಬದಲಾಗಲೇಬೇಕು ಎಂಬುವುದು ಕಥನಕಾರನ ಅಭಿಮತ.

ಲಂಕೇಶರು ತಮ್ಮ ನಿಲುವನ್ನು ಪ್ರಜಾಪ್ರಭುತ್ವವಾದಿಯಾಗಿಯೇ ರೂಪಿಸಿದವರು. ಅದರಂತೆ ಪ್ರಜಾಪ್ರಭುತ್ವ ಚಿಂತಕರಾದ ಮಹಾತ್ಮಗಾಂಧಿ, ರಾಮಮನೋಹರ ಲೋಹಿಯಾ, ಡಾ. ಬಿ.ಆರ್.ಅಂಬೇಡ್ಕರ್, ಜಯಪ್ರಕಾಶ್‌ನಾರಾಯಣ ಇನ್ನೂ ಮುಂತಾದ ಸಮಾಜ ಸುಧಾರಕರ ಸಮಾಜವಾದಗಳನ್ನು ಮೆಚ್ಚಿಕೊಂಡಿದ್ದರು. ಅಷ್ಟೇ ಅಲ್ಲದೆ ಅವರ ಸಾಮಾಜಿಕವಾದ ನಿಲುವು ಧೋರಣೆಗಳನ್ನು ತಮ್ಮ ಸಾಹಿತ್ಯದಲ್ಲಿ ಮನುಷ್ಯತ್ವದ ನೆಲೆಯಲ್ಲಿ ರೂಪಾತ್ಮಕವಾದ ಸಾಮಾಜಿಕ ಸಿದ್ಧಾಂತ, ಧೋರಣೆಗಳಾಗಿ ಅನಾವರಣಗೊಳಿಸಿರುವುದನ್ನು ಕಾಣಬಹುದು.

### ೭.೧. ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳು

ಲಂಕೇಶರು ತಮ್ಮ ಕಥನಸಾಹಿತ್ಯದಲ್ಲಿ ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳನ್ನು 'ಬಿರುಕು' ಕಾದಂಬರಿಯಲ್ಲಿ ತಂತ್ರ ಮತ್ತು ನಾವಿನ್ಯತೆಯ ದೃಷ್ಟಿಯಿಂದ ಸಕಾರಾತ್ಮಕವಾಗಿ ಕಟ್ಟಿಕೊಟ್ಟಿದ್ದಾರೆ. ಡಾ. ಕೆ.ಮರುಳಸಿದ್ದಪ್ಪನವರು ಲಂಕೇಶರ ಕಾದಂಬರಿಗಳನ್ನು ಕುರಿತಂತೆ ಇತ್ತೀಚೆಗೆ ತಮ್ಮ ಬರವಣಿಗೆಯಲ್ಲಿ ತಾಳುವ ಅಭಿಪ್ರಾಯವೊಂದು ಹೀಗಿದೆ.

"ಲಂಕೇಶರ ಮೂರು ಕಾದಂಬರಿಗಳು ಸ್ವಾತಂತ್ರ್ಯ ತರುವಾಯದ ಭಾರತದ ಮೂರು ವಿಭಿನ್ನ ಸಾಮಾಜಿಕ ನೆಲೆಗಳನ್ನು ಆರಿಸಿಕೊಂಡು ಬದುಕನ್ನು ತನ್ನ ಗ್ರಹಿಕೆಯ ವ್ಯಾಪ್ತಿಗೆ ತಂದುಕೊಳ್ಳಲು ಪ್ರಯತ್ನಿಸುವುದು ಗಮನಾರ್ಹವಾಗುತ್ತದೆ".[೧]

ಸನ್ನಿವೇಶಾತ್ಮಕ ಸತ್ಯವೆನಿಸಿದರೂ ಆ ವಸ್ತು ವಿಷಯವನ್ನು ವಾಸ್ತವಿಕವಾಗಿಸಿರುವ ಲಂಕೇಶರ ಪ್ರತಿಭಾತ್ಮಕತೆ ಹಾಗೂ ವಿವರಿಸಿರುವ ಕ್ರಮಗಳು ವೈವಿಧ್ಯಮಯವಾದವುಗಳಾಗಿವೆ. ಕೆ.ಮರುಳಸಿದ್ದಪ್ಪನವರು ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳ ಬಗ್ಗೆ ತಮ್ಮ ಅಭಿಮತವನ್ನು ಪಾತ್ರಸಂಬಂಧಗಳ ಮೂಲಕ ನೀಡುವ ಹೊಸಮಾದರಿಯವು. "ಲಂಕೇಶರ ಮೂರು ಕಾದಂಬರಿಗಳಲ್ಲಿ 'ಬಿರುಕು' (೧೯೬೭) ಮತ್ತು 'ಅಕ್ಕ' (೧೯೯೧) ನಿರೂಪಣಾದೃಷ್ಟಿಯಿಂದ, ಕಥಾವಸ್ತುವಿನ ದೃಷ್ಟಿಯಿಂದ ಒಂದೇ ಮಾದರಿಗೆ ಸೇರಿವೆ. ಎರಡೂ ಕಾದಂಬರಿಗಳಲ್ಲಿ ಕೇಂದ್ರಪಾತ್ರವೇ ತನ್ನ ಕತೆಯನ್ನು ಹೇಳಿಕೊಳ್ಳುವ ಕಥನಕ್ರಮವಿದೆ. 'ಬಿರುಕು'ವಿನ ಬಸವರಾಜ ವಿದ್ಯಾವಂತ ಯುವಕನಾಗಿದ್ದರೆ 'ಅಕ್ಕ'ದ ಕ್ಯಾತ ಹದಿಹರೆಯದ ಅರೆ ವಿದ್ಯಾವಂತ ಹುಡುಗ ಹಳ್ಳಿಯಲ್ಲಿ ಬೇರುಗಳಿದ್ದು ನಗರದಲ್ಲಿ ಬೆಳೆದ ಆಧುನಿಕ ಯುವಮಾದರಿಗೆ ಬಸವರಾಜ ಪ್ರತೀಕದಂತಿದ್ದರೆ ಕ್ಯಾತನಗರದ ಕೊಳಗೇರಿಯ ಅನಾಥ ಬಾಲಕರ ಪ್ರತಿನಿಧಿಯಾಗುತ್ತಾನೆ. ಬಸವರಾಜ ಅಂತರ್ಮುಖಿ ಸೂಕ್ಷ್ಮ ಸಂವೇದನಾಶೀಲ. ಕ್ಯಾತನಾದರೋ ಪಟಪಟ ಮಾತನಾಡುವ ಮನುಷ್ಯ ಸ್ವಭಾವದ ಬಹಿರ್ಮುಖಿಯಾದ ಹುಡುಗ ಇಬ್ಬರೂ ಸಮಾಜದಿಂದ ವಂಚಿತರು. ಇಬ್ಬರಿಗೂ ಚಿಕ್ಕಂದಿನಲ್ಲೆ ತಂದೆ ಸತ್ತುಹೋಗಿದ್ದಾರೆ. ತಾಯಿಯ ನೆನಪು ಮಾತ್ರವಿದೆ. ಇಬ್ಬರೂ ಪರಸ್ಪರ ಪೂರಕರೆಂಬಂತಿದ್ದರೂ ಭಿನ್ನ ಸ್ವಭಾವದ ಭಿನ್ನ ಪ್ರವೃತ್ತಿಯ ವ್ಯಕ್ತಿಗಳು".[೨]

ಇಂಥ ವಿಭಿನ್ನವಾದ ನಾಯಕಪಾತ್ರಗಳು ಕತೆಯ ಕೇಂದ್ರ ಸ್ಥಾನದಲ್ಲಿ ತಂದಿಡುವ ಲಂಕೇಶರು ಇವರ ಪಾತ್ರಗಳನ್ನು ಕೇವಲ ಸನ್ನಿವೇಶವಾಗಿಯೇ ಕಾದಂಬರಿಯಲ್ಲಿ ಸೀಮಿತ–ಗೊಳಿಸುವುದಿಲ್ಲ. ಸಮಾಜ, ಸಂಸ್ಕೃತಿ, ಧರ್ಮ, ಜಾತಿ, ಕಾಮ, ಸುಳ್ಳು ಹೀಗೆ ಹಲವಾರು ಸಮಸ್ಯೆಗಳ ಒಡನಾಡಿಗಳ ಪಾತ್ರ ಸಂಬಂಧಿಯಾಗಿ ಅವುಗಳ ಜೊತೆಗೆ ಜೀವಿತವಾಗಿ ಅನುಭವಿಸುವ ಅನುಭವಗಳು ಇವೆ. 'ಬಿರುಕು'ವಿನ ಬಸವರಾಜು ಕಥನದ ಉದ್ದಕ್ಕೂ ಯಾವ ಪಾತ್ರದ ಜೊತೆಗೂ ವಿಶ್ವಾಸವನ್ನು, ಮನುಷ್ಯ ಸಂಬಂಧವನ್ನು ಇಡುವುದೇ ಇಲ್ಲ. ಈ ರೀತಿಯಾದ ನಡವಳಿಕೆಯಿಂದ ಅಂದಿನ ಸಮಾಜ, ಮನುಷ್ಯರ ಬಗ್ಗೆ ಲಂಕೇಶರಿಗೆ ಇದ್ದ ಅಪನಂಬಿಕೆಯನ್ನು ಬಸವರಾಜನ ಪಾತ್ರದಲ್ಲಿ ಕಾಣಬಹುದಾಗಿದೆ.

---

೧. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ್, ಪುಟ. ೧೨೧.
೨. ಅದೇ., ಪುಟ. ೧೨೧.

ಬಸವರಾಜನಿಗೆ ಇರುವ ಅಸಹನೆಯನ್ನು ಇತರ ಪಾತ್ರಗಳ ಸಂಬಂಧದ ಬಗ್ಗೆ ತಾಳುವ ನಿಲುವುಗಳೇ ಅದನ್ನು ಸೂಚಿಸುತ್ತದೆ. ಡಾ. ಸಿ.ಎನ್.ರಾಮಚಂದ್ರನ್‌ರವರ ಮಾತುಗಳನ್ನು ನಾವು ಇಂತಹವುದಕ್ಕೆ ಸಾಕ್ಷಿಯಾಗಿ ನೋಡಬಹುದು. "ತನ್ನ ಪರಿಸರವನ್ನು ಕುರಿತು ತಿರಸ್ಕಾರ ಹಾಗೂ ಅಸಹನೆ ಬಸವರಾಜುವಿನಲ್ಲಿ ಎಷ್ಟು ತುಂಬಿವೆಯೆಂಬುದನ್ನು ಅವನು ಇತರರನ್ನು ಗುರುತಿಸಲು ಉಪಯೋಗಿಸುವ 'ರೂಪಕಗಳು' ಸೃಷ್ಟಿಪಡಿಸುತ್ತವೆ. ರಂಗಪ್ಪನ ಮಗಳು ಇಂದಿರಾ ಮೋಟುಜಡೆಯ ಇಬ್ಬರಿಂದ ತುಣುಕು. ಪ್ರೊಫೆಸರ್ ರಂಗಯ್ಯ 'ಗೂಬೆ' 'ಶಾಂತಳತಾಯಿ ದೊಡ್ಡ ತಿಮಿಂಗಲ', ಅವಳ ಸ್ನೇಹಿತೆ ಸುವರ್ಣ ಕೂಡ 'ತಿಮಿಂಗಲ' ವಸಂತ್ 'ಕೆಂಪುಕೋತಿ', ಅವನ ಸುತ್ತ ಇರುವರೆಲ್ಲ 'ಬೂರ್ಜ್ವಾ' ಬಡ್ಡಿಮಕ್ಕಳು ಈ ನನ್ನ ಜಾತಿಯ ಮೃಗಗಳಿಗಿಂತ ಕೆಟ್ಟವರು ಈ ಜಗತ್ತಿನಲ್ಲೇ ಇಲ್ಲ?".[೩]

ಹೀಗೆ ತಮ್ಮಲ್ಲಿರುವ ಪರಿಸರ ಹಾಗೂ ಪಾತ್ರ ಸಂಬಂಧಗಳ ಬಗ್ಗೆ ಬಸವರಾಜು ತನ್ನ ಅಸಹನೆಯನ್ನು ವ್ಯಕ್ತಪಡಿಸುವ ಮೂಲಕ ದೂರ ಇರಲು ಪ್ರಯತ್ನಿಸುವ ಹಾಗೆಯೇ ತನ್ನ ಮೂಲ ಹಳ್ಳಿಯ ಬಗೆಗೂ ಕೂಡ ಇಂತಹದೇ ಅಸಹನೆ ಇರುವುದನ್ನು ತನ್ನ ತಾಯಿಯ ಬಗೆಗೆ ಆತನಿಗಿರುವ ಅಂತರಾಳದ ನೋವು ಶಾಂತಳ ಜೊತೆ ಮಾತನಾಡುವಾಗ ನೀನು ನಿನ್ನ ತಂದೆ ತಾಯಿಗಳ ಜೊತೆ ಇರುವಾಗ್ಯೆ ನಾನು ೨೪ ವರ್ಷ ಅವ್ವಂದಿರ ಜೊತೆ ಇರಬೇಕಾತು? ಎನ್ನುವ ಮೂಲಕ ತನ್ನ ಚಾರಿತ್ರದೊಳಗೆ ಇರುವ ಸತ್ಯವನ್ನು ಹೊರ ಹಾಕುತ್ತಾನೆ. ಹೀಗಾಗಿ ಲಂಕೇಶರ 'ಬಿರುಕು' ಚಾರಿತ್ರಿಕವಾಗಿ ತುಂಬಾ ಮಹತ್ವವುಳ್ಳದ್ದು ಎಂಬುದು ಗಮನಿಸಬೇಕಾದ ವಿಚಾರ. ಕಾರಣ ಕಾದಂಬರಿ ಹುಟ್ಟಿದ ಸಾಮಾಜಿಕ ಸಂದರ್ಭವನ್ನು ಗಮನಿಸಿದರೆ ಅಕ್ಷರ ಸ್ವರೂಪದ ಚರ್ಚೆ ಪೂರ್ಣವಾಗಲಾರದು 'ರೋಲಾಂಡ್ ಬಾರ್ಥ್'ನ ಅಭಿಪ್ರಾಯದಲ್ಲಿ ಕಾದಂಬರಿ ಹುಟ್ಟುವುದೇ ಲೇಖಕ ಮತ್ತು ಸಮಾಜ ಇವರ ನಡುವಿನ ಒಪ್ಪಂದದ ಪರಿಣಾಮವಾಗಿ ಅದು ನಾವು ಚರ್ಚಿಸಿದ 'ಬಿರುಕು' ಚಾರಿತ್ರಿಕ ಕಾಲಘಟ್ಟದ ಮಹತ್ವದ ದಾಖಲೆಗಳಲ್ಲಿ ಸೇರಿಹೋಗಿದೆ. ತಾಂತ್ರಿಕವಾಗಿ ಮಹತ್ವದ್ದೆಂದು ಭಾವಿಸಬಹುದಾದ 'ವಿಶ್ವಾಮಿತ್ರ ಸೃಷ್ಟಿ' ಕಥೆಯೂ, 'ಬಿರುಕು'ವಿನ ಕಥೆಯೂ ಕಥೆಯ ಪಾತಳಿಯಲ್ಲಿ ನಾಯಕನ ನಡಾವಳಿಯಲ್ಲಿ ಸಾಮ್ಯತೆ ಪಡೆದಿದ್ದರೂ ಲೇಖಕರ ದೃಷ್ಟಿಯಿಂದ ಸೃಜನಶೀಲ ಅಂತರವೊಂದು ಅಲ್ಲಲ್ಲಿ ಕಾಣಿಸುತ್ತಲೇ ಹೋಗುತ್ತದೆ. ಲಂಕೇಶರು ತಾವು ಕೂಡ ನಾಯಕ ಬಸವರಾಜನ ಪಾತ್ರದ ಬಗ್ಗೆ ತನ್ಮಯತೆಯನ್ನು ತೋರಿದಂತೆ ಕಾಣುತ್ತದೆ. ಎಂಬ ಮಾತಿಗೆ ಆಕ್ಷೇಪವಿದೆ. ಕಾಲಮಾನದ ದೃಷ್ಟಿಯಿಂದ ಸ್ವಾತಂತ್ರ್ಯೋತ್ತರ ಭಾರತೀಯ ಸಮಾಜದ ಎಲ್ಲಾ ಕ್ಷೇತ್ರಗಳನ್ನು ಆವರಿಸಿದ ಪೋನಿ ಸಂಸ್ಕೃತಿ ಹಲವಾರು ಸಂವೇದನಾಶೀಲ ಲೆಖಕರನ್ನು ಪರಕೀಯತೆಯ ಅನುಭವಕ್ಕೆ ದೂಡಿತು. ಬಾಲಚಂದ್ರ ನೆಮಾಡೆಯವರ ಮರಾಠಿ

---

೩. ಸಿ.ಎಸ್.ರಾಮಚಂದ್ರನ, ಪರಂಪರೆ ಮತ್ತು ಪ್ರತಿರೋಧ, ಪುಟ. ೧೨೬.

ಕಾದಂಬರಿ 'ಕೋಸ್ಲಾ' ಹಾಗೂ ಪಿ.ಲಂಕೇಶ್ 'ಬಿರುಕು' ಇಂಥ ಪರಕೀಯ ಅನುಭವದ ಪ್ಯಾಂಟಸಿ ಭಾಗದ ಪ್ರತಿಫಲಗಳು ಎಂಬುದೇ ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯನ ನಿಲುವಾಗಿದೆ.

'ಬಿರುಕು' ಕಾದಂಬರಿಗೆ ಬರೆದ ಅರಿಕೆಯಲ್ಲಿ ಲಂಕೇಶ್ ಹೀಗೆ ಬರೆಯುತ್ತಾರೆ. "ಒಂದು ಪರಿಸರದಿಂದ ಇನ್ನೊಂದಕ್ಕೆ ತಲೆ ತಪ್ಪಿಸಿಕೊಂಡಂತೆ ತನ್ನಿಂದ ತಾನು ತಪ್ಪಿಸಿಕೊಳ್ಳಲು ಯತ್ನಿಸಿ ಕೊನೆಗೆ ತಾನು ಒಪ್ಪಿಕೊಳ್ಳುವಂತೆ"[೪] ಎಂದು ತಮ್ಮ ಕಾದಂಬರಿಯನ್ನು ಪರಿಚಯಿಸಿದ್ದಾರೆ. ನಂತರದಲ್ಲಿ ನಡೆಯುವುದೆಲ್ಲಾ ವ್ಯವಸ್ಥೆಯ ವಿಡಂಬನಾತ್ಮಕ ವಿಶ್ಲೇಷಣೆಯೆ? ಅಥವಾ ಮತ್ತಿನ್ನೇನು? ಎಂಬುದರ ಸುತ್ತ ಕಾದಂಬರಿ ಬಿಚ್ಚಿಕೊಳ್ಳುತ್ತದೆ. ಬಿರುಕು ಕಾದಂಬರಿಯ ಕಥೆ ನಡೆಯುವುದು ಬೆಂಗಳೂರಿನ ನಾಗರಿಕ ಪರಿಸರದಲ್ಲಿ ತನ್ನನ್ನು ತಾನು ಹಳ್ಳಿಯವನು ಎಂದು ಕರೆದುಕೊಳ್ಳುವ ಬಸವರಾಜ, ತಾನು ಹುಟ್ಟಿ ಬೆಳೆದ ಗ್ರಾಮೀಣ ಪರಿಸರದಿಂದ ಸಂಪೂರ್ಣವಾಗಿ ತಪ್ಪಿಸಿಕೊಂಡಿರುವುದೇ ಇಲ್ಲ. ಹಾಗಾಗಿ ನಾಗರಿಕ ಪರಿಸರಕ್ಕೆ ಅವರು ಹೊಂದಿಕೊಳ್ಳಲು ಹೋದಂತೆಲ್ಲಾ ಅವನ ಗ್ರಾಮೀಣ ಪರಿಸರದ ದೇಸೀ ಪ್ರಜ್ಞೆ ಅವನನ್ನು ಆವರಿಸುತ್ತಿರುತ್ತದೆ. ಅವನ ಪ್ರತಿಕ್ರಿಯೆಗಳಲ್ಲಿ ನಾಗರಿಕ ಸಮಾಜವೊಂದರ ಎಲ್ಲ ಆವೃತ್ತಿ ಮತ್ತು ಪ್ರವೃತ್ತಿಗಳನ್ನು ಕಡೆಗೆ ನಿತ್ಯದ ಚಟುವಟಿಕೆಗಳನ್ನು ಕೂಡ ಲೇವಡಿ ಮಾಡಿ ವಿಡಂಬಿಸುವ ಟೀಕಿಸುವ ಮಟ್ಟಕ್ಕೆ ಬಂದು ನಿಲ್ಲುತ್ತದೆ. "ಇನ್ನು ಬಸವರಾಜುವಿನ ಮಾತಿನ ಶೈಲಿ ಗಮನಿಸಬಹುದು. ಎಲ್ಲರ ಬಗೆಗೂ ಸೂಳೆಮಗ, ಬೋಳಿಮಗ ಮುಂತಾಗಿ ಹಗುರವಾಗಿ ಪ್ರಸ್ತಾಪಿಸುವುದು, ಹೆಂಗಸರನ್ನು ತಿಮಿಂಗಿಲ, ಹಡಬೆ, ಇಜ್ಜಲಚೂರು ಎಂದೆಲ್ಲಾ ಹೆಸರಿಸುವುದು ಅವನ ಸಿನಿಕತನಕ್ಕೆ ದ್ಯೋತಕವೆನ್ನಿಸಬಹುದು. ಇಡೀ ಲೋಕವನ್ನೇ ದೂರುತ್ತಿರುವ ಅಹಂಕಾರಿಯಂತೆ ಅವನು ಕಾಣಿಸಬಹುದು. ನಕಾರಾತ್ಮಕ ಗುಣವನ್ನೇ ಅವನಿಗೆ ಆರೋಪಿಸಿರುವ ಲೇಖಕರು ಸಕಾರಾತ್ಮಕ ಮೌಲ್ಯಪ್ರಸಾರದ ಬಗೆಗೆ ತಿರಸ್ಕಾರ ಧೋರಣೆ ಅನುಸರಿಸಿ ಪಾತ್ರಕ್ಕೆ ಅನ್ಯಾಯ ಮಾಡಿದ್ದಾರೆಂಬ ವಿಮರ್ಶೆಯೂ ಇದೆ. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ವಿಚಾರವೊಂದಿದೆ. ಅವನ ಈ ಬಗೆಯ ಅನ್ನಿಸಿಕೆಗಳೆಲ್ಲ ಸ್ವಗತದವು. ಬಹಿರಂಗವಾಗಿ ಬೈಗುಳದ ಮಾತು ಬಳಸಿದಾಗಲೂ ತನ್ನ ಸಮವಯಸ್ಕರೊಂದಿಗೆ ಮಾತಾಡುತ್ತಿರುತ್ತಾನೆ. ದೊಡ್ಡವರೊಡನೆ ಮಾತನಾಡುವಾಗ ತೋರಿಕೆಯ ನಿಯಮವನ್ನೇ ಪ್ರಕಟಿಸುತ್ತಾನೆ. ಬಸವರಾಜನು ಬೆಳೆದು ಬಂದ ಹಿನ್ನಲೆ, ವಯಸ್ಸು ಇವುಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಅವನ ಬೈಗುಳಗಳು ಅತಿಶಯೋಕ್ತಿಯ ರಂಜಕ ಮಾಗುತಳೆಂದು ತೋರಬಹುದೇ ಹೊರತು ದುಷ್ಟ ಮಾತುಗಳಾಗಲಾರವು. ಈ ಮಾತುಗಳಿಂದಲೇ ಅಥವಾ ಮನಸ್ಸಿನಲ್ಲೇ ಅವನಾಡುವ ಸ್ವಗತಗಳಿಂದಾಗಿಯೇ ಅವನು ಸಮಾಜಘಾತುಕನಾದರೆ ಎಲ್ಲರೂ ತಮ್ಮ ಅಂತರಂಗದ ಅನಿಸಿಕೆಗಳನ್ನು ಆತ್ಮಸಾಕ್ಷಿಗೆ ಬದ್ಧವಾಗಿ ಪರೀಕ್ಷಿಸಿಕೊಳ್ಳಬೇಕಾದೀತು.

---

೪. ಪಿ.ಲಂಕೇಶ್, ಬಿರುಕು – ಅರಿಕೆ.

ಲೇಖಕರು ಈ ಪಾತ್ರವನ್ನು ಉದ್ದೇಶಪೂರ್ವಕವಾಗಿಯೇ ಹೀಗೆ ಚಿತ್ರಿಸಿದ್ದಾರೆಂಬುದನ್ನು ಮರೆಯಬಾರದು.'[೫]

'ಮುಕ್ತಿ'ಯ ಮೂಲಕ ನವ್ಯ ಕಾದಂಬರಿ ಲೋಕದಲ್ಲಿ ಖಾತೆ ತೆರೆದ ಶಾಂತಿನಾಥದೇಸಾಯಿ ಹೇಳುತ್ತಾರೆ. 'ಬಿರುಕು'ವಿನ ನಾಯಕ ನಮ್ಮ ಸಮಾಜದಲ್ಲಿ ತೀಕ್ಷ್ಣವಾಗಿ ಬೆಳೆಯುತ್ತಿರುವ ಅನಾಥ ಪ್ರಜ್ಞೆಯ ಪ್ರತೀಕ. ಈ ಅನಾಥ ಪ್ರಜ್ಞೆ ಇಷ್ಟೊಂದು ಪ್ರಭಾವಿಯಾದ ಅಭಿವ್ಯಕ್ತಿಯಾಗಿ ಕನ್ನಡದಲ್ಲಿ ಕಾಣಿಸಿಕೊಂಡಿರುವುದು ಇದೇ ಮೊದಲು ಎಂದು ಪ್ರಶಂಸನೀಯವಾಗಿ ಮಾತನಾಡಿರುವುದು ನಿಜಕ್ಕೂ ಉಲ್ಲೇಖನೀಯ ಕಾರಣ 'ಮಾಡ್ರನ್‌ಫಿಕ್ಷನ್' ಎಂಬ ಹೊಸ ಆಯಾಮದೊಂದಿಗೆ ಬರುವ ಈ ಹೊತ್ತಿನಲ್ಲಿ ನವ್ಯದವರು ತುಂಬಾ ಪ್ರಾಮುಖ್ಯತೆ ಕೊಟ್ಟು ಅರ್ಥೈಸಿದ ವ್ಯಕ್ತಿವಾದವು ನವ್ಯ ಪ್ರಜ್ಞೆಯ ಪ್ರತೀಕದಂತೆ ಕಂಡಿತು. 'ಶೌರಿ'ಯವರ ಹಳದಿಮೀನು ನಾಯಕ ಇವರೆಲ್ಲರೂ ವ್ಯಕ್ತಿವಾದದ 'Common factor' ಒಂದರ ಅಂಚಿನಲ್ಲಿ ಬಿದ್ದು ಎದ್ದು ನಿಂತ ಕಲಾತ್ಮಕತೆಯನ್ನೊಳಗೊಂಡ ನವ್ಯದ ತಾಂತ್ರಿಕತೆಯ ಸೃಷ್ಟಿ, ಅನಾಥಪ್ರಜ್ಞೆ, ಪರಕೀಯತೆ, ಫ್ಯಾಂಟಸಿಯಲ್ಲಿ ಇಲ್ಲಿನ ನಾಯಕ ಬಳಲುತ್ತಾನೆ. ವ್ಯಕ್ತಿವಾದದ ಮೂಲ ಆಶಯಗಳನ್ನಿಟ್ಟುಕೊಂಡು ಸಂಘರ್ಷದ ಸಕಲಕಷ್ಟಗಳನ್ನು ತಾನು ಬುದ್ಧಿವಂತನೆಂದು ತೋರಿಸಿಕೊಳ್ಳುತ್ತಲೇ ಆಂತರ್ಯದ ತನ್ನ ಮುಗ್ಧತೆಯಿಂದ ಅರ್ಥಹೀನನೆನ್ನಿಸಿಕೊಂಡ ಬಸವರಾಜ ನಿಜಕ್ಕೂ ಚರ್ಚೆಗೆ ವಸ್ತುವಾಗುತ್ತಾನೆ. ಇಷ್ಟಾದರೂ 'ಬಿರುಕು' ಹೊಸತನದ ಒಂದು ಪ್ರಾಮಾಣಿಕ ಪ್ರಯೋಗ, ಮನುಷ್ಯ ಸಮಾಜದ ಬಹುರೂಪಿ ಬದುಕನ್ನು ಅದರ ಅಖಂಡತೆಯಲ್ಲಿರುವ ಸಣ್ಣ ಸಣ್ಣ ಘಟಕಗಳನ್ನು ಹಿಡಿದಿಡುವ ಪ್ರಯತ್ನವನ್ನು ವಾಸ್ತವವಾದಿ ಕಾದಂಬರಿಯಾಗಿ ಬಿರುಕನ್ನು ಚಿತ್ರಿಸಲಾಗಿದೆ. ನವ್ಯದ ಕಾದಂಬರಿ ಲೋಕ 'ಬಿರುಕು'ವಿನ ಈ ಎಲ್ಲಾ ಅನಂತತೆಗಳನ್ನು ಬಿಟ್ಟು ಕಾಲಮಾನದ ದೃಷ್ಟಿಯಿಂದಾಗಲೀ, ವಯೋಮಾನದ ದೃಷ್ಟಿಯಿಂದಾಗಲೀ ಬಿರುಕನ್ನು ಬಿಟ್ಟು ಚರ್ಚಿಸುವ ಹಾಗಿಲ್ಲ ಎನ್ನುವಷ್ಟರಮಟ್ಟಿಗೆ ಕೃತಿ ತಾನು ತನ್ನನ್ನು ಕಟ್ಟಿಕೊಳ್ಳುತ್ತಾ ಹೋಗುವ ಕಥಾಹಂದರ ಮತ್ತು ತಾಂತ್ರಿಕತೆಗಳು ಬದಲಾದ ಸಾಹಿತ್ಯ ಹಾಗೂ ಸಾಂಪ್ರದಾಯಕ ಬದುಕಿನ ಸ್ಥಾಪಿತ ಮೌಲ್ಯಗಳನ್ನು ಗೋಚರಿಸುತ್ತದೆ.

ಎಪ್ಪತ್ತರ ದಶಕ ಕರ್ನಾಟಕದ ಚಳವಳಿಗಳ ಕಾಲ ಸಾಂಪ್ರದಾಯಕ ಬದುಕಿನ ಸ್ಥಾಪಿತ ಮೌಲ್ಯಗಳ ನಿರ್ಣಯದ ಹೊಸ ವೈವಿಧ್ಯತೆಗಾಗಿ ಹುಡುಕಾಟ ನಡೆಸಿದ ಹಲವಾರು ಲೇಖಕರು, ಚಿಂತಕರು, ಬುದ್ಧಿ ಜೀವಿಗಳು, ಚಳುವಳಿಗಾರರು, ತಮ್ಮ ಬರವಣಿಗೆಗಳ ಮೂಲಕ ಕನ್ನಡದ ಸಾಮಾಜಿಕ ಜನ ಜೀವನವನ್ನು ಉತ್ಪಾದಿತ ಜ್ಞಾನದ ವಿರುದ್ಧ ಸಾಮಾನ್ಯ ವರ್ಗದ ತಿಳುವಳಿಕೆಯನ್ನು ಅತ್ಯಂತ ಆಕರ್ಷಕ ರೀತಿಯಲ್ಲಿ ಮೂಡಿಸಿದ ಕಾಲ. ಅಂದು ಕರ್ನಾಟಕದಲ್ಲಿ

೫. ಕೆ.ಮರುಳಸಿದ್ದಪ್ಪ – ಪಿ.ಲಂಕೇಶ್, ಪು.೧೦೭

ನಡೆದ ವ್ಯಾಪಕ ಭೂಸುಧಾರಣೆ, ಜೆ.ಪಿ. ಚಳವಳಿ, ಜಾತಿವಿನಾಶ ಸಂಘಟನೆಗಳು, ದಲಿತ ಸಂಘರ್ಷ ಸಮಿತಿ, ಕರ್ನಾಟಕ ಕ್ರಾಂತಿರಂಗ ಪ್ರಜಾವಿಮೋಚನಾ ಚಳುವಳಿ ಹೀಗೆ ಹತ್ತಾರು ಚಳವಳಿಗಳು ಕರ್ನಾಟಕದ ಮಟ್ಟಿಗೆ ಹೊಸ ಸಂಚಲನವನ್ನೇ ಉಂಟುಮಾಡಿದ್ದವು. ಈ ಸಮಷ್ಠಿ ಚಿಂತನೆಗಳು ಆ ಕಾಲದಲ್ಲಿ ಲೇಖಕರ ಮೇಲೆ ತುಂಬಾ ಪ್ರಭಾವ ಬೀರಿವೆ. ಸಾಹಿತ್ಯಕವಾಗಿ ಇದು ನವ್ಯ ಬರಹಗಾರರು ಪ್ರಕರ್ಷಾವಸ್ಥೆಯಲ್ಲಿದ್ದ ಕಾಲ ಅವರೂ ಕೂಡ ಸಿದ್ಧಾಂತ ಪ್ರಣೀತವಾದ ಬರಹಗಳಿಗೆ ಪಕ್ಕಾ ಆಗಿದ್ದರಿಂದ ಚಳವಳಿಯ ಪ್ರೇರಿತ ಸುಖಾಪೇಕ್ಷೆಗಳು ಹಾಗೂ ಜೀವನ ವಿಧಾನಗಳನ್ನು ಬಿಟ್ಟು ಬರೆಯಲು ಅವರಿಗೂ ಸಾಧ್ಯವಾಗಲಿಲ್ಲ. ಬದಲಾದ ಒಂದೇ ಒಂದು ಮಾರ್ಗವೆಂದರೆ ಮನುಷ್ಯ ಮತ್ತು ಮನುಷ್ಯರ ವರ್ತನೆಯನ್ನು ಕಪ್ಪು ಬಿಳುಪಿನ ಚೌಕಟ್ಟಿನಿಂದಾಚೆ ಅದರ ಎಲ್ಲ ವೈರುದ್ಯಗಳೊಂದಿಗೆ ದಾಖಲಿಸಿದರು. ಹಾಗಾಗಿಯೇ ಮುಸ್ಸಂಜೆಯನ್ನು ಉತ್ಪಾದಿತ ಜ್ಞಾನದ ತಾರ್ಕಿಕ ನೆಲೆಯಲ್ಲಿ ಅರ್ಥೈಸಲು ಸಾಧ್ಯವಿಲ್ಲ. ಪರಿವರ್ತನ ಶೀಲ ಭಾರತೀಯ ಸಮಾಜವೊಂದರ ಬದಲಾವಣೆಯನ್ನು ಅದರ ಎಲ್ಲಾ ಆಂತರಿಕ ವೈರುಧ್ಯಗಳ ಜೊತೆ ಜೊತೆಯೇ ಚಿತ್ರಿಸುವ ಮತ್ತು ಚಿಂತಿಸುವ ವಿಧಾನ ಮುಸ್ಸಂಜೆಯಲ್ಲಿ ಕಾಣುತ್ತದೆ. ಆರಂಭದ ದಿನಗಳ ಕಾದಂಬರಿಕಾರರಾಗಿದ್ದಾಗ ಭಾವೋದ್ವೇಗವನ್ನು ಲಂಕೇಶ್ ಇಲ್ಲಿ ಮೀರಿರುತ್ತಾರೆ. ಕಥಾವಿನ್ಯಾಸದ ವಿವೇಚನೆಗೆ ಇದು ಪ್ಲಸ್ ಪಾಯಿಂಟ್ ಹೌದು. ಯಥಾ ಪ್ರಕಾರ ತಮ್ಮ ಎಂದಿನ ವಿನೋದ, ವ್ಯಂಗ್ಯ, ಚೇಷ್ಟೇ, ವಿಡಂಬನೆಗಳು, ಕಥೆಯ ಎಂಟರ್‌ಟೈನ್ ಮೆಂಟ್‌ಗೆ ಪರಿಕರಗಳಾಗಿ ಗುರುತಾಗುತ್ತವೆಯೇ ವಿನಃ ಅವು ಸಿದ್ಧಾಂತಗಳಾಗಿ ತಾರ್ಕಿಕ ರಂಗ ತಾಲೀಮುಗಳಂತೆ ಆಗುವುದಿಲ್ಲ. ಕಂಬಳ್ಳಿಯಲ್ಲಾದ ಬದಲಾವಣೆಗಳು ಹೇಗಿವೆಯೋ ಹಾಗೆ ದಾಖಲಾಗುತ್ತದೆ. ಕಂಬಳ್ಳಿ ಇಲ್ಲಿ ಸಂಕ್ರಮಣ ಕಾಲದ ಪ್ರಾತಿನಿಧಿಕ ಹಳ್ಳಿಯಂತೆ ಕಾಣುತ್ತದೆ. ಹಾಲು, ಹೈನು ತೆಗೆದುಕೊಂಡು ಹೋಗಿ ಶಿವಮೊಗ್ಗದಲ್ಲಿ ಮಾರಿ ಬದುಕುವ ಬೇಸಾಯ ಪ್ರಧಾನ ಜೀವನಕ್ರಮ ಇಲ್ಲಿಯ ಪರಂಪರೆಯಾಗುತ್ತದೆ. ಇದರ ಕೇಂದ್ರ ಸ್ಥಾನವಾದ ಶಿವಮೊಗ್ಗೆ ಇಲ್ಲಿನ ಜೀವ ವೈವಿಧ್ಯವನ್ನು ಬದಲಾಯಿಸುತ್ತದೆ. ಅಲ್ಲಿದ್ದ ಹೆಂಡ, ಜೂಜು, ವರದಕ್ಷಿಣೆ, ಜಾತಿ–ಧರ್ಮ, ಮೋಜು–ಮಸ್ತಿ, ಪುಢಾರಿತನಗಳೆಲ್ಲಾ ತಮ್ಮ ತಮ್ಮ ಶೋಕಿತನಗಳ ಲಾಲಸೆ ತೋರಿ ಕಂಬಳ್ಳಿಗೆ ಕಾಲಿಡುತ್ತವೆ. ಜಾತಿಗಳ, ಧರ್ಮಗಳ ಹೆಸರಲ್ಲಿ ಹುನ್ನಾರಗಳನ್ನು, ಪ್ರೇಮಕಾಮಗಳ ಹೆಸರಿನಲ್ಲಿ ಅಪಹರಣಗಳು, ಸ್ವಾರ್ಥಕ್ಕಾಗಿ ರಾಜಕಾರಣಗಳು, ಹಣಕಾಸಿನ ವಿಷಯದ ಲೆಕ್ಕಾಚಾರಗಳು ಎಲ್ಲವೂ ಕಂಬಳ್ಳಿಗೆ ಕಾಲಿಟ್ಟಿವೆ. ಜ್ವಾಜ್ವಲ್ಯಮಾನವಾದ ಸುಖಸಮೃದ್ಧಿಯ ರಾತ್ರಿಯನ್ನು ರೈಲಿನ ಶಿಳ್ಳೆ ಮಧ್ಯರಾತ್ರಿಯಲ್ಲಿ ಕಲಕುತ್ತಿವೆ. ಹ್ಯಾಟು ಬೂಟು ಹಾಕಿದ ಜನ ಬರೆಯತೊಡಗಿದರೆ ಅಪಾಯ ಕಾದಿದೆ ಎನ್ನುವುದು ಅಮಲ್ದಾರ, ಶೇಕ್‌ದಾರ, ಊರಿಗೆ ಬಂದಾಗ ಅವನಿಗೆ ಗೊತ್ತಾಗುತ್ತಿತ್ತು.

ಆರಂಭದಿಂದಲೂ ಭಾರತೀಯ ಕಥನಸಾಹಿತ್ಯ ಮತ್ತು ಕನ್ನಡ ಕಥನ ಸಾಹಿತ್ಯ ಪರಿವರ್ತನಶೀಲ, ಭಾರತೀಯ ಸಮಾಜವನ್ನು ಮತ್ತು ಕನ್ನಡ ಸಮಾಜವನ್ನು ಸಾಂಪ್ರದಾಯಿಕ

ಬದುಕಿನ ಸ್ಥಾಪಿತ ಚಿಂತನೆಗಳಾಗಿ ಕಾದಂಬರಿಗಳ ವಸ್ತುಗಳನ್ನಾಗಿ ಸ್ವೀಕರಿಸಿವೆ. ಚಲನಶೀಲ ಸಮಾಜವೊಂದರ ಚಲನಶೀಲತೆಗೆ ಮತ್ತು ಅದರ ಪರಿಣಾಮಗಳಿಗೆ ಕಾರಣಗಳನ್ನು, ಪ್ರೇರಣೆಗಳನ್ನು ಕಾದಂಬರಿಕಾರರು ತಮ್ಮ ತಮ್ಮ ಕಥನಗಳಲ್ಲಿ ತಂದುಕೊಂಡಿದ್ದಾರೆ. ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ'ಯಿಂದ ಈ ಹೊತ್ತಿನ ದೇವನೂರರ 'ಒಡಲಾಳ'ದವರೆಗೆ ಇದು ನಡೆದೇ ಇದೆ. ಆದರೆ ದೇವನೂರರಾಗಲೀ, ಕೃಷ್ಣ ಆಲನಹಳ್ಳಿಯವರಾಗಲೀ ಬದಲಾಗುತ್ತಿರುವ ಈ ಚಲನಶೀಲತೆ ತಮ್ಮ ಕಾದಂಬರಿಗಳಲ್ಲಿ ಆಶಾದಾಯಕವಾಗಿ ನಡೆಯುತ್ತಿದೆ ಎಂಬಂತೆ ಕಾಣಿಸುತ್ತದೆ. ಆದರೆ ಕಾರಂತರಿಗೆ ಅತೃಪ್ತಿಯಂತೆ ಕಾಣುತ್ತದೆ. ಅಂದರೆ ಜನ ತಮ್ಮ ಮೌಲ್ಯಗಳಿಗೆ ಎಳ್ಳು ನೀರು ಬಿಟ್ಟು ಮೌಲ್ಯಗಳನ್ನು ಹಾಳು ಮಾಡುವಂತೆ ಕಾಣುತ್ತದೆ. ಈ ಕಾರಣಕ್ಕೆ ಅವರಲ್ಲಿ ರೋಷವಿದೆ. ಆದರೆ ಪ್ರಶ್ನೆಯಿರುವುದು ಲಂಕೇಶರಲ್ಲಿ ಚಲನಶೀಲ ಸಮಾಜದ ವರ್ಗಾಶಕ್ತಿಗಳು ಉತ್ಪಾದಿತ ಮೌಲ್ಯಗಳ ವಿರುದ್ಧ ಯಾವ ರೂಪದಲ್ಲಿ ಕೆರಳುತ್ತವೆ ಮತ್ತು ಕೆಡವುತ್ತವೆಂಬುದು ಲಂಕೇಶರು ಉತ್ಪಾದಿತ ಮೌಲ್ಯಗಳ ವಿರುದ್ಧ ವರ್ಗಾಸಕ್ತಿಯನ್ನು ಕೆರಳಿಸುತ್ತಾರೆಯೇ ವಿನಃ ತಮ್ಮ ನಿಲುವುಗಳನ್ನು ಪ್ರಕಟಿಸುವುದಿಲ್ಲ. 'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಕೇವಲ ತಾರುಣ್ಯ ಸಹಜ ಚೆಲ್ಲಾಟವಾಗಿದ್ದ ಸಾವಂತ್ರಿ ಮಂಜರ ಪ್ರೇಮ ಸಲ್ಲಾಪ ಹೊರಗಿನ ಒತ್ತಡಗಳಿಂದ ಮತ್ತು ಸಾವಂತ್ರಿಗೆ ಗಂಟುಬಿದ್ದು ಸೋದರ ಮಾವ ಶಿವನಂಜನ ಮದುವೆಯ ಒತ್ತಾಯದಿಂದಾಗಿ, ಮಾನಸಿಕ ತುಯ್ದಾಟಕ್ಕೆ ಒಳಗಾಗುತ್ತದೆ. ಕಂಬಳ್ಳಿಯ ಪ್ರತಿಷ್ಠಿತ ವ್ಯಕ್ತಿ ಶ್ರೇಷ್ಠಿಯವರ ಮಗಳು ದೇವಿ ಹೊಲೆಯರ ಹುಡುಗನೊಂದಿಗೆ ಓಡಿಹೋಗಿ ಮದುವೆಯಾಗಿರುತ್ತಾಳೆ. ಮೆಶಿನ್ ಭರ್ಮಣ್ಣನ ಎರಡನೆಯ ಹೆಂಡತಿ ರಾಮಿ ಪೈಲ್ವಾನ್ ಶಿವಾಜಿ ಜತೆ ಓಡಿಹೋಗಿ ಒಂದು ರಾತ್ರಿ ಕಳೆದು ವಾಪಸ್ ಬಂದಿರುತ್ತಾಳೆ. ಇದೆಲ್ಲವೂ ಹಳ್ಳಿಯ ಗಂಡುಹೆಣ್ಣಿನ ಸಂಬಂಧಗಳೆಲ್ಲಾ ಪರಂಪರಾಗತವಾಗಿ ಬಂದಿದ್ದ ನಂಬಿಕೆಗಳಿಗೊದಗಿದ ಚ್ಯುತಿಯನ್ನೆ ಸೂಚಿಸುವಂತಿದೆ.

ಇಲ್ಲಿ ಲಂಕೇಶರು ಈ ಕಾದಂಬರಿಯ ಮೂಲಕ ಹೊಸದಾದ ಲೋಕವನ್ನೇ ನಮ್ಮ ಮುಂದಿಡುತ್ತಾರೆ. ಜಾತಿ, ವರ್ಗ, ಹಣ, ರಾಜಕೀಯಗಳನ್ನು ಮೀರಿದ ಮನುಷ್ಯ ಪ್ರೀತಿ ಲಂಕೇಶರ ಸಾಹಿತ್ಯ ಪ್ರಜ್ಞೆಯ ಪ್ರಧಾನ ಕಾಳಜಿಯಾಗಿವೆ. ಜಾತಿಯ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಹುಡುಕುವ ಮತ್ತು ಬಾಂಧವ್ಯವನ್ನು ಗಟ್ಟಿಗೊಳಿಸಿಕೊಳ್ಳುವ ಸ್ಥಾಪಿತ ಸಂಬಂಧಗಳನ್ನು ನೋಡಬಹುದು. 'ಸ್ವಾಂತಂತ್ರ್ಯಪೂರ್ವ ಕಾಲದಲ್ಲಿ ಜಾತಿ ಜಾತಿಗಳ ನಡುವೆ ವಿವಾಹಬಾಹಿರ ಸಂಬಂಧಗಳು ಏರ್ಪಡುವ ನಿದರ್ಶನಗಳಿವೆಯಾದರೂ ಅದೆಲ್ಲ ಗುಟ್ಟಾಗಿ ನಡೆಯುತ್ತಿದ್ದ ಪ್ರಕರಣಗಳಾಗಿದ್ದವು. ಬಹಿರಂಗವಾಗಿ ಅಂತರ್‌ಜಾತಿ ವಿವಾಹ ನಡೆಯುವುದು ಅದಕ್ಕೆ ಮನೆಯ ಯಜಮಾನಿಯೇ ಒಪ್ಪಿಕೊಳ್ಳುವುದು ಸಾಮಾಜಿಕ ಪರಿವರ್ತನೆಯಲ್ಲಿ ಮಹತ್ವದ ಘಟ್ಟವಾಗಿದ್ದು ಇದನ್ನು ಯಾವುದೇ ಘೋಷಣೆಗಳಿಲ್ಲದೆ ಕಾದಂಬರಿಯಲ್ಲಿ ಮೂಡಿಸಲಾಗಿದೆ.

ಏಕೆಂದರೆ ಕಾದಂಬರಿಯ ತಾಂತ್ರಿಕತೆಯಂತೆ ಜೀವನದಲ್ಲಿ ಅನೇಕ ವಿಚಾರಗಳು ತರ್ಕಬದ್ಧವಾಗಿ ಪೂರ್ವನಿಶ್ಚಿತ ಸಂಗತಿಗಳಿರುವಂತಿವುದಿಲ್ಲ. ಆಕಸ್ಮಿಕವಾಗಿ ಒದಗುವ ಘಟನೆಗಳೇ ಸಾಮಾಜಿಕ ಸ್ಥಿತ್ಯಂತರವನ್ನು ಪ್ರೇರಣೆಯಾಗಬಹುದು. ಶ್ರೇಷ್ಠಿಯ ಮಗಳು ಅಸ್ಪೃಶ್ಯ ಹುಡುಗನೊಂದಿಗೆ ಓಡಿಹೋಗಿ ಮದುವೆಯಾಗುವುದು, ರಂಗವ್ವನೇ ಮುಂದೆ ನಿಂತು ತನ್ನ ಮಗಳ ಪ್ರೇಮಿ ಕೆಳಜಾತಿಯವನಾದರೂ ಲೆಕ್ಕಿಸದೆ ಮದುವೆ ಮಾಡಿಸುವುದು ಈ ಸಾಮಾಜಿಕ ಪ್ರಕ್ರಿಯೆಯ ನಿದರ್ಶನಗಳು ಮಾತ್ರವೆನ್ನಬಹುದು".[೬] ಲಂಕೇಶರು ಇಂತಹ ಮನುಷ್ಯ ಪರಿಕಲ್ಪನೆಗಳನ್ನು ಬೆನ್ನ ಹತ್ತಿ ಹೋಗುವುದು ಮಾತ್ರವಲ್ಲ ಆಧುನೀಕರಣಗೊಂಡ ಕಂಬಳ್ಳಿಯಲ್ಲಿ ಉಂಟಾಗುವ ಹಲವು ಬದಲಾವಣೆಗಳಿಗೆ ಬೆಂಬಲವಾಗಿರುವುದರ ಜೊತೆಗೆ ಮನುಷ್ಯ ಯಾವಾಗಲು ಸಾಮಾಜಿಕವಾದ ಸಂಬಂಧಗಳ ಬಗ್ಗೆ ಮನುಷ್ಯನ ಸ್ಥಾಪಿತ ಸಂಬಂಧಗಳು ಸಾಂಪ್ರದಾಯಕ ಚೌಕಟ್ಟನ್ನು ಮೀರುವ ಬಗ್ಗೆ ಲಂಕೇಶರು ಸೂಕ್ಷ್ಮವಾಗಿ ತಿಳಿಸಹೊರಟಿದ್ದಾರೆ.

'ಮುಸ್ಸಂಜೆಯ ಕಥಾಪ್ರಸಂಗ'ದಲ್ಲಿ ಜಾತಿಬದ್ಧ ಗ್ರಾಮೀಣ ಸಮಾಜದ ಶ್ರೇಣೀಕರಣ ಪದ್ಧತಿ ಛಿದ್ರಗೊಳ್ಳುವುದು ಒಂದು ವಿಚಾರವಾದರೆ ಇವೆಲ್ಲದರ ಹಿಂದೆ ಹೆಣ್ಣಿನ ಬಂಡಾಯ ಸ್ಫುಟವಾಗಿ ಕಾಣುತ್ತಿರುವುದು ಮತ್ತೊಂದು ಮುಖ್ಯ ವಿಚಾರವಾಗಿದೆ. ಭರ್ಮಣ್ಣನ ಹೆಂಡತಿ ರಾಮಿ, ರಂಗವ್ವನ ಮಗಳು ಸಾವಂತ್ರಿ, ಶ್ರೇಷ್ಠಿಯ ಮಗಳು ದೇವಿ ಇವರೆಲ್ಲಾ ಬಂಡಾಯವೆದ್ದ ಸ್ತ್ರೀ ಮಾದರಿಗಳು. ಆದರೆ ಕಾದಂಬರಿಯಲ್ಲಿ ಇದೆಲ್ಲವೂ ಆಕಸ್ಮಿಕಗಳಂತೆ ತೋರಿ ಬರುವುದರಿಂದ ಮತ್ತು ಲೈಂಗಿಕ ನೆಲೆಯಲ್ಲಿಯೇ ಘಟಿಸುವುದರಿಂದ ಬಂಡಾಯದ ಮೊನಚು ಮುಕ್ಕಾಗಿದೆ ಎಂಬುದೇನೋ ದಿಟ. ಆದರೂ ಸ್ತ್ರೀ ಬಂಡಾಯದ ಮುನ್ಸೂಚನೆ ಅಲ್ಲಿ ಕಾಣಿಸುತ್ತಿದೆ ಎಂಬುದು ಮಾತ್ರ ನಿರ್ವಿವಾದ ಸಂಗತಿಯಾಗುತ್ತದೆ. ಇನ್ನು ಹನುಮಕ್ಕ, ರಂಗವ್ವ, ಭರ್ಮಣ್ಣರ ಪ್ರಸಂಗಗಳಲ್ಲಿ ಸಂಪ್ರದಾಯಬದ್ಧ ಪೌರಾಣಿಕ ಘಟನೆಗಳನ್ನು ಲಂಕೇಶ್ ಕಥನ ನಿರೂಪಣೆಯಲ್ಲಿ ತರುತ್ತಾರೆ. "ಭರ್ಮಣ್ಣ ವಿಚಾರಿಸಲಾಗಿ ಕರಿಯ ತನ್ನ ಜೇಬಿನ ನಾಲ್ಕಾಣೆಯನ್ನು ಆಕೆಗೆ ತೆಗೆದುಕೊಳ್ಳಲು ಬಿಡದೆ ಗುಡಿಸಲ ಸುತ್ತ ಓಡಾಡಿ ತಪ್ಪಿಸಿಕೊಂಡದ್ದೇ ಈ ಜಗಳಕ್ಕೆ ಕಾರಣವಾಗಿತ್ತೇ ಹೊರತು ಹನುಮಕ್ಕನ ವಿದ್ಯಾಪಕ್ಷಪಾತವಲ್ಲ, ಅವಳಿಗೆ ಸಿಟ್ಟು ಬಂದಾಗಲೆಲ್ಲ ಮಗನನ್ನು ಪಾಂಡವರಿಗೆ ಹೋಲಿಸುವುದು ಸಾಮಾನ್ಯವಾಗಿತ್ತು. ಆದ್ದರಿಂದ ಪಾಂಡವರೆಂದರೆ ಮಹಾಧೂರ್ತರೆಂದೂ ಕೌರವರೆಂದರೆ ಮಹಾಮಹಿಮರೆಂದು ಸುತ್ತಣ ಜನ ನಂಬಿದ್ದರು."[೭] ಕಂಬಳ್ಳಿಯಲ್ಲಿ ನಡೆಯುವ ಎಲ್ಲಾ ಘಟನೆಗಳು ಭಾರತೀಯ ಸಂಸ್ಕೃತಿಯಲ್ಲಿ ಚೆಲ್ಲಾಪಿಲ್ಲಿಯಾಗಿರುವ ಅಂಶಗಳೇ ಅಂದರೆ ಸಂಸ್ಕೃತಿಗೆ ಧಕ್ಕೆ ತರುವಂತಹುಗಳಲ್ಲ. ಬದಲಾಗಿ ಬದುಕು ಮತ್ತು ಸ್ಥಿತಿಗಳ ಕಾರ್ಯ ಕಾರಣ ಸಂಬಂಧಗಳು ಸಾಂಪ್ರದಾಯಿಕ ನೆಲೆಯಲ್ಲಿ ಬಿಂಬಿತವಾಗಿರುವ ನೆಲೆಗಳೇ ಆಗಿವೆ. ಇದಕ್ಕೆ ಪುಷ್ಟಿಕೊಡುವ

---

೬. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ್, ಪು. ೧೧೭.
೭. ಪಿ.ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪು. ೧೬.

ರೀತಿಯಲ್ಲಿ ಕೆ.ವಿ.ನಾರಾಯಣರ ಮಾತನ್ನು ನೋಡಬಹುದು "ನಮ್ಮ ಎಷ್ಟೋ ಕಾದಂಬರಿಗಳಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಹಳ್ಳಿ ವಸ್ತುವಾಗಿದೆ. ಸಾಮಾನ್ಯವಾಗಿ ಅಲ್ಲಿ ಅನುಸರಿಸುವ ದೃಷ್ಟಿಕೋನವೆಂದರೆ ಹಳ್ಳಿಯನ್ನು ಪುಟ್ಟ ಭಾರತವೆಂದು ನೋಡುವುದು ಅಥವಾ ಹಳ್ಳಿಯ ಮೂಲಕ ಭಾರತವನ್ನು ಕಾಣಲು ಯತ್ನಿಸುವುದು ಆದರೆ 'ಮುಸ್ಸಂಜೆ"…. ಇದಕ್ಕೆ ವಿರುದ್ಧವಾದ ಹಾದಿ ಹಿಡಿದಿದೆ. ಇಲ್ಲಿ ಕಂಬಳ್ಳಿ ಭಾರತದ ಒಂದು ಭಾಗ ನಿಜ; ಹಾಗೆಂದು ಇದನ್ನು ಭಾರತದ ಅಡ್ಡ ಕೊಯ್ತವೆಂದು ಭಾವಿಸುವಂತಿಲ್ಲ. ಇಡೀ ಭಾರತದ ಮಟ್ಟದಲ್ಲಿ ಆಲೋಚಿಸಿ ತಳೆದ ನಿಲುವುಗಳು ಕಂಬಳ್ಳಿಗೂ ಅನ್ವಯಿಸುತ್ತವೆ ಎಂದುಕೊಳ್ಳುವುದು ಸಲ್ಲದು. ಇಲ್ಲಿಯು ಗ್ರಾಮ ಪಂಚಾಯಿತಿ ಚುನಾವಣೆ, ಸರ್ಕಾರದ ಪ್ರತಿನಿಧಿಯಾದ ಮೇಷ್ಟ್ರು, ರಾಷ್ಟ್ರೀಯ ವ್ಯಾಪ್ತಿ ಪಡೆದ ಹಿಂದೂ ಮುಸ್ಲೀಂ ಸಂಬಂಧ ಇವೆಲ್ಲವೂ ಇವೆ. ಆದರೆ ಇವು ಕಂಬಳ್ಳಿಯಲ್ಲಿ ಪ್ರವೃತ್ತವಾಗುವುದು ಮಾತ್ರ ಅಲ್ಲಿಗೇ ವಿಶಿಷ್ಟವಾಗಿ ಎಂದರೆ ಕೇಂದ್ರೀಕೃತ ಆಲೋದನಾ ವಿಧಾನದ ಮೂಲಕ ಎಲ್ಲವನ್ನು ಒಂದು ಚೌಕಟ್ಟಿಗೆ ಅಳವಡಿಸುವುದನ್ನು 'ಮುಸ್ಸಂಜೆ' ನಿರಾಕರಿಸುತ್ತದೆ. ತನ್ನ ರೋಸಿದ ಜೀವಂತಿಕೆಯುಳ್ಳ ಈ ಘಟಕ (ಹಳ್ಳಿ) ಸೂಕ್ಷ್ಮಗಳನ್ನು ಕಳೆದುಕೊಂಡು ರಾಷ್ಟ್ರವೆಂಬ 'ಪೂರ್ಣ'ಕ್ಕೆ ಸಂಕೇತವಾಗುವುದನ್ನು ವಿರೋಧಿಸುತ್ತದೆ. ಈ ಕಾರಣದಿಂದ ಕಂಬಳ್ಳಿಯ ಘಟನೆಗಳಿಗೆ ಚಾಲನೆಯನ್ನು ಒದಗಿಸುವ ಎಷ್ಟೋ ಸಂಗತಿಗಳಲ್ಲಿ ಈ ರಾಷ್ಟ್ರವ್ಯಾಪಿ ಕೇಂದ್ರೀಕೃತ ಸಮಸ್ಯೆಗಳಿರಬಹುದು. ಆದರೆ ಅವು ಇಲ್ಲಿ ಆಕಾರ ತಳೆಯುವುದು ಬೇರೆಯಾಗಿಯೇ ಎನ್ನುವುದನ್ನು ಗಮನಿಸಬೇಕು. ಹಳ್ಳಿಯ ಚಿತ್ರವೆಂದ ಕೂಡಲೇ ಅಲ್ಲಿನ ಪಾತ್ರ ಘಟನೆಗಳನ್ನು ಇನ್ನೂ ಎಚ್ಚು ಭೌಗೋಳಿಕ ಭಾರತದೊಡನೆ ಸಮೀಕರಿಸಿ ಪ್ರಾತಿನಿಧಿಕವೆಂದು ಭಾವಿಸಿ ಸಂಕೇತವೆಂದು ತಿಳಿದು ವಿಮರ್ಶೆಗೆ ತೊಡಗುವ ಪ್ರಯತ್ನವೂ ಇಲ್ಲಿ ಸಲ್ಲದು. ಎಂದರೆ ಇಂಥ ಪ್ರಯತ್ನದ ಮೂಲಕ ಲಂಕೇಶರು ಸಂಕೇತನಿಷ್ಠ ಮತ್ತು ಪರಿಕಲ್ಪನೆಗೆ ಜೋತುಬಿದ್ದು ಆಲೋಚನಾ ಕ್ರಮದಿಂದ ಹೊರಬಿದ್ದು ನಮ್ಮ ಜೀವನಕ್ರಮದ ವಿಶಿಷ್ಟ ವಿನ್ಯಾಸಗಳ ಕಡಗೆ ಆ ಮೂಲಕ ಜೀವಂತಿಕೆಯ ಕಡೆಗೆ ಮುಖ ಮಾಡಲು ನಮ್ಮನ್ನು ಪ್ರೇರೇಪಿಸುತ್ತಾರೆ."[೮]

ಹೀಗೆ ಲಂಕೇಶರು ಈ ಕಾದಂಬರಿಯ ಮೂಲಕ ಹೊಸದಾದ ಲೋಕವನ್ನೇ ನಮ್ಮ ಮುಂದಿಡುತ್ತಾರೆ. ವರ್ಗ, ಹಣ, ರಾಜಕೀಯಗಳನ್ನು ಮೀರಿದ ಮನುಷ್ಯಪ್ರೀತಿ ಲಂಕೇಶರ ಸಾಹಿತ್ಯಪ್ರಜ್ಞೆಯ ಸ್ಥಾಪನೆಯಲ್ಲಿ ಪ್ರಧಾನ ಕಾಳಜಿಯಾಗಿದೆ. ವಿಸ್ತಾರದಲ್ಲಿ ದೊಡ್ಡದಾದ ಈ ಕಾದಂಬರಿ ಮನುಷ್ಯರನ್ನು ರಾಕ್ಷಸರನ್ನಾಗಿಸುವ ವಸ್ತುಗಳ, ವಿವರಗಳ ವರ್ಣನೆಯಿಂದ ಕೂಡಿದೆ. ಇಲ್ಲಿ ಕಾರ್ಯಕಾರಣ ಸಂಬಂಧಗಳು ಸೂಚಿತವಾಗುವುದಿಲ್ಲ. ವಿವರವಾಗಿ ವರ್ಣಿತವಾಗುತ್ತವೆ. ಈ ವಿವರಗಳು ದಟ್ಟವಾಗಿ ಬರುವುದರಿಂದ ಕಾದಂಬರಿಗೆ ಪ್ರಾದೇಶಿಕತೆಯ ಅಧಿಕೃತತೆ ಪ್ರಾಪ್ತವಾಗಿದೆ.

---

೮. ಕೆ.ವಿ.ನಾರಾಯಣ, ಬೇರು ಕಾಂಡ ಚಿಗುರು, ಪುಟ. ೩೪೮.

ಬಿರುಕುವಿನ ಬಸವರಾಜ ವೈಯಕ್ತಿಕ ನೆಲೆಯಲ್ಲಿ ಸತ್ಯದ ಹುಡುಕಾಟ ನಡೆಸಿದರೆ ಮುಸ್ಸಂಜೆಯಲ್ಲಿ ಸಮೂಹನೆಲೆಯ ರಂಗವ್ವ – ಸಾವಂತ್ರಿ, ಮಂಜ ಮುಂತಾದವರ ಬದುಕಿನ ಹುಡುಕಾಟವಿದೆ. ಲಂಕೇಶರು ತಮ್ಮ ಬರವಣಿಗೆಯಲ್ಲಿನ ಸಾಂಪ್ರದಾಯಕ ಬದುಕಿನ ಸ್ಥಾಪಿತ ಸಂಬಂಧಗಳನ್ನು ಸಾಮಾಜಿಕ ಧೋರಣೆಯೊಂದಿಗೆ ದಟ್ಟವಾಗಿ ಎಣೆದಿರುವುದು ಇಲ್ಲಿಯೇ.

ಕೊಳಗೇರಿಯ ಮನುಷ್ಯ ಮಾದರಿಯನ್ನು ಕಟ್ಟಿಕೊಡುವ ನೆಪದಲ್ಲಿ ಲಂಕೇಶ್ ಸೃಷ್ಟಿಸಿದ ಕಾದಂಬರಿ 'ಅಕ್ಕ' ಈ ಕಾದಂಬರಿಯಲ್ಲಿ ಕ್ಯಾತ ತನ್ನ ಬದುಕಿನಲ್ಲಿ ನಡೆದ ಘಟನೆಗಳನ್ನು ವರ್ತಮಾನದಲ್ಲಿ ಮಾತನಾಡುತ್ತಾ ಭೂತಕಾಲದ ಬದುಕನ್ನು ದಾಖಲಿಸುವುದು ವಿಶಿಷ್ಟ ಬಗೆಯದು. ಎರಡನೆಯದಾಗಿ ವರ್ತಮಾನದಲ್ಲಿ ಕಥೆ ಬೆಳೆಸುತ್ತಿರುವ ಕ್ಯಾತ ಭೂತದಲ್ಲಿಯ ತನ್ನ ಬಗೆಯ ನಿವೇದನೆಯಲ್ಲಿ ತಾನು ಹೇಳುವ ವಿವರಗಳೇನಾದರೂ ಅಸ್ಪಷ್ಟ, ಗೊಂದಲ ವಿಸ್ಮಯಗಳ ಅತಿರೇಕದಂತೆ ಕಂಡರೆ ಯಾರೂ ಅದನ್ನು ನಂಬಲೂ ಬೇಕಿಲ್ಲ. ಏಕೆಂದರೆ ಅದು ಕ್ಯಾತನ ಕಳೆದು ಹೋದ ಬದುಕು. ಹಾಗಾಗಿ ಓದುಗರು ಅದನ್ನು ಪೂರ್ಣವಾಗಿ ನಂಬಬೇಕಿಲ್ಲ. ಇಲ್ಲಿ ಲೇಖಕರ ಚಿಂತನೆಯೇ ಉದ್ದೇಶಪೂರ್ವಕ ಹಾಗೂ ಪ್ರಜ್ಞಾಪೂರ್ವಕ ಕೊಳಗೇರಿಯ ಬದುಕಿನಲ್ಲಿ ಎಲ್ಲ ಸಂಬಂಧಗಳು ಒಂದಕ್ಕೊಂದು ಪೂರಕವಾಗಿಯೇ ಇವೆ ರಾಮಪ್ಪ ಕೊಳಗೇರಿಯ ರಾಜಕೀಯನಾಯಕ ಮತ್ತು ಆರ್ಥಿಕವಾಗಿ ಸಬಲನಾಗಿರುತ್ತಾನೆ. ಕೊಳಗೇರಿಯ ಎಲ್ಲಾ ನಾಗರೀಕ ಬದುಕು ಮತ್ತು ನಾಯಕತ್ವ ರಾಮಪ್ಪರಲ್ಲಿ ಇತ್ತು. ಅಲ್ಲಿನ ಜನರಿಗೆ ಸಹಾಯ ಮಾಡುವವರು ಕೂಡ ರಾಮಪ್ಪ ಹಾಗಿದ್ದರು. "ಮನಸ್ಸು ರಾಮಪ್ಪನವರ ಬಗ್ಗೆ ಯೋಚಿಸುತ್ತಿತ್ತು. ಮಸಲಾ ತಾನು ರಾಮಪ್ಪನ ಹತ್ರ ಹೋಗಿದ್ದೆ. ಚೆನ್ನಾಗಿ ಮಾತಾಡಿಸಿದ್ರು ಮೇಸ್ತ್ರಿ. ನರಸಿಂಹನಿಗೆ ಹೇಳಿ ಬಾಡಿಗೆ ಮಾಮೂಲಿ ಮಾಡುವುದಾಗಿ ಹೇಳಿದ್ರು ಅಂತ ಸುಳ್ಳು ಹೇಳಿದ್ರೆ ಹ್ಯಂಗೆ? ಅದು ಸುಳ್ಳಲ್ಲ. ಕ್ಯಾತ ನನ್ನನ್ನು ನೋಡಿದ್ದು ನಿಜ ಅಂತ ರಾಮಪ್ಪ ಹೇಳುವಷ್ಟು ಒಳ್ಳೆಯವರಲ್ಲವೇ? ಹೀಗೆ ಯೋಚಿಸಿದಾಗ ಕ್ಯಾತನಿಗೆ ಕೊಂಚ ಸಮಾಧಾನ ಅನ್ನಿಸಿತು. ಯಾಕೆಂದರೆ ರಾಮಪ್ಪ ತುಂಬಾ ಸಾಧು ಮನುಷ್ಯ. ಚುನಾವಣೆಗಿಂತ ಮುಂಚೆ ಬಹಳ ಸಲ ನಮ್ಮ ಹಟ್ಟಿಗೆ ಬಂದಿದ್ದರು. ಎತ್ತರ ಜಾಗದಲ್ಲಿ ನಿಂತು ಕೈ ಕೈ ಬೀಸಿ ಬಾಸಣ ಮಾಡಿದ್ರು. ಹಟ್ಟಿಗೆ ಬಂದು ನಲ್ಲಿ ಹಾಕಿಸಿಕೊಡ್ತೀನಿ, ಯಾರೂ ಹಟ್ಟಿಯಿಂದ ಜನರನ್ನು ಓಡಿಸದೇ ಇರೋ ಹಂಗೆ ನೋಡ್ಕೊಳ್ತೀನಿ ಅಂದ್ರು, ಬಡವರಿಗಾಗಿ ತಾನಿರೋದು ಅಂದ್ರು. ಆಮೇಲೆ ಹಟ್ಟಿಯಲ್ಲಿ ದೇವೀರಿ ಮತ್ತು ತನಗೆ ಗುಡ್ಲು ಕೊಡಿಸಿದ್ರು, ತಾವು ಹೇಳಿದಂಗೆ ನಾಗರಾಜನಾಯ್ಡು ಮನೆ ಎದುರು ನಲ್ಲಿ ಹಾಕಿಸಿದ್ರು, ನಾಯ್ಡು ಮಗಳು ಪದ್ದಿ ಸಿನಿಮಾದಲ್ಲಿ ಆ್ಯಕ್ಟ್ ಮಾಡೋಹಂಗೆ ಮಾಡಿದ್ರು ಮನುಸ್ಯನಾದವನು ಇನ್ನೆಷ್ಟು ಒಳ್ಳೆಯವನಾಗಿರಲು ಸಾಧ್ಯ?"[೬]

---

೬. ಪಿ.ಲಂಕೇಶ್, 'ಅಕ್ಕ', ಪು. ೧೫.

ಕ್ಯಾತನ ಕಣ್ಣಲ್ಲಿ ಕಾಣುವ ಹಳ್ಳಿಯ ಮಣ್ಣಿನ ಗುಣದ ದೇಸೀತನ, ನಗರದ ಕಾಂಕ್ರೀಟು ಕಟ್ಟಡಗಳ ನಡುವಿನ ಹುಸಿತನ, ಈ ಎರಡರ ಮಿಶ್ರಣವನ್ನು ವಿವರಿಸುತ್ತಾನೆ. ಆದರೆ ಕಟ್ಟಡದಲ್ಲಿ ಕುಳಿತು ಮಣ್ಣಿನಿಂದ ಮೊಳಕೆಯೊಡೆಯಬಲ್ಲ ಜೀವಂತಿಕೆಯನ್ನು ಅರಸುವ ಪ್ರವೃತ್ತಿ ಈ ಕ್ಯಾತನದು. ಹಾಗಾಗಿಯೇ ಕ್ಯಾತ ಕೊಳಗೇರಿಯ ವಾಸನೆ, ಕೊಳಕು, ಗಬ್ಬು, ನಾಥಗಳನ್ನು ಕ್ಯಾತ ವಿವರಿಸುತ್ತಾನೆ. "ಈ ವಾಸನೆ ವರ್ಷಕ್ಕೊಂದು ಮಗಾ ಹಡೆಯೋ ಅಲಮೇಲೂ ಮನೆಯ ಬಾಣಂತಿ ಕ್ವಾಣೆ ವಾಸನೆ ತರವೇ. ಒಂತರಾ ನಾತ ಹೊಡೆದ್ರೆ ಅಲಮೇಲೂ ಇನ್ನೊಂತರಾ ನಾತ. ಎಣ್ಣೆ ಹಚ್ಕೊಂಡ್ ಬೀದೀಲಿ ಸ್ನಾನ ಮಾಡುವಾಗ, ಇನ್ನೊಂದು ವಾಸನೆ ಬರುತ್ತೆ, ಹಂಗೇನೆ ಈ ಬಾಣಂತಿ ವಾಸನೆ. ಗುಂಡು ಮಲ್ಲಿಗೇನ ನೂಕೋ ಗಾಡಿಲಿ ತಗೊಂಡ್ ಹೋಗುವ ಭೈರಪ್ಪನ ವಾಸೆನ. ಅವನು ಜಳಕ ಮಾಡಿದ್ನೇ ಯಾರೂ ನೋಡಿಲ್ಲ ಸಾರ್, ಆತನ ಹೆಂಡ್ತಿ ಜಳಕ ಮಾಡಿದ್ದಂತೂ ನಾನೂ ನೋಡಿಲ್ಲ. ಮಲ್ಲಿಗೆ, ಸಂಪಿಗೆ, ಸುಗಂಧರಾಜ, ಗುಲಾಬಿ ತಂದು ಒಟ್ಕೊಂಡಿರ್ತಾರೆ. ಇದರ ವಾಸನೇನೇ ಉಂಡು ಮಲಗ್ತಾರೆ, ಮೇಲೆ ಹೇಳಿದ ಹಸು, ಕರು, ಬಾಣಂತಿ, ಭೈರಪ್ಪನ ಮೈವಾಸನೆ.....

ನಮ್ಮ ಹಟ್ಟಿ ಅಂದ್ರೆ ವಾಸನೆಮಯ ಸಾರ್, ನೂರೋ ಸಾವಿರವೋ ಜನರ ಸಿಂಬಳ, ಉಚ್ಚೆ, ಹೇಲಿನ ಜೊತೆ ಮುಂಗಾರು ಮಳೆ ಬಂತು ಅನ್ನಿ, ನಮ್ಮಲ್ಲಿ ಬಿದ್ದ ನೀರು ಹೊರಗೆ ಹೋಗಲ್ಲ. ಮೈ ತೊಳೆದ ನೀರು, ಬೋರ್‌ವೆಲ್ ತಾವ ಬಿದ್ದ ನೀರು ಕೊಳಕು ಬಟ್ಟೆ ಒಗೆದ ನೀರು ಎಲ್ಲೆಲ್ಲೂ ಹೋಗಲ್ಲ. ಮುಂಗಾರು ಮಳೆ ಬಂತಂದ್ರೆ ಹೊಸದೊಂದು ವಾಸನೆ ಬರುತ್ತೆ. ಕವಿಗಳು ಮಣ್ಣಿನ ವಾಸನೆ ಅಂತಾರಲ್ಲ ಅದರ ಜೊತೆ ಜೊತೆಗೆ ಬಯಂಕ್ರ ಕೊಳಚೆ ವಾಸನೆ ಬಂದು ಇಡೀ ಹಟ್ಟಿ ಬೆಂದು ಹೋದಂತೆ ಕಾಣ್ಸತ್ತೆ ಸಾರ್. ಹೊಗೆ ಬರುತ್ತೆ, ಸೊಳ್ಳೆಗಳ ಸೈನ್ಯವೇ ಬಂದ್ ಬಿಡುತ್ತೆ. ತೈಮೂರ್ ದಂಡಿನತರ, ಕಾರ್ಪರೇಷನ್‌ಗೆ ನಿಂತಿದ್ದ ನಾಗ್ರಾಜ ಒಂದ್ಸಲ ಸೊಳ್ಳೆ ಔಸ್ದಿ ಹೊಡೆಸ್ದ, ನಾಕುದಿನ ತಣ್ಣಗಿತ್ತು ಸೊಳ್ಳೆ ಕಾಣಿಸ್ಲಿಲ್ಲ ಐದನೇ ದಿನ ಹೊಸಾ ದಂಡು ಕಟ್ಕೊಂಡು ಬಂದು ಮುತ್ತಿಗೆ ಹಾಕಿದವು. ನೋಡಿ, ನಾವೆಲ್ಲ ಸಣ್ ಸಣ್ ಹುಡುಗ್ರೆಲ್ಲ ಸೊಳ್ಳೇ ಪರ ದೊಡ್ಡೊರು ನಾಗ್ರಾಜನ ಪರ. ಸೊಳ್ಳೆ, ನೊಣ, ನೊರಜ, ನಮ್ಮಂಗೇನೇ ಆಡ್ತ ಆಡ್ತಾನೆ ಕಚ್ತಿದ್ವು, ವಾಸನೆ, ಸೊಳ್ಳೆಯಕಾಟ, ಎಲ್ಲೆಂದರಲ್ಲಿ ಕೆಸರು, ಕಚಡಾ, ಬಾಣಂತಿ, ಸಗಣಿ.... ನಾಗ್ರಾಜನಿಗೆ ಹಾಕಿದ ನಾಲ್ಕು ಹೂವಿನ ಹಾರ ಸೈತ ಕೆಸರಲ್ಲಿ ಸೇರ್ಕಂಡಿದ್ವು ಮುಂಗಾರು ಬಂದ್ರೆ ನಮಗೆಲ್ಲ ನಾತ ಕುಡಿದು ಕುಪ್ಪಳಿಸೋಕೆ ಆಸೆ."[೧೦]

'ಅಕ್ಕ' ಬರಿ ಕ್ಯಾತನ ಕಥೆಯಾಗುವುದಿಲ್ಲ ಬದಲಿಗೆ ಇಡೀ ಸಂಪ್ರದಾಯಸ್ತ ಕೊಳಗೇರಿಯ ಚಿತ್ರಣದಲ್ಲಿ ಕ್ಯಾತನ ನಿರೂಪಿತ ಸಾಮ್ರಾಜ್ಯ ನಿರ್ಮಾಣವಾಗುತ್ತೆ. ಹಳ್ಳಿಯ ಪಾಳೇಗಾರಿಕೆಯಿಂದ

೧೦. ಪಿ.ಲಂಕೇಶ್, 'ಅಕ್ಕ' ಪು. ೨೨.

ಬೇಸತ್ತ ಜನ ಜೀವನ ಕಟ್ಟಿಕೊಳ್ಳಲು ನಗರ ಪ್ರದೇಶಕ್ಕೆ ಯಾತ್ರೆ ಹೊರಟು ಬಂದ ಸಂದರ್ಭದಲ್ಲಿ ಕೊಳಗೇರಿ ಅವರಿಗೆ ಆಸರೆಯಾಗುತ್ತದೆ. ಕ್ಯಾತ ಹೇಳುವುದು ದೇವೀರಿಯ ಕಥೆಯಾಗುವುದಿಲ್ಲ ಬದಲಾಗಿ ಅದು ಸಂಪೂರ್ಣಮ್ಮ, ರಂಗಜೆಟ್ಟಿ, ಪದ್ದಿ, ನಾಗರಾಜನಾಯ್ಡು, ಮೇಸ್ತ್ರಿ ರಾಮಪ್ಪ, ಖಡವಾ, ನಾಗ್ರ, ಸುಧೀರ, ಸತ್ಯನಾರಾಯಣ ಎಲ್ಲರ ಕಥೆಯಾಗುತ್ತದೆ. ಕನ್ನಡ ಚಳುವಳಿಗಾರರ ಮೆರವಣಿಗೆ, ಸಿನಿಮಾ, ಶೂಟಿಂಗ್, ಕ್ಯಾತ, ಪದ್ದಿ ಮತ್ತು ಆಕೆಯ ನಿರ್ದೇಶಕನೊಂದಿಗೆ ಔಟಿಂಗ್ ಹೋಗುವುದು, ನಾಯ್ಡುನ ಕುಡಿತ, ರಂಗಜೆಟ್ಟಿಯ ರೇಸು, ರೌಡಿಗಳ ಹೊಡೆದಾಟ, ಕೌಟುಂಬಿಕ ಕಲಹ, ಚುನಾವಣೆಯ ಸೋಲು-ಗೆಲವು ಹೀಗೆ ಹತ್ತು ಹಲವು ಬಿಡಿ ಬಿಡಿ ಘಟನೆಗಳಿಗೆ ಒಂದು ಸಂಕೀರ್ಣ ಸಂದರ್ಭವೇರ್ಪಡುತ್ತದೆ. ಮತ್ತು ಇವೆಲ್ಲ ಹಾಗೆ ಚದುರಿಹೋಗದೆ ಕ್ಯಾತನ ಅನುಭವಕ್ಕೆ ಅನ್ವಯವಾಗುವ ಹಾಗೆ ಅವನ ಪ್ರಜ್ಞೆಯಲ್ಲಿ ಮೂಡಿಬಂದು ಈ ಎಲ್ಲ ಅನುಭವಗಳಿಗೆ ಒಂದು ಸಂಕೀರ್ಣ ವಿನ್ಯಾಸ ಬಂದು ಬಿಡುತ್ತದೆ. ಬದುಕು ಎನ್ನುವುದು ಸರಳ ಗಣಿತವಲ್ಲ ಕ್ಯಾತ ಇದನ್ನು ತನ್ನ ಅನುಭವದಲ್ಲೇ ಕಂಡುಕೊಳ್ಳುವುದು ನಿಜಕ್ಕೂ ಮಹತ್ವಪೂರ್ಣವಾದದ್ದು. ಆದರೆ ಇಂಥ ಸನ್ನಿವೇಶದಲ್ಲೂ ತನ್ನ ಲಘು ದಾಟಿಯನ್ನು ತೊರೆಯದಿರುವುದು ಕಾದಂಬರಿಕಾರರ ತಾಂತ್ರಿಕ ತರಗತಿಗೆ ಸಾಕ್ಷಿಯಾಗಿದೆ.

ಆಧುನಿಕ ಕನ್ನಡದ ಕಥಾಸಾಹಿತ್ಯವನ್ನು ನೋಡಿದಾಗ ಸಾಮಾಜಿಕ ಮೌಲ್ಯಗಳ ಬದಲಾವಣೆ ನವೋದಯದ ಸಂದರ್ಭದಲ್ಲಿ ಅಷ್ಟೇನು ತೀವ್ರಗತಿಯಲ್ಲಿ ಆಗದಿದ್ದರೂ ಇತರೆ ಸಂಸ್ಕೃತಿಗಳ ಮುಖಾಮುಖೀ ಮತ್ತು ಬದಲಾಗುತ್ತಿದ್ದ ಜೀವನಶೈಲಿಯ ಕಾರಣದಿಂದ ಮಂದಗತಿಯಲ್ಲಿ ಸಾಗುತ್ತಿತ್ತು. ಒಪ್ಪಿತ ಮೌಲ್ಯಗಳು ಸಹ ಒಂದೊಂದಾಗಿ ನಿರಾಕರಿಸಲ್ಪಡುತ್ತಾ ಬದಲಾವಣೆ ಹೊಂದುತ್ತಿದ್ದವು. ಅಷ್ಟೇನೂ ಪ್ರತಿರೋಧವಲ್ಲದ ಮೌಲ್ಯಗಳ ಬದಲಾವಣೆಯಾದ್ದರಿಂದ ಇಲ್ಲಿ ಬೇಗ ಸಾಧ್ಯವಾಗುತ್ತದೆ. ಆದರೆ ಸಮಾಜದಲ್ಲಿ ಬದಲಾವಣೆ ಪ್ರತಿರೋಧವಿರುವ ಕೆಲವೊಂದು ಸ್ಥಾಪಿತ ಮೌಲ್ಯಗಳನ್ನು ಬದಲಾಯಿಸಲು ಸಾಧ್ಯವಿರಲಿಲ್ಲ. ಅವುಗಳಲ್ಲಿ ಮುಖ್ಯವಾಗಿ ಜಾತಿ, ಧರ್ಮ, ಕಸುಬು ಮುಂತಾದ ಯಥಾಸ್ಥಿತಿ ವಾದಿಗಳ ಮೌಲ್ಯಾಂಕನಗಳು ಅಂಥಾ ಮೌಲ್ಯಗಳು ಮೌಲ್ಯಗಳೇ ಅಲ್ಲ ಎಂಬ ವಿರೋಧಾಭಾಸದ ಚರ್ಚೆಗಳು ಹುಟ್ಟುತ್ತವೆ. ಒಂದುವೇಳೆ ಅಂಥಾ ಯಥಾಸ್ಥಿತಿ ವಾದಿಗಳು ಸೃಷ್ಟಿಸಿದ ವ್ಯವಸ್ಥೆಯ ಸಾಮಾಜಿಕ ಧೋರಣೆಗಳು ಬದಲಾಗಿದ್ದರೆ ಅಥವಾ ಸಮಾಜ ಅದನ್ನು ಬದಲಾಯಿಸಿಕೊಳ್ಳದಿದ್ದರೆ ಜೀವಕ್ಕೆ ಜೀವನಕ್ಕೆ ಎರಡಕ್ಕೂ ಅಪಾಯವೆಂಬುದು 'ಮುಟ್ಟಿಸಿಕೊಂಡವನು' ಕಥೆ ಅನಾವರಣಗೊಳಿಸುತ್ತದೆ. ಬಸಲಿಂಗನ ಪಾತ್ರದ ಮೂಲಕ ಸಾಮಾಜಿಕ ಎಚ್ಚರವೊಂದು ರವಾನೆಯಾಗುತ್ತದೆ. ಹೀಗೆ ಆ ಹೊತ್ತಿನ ಸಂದರ್ಭಕ್ಕೆ ಬದಲಾವಣೆಗೊಳ್ಳುವ ಮತ್ತು ಸ್ಥಿರವಾಗಿ ಉಳಿಯುವ ಮೌಲ್ಯಗಳ ಪಲ್ಲಟಗಳು ನಡೆಯುತ್ತವೆ ಎಂಬುದನ್ನು ಇಲ್ಲಿ ಗಮನಿಸಬೇಕು. ಮುಖ್ಯವಾಗಿ ಲಂಕೇಶರ ಕಥೆಗಳಲ್ಲಿ ಕೌಟುಂಬಿಕ ಸಂಬಂಧಗಳಲ್ಲಿ ತೀವ್ರವಾದಂತಹ

ಸಂಘರ್ಷಗಳು ನಡೆಯುತ್ತವೆ. ಸ್ಥಾಪಿತ ಮೌಲ್ಯಗಳ ಹಾಗೆ ಸ್ಥಾಪಿತ ಮನುಷ್ಯ ಸಂಬಂಧಗಳು ಸಹ ನಮ್ಮಲ್ಲಿ ಹೇಗೆ ಪಲ್ಲಟಗೊಳ್ಳುತ್ತವೆ ಎಂಬುದನ್ನು ಇಲ್ಲಿ ವಿಶದೀಕರಿಸಲಾಗಿದೆ.

ನವೋದಯ ಮತ್ತು ಪ್ರಗತಿಶೀಲರ ಅಸಾಧ್ಯಗಳನ್ನು ಸಾಧ್ಯವಾಗಿಸುವ ನಿಟ್ಟಿನಲ್ಲಿ ನವ್ಯ ಹುಟ್ಟಿಕೊಂಡಿತೆಂದರೆ ತಪ್ಪಾಗಲಾರದು. ಕಥನ ಕ್ರಮದಲ್ಲಿ ಇದು ಇವೆರಡಕ್ಕಿಂತಲೂ ಭಿನ್ನವಾದ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿತು. ಮನುಷ್ಯನ ಮನಸ್ಸಿನ ಒಳಸುಳಿಗಳ ಬಗ್ಗೆ ಚರ್ಚಿಸಿದರೂ ಆ ಒಳ ಸುಳಿಗಳ ಮುಖಾಂತರ ಸಮಾಜದ ಎಲ್ಲ ಆಗುಹೊಗುಗಳಿಗೆ ಮನುಷ್ಯನ ಮನಸ್ಸಿನ ನಿರ್ದೇಶನವೇ ಕಾರಣವೆಂದು ಸಾಂಪ್ರದಾಯಿಕವಾಗಿ ಪೂರ್ವನಿಗಧಿತ-ವಾಗಿರಬಹುದು ಅಥವಾ ಸಾಮಾಜಿಕವಾಗಿ ಸಂಚರಿತವಾದಂಥದ್ದಾಗಿರಬಹುದು. ಇವೆರಡರಲ್ಲಿ ಯಾವುದೇ ಆದರೂ ಎರಡು ಒಂದೇ. ವ್ಯಕ್ತಿ ಮತ್ತು ಸಮಾಜವೇ ಹೊರತು ಸಮಾಜ ಮತ್ತು ವ್ಯಕ್ತಿ ಅಲ್ಲ ಎಂಬ ತಾತ್ವಿಕ ತಿಳುವಳಿಕೆಗಳು ಹುಟ್ಟುತ್ತವೆ. ನವ್ಯರು ಆರಿಸಿಕೊಂಡ ಕಥನ ಕ್ರಮ ಹಾಗೂ ಕಥಾನಕಗಳ ಹಾದಿ ಮನುಷ್ಯನ ಸೂಕ್ಷ್ಮ ಸಂವೇದನೆಗಳ ಒಳನೋಟಗಳ ಕಡೆಗೆ ಇದ್ದುದರಿಂದ ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳ ಮೌಲ್ಯಶೋಧನೆಗಳು ವ್ಯಕ್ತವಾದ ನೆರಳಲ್ಲಿ ಪ್ರತಿಯೊಂದು ಘಟಕಗಳ ರೂಪ ಪಡೆಯುತ್ತಿತ್ತು. 'ಮುಟ್ಟಿಸಿಕೊಂಡವನು' ಕಥೆಯನ್ನು ಗಮನಿಸಿದರೆ ಪರಂಪರಾಗತವಾಗಿ ಜಾತೀಯತೆಯನ್ನು ಪೋಸಿಸಿಕೊಂಡು ಬಂದಿದ್ದ ಸಮಾಜದ ಎರಡು ಮುಗ್ಧ ಜೀವಗಳು ಜಾತೀಯತೆಯ ಕಬಂದಬಾಹುಗಳ ಅಪ್ಪುಗೆಯಲ್ಲಿ ಸಿಕ್ಕಿ ಯಾವ ರೀತಿಯ ನಷ್ಟವನ್ನು ಅನುಭವಿಸುತ್ತಾರೆ ಎನ್ನುವ ಚಿತ್ರಣ ಇದರಲ್ಲಿದೆ. ಅಸ್ಪೃಶ್ಯನೆಂಬ ಕಾರಣದಿಂದ ಡಾ.ತಿಮ್ಮಪ್ಪನಲ್ಲಿ ತನ್ನ ಕಣ್ಣಿನ ಸಮಸ್ಯೆಗೆ ಆರೈಕೆ ಮಾಡಿಸಿಕೊಂಡಿದ್ದಕ್ಕಾಗಿ ಬಸಲಿಂಗ ಹಲುಬುತ್ತಾನೆ. ಅಪಾರವಾದ ಹೆಸರು ಮಾಡಿದ್ದ ಕಣ್ಣಿನ ತಜ್ಞ ಡಾ.ತಿಮ್ಮಪ್ಪ ಅವರಲ್ಲಿಗೆ ಹೋಗಲು ಅನೇಕ ಡಾಕ್ಟರುಗಳು ಬಸಲಿಂಗನಿಗೆ ಸೂಚಿಸುತ್ತಾರೆ. ಆದರೆ ಅಸ್ಪೃಶ್ಯನೆಂಬ ಕಾರಣದಿಂದ ಬಸಲಿಂಗ ತಿಮ್ಮಪ್ಪನಲ್ಲಿಗೆ ಹೋಗಲು ನಿರಾಕರಿಸುತ್ತಾನೆ. ಅವನ ಈ ಸಣ್ಣ ಮನಸ್ಸಿನಿಂದಾಗಿ ಮತ್ತೆ ಡಾಕ್ಟರಲ್ಲಿಗೆ ಹೋಗಿ ಸರಿಯಾದ ಆರೈಕೆ ಪಡೆಯದೆ ತನ್ನ ಕಣ್ಣು ಕಳೆದುಕೊಳ್ಳುತ್ತಾನೆ. ಜಾತಿಯ ಅಹಂಕಾರ ಬಲಿತಂತೆ ಅವನ ಮುಗ್ಧತೆ ಕರಗುತ್ತದೆ. ಮನಸ್ಸು ಕಲುಷಿತವಾಗಿ ದೇಹ ಕೊಳೆಯುತ್ತದೆ. ಮತ್ತೊಂದು ಕಣ್ಣಿಗೂ ರೋಗ ತಗುಲಿದಾಗ ಮೇಲುಜಾತಿಯ "ಡಾಕ್ಟರಲ್ಲಿಗೆ ಹೋಗಿ ಗುಣವಾಗದೆ ಹತಾಶನಾಗಿ ಮತ್ತೆ ಡಾ.ತಿಮ್ಮಪ್ಪನವರಲ್ಲಿಗೆ ಹೋಗುವನು. ಈಗ ಅಹಂಕಾರದ ಜಾಗದಲ್ಲಿ ದೈನ್ಯತೆ ತುಂಬಿಕೊಂಡಿದೆ. ವೈದ್ಯರು ಅವನ ಸ್ಥಿತಿಗೆ ಮರುಗುತ್ತಾರೆ. ಆಪರೇಷನ್ ಮಾಡಿ ಅದನ್ನು ಗುಣಪಡಿಸುತ್ತಾರೆ.

ಕಥೆಯ ಬಾಹ್ಯ ವಿವರಗಳಿಗಿಂತ ಕಥನಕ್ರಮದಲ್ಲಿಯೇ ಗ್ರಹಿಸಲಾಗಿರುವ ಸಾಮಾಜಿಕ ವಿವರಗಳು, ಮನುಷ್ಯನ ಆಳ ಮನಸ್ಸು ಮತ್ತು ಪ್ರಜ್ಞಾ ವಲಯಕ್ಕಿರುವ ಸಂಬಂಧ ದೇಹ

ಮನಸ್ಸುಗಳ ದ್ವಂದ್ವ ಇವೆಲ್ಲವನ್ನು 'ಮುಟ್ಟಿಸಿಕೊಂಡವನು' ಒಂದು ರೂಪಕದಂತೆ ತನ್ನ ಒಡಲಿನಲ್ಲಿ ಹುದುಗಿಸಿಕೊಂಡಿದೆ." ೧೧ ಇಲ್ಲಿ ದೇಹ ಮತ್ತು ಮನಸ್ಸಿನ ಸಂಬಂಧವನ್ನು ಜಾತೀಯತೆ ಮೀರಿ ಬೆಳೆಸುವ ಕ್ರಮವನ್ನು ಇಲ್ಲಿ ಸಾಧ್ಯವಾಗಿಸಬಹುದು. ಮನಸ್ಸಿನಲ್ಲಿ ನೆಲೆ ನಿಲ್ಲುವ ಕ್ರೌರ್ಯ, ಮಲಿನತೆಗಳು ದೈಹಿಕವಾಗಿ ಕ್ಷೀಣಿಸಲು ಸಾಧ್ಯವಾಗುತ್ತವೆ. ಮನಸ್ಸಿನ ಈ ಕ್ರೂರ ಸ್ಥಿತಿಗಳನ್ನು ಬದಿಗಿಟ್ಟು ಉಳಿದಾಗ ಮಾತ್ರ ಸಮಾಜದಲ್ಲಿ ವೈಯಕ್ತಿಕ ಆರೋಗ್ಯದ ಜೊತೆಗೆ ಸಮಾಜದ ಆರೋಗ್ಯವನ್ನು ಕಾಪಾಡಿಕೊಳ್ಳಲು ಸಾಧ್ಯ ಎಂಬುದನ್ನು ಲಂಕೇಶರ ಇನ್ನೂ ಅನೇಕ ಕಥೆಗಳಲ್ಲಿ ಬಿಂಬಿತವಾಗಿರುವುದನ್ನು ನೋಡಬಹುದು.

ಅಂತರ್‌ಜಾತಿ ವಿವಾಹ ಕುರಿತು 'ಕಲ್ಲು ಕರಗುವ ಸಮಯ' ಕಥೆಯಲ್ಲಿ ಬರುವ ಸುಮಾರು ಶತಮಾನಗಳಿಂದ ಕರಗದೆ ಇದ್ದ ಕಲ್ಲಿಗೆ ಈಗ ಕರಗುವ ಸಮಯ ಬಂದಿದೆ ಎನ್ನುವಂತಹ ಒಂದು ಸಣ್ಣ ಸುಳಿವನ್ನು ಈ ಕಥೆಯಲ್ಲಿ ನೋಡಬಹುದು. ಪ್ರೀತಿಗೆ ಬೆಲೆಕೊಟ್ಟು ಮಲ್ಲಯ್ಯನ ಒಬ್ಬಳೇ ಮಗಳು ಶ್ಯಾಮಲ ಕೆಳಜಾತಿಯ ತಿಪ್ಪಣ್ಣನನ್ನು ಪ್ರೇಮಿಸಿ ಮದುವೆಯಾಗಲು ನಿರ್ಧರಿಸಿದಾಗ ಈ ಸುದ್ದಿ ಗ್ರಾಮೀಣ ಸಮಾಜದಲ್ಲಿ ಎಬ್ಬಿಸಿದ ಅಲ್ಲೋಲ ಕಲ್ಲೋಲ ಮತ್ತು ಉದ್ವಿಗ್ನತೆಗಳನ್ನು ಪರಿಶೀಲಿಸುವ ಈ ಕಥೆಯು ಬೆಳೆಯುವ ಕ್ರಮ ಕುತೂಹಲಕಾರಿಯೂ ಗಮನಾರ್ಹವೂ ಆಗಿದೆ. ಫ್ಯೂಡಲ್ ಸಾಮಾಜಿಕ ಪರಿಸರ ಹಳ್ಳಿಯ ಮೇಲ್‌ಜಾತಿಯವರನ್ನು ಮತ್ತು ಕ್ರಾಂತಿಕಾರಕ ವೇದಿಕೆಯ ತರುಣರನ್ನು ಸಹ ಗೇಲಿಗೆ ಗುರಿಮಾಡಿರುವ ಕಥೆಗಾರರ ನಿರೂಪಣೆಯು ಆರಂಭದಲ್ಲಿ ವ್ಯಂಗ್ಯ, ಹಾಸ್ಯದ ನೆಲೆಯಲ್ಲಿದ್ದು ಶಿಖರಪ್ರಾಯ ಸನ್ನಿವೇಶವಾದ ಅಂತರ್ಜಾತಿ ವಿವಾಹ ಸಂದರ್ಭ ಹತ್ತಿರವಾದಂತೆ ಗಂಭೀರವಾಗುತ್ತದೆ. ಮದುವೆಗೆ ವಿರೋಧ ವ್ಯಕ್ತಪಡಿಸಿ ಹುಡುಗನನ್ನು ಕೊಲೆಮಾಡಲು ಹವಣಿಸಿದ ಹುಡುಗಿಯ ತಂದೆ ಮಲ್ಲಯ್ಯನು ಮದುವೆ ಖಾತ್ರಿಯೆಂದು ಗೊತ್ತಾದಮೇಲೆ ಖಿನ್ನನಾಗಿ ಮನೆಬಿಟ್ಟು ತೋಟ ಸೇರಿ ಅಲ್ಲಿಯೇ ಜೀವಿಸತೊಡಗುತ್ತಾನೆ. ಮುಂದೆ "ಶ್ಯಾಮಲ ಮನೆಗೆ ಬಂದಾಗ ತಂದೆ ಮಲ್ಲಯ್ಯ ರಕ್ಕಸನಂತೆ ಸಿಟ್ಟುಗೊಂಡಿದ್ದ ಒಳಗೆ ತಲೆಮರೆಸಿಕೊಂಡಿದ್ದ ಗಿರಿಜವ್ವನನ್ನು ಇರಿಯುವಂತೆ ಬೈಯ್ಯುತ್ತಿದ್ದ ಅವನಪ್ಪ ಇದನ್ನು ಸಹಿಸಿರಲಿಲ್ಲ. ಅಜ್ಜಿ ಸಹಿಸಿರಲಿಲ್ಲ. ಮನೆ ವ್ಯಾಜ್ಯದಲ್ಲಿ ಇಬ್ಬರು ಕೊಲೆಯಾಗಿದ್ದರೆ ಇಂತಹ ಪ್ರೇಮಪ್ರಕರಣಗಳಲ್ಲಿ ಹಲವು ಖೂನಿಗಳೇ ಆಗಿದ್ದವು. ಗಿರಿಜವ್ವ ಆಗಲೇ ಕೆಲವರಲ್ಲಿ ತಮ್ಮ ದುಃಖ ತೋಡಿಕೊಂಡು ಊರಲ್ಲಿ ಗಾಳಿ ಸುದ್ದಿಯ ರೂಪ, ಹೊಸ ಪ್ರಕರಣವಾಗಿ ತಳೆದು ಶ್ಯಾಮಲಾ ಕತೆ ಹಬ್ಬಿತ್ತು. ಗಿರಿಜವ್ವ, ಮಲ್ಲಯ್ಯನ ನೆಂಟರಿಗೆಲ್ಲ ಗೊತ್ತಾಗಿತ್ತು.

---

೧೧. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ್, ಪು. ೯೨-೯೩

ಇದು ಕೇವಲ ಜಾತಿಯ ಪ್ರಶ್ನೆಯಲ್ಲ ಬೇಡರ ಹುಡುಗನೊಬ್ಬ ಇಲ್ಲಿ ಉಣ್ಣುವ, ಮಲಗುವ ಪ್ರಶ್ನೆ ಊರಿನ ಗೈರತ್ತು ಸ್ವಾಭೀಮಾನದ ಪ್ರಶ್ನೆ: ಊರಿನಲ್ಲಿ ಸಮಸ್ಯೆಗಳು ಬಗೆಹರಿಸುವ ಶೈಲಿಯ ಪ್ರಶ್ನೆ.

ದೊಡ್ಡ ಕೋಟು ಹಾಕಿಕೊಂಡು ಮಲ್ಲಯ್ಯ ಬೇಡರ ಹಟ್ಟಿಯತ್ತ ಹೊರಟು ನಿಂತಿದ್ದಾಗಲೇ ಶ್ಯಾಮಲ ಬಂದಳು. ಬೈಗುಳವೆಲ್ಲ ಮುಗಿದಂತಿತ್ತು. ಸಿಟ್ಟು ಮಾತ್ರ ಕೆಂಡದಂತೆ ನಿಗಿ ನಿಗಿ ಆಗಿತ್ತು. ಒಮ್ಮೆ ಶ್ಯಾಮಲಾಳನ್ನು ದುರುಗುಟ್ಟಿ ನೋಡಿದ ಮಲ್ಲಯ್ಯ: ಅವನ ಮುಖದ ರೇಖೆಗಳಲ್ಲಿ ಬದಲಾದಂತೆ ವಕ್ರವಾಗಿತ್ತು ಮುಖ. ಅದನ್ನು ಕಂಡ ಶ್ಯಾಮಲ ಕುಸಿದು ಕೂತಳು. ಅಮ್ಮ 'ಓ' ಎಂದು ಅಳತೊಡಗಿದಳು ಜೇಬು ಮುಟ್ಟಿಕೊಂಡ ಮಲ್ಲಯ್ಯ ನಿರ್ಧಾರದ ಅಡಿ ಇಟ್ರು ಹೋಗುವ ಮುನ್ನ ಮಗಳತ್ತ ಒಮ್ಮೆ ಉಗಿದ."[೧೨] ಅಂತರ್ಜಾತಿ ವಿವಾಹದಿಂದ ಅಮೃತಾಂಬುದಿಯೇ ಉರಿದು ಬೂದಿಯಾಗುವ ಸ್ಥಿತಿಯಲ್ಲಿತ್ತು. ಈ ಸಮಸ್ಯೆ ಬಗೆಹರಿಸಲು ಬಂದಿದ್ದ ಮೇಲು ಜಾತಿಯ ಸ್ವಾಮೀಜಿ ಯಾವುದೇ ನಿರ್ಣಯ ಕೊಡದೆ ಅಸಹಾಯಕನಾಗಿ ಮಠಕ್ಕೆ ಹಿಂದಿರುಗುತ್ತಾರೆ. ಮದುವೆಯಾದ ಹುಡುಗ ಹುಡುಗಿಯರಿಗೂ ತಮ್ಮ ಕ್ರಿಯೆಯ ಬಗೆಗೆ ಒಣ ಜಂಬವಿಲ್ಲ. ಮಲ್ಲಯ್ಯನ ಸಾವಿನ ಬಳಿಕ ವಾತಾವರಣ ತಿಳಿಯಾಗಿ ಮದುವೆಯಾದ ನವ ದಂಪತಿಗಳು ಅನ್ಯೋನ್ಯವಾಗಿ ಬಾಳುವರೆಂಬ ಘಟ್ಟದಲ್ಲಿ ಕಥೆ ಮುಕ್ತಾಯವಾಗುವುದು. ಜಾತಿವ್ಯವಸ್ಥೆಯ ಕ್ರೂರ ಮುಖ ಅಂತರ್ಜಾತಿ ವಿವಾಹದಿಂದ ಹೇಗೆ ಕೊನೆಗೊಳ್ಳುತ್ತದೆ ಎಂಬುದನ್ನು ನೋಡಬಹುದು.

ಗ್ರಾಮದ ಮುಗ್ಧತೆ ನಗರೀಕರಣದ ಕ್ರೌರ್ಯದಲ್ಲಿ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿರುವ ದುರಂತ 'ಗೀತಾ ಗುತ್ತಿ ಆಗಿದ್ದು' ಕತೆಯಲ್ಲಿದೆ. ಸಮಾಜದ ಶಾಂತಿ, ಕಾನೂನು ವ್ಯವಸ್ಥೆಗಳನ್ನು ಕಾಪಾಡುವ ರಕ್ಷಣಾ ವ್ಯವಸ್ಥೆಗಳೇ ಭಕ್ಷಕರಾಗುವ ಸ್ಥಿತಿ ಇಲ್ಲಿದೆ. ಬೆಣ್ಣೆ ಮಾರಲು ಅಮ್ಮನೊಂದಿಗೆ ಹಳ್ಳಿಯಿಂದ ನಗರಕ್ಕೆ ಬಂದ ಗುತ್ತಿ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಕ್ಕೆ ಬಲಿಯಾಗಿ ಮುಗ್ಧತೆ, ಹೆಸರು, ಮಾತಿನ ನಡವಳಿಕೆ ಎಲ್ಲದರಲ್ಲೂ ಬದಲಾವಣೆಯನ್ನು ಹೊಂದುತ್ತಾಳೆ. ಗುತ್ತಿ – ಗೀತಾ ಆದದ್ದೇ ಅವಳ ನಗರೀಕರಣದ ಪ್ರಜ್ಞೆಗೆ ಸಾಕ್ಷಿಯಾಗಿದೆ. ಜೈಲಿನಲ್ಲಿರಬೇಕಾದ ಕಳ್ಳ ಮುನಿಯ ರಾಜಕಾರಣಿ ಪುಟ್ಟಯ್ಯನ ಜೊತೆ ಸೇರಿಕೊಂಡು ಮುಗ್ಧ ಗುತ್ತಿಯನ್ನು 'ಗೀತಾ' ಆಗಿಸುತ್ತಾನೆ. ಕೊಳಕು ರಾಜಕಾರಣ, ವ್ಯವಸ್ಥೆಯ ಮೂಲವಾದ ಪೋಲೀಸ್ – ವ್ಯವಸ್ಥೆ, ಸುಳ್ಳು ಹೇಳುವ ಪತ್ರಕರ್ತ ಹೀಗೆ ಸಮಾಜವೇ ಗುತ್ತಿಯನ್ನು ಅವ್ಯವಸ್ಥೆಯೆಡೆಗೆ ತಳ್ಳಿ ಅವಳನ್ನು ವೇಶ್ಯೆಯನ್ನಾಗಿಸುತ್ತದೆ. ರಾತ್ರಿ ಗೀತಾಳ ಮನೆಯ ಪಾರ್ಟಿಗೆ ಹಿಂದಿನ ಬಾಗಿಲ ಮೂಲಕ ಒಳನುಗ್ಗಿ ವಿರೋಧಿಗಳಿಗೆ 'ಚಿಯರ್ಸ್' ಎನ್ನುವ ಸಣ್ಣಮುನಿಯ ಇಂದಿನ ಕೊಳಕು ರಾಜಕಾರಣಿಗಳ ಪ್ರತೀಕವಾಗಿದ್ದಾನೆ. ಮಾತನಾಡಲು ಹಿಂಜರಿಯುತ್ತಿದ್ದ ಗುತ್ತಿ ಪ್ರತಿಷ್ಠಿತರ ಜೊತೆಗೆ

---

೧೨. ಪಿ.ಲಂಕೇಶ್, ಸಮಗ್ರ ಕಥೆಗಳು, ಪು. ೩೮೪

ಕುಳಿತು ಚಿಯರ್ಸ್ ಎನ್ನುವಷ್ಟು ಆಧುನಿಕವಾಗಿದ್ದಾಳೆ. ತನ್ನನ್ನು ನೈತಿಕವಾಗಿ ಅಧಃಪತನದತ್ತ ತಳ್ಳಿದ ಪ್ರತಿಷ್ಠಿತರ ಮೇಲೆ ಹತೋಟಿಯನ್ನು ಸಾಧಿಸಿದ್ದಾಳೆ. ತನ್ನ ಬದುಕನ್ನು ನರಕವನ್ನಾಗಿಸಿದ್ದ ವ್ಯವಸ್ಥೆಯ ಮೇಲಿನ ಪ್ರತೀಕಾರ ತೀರಿಸಿಕೊಂಡಿದ್ದಾಳೆ. ವ್ಯವಸ್ಥೆಯನ್ನು ಸರಿಪಡಿಸಲಾಗದ ಸಂದರ್ಭಕ್ಕೆ ಆ ವ್ಯವಸ್ಥೆಯನ್ನೇ ಬದುಕಾಗಿಸಿಕೊಂಡವರ ದುರಂತಕ್ಕೆ ಗೀತಾ ಸಾಕ್ಷಿಯಾಗಿದ್ದಾಳೆ.

'ಒಂದು ಸಂಬಂಧದ ದಾಖಲೆ'ಯಲ್ಲಿ ಸಮಾಜಶಾಸ್ತ್ರಜ್ಞ ರುದ್ರಮೂರ್ತಿಯು ಕಾಣುವ ಕನಸು ಜಾತಿ–ಧರ್ಮ–ವರ್ಣ–ಶ್ರೇಣಿಕೃತ ಸಮಾಜದ ಅಸಮಾನತೆಯಲ್ಲಿ ಮೂಡಿದೆ. ಮೇಲ್ಜಾತಿಯ ರುದ್ರಮೂರ್ತಿ ತನ್ನ ಶೂದ್ರ ಗೆಳೆಯ ತಳವಾರ ಕರಿಯಣ್ಣನಿಗೆ ಕೊಟ್ಟ ಹಳೆಯ ಸ್ವೆಟರ್‌ನ ಪ್ರಕರಣ ಹೊಸ ತಲೆಮಾರಿನ ಸುರೇಶನನ್ನು ಕೆರಳಿಸಿದೆ. ರುದ್ರಮೂರ್ತಿಯ ಮೇಲೆ ಸೇಡು ತೀರಿಸಲು ತನ್ನ ಹಳೆ ಸ್ವೆಟರನ್ನು ಧರಿಸುವಂತೆ ಒತ್ತಾಯಿಸುತ್ತಾನೆ. ಸುರೇಶನ ಭಯಕ್ಕೆ ಸ್ವೆಟರ್ ಧರಿಸಿ ಮಲಗಿದ ರುದ್ರಮೂರ್ತಿಗೆ ಕನಸಿನಲ್ಲಿ ಅವನ ಊರಿನ ದಲಿತರು, ಹಿಂದುಳಿದವರು, ಅವರ ಬೆವರು, ರಕ್ತ, ಉಗುಳು ಎಲ್ಲವೂ ಅವನ ಮೇಲೆ ದಾಳಿ ಮಾಡುತ್ತವೆ. ಅವರೆಲ್ಲಾ ಇವನ ಮೇಲೆ ತಮ್ಮ ಬೆವರಿನ ಚಿಂದಿ ಎಸೆದು ಒದ್ದು ಅವಮಾನಿಸಿದಂತೆ ಕನಸಾಗುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಮೇಲ್ವರ್ಗದವರು ಬಳಸಿಬಿಟ್ಟ ಉಡುಪು–ತೊಡಪುಗಳನ್ನು ದಲಿತರಿಗೆ ನೀಡುವ ಸಂದರ್ಭದ ಪ್ರಜ್ಞೆಯ ವಿವಿಧ ಮುಖಗಳು ರಕ್ತ, ಉಗುಳು, ಬೆವರಿನ ರೀತಿಯಲ್ಲಿ ಕಾಣಿಸಿಕೊಂಡು ನಿವಾರಣೆಗೆ ಒಳಪಟ್ಟ ಜನರ ನೋವು ಆಕ್ರೋಶವಾಗಿ ಮರುಕಳಿಸಿದೆ. ಸ್ಥಾಪಿತ ವ್ಯವಸ್ಥೆಯ ಅಸಮಾನತೆಯ ಮೌಲ್ಯಗಳಿಗೆ ಬದ್ಧವಾಗಿ ನಡೆದಿದ್ದವನಿಗೆ ಕನಸು ಬೇರೊಂದು ಲೋಕವನ್ನೇ ಪರಿಚಯಿಸುತ್ತದೆ. ಸ್ವೆಟರನ್ನು ಧರಿಸುವ ಮೂಲಕ ದಲಿತರು ಅನುಭವಿಸುವ ಅವಮಾನ ಹೀಗಳಿಕೆ ಮೂದಲಿಕೆಗಳನ್ನು ಸಮಾಜಶಾಸ್ತ್ರಜ್ಞ ಕನಸಿನ ಮೂಲಕ ಅನುಭವಿಸುತ್ತಾನೆ. ಸಾಂಪ್ರದಾಯಿಕ ಚಿಂತನೆಗಳು ವ್ಯವಸ್ಥೆಯನ್ನು ನಡೆಸಿಕೊಂಡ ರೀತಿ ಕನಸಿನಲ್ಲಿ ಗೋಚರವಾಗುತ್ತದೆ.

ಬಸವೇಗೌಡ ಹಾಗೂ ರುದ್ರಮೂರ್ತಿಯವರು ಕಾಣುವ ಕನಸು ಅವರು ಮಾಡಿದ ತಪ್ಪಿನ ಪಶ್ಚಾತ್ತಾಪದ ಪ್ರತೀಕವಾಗಿದೆ. ಲಂಕೇಶರು ಸದಾ ಆರೋಗ್ಯವಂತ ಸುಧಾರಣೆಯ ಸಮಾಜದ ಕನಸನ್ನು ಕಂಡವರು. ಮನುಷ್ಯನ ಸಣ್ಣತನಗಳು ಅಸಮಾನತೆಯನ್ನು ಹೆಚ್ಚಿಸುತ್ತಿರುವ ದಿಕ್ಕಿನಲ್ಲಿ ಇಂತಹ "ಆತ್ಮಶೋಧನೆ' ಸಮಾಜವನ್ನು ಶುದ್ಧೀಕರಿಸುವ ಆಶಯಗಳನ್ನು ಲಂಕೇಶರು ಪ್ರಸ್ತಾಪಿಸಿದ್ದಾರೆ.

'ಒಬ್ಬಂಟಿ' ಕಥೆಯಲ್ಲಿ ಈರಕ್ಕನನ್ನು ಸಂಪ್ರದಾಯಸ್ಥ ಗೃಹಿಣಿಯಾಗಿ ಚಿತ್ರಿಸಿರುವುದನ್ನು ಕಾಣಬಹುದು. ಮಂಜಣ್ಣನ – ಈರಕ್ಕ, ಮಗ ಶಿವಲಿಂಗ ಈ ಮೂವರ ಪುಟ್ಟ ಕುಟುಂಬ ಈ ಕಥೆಯಲ್ಲಿ ಕಾಣಬಹುದು. ಲಂಕೇಶರು ಚಿತ್ರಿಸಿರುವ ಹಳ್ಳಿ ಸ್ವಾತಂತ್ರ್ಯದ ಹಿಂಚುಮುಂಚಿನದು.

ಆಗಲೇ ಹಳ್ಳಿಯ ಬದುಕಿನ ಸಾಂಪ್ರದಾಯಕ ಸ್ಥಿರತೆಯ ಮೂಲಗಳು ಕಣ್ಮರೆಯಾಗಲು ಪ್ರಾರಂಭವಾಗಿವೆ. ಈ ಸಾಂಪ್ರದಾಯಕ ಸ್ಥಿರತೆ, ನೆಮ್ಮದಿ ಎನ್ನುವುದು ಕೂಡ ತಲತಲಾಂತರದಿಂದ ಬಂದಿದ್ದ ಜಾತಿ ಮತ್ತು ವರ್ಗ ಅಸಮಾನತೆಗಳ ಮೇಲೆ ನಿಂತಿರುವಂಥದ್ದು ವಿಶೇಷದ ಸಂಗತಿಯೆಂದರೆ ಲಂಕೇಶರ ಈ ಘಟ್ಟದ ಕತೆಗಳಲ್ಲಿ ಜಾತಿ ಮತ್ತು ವರ್ಗ ಸಂಹಿತೆಗೆ ಸಂಬಂಧಿಸಿದ ಹಾಗೆ ಅಂತಹ ಸ್ಪಷ್ಟವಾದ ಸಾಮಾಜಿಕ ಗ್ರಹಿಕೆ ಕಾಣುವುದಿಲ್ಲ. ಈ ಸಾಮಾಜಿಕ ಸತ್ಯಗಳ ವಾಸ್ತವಗಳ ಗ್ರಹಿಕೆ ಅವರಲ್ಲಿ ಬಂದದ್ದು ನಂತರದಲ್ಲಿ ಇಷ್ಟಾದರೂ ನವ್ಯದ ಘಟ್ಟದಲ್ಲಿ ಕೃತಿಗಳ ಸಾಂಪ್ರದಾಯಿಕ ಸ್ಥಾಪಿತ ಸಂಬಂಧಗಳು ಕೂಡ ಹೆಚ್ಚು ವಸ್ತುನಿಷ್ಠವಾಗಿ ಮಾರ್ಮಿಕವಾಗಿ ಕಾಣುವುದಕ್ಕೆ ಮುಖ್ಯಕಾರಣ ನೈತಿಕತೆಯ ಹಂತದಲ್ಲಿ ಲಂಕೇಶರು ಅನುಭವವನ್ನು ನೋಡಿದ್ದು.

ಹಳೆಯ ಹಳ್ಳಿಯ ಹೊಸ ಬಗೆಯ ನೀತಿ ಅಥವಾ ಅನೀತಿ ಹುಟ್ಟುತ್ತಿರುವುದು ಅಪಾರ ಅಶಾಂತಿಗೆ ಎಡೆಮಾಡಿಕೊಡುತ್ತದೆ. ಇಂತಹ ಸಂಕ್ರಮಣ ಸ್ಥಿತಿಯ ಹಳ್ಳಿಗಳಲ್ಲಿ ಬದಲಾವಣೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲಾಗದ ಸಜ್ಜನರು ನಾಶವಾಗುವುದನ್ನು ಲಂಕೇಶರು ಚಿತ್ರಿಸುತ್ತಾರೆ. ಇಂತಹ ಕತೆಗಳಲ್ಲಿ 'ಒಬ್ಬಂಟಿ' ಕತೆ ತೀರಾ ಮುಖ್ಯವಾದದು. ಎರಡು ತಲೆಮಾರುಗಳ ಎರಡು ವಿಭಿನ್ನ ಮೌಲ್ಯ ಪ್ರಜ್ಞೆಗಳ ಘರ್ಷಣೆ ಮುಖ್ಯ. ತಂದೆ ಹಳೇ ಕಾಲದವನು. ಜಾತಿಯೂ ಸೇರಿದಂತೆ ಹಳೆಯ ಹಳ್ಳಿಯ ಎಲ್ಲ ಮೌಲ್ಯಗಳಲ್ಲಿ ನಂಬಿಕೆ ಇಟ್ಟವನು. ಮಗನಿಗೆ ಈ ಯಾವ ಸಾಂಪ್ರದಾಯಕ ನೆಲೆಗಳೂ ಇಲ್ಲ. ನಿರುದ್ಯೋಗ ಮಾತ್ರ ಅವನಿಗೆ ವಾಸ್ತವ. ಲಂಕೇಶರು ಹೊಸ ಜನಾಂಗದ ಅಭದ್ರ ವಿದ್ಯಾವಂತ ನಿರುದ್ಯೋಗಿಗಳನ್ನು ಮಾರ್ಮಿಕವಾಗಿ ಚಿತ್ರಿಸಬಲ್ಲರು ಎನ್ನುವುದಕ್ಕೆ ಶಿವಲಿಂಗ ಸಾಕ್ಷಿ. ಈ ಕತೆಯ ಅಪ್ಪನಿಗೆ ಮಗನ ಲೌಕಿಕ ಯಶಸ್ಸು ಕೂಡಾ ದೊಡ್ಡ ಅವಮಾನದ ಹಾಗೆ ಕಾಣುತ್ತದೆ.

ಮನುಕುಲವನ್ನು ಮಾನವತೆಯ ನೆಲೆಗೆ ತರಲು ಜನರಲ್ಲಿ ಆಳವಾಗಿ ಬೇರೂರಿದ್ದ ಜಾತಿ–ಧರ್ಮ, ಮೌಢ್ಯವನ್ನು ಹೋಗಲಾಡಿಸಲು ಇರುವ ಪರಿವರ್ತನಾ ಸಾಧನಗಳನ್ನು ಕಥನ ಸಾಹಿತ್ಯದ ಹಂದರದಾಚೆಗೆ ಲಂಕೇಶರು ತಂದಿದ್ದಾರೆ. ಈ ಮೂಲಕ ಸ್ಥಾಪಿತ ಸಾಂಪ್ರದಾಯಕ ಬದುಕಿನ ಸಂಬಂಧಗಳನ್ನು ಗಟ್ಟಿಕೊಳಿಸುವ ನಿಟ್ಟಿನಲ್ಲಿ ಲಂಕೇಶರ ಕಥನಸಾಹಿತ್ಯ ಸಾಗುವುದನ್ನು ಶೋಧಿಸಬಹುದು.

### ೭.೨. ಆಧುನಿಕತೆ ಮತ್ತು ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧಗಳು

ಲಂಕೇಶರ ನವ್ಯ ಘಟ್ಟದ ಕಥನಗಳ ಮುಖ್ಯ ಸಂವೇದನೆಯು ಆಧುನಿಕತೆಯ ಸ್ಥಿತ್ಯಂತರ ಸ್ವರೂಪವನ್ನು ಪರಿಸರ ಶಿಕ್ಷಣ ಸಂವೇದನೆಯಿಂದ ಉಂಟಾಗುವ ಪಲ್ಲಟಗಳು ಮತ್ತು ಗೊಂದಲವನ್ನು ಲಂಕೇಶರು ಅತ್ಯಂತ ಪರಿಣಾಮಕಾರಿಯಾಗಿ ಶೋಧಿಸುತ್ತಾರೆ. ಹಳ್ಳಿ ಮತ್ತು ಪಟ್ಟಣಗಳ ನಡುವೆ "ಬಿರುಕು"ವಿನ ವ್ಯಕ್ತಿ ಸಿಕ್ಕಿ ಒದ್ದಾಡುತ್ತಿದ್ದಾನೆ. ಈತನನ್ನು ಪಟ್ಟಣದ ಸಂಪರ್ಕಕ್ಕೆ

ತಂದಿರುವುದು ವಿದ್ಯಾಭ್ಯಾಸ. ಈ ವಿದ್ಯಾಭ್ಯಾಸ ಎಂಬುದು ಅನೇಕ ಸಂಕೀರ್ಣವಾದ ಅನುಭವಲೋಕಗಳಿಗೆ ಈ ಹೊಸ ಪ್ರಜ್ಞೆಯ ನಾಯಕನನ್ನು ಪರಿಚಯಿಸುತ್ತದೆ. ಗ್ರಾಮೀಣ ಸಮಾಜ ಪಟ್ಟಣದ ಕಡೆಗೆ ವಿಶೇಷವಾಗಿ ಆಕರ್ಷಕವಾಗುವ ನೆಲೆಗಳಲ್ಲಿ ಈ ವಿದ್ಯಾಭ್ಯಾಸವು ಒಂದು ಎಂಬುದನ್ನು ಅರ್ಥೈಸಿಕೊಂಡಾಗ ಈ ಹೊಸ ಪ್ರಜ್ಞೆಯನಾಯಕನ ಸಮಸ್ಯೆಗಳು ನಮಗೆ ಸ್ಪಷ್ಟವಾಗುತ್ತಾ ಹೋಗುತ್ತವೆ. ಈ ವಿದ್ಯಾಭ್ಯಾಸದ ಕಾರಣಕ್ಕಾಗಿ ಹೊಸ ಪ್ರಜ್ಞೆಯ ನಾಯಕ ಇತ್ತ ಪೂರ್ಣವಾಗಿ ಹಳ್ಳಿಗನೂ ಅಲ್ಲ ಅತ್ತ ಪೂರ್ಣವಾಗಿ ಪಟ್ಟಣಿಗನೂ ಅಲ್ಲ. ಆದರೆ ಈ ಹೊಸ ಪ್ರಜ್ಞೆಯ ನಾಯಕನಲ್ಲಿ ಹಳ್ಳಿಯ ಅನೇಕ ಗುಣಗಳಿವೆ. ಅವನ ಸಂವೇದನೆಯ ಮೂಲ ಚೌಕಟ್ಟು ಪ್ರಾರಂಭದಲ್ಲಿ ಹಳ್ಳಿಗನ ಮುಗ್ಧತೆಯಲ್ಲಿ ಆಗುತ್ತದೆ. ಅಂದರೆ ಬರಬರುತ್ತಾ ತನ್ನಮುಗ್ದತೆಯ ಮಿತಿಗಳನ್ನು ಅರ್ಥಮಾಡಿಕೊಳ್ಳುತ್ತಾ ಬರುತ್ತಾನೆ. ಹೀಗಾಗಿ ಈ ಹೊಸ ಪ್ರಜ್ಞೆಯ ನಾಯಕ ಪಾತ್ರಗಳ ಮಹತ್ವ ಇರುವುದು ತಮ್ಮ ಮುಗ್ಧತೆಯನ್ನು ಕಳೆದುಕೊಳ್ಳುವಲ್ಲಿ ಈ ದೃಷ್ಟಿಯಿಂದ 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'ಯ ನಾಯಕ ಮತ್ತು 'ಬಿರುಕು'ವಿನ ನಾಯಕ ಅತ್ಯಂತ ಪ್ರಮುಖ ಪಾತ್ರಗಳು.

ಕಾದಂಬರಿಯು ಬದುಕಿನ ಕಾವ್ಯಾತ್ಮಕ ಅಸ್ತಿತ್ವದ ಸಾಕಾರರೂಪ ಹಾಗೂ ಅದರ ಪಾತ್ರಗಳು ಆಂತರಿಕ ಜಗತ್ತನ್ನು ತೆರೆದಿಡುತ್ತವೆ. ವರ್ತಮಾನದಲ್ಲಿ ಚರ್ಚಿಸುತ್ತವೆ ಎಂಬ ಸರ್ ವಾಲ್ಟರ್ ಸ್ಕಾಟ್ ಮತ್ತು ವಿಕ್ಟರ್ ಹ್ಯೂಗೊರವರ ಮಾತುಗಳನ್ನು ಇಲ್ಲಿ ಉಲ್ಲೇಖಿಸಬೇಕಾಗುತ್ತದೆ. ಇಲ್ಲಿ ಬಸವರಾಜ ಸಂಶೋಧನೆಗೆಂದು ಪಟ್ಟಣಕ್ಕೆ ಬಂದವನು ಇಲ್ಲಿನ ಪರಿಸರಕ್ಕೆ ಹೊಂದಿಕೊಳ್ಳಲಾರದೆ ಎಲ್ಲೆಡೆ ಕೆಡುಕನ್ನೇ ಕಾಣುವ ಪ್ರವೃತ್ತಿಯನ್ನು ಬೆಳೆಸಿಕೊಂಡವನು. ತನ್ನ ಸುತ್ತಲಿನವರನ್ನು ವಕ್ರದೃಷ್ಟಿಯಿಂದಲೇ ನೋಡುವ ಪ್ರವೃತ್ತಿ. ಪ್ರಾಧ್ಯಾಪಕ ರಂಗಯ್ಯ ಮನೆಯ ಮಾಲಿಕ ರಂಗಪ್ಪ ಭ್ರಷ್ಟ ಅವನು ಬಾಡಿಗೆ ಕೇಳುವುದು ಅಪರಾಧ ಮಗಳಿಗೆ ಕೊಂಚ ಹೇಳಿಸಿ ಕೊಡಲು ಒಡೆಯ ಇದ್ದಿಲಿನ ತುಣುಕು ಪ್ರೊ. ರಂಗಯ್ಯನ ಹೆಂಡತಿ ಇವನ ಪಾಲಿಗೆ ತಿಮಿಂಗಿಲ (ವಸುಂಧರ) ಬಸವರಾಜನಿಗೆ ಇದು ತೂತು ಬಿದ್ದ ಅವ್ಯವಸ್ಥೆಯ ಆಗರ ಬೂರ್ಜ್ವಾ ಸಮಾಜ. 'ತಾನು ನುಗ್ಗಲಾರದ ಕಾಡು' ತಾನು ಮಾತ್ರ ಎಲ್ಲಕ್ಕಿಂತ ವಿಭಿನ್ನ ಎನ್ನುವ super ego ಇರುವ ಸಿನಿಕತನದ ಪರಮಾವಧಿ. ಇವುಗಳನ್ನು ವಿವರಿಸುತ್ತಲೇ "ಹಠಾತ್ತಾಗಿ ವಿಷಯ ಬದಲಿಸಬೇಕೆನ್ನಿಸಿತು. ಯಾವ ವಿಷಯ ಎತ್ತಿಕೊಳ್ಳುವುದು? ಕಾಲೇಜು, ವಿದ್ಯಾರ್ಥಿಗಳ ಜ್ಞಾನ, ಅಜ್ಞಾನ, ಅಶಿಸ್ತು, ರಾಜಕಾರಣ, ಭ್ರಷ್ಟಾಚಾರ, ಹುಸಿನೋಟಗಳು, ಸೂಳೆಗಾರಿಕೆ, ಕ್ಲೀಷೆಗಳು, ಭಾಷಾಸಮಸ್ಯೆ, ಆಧ್ಯಾತ್ಮ, ಧೂಮಪಾನ.....

'ಇಂಗ್ಲೀಷ್ ಈಡಿಯಂನ ನಿಮ್ಮಷ್ಟು ಚೆನ್ನಾಗಿ ಯಾರೂ ಉಪಯೋಗಿಸೋದ್ನೆ ನೋಡಿಲ್ಲ. ಇದನ್ನೆಲ್ಲ ನೋಡಿದರೆ ಭಾಷೆ ಅನ್ನೋದು ನಿರಂತರ ಕೃಷಿ ಅಂದರೆ Cultivation ನಿಂದ

ಬರುತ್ತೆ ಅನ್ಸುತ್ತೆ' ಅಂದೊಡನೆ ಆತ ಸಂಭ್ರಮದಿಂದ ಎದ್ದು ಅಮೇರಿಕದ ಅನೇಕ ಬುದ್ಧಿಜೀವಿಗಳು ತನ್ನ ಇಂಗ್ಲೀಷ್ ಕುರಿತು ಬರೆದ ಕಾಗದಗಳನ್ನು ತಂದು ಕೊರೆದ. ಅವು ಮುಗಿಯುವ ಹಾಗೇ ಕಾಣಲಿಲ್ಲ. ಒಬ್ಬ ಆ ಪುಸ್ತಕದ ಭಾಷೆ. ಇನ್ನೊಬ್ಬ ಭಾರತೀಯತೆ, ಮತ್ತೊಬ್ಬ ಸೂಕ್ಷ್ಮತೆ ಹೀಗೆ ಹೊಗಳಿದ್ದ. ಹೀಗೆ ಈತ ಕೊರೆಯುತ್ತಾ ಹೋದರೆ ನನ್ನ ಕಿವಿಗಳು ತೂತು ಬಿದ್ದಾವೆಂದು ಬೆದರಿ 'ನನ್ನ ಥೀಸಿಸ್ ಬರೆಯೋಕೆ, ಸಾರ್, ನಿಮ್ಮ ಕಾಲುಭಾಗ ಪ್ರತಿಭೆ ನನ್ನಲ್ಲಿ ಇದ್ದಿದ್ದರೆ....."[೧೩] ಅಂದೆ. ಆತ ಪ್ರಸನ್ನನಾಗಿ. ಮುಗ್ಧತೆ ಕಳೆದುಕೊಳ್ಳುವುದು ನಿಜವಾಗಿಯೂ ಹೊಸ ಜ್ಞಾನದ ಪ್ರಾರಂಭ. ಬಸವರಾಜ ಸಂಶೋಧನಾ ಯಾತ್ರೆ ಮಾಡಿದ್ದು ಫಲ ನೀಡಿತೋ ಇಲ್ಲವೋ ಗೊತ್ತಿಲ್ಲ. ಆದರೆ ಭೌತಿಕವಾಗಿಯಂತೂ ಅದೊಂದು ಜ್ಞಾನಯಾತ್ರೆ ಲೋಕದ ಸ್ವರೂಪದ ಬಗ್ಗೆ ಅವನಿಗೆ ಹೊಸ ಗೊಂದಲ ಪ್ರಾರಂಭವಾಗಿದೆ. ಆತ ಸಂಬಂಧಗಳನ್ನು ಹೊಸ ರೀತಿಯಲ್ಲಿ ನೋಡಲು ಪ್ರಾರಂಭಿಸಿದ್ದಾನೆ. ಇಲ್ಲಿಯ ತನಕ ಆತನಿಗೆ ಹೊಳೆಯದಿದ್ದ ಸಂಗತಿಗಳು ಹೊಳೆಯಲು ಪ್ರಾರಂಭವಾಗಿವೆ. ನೀತಿ ಅನೀತಿಯ ಬಗೆಗಿನ ದೊಡ್ಡ ಗೊಂದಲಗಳು ಪ್ರಾರಂಭವಾಗಿವೆ. ಈ ಎಲ್ಲಾ ಕಾರಣಗಳಿಂದಾಗಿ ಆತ ಹೆಚ್ಚು ತೀವ್ರವಾಗುತ್ತಿದ್ದಾನೆ.

ಸಿನಿಕತನದಿಂದ ಕೂಡಿದ ಬಸವರಾಜನಂಥಾ ಕೇಂದ್ರ ಪಾತ್ರವೊಂದರ ಮುಖೇನ ವರ್ತಮಾನದ ವಿಶ್ವವಿದ್ಯಾನಿಲಯದ ಪರಿಸರ, ಹಳ್ಳಿಯಿಂದ ಬಂದ ವಿದ್ಯಾರ್ಥಿಯೊಬ್ಬ ನಾಗರಿಕ ಸಮಾಜದ ವ್ಯಕ್ತಿಗಳ ಜೊತೆ ಹೊಂದಾಣಿಕೆಗಾಗಿ ಹೆಣಗುವುದು ತನ್ಮೂಲಕ ಆ ಪಾತ್ರಗಳ ನೈಜತೆಯ ಬಣ್ಣಬಯಲು ಮಾಡುವುದು ಹಾಗೆಯೇ ಅವುಗಳ ಮುಖವಾಡಗಳು ವರ್ತಮಾನದಲ್ಲಿ ವಿಜೃಂಭಿಸುವ ಪರಿ ವ್ಯವಸ್ಥೆಯಲ್ಲಿ ಹಾಡುಹಗಲೇ ಇಂಥ ಮುಖವಾಡಗಳ ಜೊತೆ ಸಲೀಸಾಗಿ ವ್ಯವಹರಿಸುವ ರೀತಿ ಇಂಥದ್ಯಾವುದನ್ನು ಸಾಂಘಿಕವಾಗಿಯಾಗಲೀ ವೈಯಕ್ತಿಕವಾದುದಾಗಲೀ ಪ್ರತಿಭಟಿಸದೆ ಹೊಂದಿಕೊಂಡು ಹೋಗುವ ಪುಣ್ಯಕೋಟಿಯಂಥಾ ಜನಸಂಸ್ಕೃತಿ, ಹಸಿದ ಹೆಬ್ಬುಲಿಗಳಂಥಾ ಬೂರ್ಜ್ವಾ ವ್ಯಕ್ತಿಗಳ ಅನಾವರಣ 'ಬಿರುಕು'ವಿನ ಆವರಣದಲ್ಲಿ ಬಿಚ್ಚಿಕೊಳ್ಳುತ್ತದೆ. ಪ್ರಸ್ತುತ ಆಧುನಿಕ ಶಿಕ್ಷಣ ಬದಲಿಸಿದ ಸಂಬಂಧಗಳು ಸೂಕ್ಷ್ಮವಾಗಿ ಬಿಚ್ಚಿಕೊಳ್ಳುತ್ತವೆ. ಅಂದರೆ ಫ್ಯಾಂಟಸಿ ಲೋಕದ ಕಥೆಯ ಎಳೆಯೊಂದನ್ನು ಸಿನಿಕತನ ಪರಮಾವಧಿಯಲ್ಲಿ ನಿಂತ ನಾಯಕನ ಕೈಯಲ್ಲಿ ಕೊಟ್ಟು ಗಂಟು ಬಿಚ್ಚಿಸುವ ಪ್ರಯತ್ನವೇ ಸಾಮಾಜಿಕ ಚಿಂತನೆಯು ವಾಸ್ತವಿಕ ನೆಲೆಯಲ್ಲಿ ಹುಟ್ಟುಹಾಕುವ ತಾತ್ವಿಕ ಚರ್ಚೆಯ ಪರಿಣಾಮವಾಗಿದೆ. ಆಧುನಿಕ ಶಿಕ್ಷಣ ತೋರಿಸುವ ತನ್ನ ವಿಮೋಚನೆಯೊಳಗೆ ಸತ್ಯವನ್ನು ಬಿತ್ತಲು ಮಾಡುವ ನಿಕಷದಂತೆ ಕಾಣುವುದೇ ಇಲ್ಲಿನ ಪ್ಲಸ್ ಪಾಯಿಂಟ್. ಅದೇ ವರ್ತಮಾನದ ಚರ್ಚೆ.

---

೧೩. ಪಿ.ಲಂಕೇಶ್, ಬಿರುಕು, ಪು.೨.

ಬಸವರಾಜ ಸಂಶೋಧನಾ ವಿದ್ಯಾರ್ಥಿಯಾಗಿದ್ದು ಅವನು ಕಾದಂಬರಿಯ ಕೇಂದ್ರ ಪಾತ್ರ ಈತನ ಮಾರ್ಗದರ್ಶಕ ಪ್ರೊ.ರಂಗಯ್ಯ ಬಸವರಾಜನು ತನ್ನ ಪ್ರೊಫೆಸರ್ ಹೇಳುವ ಕೆಲಸಗಳನ್ನು ನಿರಾಕರಿಸಲು ಆಗುವುದಿಲ್ಲ. ಕಾರಣ ಅವನ ಅಸಹಾಯಕತೆ. ಆಧುನಿಕ ಶಿಕ್ಷಣದ ಜೊತೆಗೆ ಎಲ್ಲ ವಾದಗಳನ್ನು ತಿಳಿಯಲು ಪ್ರಯತ್ನಿಸುತ್ತಾನೆ ಬಸವರಾಜ. "ಕಮ್ಯುನಿಸಂಗೂ ಈ ಅಪಮೌಲ್ಯಕ್ಕೂ ಸಂಬಂಧವೇನು?" ಅಂತ ಕೇಳಿದೆ. ನಕ್ಕು ನುಡಿದ ನಮ್ಮ ಇಷ್ಟಗಳನ್ನೆಲ್ಲ ತಂದು ಮಾತಾಡುವ ವಸ್ತುವನ್ನು ಗೊಂದಲಗೊಳಿಸಬಾರದು. ತಿಳಿತೇ ನಮ್ಮ Constitution ಪ್ರಕಾರ ನಾವು Democracy ತಿಳಿತೇ. ನಮ್ಮ ರಫ್ತು ಹೆಚ್ಚಾಗಬೇಕು ನಮ್ಮ ಆಮದು ಹೆಚ್ಚಾಗಬೇಕು, ಅಲ್ಲ ಕಡಿಮೆಯಾಗಬೇಕು. ಅದಕ್ಕೆ ಏನು ಮಾಡಬೇಕು? ತಿಳಿತೇ. ಅಂತ ಆತ ನಾಲ್ಕೈದು ತಪ್ಪು ವಾಕ್ಯಗಳನ್ನು ರಚಿಸಿದ. ನಾನು ನಗುತ್ತಾ ಕೂತಿದ್ದೆ. ಆತ ಇನ್ನೊಂದನ್ನು ರಚಿಸಲು ಆರಂಭಿಸಿ ಅದು ಬೆಳೆಯುತ್ತಾ ಹೋದ ಹಾಗೆ ಬೆವತು ಮುಗಿಸುವುದಕ್ಕಾಗಿ ಹೋರಾಡುತ್ತಿದ್ದಾಗ ಸಾಕು ಬಿಡು ಅರ್ಥವಾಯಿತು. ರಂಗಯ್ಯನವರ ಇಂಗ್ಲೀಷ್ ಶಿಕ್ಷಣ ಆಗಿದೆ. 'ನಿಮಗೆ ರೆವಿನ್ಯೂ ಮಂತ್ರಿಗಳು ಹೇಗೆ ಗೊತ್ತು?' ಅಂದ. 'ಅವರ ಮಗ ವಸಂತ ನನಗೆ ಚೆನ್ನಾಗಿ ಗೊತ್ತು. ನಮ್ಮ ಪ್ರೊಫೆಸರ್ ಮನೆಗೆ ಬರ್ತಿರ್ತಾನೆ. ಪ್ರೊಫೆಸರ್ ರಂಗಯ್ಯನೋರು ಗೊತ್ತಲ್ಲ?' ಅಂದೆ ಅವರು ಸಂತೋಷಗೊಂಡು 'ರಂಗಯ್ಯನೋರು ನೋಡಿ ಗಟ್ಟಿ ಆಸಾಮಿ, ಚೆನ್ನಾಗಿ ಕಲಿತರು. ಅದರಿಂದ ತಕ್ಕ ಉಪಯೋಗ ಪಡೆದರು. ಇವತ್ತು ಯಾರಾದರೂ ಮಂತ್ರಿಗಳು ಇಂಗ್ಲಿಷಿನಲ್ಲಿ ಚೆನ್ನಾಗಿ ಮಾತಾಡಿದರೆ.... ಅದು ರಂಗಯ್ಯನೋರದೆ ಆಗಿರುತ್ತೆ. ನೀವು ಪುಣ್ಯವಂತರು' ಅಂದ"[೧೪] ಬಸವರಾಜನ ಶೈಕ್ಷಣಿಕ ವಲಯ ವಿಸ್ತರಿಸುತ್ತಾ ಈ ಮೂಲಕ ಪ್ರಜ್ಞಾತೀಕ್ಷ್ಣತೆ ಭಿನ್ನವಾಗಲು ಮಾರ್ಗದರ್ಶನ ಹಾಗೂ ಶಿಕ್ಷಣ ಕಾರಣವಾಗಿದೆ. ಈ ಮೂಲಕ ಹೊಸ ಚಿಂತನೆಯ ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ನಿರೂಪಿಸುವ ಲೇಖಕರು ಬಸವರಾಜುವಿನ ಸಾಮಾಜಿಕ ಪರಿಸರದ ಮೂಲಕ ಹೊಸ ಚಿಂತನೆಯನ್ನು ನಿರೂಪಿಸ ಹೊರಟಿದ್ದಾರೆ. ಬಸವರಾಜ ಕಾದಂಬರಿಯಲ್ಲಿ ಎದುರಾಗುವ ಪಾತ್ರಗಳಲ್ಲಿ ಮುತ್ತಯ್ಯ, ಚಂದ್ರಕಾಂತ, ಸುವರ್ಣ, ಆನಂದು, ಪರಮ, ಕೈಲಾಸಂ, ಪಂಡಿತ, ಶ್ರೀನಿವಾಸರಾವ್ (ನಿಜದ ಹೆಸರು ರೇವಣಸಿದ್ದಪ್ಪ) ರಂಗಯ್ಯ, ತಿಮಿಂಗಿಲ, ಶಾಂತ ಇವರೆಲ್ಲರ ಒಡನಾಟದಲ್ಲಿ ಆಧುನಿಕ ಶಿಕ್ಷಣದ ಮನುಷ್ಯ ಸಂಬಂಧದ ವಿಸ್ತರಣೆಯಾದುದನ್ನು ನೋಡಬಹುದು. ಇವರು ಕಾದಂಬರಿಯಲ್ಲಿ ವ್ಯವಹರಿಸುವ ಪ್ರಜ್ಞಾವಲಯ ವಿಸ್ತರಿಸುವ ಸಂದರ್ಭಗಳನ್ನು ಮೇಲಿನ ಪಾತ್ರಗಳು ಸಂಭಾಷಿಸುವ ರೀತಿಯಲ್ಲಿ ನೋಡಬಹುದು. "ಆಹಾ ಇದು ಯಾರ ಪೇಂಟಿಂಗ್ ಅಂದ ಆನಂದು. 'ನಮ್ಮ ಸುಪ್ರಸಿದ್ಧ ಕಲಾವಿದ ಟಕ್ಕೆ ಅವರದು, ಸೊಗಸಾಗಿದೆ ಅಲ್ವ? ನಾವು Artist ಗಳಿಗೆ ಪ್ರೋತ್ಸಾಹ ಕೊಡದೆ ಇದ್ರೆ, ಇನ್ನಾರು ಕೊಡಬೇಕು ಅಂತ ಆತ ಕೊರೆಯುತ್ತಿದ್ದಾಗ ಅವನ ಪುತ್ರ ಬಂದು 'ಡ್ಯಾಡಿ, ಡ್ಯಾಡಿ ಮೈ ಫ್ರೆಂಡ್ ಈಜ್

---

೧೪. ಪಿ.ಲಂಕೇಶ್, ಬಿರುಕು, ಪುಟ.೨೫.

ಕಾಲಿಂಗ್' ಅಂತ ನಾದ ತೆಗೆದ, ಗಂಗಪ್ಪ ಹೂ ನಗೆ ಸೂಸುತ್ತ 'ವೆಸ್ಟ್ ಅಂಡ್ ಸ್ಕೂಲಿಗೆ ಹೋಗ್ತಿದ್ದಾನೆ. ತುಂಬಾ ಜಾಣ' ಅಂದ. ಆನಂದು ತನ್ನ ಮೆಚ್ಚುಗೆ ಸೂಸುತ್ತ ಕರ್ನಾಟಕದ ಸುಪ್ರಸಿದ್ಧ ಪೆದ್ದು ಕಲಾವಿದ ಟಕ್ಕೆಯ ವರ್ಣಚಿತ್ರವನ್ನು ಹೊಗಳಿದ. ಗಂಗಪ್ಪ ನಮ್ಮನ್ನೆಲ್ಲ ಒಳಗೆ ಕರೆಯುತ್ತಾ 'ಇದು ನಮ್ಮ ಮೊದಲನೆ ಹಾಲ್, ಇದರ ಪಕ್ಕದಲ್ಲಿ ನಾಲ್ಕು ಹಾಲ್‌ಗಳಿವೆ ಕಮ್ ಕಮ್ ಇಗೋ ಇತ್ತೀಚೆಗೆ ತಂದ ರೇಡಿಯೋಗ್ರಾಮ್, ನನ್ನ ಹೆಂಡ್ತಿಗೆ ಬಸವಣ್ಣನವರ ವಚನ ಕಂಡ್ರೆ ತುಂಬ ಇಷ್ಟ. ಈ ಅಲ್ಮೆರಾ ನೋಡಿ ನಾನು ಖುದ್ದಾಗಿ ನಿಂತು ಮಾಡಿಸಿದ್ದು..... ಈ ಪ್ರತಿಮೆಗಾಗಿ ಸಾವಿರ ರೂಪಾಯಿ ಖರ್ಚಾಯಿತು. ವಾಸನೆ ನೋಡಿ ಶುದ್ಧ ಶ್ರೀಗಂಧದ್ದು......

ಅಂತ ಆನಂದು ಉಪನ್ಯಾಸ ಕೊಡ ಹತ್ತಿದಾಗ, ಅಲ್ಲಿಯ ಅನೇಕ ಸಂಗತಿಗಳು ರಂಗಪ್ಪನಿಗೆ ಅರ್ಥವಾಗದೇ ಆದರೆ ತನ್ನ ಬೇಕೂಫತನ ತೋರಿಸಿಕೊಳ್ಳಲಾರದೆ ನಾನು ಹೇಳಿಕೊಟ್ಟ ವಿಚಾರಕ್ಕೆ ಬಂದ. 'ನಿಮ್ಮ ವಿಯಟ್ ಬರೆದ ಹಾಗೆ ಬರಿಬೇಕು ಸ್ವಾಮಿ ಅಲ್ಲಿಯ ಇದು....' ಎಂದು ಹೇಳುತ್ತಾ ಇದ್ದಾಗ ನಾನು 'ಧಾರ್ಮಿಕ ಪ್ರಜ್ಞೆ' ಅಂತ ಸಹಾಯ ಮಾಡಿದಾಗ ಆತ 'ಹೌದು, ಅಲ್ಲಿಯ ಧರ್ಮಬುದ್ಧಿ ಟ್ರೆಮಾಂಡಸ್ ಶೇಕ್ಸ್‌ಪಿಯರನ ಅನೇಕ ಟ್ರ್ಯಾಜಿಡಿಸ್ ಓದಿದ್ದೇನೆ ಅಲ್ಲಿ ಎಂಥ ಇದೆ ಅಂತಿರಾ' ಅಂದ. ಆ ಸಮಯಕ್ಕೆ ಸರಿಯಾಗಿ ಅವನ ಮಗಳು ಇಂದಿರಾ ತಾನು ಕಾಯುತ್ತಾ ಇರುವುದಾಗಿ ಹೇಳಿಕಳಿಸಿದಳು. ಗಂಗಪ್ಪ ಆಕೆ ಇನ್ನಷ್ಟು ಹೊತ್ತು ಕಾಯಲು ಹೇಳಿಕಳಿಸಿದ. ಹೊರಗಡೆ ಹೋಗಿ ತನ್ನ ಕುಮಾರನನ್ನು ಕೂಗಿ ಕರೆದು 'ಸಂದೇಶ್ ಒಂದು ಇಂಗ್ಲೀಷ್ ಪದ್ಯ ಹೇಳು' ಅಂದ ಆತ ನಾಚಿಕೊಂಡ. ಆನಂದು 'ಹೇಳಪ್ಪಾ' ಅಂತ ಪುಸಲಾಯಿಸಿದ ಸಂದೇಶ ನೆಟ್ಟಗೆ ನಿಂತು ಹೇಳದೆ

'ಬಾ, ಬಾ, ಬ್ಲಾಕ್ ಶಿಪ್ – ಹ್ಯಾವ್ಯೂ ಎನಿ ಊಲ್?

ಎಸ್ಸಾರ್, ಎಸ್ಸಾರ್, ತ್ರಿ ಬ್ಯಾಗ್ಸ್ ಫುಲ್!'

ಆನಂದು ಮತ್ತು ಗಂಗಪ್ಪ ಚಪ್ಪಾಳೆ ಹೊಡೆದು ಮೆಚ್ಚುಗೆ ಸೂಸಿದರು. ಈ ಮರಿವಿದ್ವಾಂಸ ಇನ್ನೊಂದು ಶುರುಮಾಡಿಯಾನೆಂದು ನಾನು 'ಗುಡ್, ಇನ್ನು ಆಡಿಕೋ ಹೋಗು' ಅಂದೆ. ಗಂಗಪ್ಪನಿಗೆ ನಿರಾಶೆಯಾಗಿರಬೇಕು. ಸಂದೇಶ್ ಅಲ್ಲಿಂದ ತೊಲಗಿದ್ದಕ್ಕೆ ನನಗೇನೋ ಸಂತೋಷವಾಯಿತು. ಆಗ ಗಂಗಪ್ಪ ನನ್ನನ್ನು ಉದ್ದೇಶಿಸಿ ಮಾತಾಡಿದ; "ಏನು ಸಾರ್ ನಿಮ್ಮ ವಿಚಾರ ನೀವೂ ಕೊಂಚವೂ ಹೇಳಿಕೊಳ್ಳಲ್ಲ. ಬಹಳ ಅದ್ಬುತ ಮನುಷ್ಯರು ನೀವು' ಅಂದ.[೧೫] ಅಕ್ಷರ ಬಲ್ಲ ಬುದ್ಧಿಜೀವಿಗಳ ತರ್ಕ ಶುದ್ದ ಮಾತು. ತನ್ನ ಸುತ್ತಲ ಸಾಮಾಜಿಕ ಪರಿಸರವನ್ನು ನಿಯಂತ್ರಿಸುವ ಬಗೆಯನ್ನು ಇಲ್ಲಿ ಬಳಸುವ ಭಾಷೆ ಪ್ರತಿನಿಧಿಸುತ್ತವೆ ಹಾಗೂ ಶೋಧಿಸುತ್ತದೆ.

---

೧೫. ಪಿ.ಲಂಕೇಶ್, ಬಿರುಕು, ಪುಟ. ೩೪.

ಪ್ರೊಫೆಸರ್ ಹೆಂಡತಿ ಮತ್ತು ಮಗಳು ಶಾಂತಳೊಡನೆ ಕಥಾನಾಯಕ ಬಸವರಾಜ ಒಮ್ಮೆ ಪ್ರಯಾಣ ಮಾಡುತ್ತಿದ್ದ ವೇಳೆಯಲ್ಲಿ ಬಸವರಾಜನನ್ನು ಕುರಿತು ಶಾಂತ ಕೇಳುವ ಪ್ರಶ್ನೆ ನಿಮ್ಮ ಊರಿನಲ್ಲಿ ಮನರಂಜನೆ ಹೇಗೆ ಸಿಗುತ್ತದೆ? ಎಂದಾಗ ಬಸವರಾಜ ತನ್ನೂರಿನ ಬಸವಿ ಕಲಾವಿದೆಯ ಬಗ್ಗೆ ಹೇಳುತ್ತಾನೆ. ಇದು ಬರಿಯ ಪ್ರಶ್ನೆಯೇ ಆದರೂ ಸಾಮಾಜಿಕ ಸಮಸ್ಯೆಯೊಂದರ ಚರ್ಚೆಗೆ ಅವಕಾಶ ಒದಗಿಸುತ್ತದೆ. ಸಾಂಸ್ಕೃತಿಕ ವೈವಿದ್ಯತೆಯ ಹೆಸರಿನಲ್ಲಿ ಸ್ತ್ರೀ ಶೋಷಣೆಯ ಸಂಪ್ರದಾಯವನ್ನು ಭೇದಿಸುತ್ತದೆ.

ಬಸವಿ ತಮ್ಮ ಪ್ರಾಂತದಾಗೆಲ್ಲ 'ಭಲೆ ವೈಯಾರಿ ಅಂತ ಹೆಸರು ವಾಸಿ, ಕುಣಿಯೋಕೆ ನಿಂತ್ಲು ಅಂದ್ರೆ ಕುಂತ್ಕೂಂಡಿದ್ದ ಮಂದಿ ವದರತಿದ್ರು ನೋಡ್ರಿ ಮನಸ್ಮಾರ್, ಮನಸ್ಮಾರ್ ಅಂತ ಸುಭದ್ರೆ ಪಾಲ್ಬು ಹಾಕ್ತಾಳೆ ಅಂತ ಗೊತ್ತಾದ್ರೆ ಜೇನ್ನೊಣ ಮುತ್ತಿದಂಗೆ ಮುತ್ಕೊಂತಿದ್ರು ನೋಡ್ರಿ ಎಂದು ಹೇಳುವ ಆಧುನಿಕ ಶಿಕ್ಷಣವನ್ನು ಪಡೆದ ಬಸವರಾಜು ಒಂದು ಹಳ್ಳಿಯ ಸಂಸ್ಕೃತಿ ಅನಾವರಣದೊಡನೆ ದೇವದಾಸಿ ಪದ್ದತಿಯೊಂದರ ಸೂಕ್ಷ್ಮಗ್ರಹಿಕೆಯೊಂದನ್ನು ಶಿಕ್ಷಣಪಡೆದ ಬಸವರಾಜುವಿನ ದೃಷ್ಟಿ ಹೇಗೆ ಬಿಚ್ಚಿ ತೋರಿಸುತ್ತವೆಂಬುದನ್ನು ಇಲ್ಲಿ ಗುರುತಿಸಬಹುದು. ಭಾಷಾಸಂವೇದನೆ ಮತ್ತು ಲೋಕಗ್ರಹಿಕೆಗಳನ್ನು ಆಧುನಿಕ ಶಿಕ್ಷಣ ಬದಲಿಸಿದ ಎಚ್ಚರಿಕೆಯ ದೃಷ್ಟಿಕೋನದ ಹಿನ್ನಲೆಯಲ್ಲಿ ಲಂಕೇಶರ ಕಥನ ಗೊತ್ತಿದ್ದೂ ಕೆಲವೊಮ್ಮೆ ಅದರ ಆಂತರ್ಯವನ್ನು ಕೆರಳಿಸುತ್ತದೆ. ಈ ಬಸವಿಯ ನೃತ್ಯ ನೋಡಿ ಗ್ರಾಮದ ಜನಜೀವನದಲ್ಲಿ ಮನೋರಂಜನೆ ಎಂಬುದು ಅವಿಭಾಜ್ಯವಾದುದೆಂದೂ ನೈಜ ನೃತ್ಯವನ್ನೇ ನೋಡಿ ಹಳ್ಳಿ ಜನರು ಉಲ್ಲಾಸಭರಿತರಾಗುತ್ತಿದ್ದರು ಎಂಬುದು ಸಹ ಲಂಕೇಶರ ನೈಜ ನಿರೂಪಣೆಯ ಬಳಕೆಯಿಂದ ಗೊತ್ತಾಗುತ್ತದೆ. ಹೇಗೆ ಗೊತ್ತಾಗುತ್ತದೆ ಎಂಬುದು ಎಷ್ಟು ಸತ್ಯವೋ! ಅದರ ಹಿನ್ನಲೆಯ ವಿಷಾದ ಕೂಡ ಅಷ್ಟೇ ನಗ್ನ ಸತ್ಯ. ಆಧುನಿಕ ಶಿಕ್ಷಣ ವಂಚನೆಯಿಂದ ವಂಚಿತರಾದ ಹಳ್ಳಿಯ ಜನರ ಸಮಸ್ಯೆಯ ಸುತ್ತ ಸುತ್ತುವ ಲೋಕವಿಚಾರಗಳನ್ನು ಲಂಕೇಶರ ಕಥನಕ್ರಮ ಬೇಧಿಸುವ ಹೊಸ ವಿಧಾನವನ್ನು ಇಲ್ಲಿ ಆವಿಷ್ಕರಿಸಲಾಗಿದೆ.

'ಬಿರುಕು' ಕಾದಂಬರಿಯ ಬಸವರಾಜ ಅವನೊಬ್ಬ ಹಳ್ಳಿಯ ಹುಡುಗ "ಇಂಗ್ಲೀಷ್ ಸಾಹಿತ್ಯದಲ್ಲಿ ಪಿಎಚ್.ಡಿ. ಮಾಡಲು ಬೆಂಗಳೂರಿಗೆ ಬಂದಿದ್ದಾನೆ. ಹೊಸ ಪರಿಸರದಲ್ಲಿ ಅವನು ಒಂದುರೀತಿಯ ಸಾಂಸ್ಕೃತಿಕ ಆಘಾತಕ್ಕೆ ಒಳಗಾಗಿದ್ದಾನೆ. ಈ ಆಘಾತವನ್ನು ಅವನು ನಿಭಾಯಿಸುವ ಕ್ರಮ ಅವರ ಪೇಚಾಟಗಳು ಅವಕ್ಕಾಗಿ ಅವನು ಹೊಂಚಿಕೊಳ್ಳುವ ಉಪಾಯಗಳು, ಅದರಿಂದ ಅವನು ಹೇಳಬೇಕಾದ ಸುಳ್ಳುಗಳು ಅವುಗಳಿಂದಾಗಿ ಹಾಸ್ಯಾಸ್ಪದನಾಗುವ ಸನ್ನಿವೇಶಗಳು ಕಾದಂಬರಿಯ ಬಂಧವನ್ನು ಕಟ್ಟಿವೆ. ಅಷ್ಟೇ ಅಲ್ಲ ತನ್ನ ಮುಗ್ಧತೆ, ಅಸಹಾಯಕತೆ ಮತ್ತು ಇಕ್ಕಟ್ಟಿನ ಸ್ಥಿತಿಗಳನ್ನು ತಮಗೆ ಬೇಕಾದ ಹಾಗೆ ಬಳಸಿಕೊಳ್ಳಬಯಸುವುದರಿಂದ ಅವನು

ತನ್ನನ್ನು ತಾನು ರಕ್ಷಿಸಿಕೊಳ್ಳಬೇಕಾಗಿದೆ. ಈ ಹೊಸ ಪರಿಸರದಲ್ಲಿ ತನ್ನ ಅಸ್ತಿತ್ವವನ್ನು ಶೋಧಿಸಿಕೊಳ್ಳಬೇಕಾಗಿದೆ. ಕಾದಂಬರಿಯು ಬಸವರಾಜನ ಉತ್ತಮಪುರುಷ ನಿರೂಪಣೆಯಲ್ಲಿದೆ. ಆದರೆ ಅದು ತೇಜಸ್ವಿಯವರ 'ಸ್ವರೂಪ'ದ ತಪ್ಪೊಪ್ಪಿಗೆಯ ಧಾಟಿಯಲ್ಲಿಲ್ಲ. ಏಕಮುಖ ಸ್ವಗತದ ಬದಲು ಒಂದು ಬಗೆಯ ನಾಟಕೀಯತೆ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಒಂದು ದೃಷ್ಟಿಯಿಂದ ಅದು ಅನಂತಮೂರ್ತಿಯವರ 'ಪ್ರೀತಿ ಮೃತ್ಯುಭಯ'ಕ್ಕೆ ಹತ್ತಿರವಾಗಿದೆ. ಲಂಕೇಶ್ ಅದನ್ನು ಓದಿರಲಿಕ್ಕೆ ಸಾಧ್ಯವಿಲ್ಲ. ಆದರೆ ತನ್ನ ಮನೋಧರ್ಮದಲ್ಲಿ ಅದು ಅನಂತಮೂರ್ತಿಯವರ ಈ ಕೃತಿಗೆ ಹತ್ತಿರವಾಗಿರುವುದು ಕುತೂಹಲಕಾರಿಯಾಗಿದೆ. ಬಸವರಾಜನ ಉತ್ತಮಪುರುಷ ನಿರೂಪಣೆಯು ಅವನನ್ನು ಏಕಮುಖವಾಗಿ ಸಮರ್ಥಿಸಿಕೊಳ್ಳುವ ಧಾಟಿಯಲ್ಲಿ ಇಲ್ಲ ಎಂಬುದು ಗಮನಾರ್ಹವಾಗಿದೆ".[೧೬] ರಂಗಯ್ಯ ಬಸವರಾಜುವಿಗೆ ಒಂದು ಸಾಧ್ಯತೆಯನ್ನು ಸೂಚಿಸುತ್ತಾನೆ. ಶೈಕ್ಷಣಿಕವಾಗಿ ಒಂದು ಪ್ರಜ್ಞೆಯಿಂದ ಬಿರುಕುವಿನ ಬಸವರಾಜು ಮತ್ತು ಅವನ ಪರಿಸರದಲ್ಲುಂಟಾದ ಬಿರುಕು ಮಾತ್ರವಲ್ಲ ಬಸವರಾಜುವಿನ ಪ್ರಜ್ಞೆಯಲ್ಲೆ ಬಿರುಕುವುಂಟಾಗುತ್ತದೆ.

ಗ್ರಾಮೀಣ ಸಮಾಜದ ಹೊಸ ಸಂವೇದನೆಯ ಚಿಂತನೆಗಳು ಆಧುನಿಕ ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧಗಳನ್ನು ಬಸವರಾಜನ ಕಣ್ಣಿನಿಂದ ನೋಡಬಹುದು. ಯುವಜನರ ಅನುಭವಗಳನ್ನು ಚಿತ್ರಿಸುವುದು ನಗರ ಮತ್ತು ಗ್ರಾಮದ ಪರಿಸರದಲ್ಲಿ ಶೈಕ್ಷಣಿಕವಾಗಿ ಉಂಟಾದ ಚಿಂತನೆಗಳನ್ನು ಚಿತ್ರಿಸುವುದು ಲೇಖಕರ ಒಂದು ವೈಶಿಷ್ಟ್ಯ. ಒಟ್ಟಾರೆ ಇದು ಸ್ಥಿತ್ಯಂತರ ಅನುಭವದ ಮತ್ತು ಪ್ರಜ್ಞೆಯ ಒಂದು ಅಭಿವ್ಯಕ್ತಿ ಹಾಗೆಯೇ ಗ್ರಾಮೀಣ ಸಮಾಜದ ಒಂದು ನಿರ್ದಿಷ್ಟ ಹೊಸ ಪ್ರಜ್ಞೆಯ ಶೋಧದ ಕೆಲಸವೂ ಆಗಿದೆ.

ಆಧುನಿಕ ಸಾಹಿತ್ಯದ ಆಸಕ್ತಿಯ ಕೇಂದ್ರ ಮನುಷ್ಯನಾಗಿದ್ದಾನೆ. ಮನುಷ್ಯನ ಭಾವನೆಗಳು, ಆಸೆಗಳು, ಕನಸುಗಳು ಕಾಲದಿಂದ ಕಾಲಕ್ಕೆ ಭಿನ್ನ ಪರಿವರ್ತನೆಯನ್ನು ಪಡೆಯುತ್ತಾ ಬಂದಿವೆ. ಇದಕ್ಕೆ ಕಾರಣ ಮನುಷ್ಯನು ತಿಳುವಳಿಕೆಗೆ ಒಳಗಾಗುವುದು. ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳು ಸಾಮಾಜಿಕವಾಗಿ, ಕೌಟುಂಬಿಕವಾಗಿ ನಾನಾ ರೀತಿಯಲ್ಲಿ ಗುರುತಿಸಿಕೊಳ್ಳುತ್ತವೆ. ಹೀಗಾಗಿ ಸ್ನೇಹ, ಪ್ರೀತಿ, ದ್ವೇಷ, ಅಸೂಯೆ, ಈರ್ಷ್ಯೆ ಮುಂತಾದ ಅಂಶಗಳೆಲ್ಲಾ ಸಾಹಿತ್ಯದ ವಸ್ತುವಿನ ಪರಿಧಿಯಲ್ಲಿ ಅನೇಕ ಆಯಾಮಗಳಲ್ಲಿ ವಿಸ್ತರಿಸಿಕೊಳ್ಳುತ್ತವೆ. ಹೀಗೆ ವಿಸ್ತರಿಸಿಕೊಳ್ಳುವ ಇವು ಆಧುನಿಕ ಮನುಷ್ಯನ ಸಣ್ಣತನ, ಗೋಸುಂಬೆತನ ಮುಂತಾದ ಹಲವುರೀತಿಯ ದೃಷ್ಟಿಯಲ್ಲಿ ಮನುಷ್ಯನ ಚಿಂತನೆಗಳು ಕಂಡುಬರುತ್ತವೆ. ಹೀಗಾಗಿ ಆಧುನಿಕ ಶಿಕ್ಷಣಕ್ಕೆ ಒಳಗಾದ ಮನುಷ್ಯ

---

೧೬. ಟಿ.ಪಿ.ಅಶೋಕ, ಸ್ಮೃತಿ ಮತ್ತು ಕೃತಿ, ಪುಟ. ೧೭೧-೧೭೨.

ಪ್ರತಿಯೊಂದು ಸನ್ನಿವೇಶವನ್ನು ಬುದ್ಧಿಪೂರ್ವಕವಾಗಿ, ಜಾಣ್ಮೆಯಿಂದ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಹೊಸ ಸಂಬಂಧವನ್ನು ಕಟ್ಟಿಕೊಳ್ಳಲು ನಿರಂತರವಾಗಿ ಶ್ರಮಿಸುತ್ತಾನೆ.

'ಮುಸ್ಸಂಜೆಯ ಕಥಾಪ್ರಸಂಗ' ಹೆಸರೇ ಸೂಚಿಸುವಂತೆ ಬದುಕಿನ ಇಳಿಗಾಲದ ಅಥವಾ ಪರಿಸರ ಕೆಡುತ್ತಿರುವ ಸೂಚನೆಯನ್ನು ಕೃತಿ ಕೊಡುತ್ತದೆ ಎಂದು ಮೇಲುನೋಟಕ್ಕೆ ಅರಿವಾದರೂ ಈ ಕೃತಿಯಲ್ಲಿ ಒಂದು ತಲೆಮಾರಿನ ತನ್ನ ಸಾಧ್ಯತೆಗಳನ್ನು ಹೊಸ ಅರಿವಿನಲ್ಲಿ ಶೋಧಕ್ಕೆ ಅಚ್ಚುವ ಮತ್ತು ಬದಲಾದ ಸ್ಥಿತಿಗೆ ಬದುಕಿನ ಬಗೆಗಿನ ದೃಷ್ಟಿಕೋನಗಳನ್ನು ಸಾಂಸ್ಕೃತಿಕ ಅಗತ್ಯತೆಯಲ್ಲಿ ಗುರುತಿಸಿಕೊಳ್ಳುವ ಅವಶ್ಯಕತೆಯನ್ನು ಲಂಕೇಶರು ಮುಖಾಮುಖಿಯಾಗಿಸಿದ್ದಾರೆ. ಕಂಬಳ್ಳಿಯ ಅವಸಾನದ ಘಟಕಗಳು ಹಲವಾರು ವಿವರಗಳಲ್ಲಿ ಚದುರಿಹೋಗಿವೆ. ಈ ಎಲ್ಲ ವಿವರಗಳನ್ನು ಒಂದುಕೇಂದ್ರಕ್ಕೆ ತಂದು ಹೇಳಲು ಪ್ರಯತ್ನಿಸುವ ಲಂಕೇಶರ ಆಶಯವು ಕಂಬಳ್ಳಿಯ ವೈವಿಧ್ಯತೆಯಂತೆಯೇ ಬಹುರೂಪಿ ನೆಲೆಯಲ್ಲಿ ಯಶಸ್ವಿಯಾಗಿದೆ. ಈ ಹಳ್ಳಿಯ ಸಾಂಸ್ಕೃತಿಕ ಗ್ರಹಿಕೆಗಳು ಯಾವುದೇ ಒಂದು ಘಟ್ಟದಲ್ಲಿ ಕೇಂದ್ರಿಕೃತವಾಗದಂತೆ ನೋಡಿಕೊಂಡಿರುವುದು ಈ ಕೃತಿಯ ಸಂಕೀರ್ಣತೆಗೆ ಸಹಾಯಕವಾಗಿದೆ. ಕಂಬಳ್ಳಿಯು ಪ್ರತಿನಿಧಿಸುವ ಮೌಲ್ಯಗಳನ್ನು ಗಮನಿಸಿದರೆ, ರಂಗವ್ವನ ಮನೆ ಆಗುಹೋಗುಗಳನ್ನು ಬೆಳೆಸಿದೆ ಮತ್ತು ನಿಯಂತ್ರಿಸಿದೆ. ಸಣ್ಣೀರಪ್ಪ ಕಾದಂಬರಿಯಲ್ಲಿ ಮೇಷ್ಟ್ರ ವೃತ್ತಿಯನ್ನು ಮಾಡಬೇಕಾದವನು ಹಳ್ಳಿಯ ವಿನಾಶದ ಕೆಲಸಕ್ಕೆ ಕೈಹಾಕಿ ಮಾಡಬಾರದ ಕೆಲಸಗಳನ್ನೆಲ್ಲಾ ಮಾಡುತ್ತಾನೆ. ಸಣ್ಣೀರಪ್ಪ ಕಾದಂಬರಿಯಲ್ಲಿ ಶಿಕ್ಷಣ ಕಲಿಸುವ ಬದಲು ಮುಖವಾಡದ ಬದುಕನ್ನು ಕಲಿಸುತ್ತಾನೆ. ಮತ್ತು ಶಿಕ್ಷಕವೃತ್ತಿಗೆ ಇರಬೇಕಾದ ಅರ್ಹತೆಗಳನ್ನು, ಮನಸ್ಥಿತಿಗಳನ್ನು ಮೀರಿ ನಿಲ್ಲುತ್ತಾನೆ. "ಇವತ್ತು ರಜಾ ಸಾರ್' ಅಂದು ಕರಿಯ ತಾನು ಸ್ಕೂಲಿನ ತೊಲೆಯಿಂದ ನೇತಾಡುವ ದೃಶ್ಯ ಕಲ್ಪಿಸಿಕೊಂಡು ಗೊಳೋ ಎಂದು ಅತ್ತ. ರಂಗವ್ವನಿಗೆ ಸಹ ಅಯ್ಯೋ ಪಾಪ ಅನ್ನಿಸಿ 'ಇಸ್ಕೂಲಿವತ್ತು ಇಲ್ಲ ಮೇಷ್ಟ್ರೇ ಇವನು ಓದಿ ಕಡಿದುಕಟ್ಟೂದು ಅಷ್ಟರಾಗೇ ಐತಿ' ಅಂದಳು.

'ಹಾಗೆಲ್ಲ ರಂಗಮ್ಮ' ಎಂದು ಸಣ್ಣೀರಪ್ಪ ರಂಗವ್ವನನ್ನು ದೊಡ್ಡ ಸುಸಂಸ್ಕೃತ ಮಹಿಳೆಯೋ ಎಂಬಂತೆ ಸಂಬೋಧಿಸಿ ಅವಳಲ್ಲಿ ವಿಶ್ವಾಸ ಹುಟ್ಟಿಸಿದ. 'ಇವನ ಮೇಲೆ ಬಾಳ ಕಂಪ್ಲೆಂಟ್ ಬಂದಿವೆ. ಅವರ ಮಾತು ಇವರಿಗೆ ಇವರ ಮಾತು ಅವರಿಗೆ ಹೇಳುತ್ತ ಭಾರೀ ತಕರಾರು ಹುಟ್ಟಿಸಿದಾವೆ' ಎಂದ".[೧೭] ಸಣ್ಣೀರಪ್ಪ ಶಿಕ್ಷಣ ಕಲಿಸಿ ವಿದ್ಯಾರ್ಥಿಗಳನ್ನು ತಿದ್ದಬೇಕಾದವನು. ಶಿಕ್ಷಣದ ಹೆಸರಿನಲ್ಲಿ ಉದ್ಯೋಗ ಗಳಿಸಿ ಅದಕ್ಕೆ ನ್ಯಾಯ ದೊರಕಿಸದೆ ಕಂಬಳ್ಳಿಯ ಸಂಕೀರ್ಣ ಚಿಂತನೆಯಲ್ಲಿ ಸಣ್ಣೀರಪ್ಪನ ಸಣ್ಣತನದ ಚಿಂತನೆ ಪರಿಸರವನ್ನು ಮತ್ತು ಮನುಷ್ಯ ಸಂಬಂಧವನ್ನು ಕುಲಗೆಡಿಸುತ್ತದೆ. ಆಧುನಿಕ ಶಿಕ್ಷಣದ ಜೊತೆಗೆ ಸಾಮಾನ್ಯ ವಿವೇಕ ಮತ್ತು ಜ್ಞಾನದ ಅಭಾವ

೧೭. ಪಿ.ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೩೭.

ಎದ್ದುಕಾಣುತ್ತದೆ. ರಂಗವ್ವನ ಒಂದು ಪ್ರಸಂಗವನ್ನು ನೋಡಬಹುದು. "ಇದೆಲ್ಲ ಬಹಳ ವಿಚಿತ್ರವಾಗಿ ಕಾಣಬಹುದಾದರೂ ಕಂಬಳ್ಳಿಯಂಥ ಒಂದು ಹಳ್ಳಿಯನ್ನು ನೋಡಿದ ಪರಿಗೆ ಹಾಗೆ ಕಾಣದಿರಲಿಕ್ಕೂ ಸಾಕು. ರಂಗವ್ವ ಬೆಳಿಗ್ಗೆ ಎದ್ದು ಕರುಬಿಟ್ಟುಕೊಂಡು ಹಾಲನ್ನು ಶಿವಮೊಗ್ಗೆಯ ಮನ್ಸೂರ ಸಾಬಿಗೆ ಕೊಟ್ಟು ಅದಕ್ಕೆ ಮೀಟರ್ ಇಟ್ಟು ಗೋಣಗಾಡಿದ ಸಾಬಿಗೆ ತಾನು ನೀರುಹಾಕಿದ್ದರೆ ತನ್ನ ಮನೆ ಹಾಳಾಗಲಿ, ಇಲ್ಲದಿದ್ದರೆ ನಿನ್ನ 'ವಂಶ ನಿರ್ವಂಸವಾಗಲಿ' ಎಂದು ಘೋಷಿಸಿದಳಾದರೂ ತಾನು ನೀರು ಹಾಕಿದ್ದು ನಿಜವಾದ್ದರಿಂದ ತನ್ನ ವಂಶ ನಿರ್ವಂಶವಾದರೆ ಗತಿಯೇನೆಂದು ಹೆದರಿದಳು; ಮತ್ತು ತನಗೆ ಗಂಡುಮಕ್ಕಳಿಲ್ಲವಾದ್ದರಿಂದ ವಂಶ ನಿರ್ವಂಶವಾದಂತೆಯೇ ಎಂಬ ಚಿಂತೆ ಕೂಡ ಬಂದು ಕಣ್ಣು ನೀರುತುಂಬಿಕೊಂಡವು".[೧೮] ಪ್ರಾಮಾಣಿಕತೆ ಇಲ್ಲದ ಪಾತ್ರಗಳು ಮಾಡುವ ರೀತಿಯನ್ನು ವ್ಯವಸ್ಥೆಯ ಹಂಗಿನಲ್ಲಿ ನಡೆಯುವ ಎಲ್ಲಾ ಮುಖವಾಡಗಳು ಮನುಷ್ಯ ಸಂಬಂಧಗಳನ್ನು ವಿಭಿನ್ನಗೊಳಿಸುತ್ತವೆ. ಈ ಘಟನೆಗಳನ್ನು ನೋಡಿದರೆ ಲೇಖಕರು ಕಲ್ಪಿಸಿಕೊಂಡ ಓದುಗನಿಗೂ ಆಧುನಿಕಪ್ರಜ್ಞೆಯ ಚಿಂತನೆಗೂ ಅನ್ಯೋನ್ಯ ಸಂಬಂಧವನ್ನು ಕಾಣಬಹುದು. ಲಂಕೇಶರ ಮಾತಿನಲ್ಲೇ ಹೇಳುವುದಾದರೆ ಅವರು ಕಲ್ಪಿಸಿಕೊಂಡ ವಾಚಕ ಮಹಾಶಯರಿಗೆ ಆನಂದದಾಯಕವಾಗಬಲ್ಲ ಕಥಾವಸ್ತುಗಳಲ್ಲಿ 'ಹಣ, ವಿದ್ಯೆ, ಜಾತಿ, ಕುಸ್ತಿ ಮತ್ತು ಪ್ರೇಮ' ಇವುಗಳಿಗೆ ಕಾದಂಬರಿಯಲ್ಲಿ ಬರುವ ಹೆಂಡ, ಹಾದರ ಹಾಗೂ ಜೂಜು ಸೇರಿಸಿದರೆ ಈ ಪಟ್ಟಿ ಸಂಪೂರ್ಣವಾಗುತ್ತದೆ. ಲೇಖಕರು ಓದುಗರ ಕೇಂದ್ರವನ್ನು ಸೂಕ್ಷ್ಮತೆಗೆ ತಳ್ಳುವ ಪ್ರಸಂಗಗಳನ್ನು ತರುತ್ತಾರೆ. ಸುಲಭವಾಗಿ ಹಾಲು ಕೊಡದ ಆಕಳು ಮಂಜ ಅದನ್ನು ಹಿಡಿದುಕೊಂಡದ್ದೇ ಏನೇನೂ ತೊಂದರೆ ಕೊಡದೆ ಹಾಲುಬಿಟ್ಟದ್ದು ಮಂಜನ ಸ್ಪರ್ಶದಿಂದಾಗಿ ಎಂದು ಓದುಗರು ತಪ್ಪು ತಿಳಿಯದಿರಲಿ ಎಂದು ಆಕಳು ಹಾಲುಬಿಟ್ಟದ್ದು ಕೆಚ್ಚಲ ಭಾರದಿಂದ ಎಂದು ವಿವರಣೆಕೊಟ್ಟು ವಾಚಕರ ತಿಳಿವು ಹೆಚ್ಚಿಸುವಂತೆ ಕಚಗುಳಿ ಇಡಬೇಕಾಗುತ್ತದೆ. ಅಂತೂ ಅತ್ಯಂತ ವಿಸ್ತೃತವಾದ, ಪ್ರಬುದ್ಧತೆಯ ಎಲ್ಲ ಸ್ತರಗಳನ್ನು ಒಳಗೊಂಡ ವಾಚಕ ವೃಂದವನ್ನು ಕಣ್ಣೆದುರು ಕುಳ್ಳಿರಿಸಿಕೊಂಡು, ಅವರೆಲ್ಲರಿಗೂ ಪ್ರಿಯವಾಗುವಂತೆ, ತುಂಬಾ ಪ್ರೀತಿಯಿಂದ ಉತ್ಸಾಹದಿಂದ ಎಲ್ಲವನ್ನೂ ವ್ಯಾಖ್ಯಾನಿಸುತ್ತ ವಾಚಕರಿಗೆ ಯೋಚನಾ ಲಹರಿಗಳನ್ನು ಹರಿಸುವ ಸ್ವಾತಂತ್ರ್ಯವನ್ನು ಕೊಟ್ಟಿರುವಾಗಲೂ ಅವರಿಗೆ ಸಂಪೂರ್ಣ ವಿಶ್ವಾಸ ಇಡುವ ಧೈರ್ಯ ಇಲ್ಲದವರ ಹಾಗೆ ಲೇಖಕ – ಶಿಕ್ಷಕರಾಗುತ್ತಾರೆ. ಎಲ್ಲ ರೀತಿಯ ಶಕ್ತಿ, ಬುದ್ಧಿವಂತಿಕೆ, ವೈಚಾರಿಕತೆಗಳಿದ್ದೂ ಬಸವರಾಜನಂಥಾ ವಿದ್ಯಾವಂತ ಯುವಕ ಇದು ನಾನು ನುಂಗಲಾರದ ಕಾಡು ಎಂದು ವ್ಯವಸ್ಥೆಯ ವಿರುದ್ಧ ಸೆಣಸಲಾರದೆ ಸೋಲೊಪ್ಪಿಕೊಳ್ಳುತ್ತಿರುವಾಗ ಇತ್ತ 'ಮುಸ್ಸಂಜೆ'ಯಲ್ಲಿ ಆಣೆ ಬಡ್ಡಿ ರಂಗವ್ವ ತನ್ನ ಮಗಳು ಸಾವಂತ್ರಿ ಮತ್ತು ಬೇಡರ ಮಂಜನ ಮದುವೆ ಮಾಡಿಸುವಾಗ ಇಡೀ ಊರಿನ ಲಿಂಗಾಯ್ತರನ್ನೆಲ್ಲಾ ಎದುರುಹಾಕಿಕೊಂಡು ಎದುರಾಳಿಗಳಿಗೆ ಕೈಯಲ್ಲಿದ್ದ

೧೮. ಪಿ.ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೩೯.

ಕುಡುಗೋಲು ತೋರಿಸಿ ತನ್ನ ಸೊಂಟದಲ್ಲಿದ್ದ ತಾಳೀಸರವನ್ನು ಮಂಜನಿಗೆ ಕೊಟ್ಟು ತನ್ನ ಮಗಳಿಗೆ ಕಟ್ಟುವಂತೆ ಹೇಳುವ ಅಷ್ಟಕ್ಕೇ ನಿಲ್ಲದೆ 'ಅದೇನಾಗುತ್ತೋ, ನೋಡ್ಕತೀನಿ ಸುಖವಾಗಿರುವ ನನ್ನ ಸುಡುಗಾಡು ಮಗಳೇ' ಎಂದು ಧಮನಿಯಲ್ಲಿ ಬಿಸಿನೆತ್ತು ಉಕ್ಕಿದಂತೆ ಪ್ರತಿಕ್ರಿಯಿಸುವ ಅನಕ್ಷರಸ್ಥ ಮಹಿಳೆ ರಂಗವ್ವ 'ಬಿರುಕು'ವಿನ ಬಸವರಾಜನಿಗಿಂತ ಹೇಗೆ ಭಿನ್ನವಾಗಿ ಕಾಣಿಸುತ್ತಾಳೆಂಬುದೇ ಲಂಕೇಶ್ ತನ್ನ ಕಾದಂಬರಿಗಳಲ್ಲಿ ಸೃಷ್ಟಿಸುವ ಆಧುನಿಕ ಶಿಕ್ಷಣವು ತರುವ ಹೊಸ ಆಯಾಮ ಮತ್ತು ಚಿಂತನೆಯಲ್ಲಿ ಮನುಷ್ಯ ಸಂಬಂಧಗಳನ್ನು ಕಾಣಬಹುದು. ಇಲ್ಲಿ ಪಾತ್ರಗಳ ಗುಣ, ಅವಗುಣ, ಶಕ್ತಿ ಮತ್ತು ದೌರ್ಬಲ್ಯಗಳು ವಿಚಾರಪ್ರಣೀತವಾಗಿರದೆ ಸಂದರ್ಭೋಚಿತವಾಗಿ ಹುಟ್ಟುತ್ತವೆಂಬ ಮನುಷ್ಯ ಶಕ್ತಿಯ ಅನನ್ಯತೆಯನ್ನು ಲಂಕೇಶರ ಕಾದಂಬರಿ ವಲಯ ಸೃಷ್ಟಿಸುತ್ತದೆ.

ಅದೇ ಉಡುಪನಂಥಾ ವಿಚಾರವಂತ ಕಂಬಳ್ಳಿಯಂಥಾ ಊರಿನಲ್ಲಿ ಮಾರ್ಕ್ಸ್‌ವಾದವನ್ನು ತರುತ್ತಾನೆ. ಅದರಲ್ಲಿ ವಿಫಲನಾದಾಗ ಲೋಹಿಯಾವಾದದ ಬೆನ್ನು ಬೀಳುತ್ತಾನೆ. ಅದೂ ಸಾಕಾಗದೇ ಹೋದಾಗ ಗಾಂಧೀವಾದದ ಮೊರೆಹೋಗುತ್ತಾನೆ. ಅಂದರೆ ಆ ಕ್ಷಣದ ಫಲಿತಾಂಶಕ್ಕೆ ಯಾವ ವಾದವನ್ನು ಅನ್ವಯಿಸಬಹುದು ಎಂಬ ಪ್ರಯೋಗಗಳನ್ನು ಮಾಡಿ ಉತ್ತರಕ್ಕಾಗಿ ಹುಡುಕಾಡುವ ಇಂಥವರ ನಡುವೆ ರಂಗವ್ವ ಮತ್ತು ದೇವೀರಿಯಂಥ ಪಾತ್ರಗಳ ಜೊತೆ ಸಂಘರ್ಷಕ್ಕೂ ಇಳಿಯುವ ಸಂಧಾನಕ್ಕೂ ನುಗ್ಗುವ ಜೆಲೆಟಿನ್ ಕಡ್ಡಿಗಳಂತೆ ಕಂಡರೂ ಆಶ್ಚರ್ಯವಿಲ್ಲ. ಲಂಕೇಶರ ಈ ಪಾತ್ರ ಸೃಷ್ಟಿಯ ಹಿನ್ನೆಲೆಯ ಪ್ರಕಾರ ಸಮಾಜಕ್ಕೊಂದು ಗುಣವಿದ್ದಂತೆ ವ್ಯಕ್ತಿಗೂ ಪ್ರೀತಿ–ದ್ವೇಷ ಎರಡೂ ಒಟ್ಟಿಗೆ ಇರುತ್ತವೆ ಎಂಬುದು ಹಾಗೆ ನೋಡಿದರೆ ತನ್ನ ಮಗಳು ಸಾವಂತ್ರಿ ಬೇಡರ ಮಂಜನೊಡನೆ ಚಕ್ಕಂದವಾಡುತ್ತಿದ್ದ ಸುದ್ದಿಕೇಳಿ ಉರಿದುಬೀಳುವ ಅವಳು ತಮ್ಮ ಶಿವನಂಜನಿಗೆ ಕೊಟ್ಟು ಮದುವೆಮಾಡಿ ಕೈತೊಳೆದುಕೊಳ್ಳುತ್ತೇನೆಂದು ಕೂಗಾಡುತ್ತಾಳೆ. ಆಗಲೂ ಇದೇ ರಂಗವ್ವ ಮಗಳ ದೃಷ್ಟಿಯಲ್ಲಿ ಕೆಟ್ಟತಾಯಿಯಾಗಿ ಕಂಗೋಳಿಸುವ ಪಾತ್ರವಾಗಿ ಕಾಣಿಸುತ್ತಾಳೆ. ಲಂಕೇಶರ ಕಾದಂಬರಿ ವಲಯ ಸೃಷ್ಟಿಸುವ ಒಟ್ಟು ಗುಣಾವಗುಣಗಳ ಪಾತ್ರಗಳ ಶಕ್ತಿಯೇ ಅಂಥಾದ್ದು. ಇಲ್ಲಿ ಬರುವ ಪಾತ್ರಗಳು ಆಯಾಕ್ಷಣಕ್ಕೆ, ಆಯಾ ಕಾಲಕ್ಕೆ ಪ್ರತಿಕ್ರಿಯಿಸುತ್ತವೆ. ಒಮ್ಮೊಮ್ಮೆ ಪಾತ್ರಗಳು ಇಲ್ಲಿ ಒಳ್ಳೆಯವರು ಕೆಟ್ಟವರಂತೆ, ಕೆಟ್ಟವರೂ ಒಳ್ಳೆಯವರಂತೆ ಭಾಸವಾಗುವ ದ್ವಂದ್ವವನ್ನು ಅನುಭವಿಸುತ್ತವೆ.

ಕರಿಯ ಶಿಕ್ಷಣವನ್ನು ಸರಿಯಾಗಿ ಕಲಿತಿದ್ದರೆ ಭರ್ಮಣ್ಣನ ಅವ್ಯವಹಾರದಲ್ಲಿ ಭಾಗಿಯಾಗಬಾರದು ಎಂಬ ಪ್ರಜ್ಞೆ ಅವನಲ್ಲಿರುತ್ತಿತ್ತು. ಅದೇ ರೀತಿ ಸಣ್ಣೀರಪ್ಪ ವಿದ್ಯಾಧಾನ ಸರಿಯಾಗಿ ಮಾಡಿದರೆ ಕಂಬಳ್ಳಿಯನ್ನು ವಿದ್ಯಾವಂತರ ಮಾದರಿಯ ಊರನ್ನಾಗಿ ತಯಾರಿಸಬಹುದಿತ್ತು. ಕರಿಯ ಸರಿಯಾಗಿ ಶಾಲೆಗೆ ಹೋಗದೆ ಆಧುನಿಕ ಶಿಕ್ಷಣದಿಂದ

ವಂಚಿತನಾಗಿ ಅನ್ಯಮಾರ್ಗಕ್ಕೆ ಬಲಿಯಾಗುತ್ತಾನೆ. "ಸ್ಕೂಲಿನ ಎದುರು ಸ್ವಲ್ಪ ಹೊತ್ತು ನಿಂತ ಒಳಗೆ ಮೇಷ್ಟ್ರು ನಿಂತು ಸ್ಕೂಲಿನಿಂದ ಮೈಲಿಯವರಿಗೆ ಕೇಳಿಸುವಂತೆ ಪಾಠ ಹೇಳುತ್ತಿದ್ದ. ಸ್ಕೂಲಿನ ಎದುರಿನ ತೋಟದ ಗಿಡಗಳ ಮೂಲಕ ಮೇಷ್ಟ್ರ ಕಪ್ಪುಕೋಟು ಮತ್ತು ವೀರಾವೇಶದಿಂದ ಅಲ್ಲಾಡುತ್ತಿದ್ದ ಕೈಗಳು ಅವನಿಗೆ ಕಾಣಿಸಿದವು. ಸ್ಕೂಲಿಗೆ ಹೋಗದ ತಪ್ಪು ಕರಿಯನಲ್ಲಿದ್ದುದರಿಂದ ಒಳಗೆ ಹೋಗಿ ಓಸಿಯ ಫಲಿತಾಂಶ ಕೇಳುವ ಧೈರ್ಯ ಮಾಡುವಂತಿರಲಿಲ್ಲ. ತನಗೂ ಮೇಷ್ಟ್ರಿಗೂ ಮನುಷ್ಯ ಸಹಜ ಸಂಬಂಧ ಸಾಧ್ಯವೇ ಇಲ್ಲವೆನ್ನಿಸಿ ಅಲ್ಲಿಂದ ಗುತ್ಯವ್ವನ ಮನೆಗೆ ಹೋದ. ಗುತ್ಯವ್ವ ಒಳಗಿರಲಿಲ್ಲ. ಪಾರೋತಿಮಾತ್ರ ನಡುಮನೆಯಲ್ಲಿಯೇ ಒಂದು ಮಗ್ಗುಲಿಗಿದ್ದ ಹಕ್ಕಿಯಲ್ಲಿಯೇ ಕಸತೆಗೆಯುತ್ತಿದ್ದಳು – 'ಇಸ್ಕೂಲಿಗೆ ಹೋಗ್ಲಿಲ್ಲವಾ'? ಅಂದ ಕರಿಯ ಎರಡು ದಿನ ಸರಿಯಾಗಿ ಊಟ ಮಾಡದಿದ್ದ ಅವನ ಧ್ವನಿ ಕಾಗೆ ಮಾತಾದಂತಿದ್ದು ಪಾರೋತಿ ಬೆಚ್ಚಿ "ಇಲ್ಲೇನು ಮಾಡುತ್ತಿದ್ಯೋ ಮಂಗ' ಎಂದಳು. ಅವನ ಮುಖ ನೋಡಿದೊಡನೆ ಪಾಪ ಅನ್ನಿಸಿತು ಅವಳಿಗೆ"[೧೯] ಹನುಮಕ್ಕ ನೊಂದು ಮಗ ಓದದೆ ಹಾಳಾಗುತ್ತಿರುವ ಮಗನನ್ನು ನೆನೆದು ಕಣ್ಣೀರು ಹಾಕಿದಳು. ಕರಿಯನ ಬದುಕು ಹಾಳಾಗುತ್ತಿರುವುದರ ಜೊತೆಗೆ ದೊಡ್ಡವರ ಸಂಗ ಮಾಡಿ ಕಾಸುಮಾಡಿ ಹಾಳಾಗುತ್ತಿರುವುದು ಸಹಿಸಲಾಗದಾಯಿತು. ಕರಿಯ ವಯಸ್ಸಿನಲ್ಲಿ ೧೫ ದಾಟಿರಲಿಲ್ಲ. ಆದರೆ ಅವನು ಮಾಡುತ್ತಿದ್ದ ಕೆಲಸಗಳು ವಯೋಮಾನವನ್ನು ಮೀರಿದ್ದುವುಗಳೇ ಹಾಗಿದ್ದವು. ಕಾರಣ ಕಂಬಳ್ಳಿಯ ಸಾಮಾಜಿಕ ಪರಿಸರ ಮತ್ತು ಭರ್ಮಣ್ಣನಂತಹ ಸ್ವಾರ್ಥ ಸಾಧಕರ ತಿಳುವಳಿಕೆಯು ಕರಿಯನಂತಹ ಮುಗ್ಧ ಯುವಕ ಹಾಳಾಗಲು ಕಾರಣವಾಯಿತು.

ಆಧುನಿಕ ಶಿಕ್ಷಣವು ಬದಲಿಸಿದ ಸಂಗತಿಗಳು ಸಕರಾತ್ಮಕವಾಗಿಯೂ ಇವೆ, ನಕಾರಾತ್ಮಕವಾಗಿಯೂ ಇವೆ. ಇವುಗಳ ಸಂಘರ್ಷದಿಂದ ಸಾವಂತ್ರಿ–ಮಂಜರ ವಿಷಯದಲ್ಲಿ ಜಾತ್ಯಾತೀತ ಮನೋಭಾವವನ್ನು ತಳೆಯುವುದು ಧನಾತ್ಮಕ ಅಂಶವಾದರೆ ಕರಿಯ, ಸಣ್ಣೀರಪ್ಪನ ಅನ್ಯಕಾರ್ಯಗಳು ವ್ಯತಿರಿಕ್ತವಾಗಿ ಋಣಾತ್ಮಕವಾಗಿ ಕಾಣುತ್ತವೆ. ಮನುಷ್ಯ ಸಂಬಂಧವನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ಆಧುನಿಕ ಶಿಕ್ಷಣದ ಪಾತ್ರ ಮುಖ್ಯವಾದುದು. ಲಂಕೇಶರು ಬದಲಾವಣೆಯ ನೆಲೆಯಲ್ಲಿಯೇ ವಾಸ್ತವೀಕರಿಸಿ ವಿಶ್ಲೇಷಿಸಲು ಯತ್ನಿಸಿದರೂ ಹಾಗಾಗ ಆಧುನಿಕ ಶಿಕ್ಷಣದ ಪ್ರಭಾವದಿಂದ ಕಂಬಳ್ಳಿಯಲ್ಲಿ ನಡೆದ ಘಟನೆಗಳ ವಿವರವನ್ನು ಕಾದಂಬರಿಯಲ್ಲಿ ವಿವರಿಸಿದ್ದಾರೆ.

ಮೂಲತಃ ಪಿ.ಲಂಕೇಶರ ಬರವಣಿಗೆಯನ್ನು ನವ್ಯದ ತಾತ್ವಿಕ ತಳಹದಿಯಮೇಲೆ ಕಟ್ಟಲಾಗಿದೆ ಎಂದು ಸಮಕಾಲೀನ ಕನ್ನಡ ವಿಮರ್ಶೆ ಅಭಿಪ್ರಾಯಪಡುತ್ತದೆ. ಹಾಗೆ ನೋಡಿದರೆ ಲಂಕೇಶರ ಕಥಾನಕಗಳು ನವ್ಯಕಾಲದ ಹೊಸ ತಿಳುವಳಿಕೆಗಳಾದ ಮನುಷ್ಯನ ಏಕಾಂಗಿತನ,

---

೧೯. ಪಿ.ಲಂಕೇಶ್, ಮುಸ್ಸಂಜೆಯ ಕಥಾಪ್ರಸಂಗ, ಪುಟ. ೯೯.

ಅಸಹಾಯಕತೆ, ಭ್ರಮೆ, ಕನಸು, ಜಾತಿ, ವರ್ಗ, ಪ್ರೇಮ–ಕಾಮ, ಹಣ, ಮೋಜು – ಮಸ್ತಿಗಳನ್ನು ಕಟುವಾಗಿ ಟೀಕಿಸಿದೆ. ಮನುಷ್ಯತ್ವವನ್ನು ಅನಾವರಣಗೊಳಿಸಿದೆ. ಸಮಕಾಲೀನ ಸಮಾಜದ ಸಾಮಾಜಿಕ ಚಿಂತನೆಯಲ್ಲಿ ನಕಲಿಯಲ್ಲದ ಅಸಲೀಯತ್ತಿನ ಸ್ವಭಾವ ಜನ್ಯ. ಜೀವಪರವಾದ ತಿಳಿವಳಿಕೆ ಲಂಕೇಶರ ಕಥಾನಕಗಳ ಸ್ಥಾಯಿಭಾವ ಮನುಷ್ಯಮುಖಿ ಚಲನಶೀಲತೆ ಅವರು ಗುರುತಿಸಿದ ಬದುಕಿನ ಸಂಚಾರಿಭಾವವಾಗಿ ಇಲ್ಲಿ ಉಲ್ಲೇಖಗೊಳ್ಳುತ್ತದೆ. ಅಂದರೆ ಮನುಷ್ಯ ಸಮಾಜದಿಂದ ಹೊರತಾದುದನ್ನು ಲಂಕೇಶ್ ತಮ್ಮ ಕಥಾನಕಗಳಲ್ಲಿ ಸ್ಪರ್ಶಿಸುವುದೇ ಇಲ್ಲ.

ಕೊಳಗೇರಿಯ ಮನುಷ್ಯ ಮಾದರಿಗಳ ಪಾತ್ರ ಸಣ್ಣತನಗಳನ್ನು ಅಸಹಾಯಕತೆಗಳನ್ನು ಕಥೆಯಾಗಿಸುವ 'ಅಕ್ಕ' ಲಂಕೇಶರ ನವ್ಯದ ತಾತ್ವಿಕ ತಿಳುವಳಿಕೆಯಾದ ವೈಯಕ್ತಿಕತೆಯ ವ್ಯಸನದಲ್ಲಿ ಬಳಲುವುದಿಲ್ಲ. ಬದಲಿಗೆ ಇಡೀ ಕಥೆಯ ಹೂರಣವನ್ನು ವೈಯಕ್ತಿಕ ಬದುಕಿನಿಂದ ಸಾಮಾಜಿಕ ಚೌಕಟ್ಟಿನ ಪ್ರಜ್ಞೆಯಲ್ಲಿ ಕಾಣಿಸುತ್ತಾರೆ. ಹಾಗೆಯೇ ಕಟ್ಟುವುದರಲ್ಲೇ ಅದರ ವಿಶೇಷತೆಯಿದೆ. ದಲಿತ ಬಂಡಾಯದ ತಾತ್ವಿಕ ವಿನ್ಯಾಸಗಳು ತಲೆಯೆತ್ತುತ್ತಿದ್ದ ಸಂಕ್ರಮಣ ಕಾಲದಲ್ಲೇ 'ಅಕ್ಕ' ಕಾದಂಬರಿ ಬಂದುದ್ದರಿಂದ ಎಲ್ಲೂ ಕೂಡ ಗೊಂದಲಕ್ಕೊಳಗಾಗದೆ ಸಾಂಕೇತಿಕತೆಯ ಮೂಲಕ ವಾಸ್ತವ ವಿವರಗಳನ್ನು ಕಟ್ಟುತ್ತಾ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕಿನ ತಲ್ಲಣಗಳನ್ನು ವಾಸ್ತವವಾಗಿ ಚಿಂತನೆಯ ಪ್ರತೀಕಗಳಂತೆ ಸೃಷ್ಟಿಸುತ್ತಾರೆ. ಕಥೆಗಾರ ಕ್ಯಾತ ಕೂಡ ತನ್ನ ಅರಿವನ್ನು (ಜ್ಞಾನ) ವಿಸ್ತರಿಸಿಕೊಂಡ ನಂತರವೇ ಇಲ್ಲಿ ಕಥೆ ಹೇಳುತ್ತಾನೆಯಾದರೂ ತಾನು ಸಹ ವಿಸ್ತಾರವಾದ ತನ್ನ ಜ್ಞಾನಶಾಖೆಗಳ ಅರಿವಿನ ಪರಿಣತಿಯನ್ನು ಕಥಾನಕದಲ್ಲಿ ತೋರಿಸುವುದಿಲ್ಲ. ಹಾಗಾಗಿ ಕೃತಿ ಶರೀರದ ಸಹಜವಿಕಾಸಕ್ಕೆ ಇಲ್ಲಿ ಅವಕಾಶವಿದೆ. ಕೊಳಗೇರಿಯ ಮನುಷ್ಯ ಮಾದರಿಯ ಚಿತ್ರಣ ಯಥಾವತ್ತಾಗಿ ಚಿತ್ರಿತಗೊಂಡಿದೆ.

ಕಥನಕ್ರಿಯೆಯ ಕೇಂದ್ರಪಾತ್ರಗಳೆಂದರೆ ಕ್ಯಾತ, ದೇವೀರಿ ಸಾಮಾನ್ಯವಾಗಿ ಕಾದಂಬರಿ ಪ್ರಕಾರದ ಕಥನಕ್ರಿಯೆಗಳು ಕಟ್ಟುವಿಕೆಯ ಕ್ರಮದಲ್ಲಿ ಲೇಖಕರು ಆರಿಸಿಕೊಂಡ ವಸ್ತುವಿನ ವಿನ್ಯಾಸಕ್ಕೆ ಹೆಚ್ಚಿನ ಆದ್ಯತೆಗಳನ್ನು ಕೊಡುವ ಹಲವು ಕಾದಂಬರಿಗಳನ್ನು ನಾವು ಗ್ರಹಿಸಿದ್ದೇವೆ. ಆದರೆ ಇಲ್ಲಿ ಕಥನ ಕ್ರಿಯೆಯನ್ನು ಬೆಳೆಸುವ ಜೊತೆಗೆ ಪಾತ್ರ ವೈಶಿಷ್ಟ್ಯಕ್ಕೆ ಪಕ್ಕಾದಂತೆ ಕೊಳಗೇರಿಯ ಬದುಕಿನ ವಿವರಗಳನ್ನು ನಿರ್ವಂಚನೆಯಿಂದ ಕಥಿಸಿಕೊಳ್ಳುವ ಉತ್ಪಾದಕತೆಯನ್ನು ಲಂಕೇಶರು ಶೋಧಿಸುತ್ತಾರೆ. ಕ್ಯಾತ ಕಥೆ ಹೇಳಲು ಪ್ರಾರಂಭಿಸಿದೊಡನೆ ಕೊಳಗೇರಿಯ ಬದುಕು ಎಷ್ಟು ನರಕ ಸದೃಶವಾದುದೆಂದು ಅಲ್ಲಿ ಏನೂ ಇಲ್ಲವೆಂದು ಅಲ್ಲಿ ಬದುಕುವವರೆಲ್ಲರೂ ಎಲ್ಲವನ್ನು ಕಳೆದುಕೊಂಡ ನಿರ್ಗತಿಕರೆಂದು ಬಿಂಬಿಸಿ ಆ ಇಡೀ ಕಥನ ಮಾದರಿಗೆ ಆಧುನಿಕತೆಯ ಸ್ಪರ್ಶ ನೀಡಿ ಓದುಗರಲ್ಲಿ ಕರುಣೆ, ಮಮಕಾರಗಳನ್ನು ಹುಟ್ಟು ಹಾಕಿದರೆ ಇನ್ನೊಂದೆಡೆ ಕಾದಂಬರಿಯನ್ನು ಓದಿ ಮುಗಿಸುವಷ್ಟರಲ್ಲಿ ದೇವೀರಿ ಕ್ಯಾತ ಪದ್ದಿಯರು ಹೃದಯಕ್ಕೆ ಲಗ್ಗೆ ಇಡುವ ಹಾಗೆ ತಮ್ಮ ಕಥಾ

ನಿರೂಪಣೆಯ ಭಾಷೆಯ ಮೂಲಕ ಅನಾಮತ್ತಾಗಿ ಓದುಗನಿಗೆ ಕಥೆಯನ್ನು ತಾಗಿಸಿಬಿಡುತ್ತಾರೆ. ಇದು ಕಥೆಗಾರರ ನಿರೂಪಣಾ ತಂತ್ರ. ಆಧುನಿಕ ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧವನ್ನು 'ಅಕ್ಕ' ಕಾದಂಬರಿಯಲ್ಲಿ ನೋಡಬಹುದು. ಶಿಕ್ಷಣ ಎಂಬುದು ಎಲ್ಲರ ಪ್ರಜ್ಞೆಯನ್ನು ಎತ್ತರಕ್ಕೆ ಕೊಂಡೊಯ್ಯುವ ಪ್ರಜ್ಞಾಮಾರ್ಗವಾಗಿದೆ. ಕಾದಂಬರಿಯಲ್ಲಿ ದೇವೀರಿ ಕ್ಯಾತನ ಓದಿಸಲು ಅವನನ್ನು ದೊಡ್ಡ ಉದ್ಯೋಗಕ್ಕೆ ಕಳುಹಿಸಲು ದೊಡ್ಡ ಕನಸನ್ನು ಹೊಂದಿರುತ್ತಾಳೆ. "ಹರಿದುಹೋದ ಪುಸ್ತಕದ ಮೇಲೆ ಓದುವವನಂತೆ ಬಗ್ಗಿದ್ದರೂ ಕ್ಯಾತನಿಗೆ ಹರಿದ ಜಾಗ ಮಾತ್ರ ಕಾಣುತ್ತಿತ್ತೇ ಹೊರತು ಅಕ್ಷರಗಳ ಅರ್ತವಾಗುತ್ತಿರಲಿಲ್ಲ. ಸುಮ್ಮನೆ ಹರಕಲು ಪಾರ್ಟಿನ ಜೀವವನ್ನು ತೊಡೆಯಮೇಲೆ ಹಾಕಿಕೊಂಡು ಮಲಗಿದ್ದ ಕ್ಯಾತನನ್ನು ಅಕ್ಕ ಬಡಿದು ಎಬ್ಬಿಸಿದ್ದಳು. 'ಎದ್ದು ಓದಿಕೊಳಲೇ ಬೋಸುಡಿಮಗನೆ' ಎಂದು ಆಕೆ ಬೈದಾಗ ಎದ್ದು ನೋಡಿದ"[೨೦] ದೇವೀರಿಗೆ ಕ್ಯಾತ ಶಿಕ್ಷಣವನ್ನು ಪಡೆಯಬೇಕು ಓದಬೇಕು ಎನ್ನುವ ಹಂಬಲವಿತ್ತು. ಕ್ಯಾತನನ್ನು ಶಾಲೆಗೆ ಸೇರಿಸಲು ದೇವೀರಿ ಶ್ರಮಿಸಿರುತ್ತಾಳೆ. ಅದನ್ನು ನೋಡುವುದಾದರೆ "ಈ ಕ್ಯಾತನ್ನ ಕಟ್ಟಿಕೊಂಡು ಅವತ್ತು ಕಾರ್‍ಮೆಂಟ್ ಹುಡುಕುತ್ತಾ ಹೋದ್ಲು, ಸುತ್ತಸುತ್ತಿ ಇಬ್ಬರಕಾಲೂ ಬಿದ್ದೋದ ಮೇಲೆ ಸಿಕ್ತು ಆ ಸತ್ಯನಾರಾಯಣನ ಸ್ಕೂಲು, ದೇವೀರಿ ನನ್ನ ಹೆಗಲಿಗೆ ಚೀಲಹಾಕಿ ಒಳಗೆ ಕರಕೊಂಡು ಹೋದ್ರೆ ಯಾರೊಬ್ರೂ ಮಾತುಸೈತ ಆಡಿಸ್ಲಿಲ್ಲ ಸಾರ್. ಹೆಡ್‌ಮಾಸ್ತರು ಸತ್ಯನಾರಾಯಣ ಬೆಳ್ಳಗೆ ಬಟ್ಟೆ ಹಾಕಿ ತಳತಳ ಹೋಳೀತಿದ್ದ ಹುಡುಗ್ರು ಮತ್ತು ಅವರ ಹೆತ್ತವರ ಹತ್ರ ಮಾತಾಡ್ತಿದ್ದ. ನಮ್ಮನ್ನ ಮಾತು ಸೈತ ಆಡಿಸ್ಲಿಲ್ಲ. ಸಂಜೆ ಯಾರ ಮ್ಯಾಲೆ ದೇವೀರಿ ಧೈರ್ಯಮಾಡಿ 'ನನ್ನ ತಮ್ಮನ ಸೇರಿಸ್ಕಳ್ಳಿ ಇಸ್ಕೂಲಿಗೆ' ಅಂದಳು. ಸತ್ಯನಾರಾಯಣ ನಕ್ಕು 'ಹೋಗೇ ಇಲ್ಲಿಂದ ಹೊರ್‍ಹೋಗೆ' ಅಂದ. ಫೀಸು ಇಷ್ಟಾಗುತ್ತೆ ಅಂಗಿ ಚಡ್ಡಿಗೆ ಇಷ್ಟಾಗುತ್ತೆ ಸ್ಕೂಲಿಗೆ ದಾನ ಇಷ್ಟಾಗುತ್ತೆ ಬಂದ್ಬಿಟ್ಳು ಬಜಾರಿ, ಹೋಗೇ ಇಲ್ಲಿಂದ ಅಂತ ಕೂಗಿಬಿಟ್ಟ ಸಾರ್, ಈ ಸೂಳೇಮಗನ ಸ್ಕೂಲಿಗೆ ತನ್ನ ತಮ್ಮನ್ನ ಸೇರಿಸ್ತೀನಿ ಅಂತ ಹಠ ಹಿಡಿದುಬಿಟ್ಳು ದೇವೀರಿ. ಕಾಲಿನಕಡಗ, ಕೆನ್ನೇಸರಾನ ಅಡಾ ಇಟ್ಟು ರಾಮಪ್ಪನ ಕಂಡು ಸತ್ಯನಾರಾಯಣನಿಗೆ ಹೇಳಿಸಿದ್ಲು. ಅವತ್ತೇ ಈ ಸತ್ಯ ನಾರಾಯಣ ತನ್ನ ರಾಗ ಬದಲಿಸಿದ ನೋಡಿ ನಂಗೊಂದೊಂದು ಸಲ ಅನ್ನಿಸಿದೆ. ನೋಡಾಕೆ ಸೈತ ಈ ಸತ್ಯನಾರಾಯಣ ನರಸಿಂಹ ಮೇಸ್ತ್ರೀ ಥರ ಅದಾನ ಇವನ ಸ್ಕೂಲು ಅಂದ್ರೆ ನಂಗಾಗಲ್ಲ ನನ್ನ ವಯಸ್ಸು ಕೇಳಿ ನಕ್ಕುಬಿಟ್ಟ ಸೂಳೆಮಗ. ಒಂಬತ್ತು ವರ್ಸದ ಹುಡುಗನ್ನ ಮೊದಲನೇ ಕ್ಲಾಸಿಗೆ ಸೇರಿಸ್ಕಂಡ ರಾಮಪ್ಪ ಹೇಳಿದ್ರೆ ಏನ ಮಾಡಾಕೂ ಈ ಸತ್ಯನಾರಾಯಣ ರೆಡಿಸಾರ್, ಆಮೇಲೆ ನಂಗೆ ಗೊತ್ತಾತು.

---

೨೦. ಪಿ.ಲಂಕೇಶ್, ಅಕ್ಕ, ಪುಟ. ೪.

ಇಲ್ಲಿಯ ಮೇಡಂಗಳಿಗೆ ಈ ಸತ್ಯನಾರಾಯಣನ್ನ ಕಂಡ್ರೆ ಆಗಲ್ಲ. ಯಾವಾಗ್ಲೂ ಪಿಸಪಿಸ ಬೈತಾರೆ ಅವನ್ನ. ಅದೆಲ್ಲ ನಂಗ್ಯಾಕೆ ಸಾರ್. ಆದ್ರೆ ದೇವೀರಿ ಅವತ್ತು ನನ್ನ ಸ್ಕೂಲಿಗೆ ಸೇರಿಸಿದ್ಲು. ಆಕೆ ತಾನೇ ಅಕ್ಕ ಅಂತ ಹೆಬ್ಬೆಟ್ಟಿನ ಗುರ್ತು ಹಾಕಿದ್ಲು. ಇಷ್ಟೆಲ್ಲ ಅವಮಾನವಾದ್ರೂ ತನ್ನ ತಮ್ಮ ಓದ್ತಾನೆ ಅಂತ ಒಂತರಾ ಖುಷಿಯಾಗಿದ್ದದ್ದು ಮರಿಯಾಕಾಗಲ್ಲ. ಆದ್ರೆ ನಾನೆಷ್ಟು ಕೆಟ್ಟವನು. ಆಕೆಗೆ ಬರಿ ಸುಳ್ಳು ಹೇಳಿ ಓದೋದ್ರಿಂದ ತಪ್ಪಿಸ್ಕಂಡೆ. ಮೊದಲು ಗಿರೀಶ, ಜಯಂತ, ರಾಜು ಮುಂತಾದವರು ನನ್ನ ಜೊತೆಗೆ ಓದ್ತಿದ್ರೆ ಆಮೇಲೆ ಬಾಲಾಜಿ, ಮಂಜು, ಶ್ರೀಧರ ಇವರೆಲ್ಲ ನನ್ನ ಜೊತೆಗೆ ಓದ್ತಿದ್ರು. ಈಗ ಸುಧೀರ, ಶಂಕ್ರ ಇವರೆಲ್ಲ ಓದ್ತಿದಾರೆ. ನಾನಂತೂ ಅದೇ ಕ್ಲಾಸು ನನ್ನ ಪುಸ್ತಕಾನು ಅವೇ. ದೇವೀರಿ ಪುಸ್ತಕಕ್ಕೆ ಅಂತ ಕೊಟ್ಟ ಕಾಸೆಲ್ಲ ಗೋಲಿ ಆಡಿದೆ ಸಾರ್. ನಾನು ನಮ್ಮಕ್ಕನಿಗೆ ಸುಳ್ಳು ಹೇಳ್ತಿನಲ್ಲ. ನನ್ನಂತ ಕಂತ್ರಿ ನನಮಗ ಯಾರಿದಾರೆ ಸಾರ್?"[೨೧]

ಇಲ್ಲಿ ಸತ್ಯನಾರಾಯಣ ಶಿಕ್ಷಣ ವ್ಯವಸ್ಥೆಯ ಪ್ರತೀಕವಾಗಿ ಕ್ಯಾತ ನಿಲ್ಲುತ್ತಾನೆ. ದೇವೀರಿ ತಮ್ಮನಿಗೆ ಶಿಕ್ಷಣವನ್ನು ಕೊಡಿಸಲು ಹೆಣಗಾಡುವ ರೀತಿ ಕ್ಯಾತನ ವಾರಗೆಯವರು ಕಲಿಯುವ ಶಿಕ್ಷಣ ವ್ಯವಸ್ಥೆಗೆ ಕ್ಯಾತನನ್ನು ಸೇರಿಸಿ ಅವನನ್ನು ವಿದ್ಯಾವಂತನನ್ನಾಗಿ ಮಾಡಬೇಕು ಎಂಬ ಹಂಬಲ ದೇವೀರಿಯ ಮನೋ ಅಂತರಂಗದಲ್ಲಿ ಇತ್ತು. ಶಿಕ್ಷಣವನ್ನು ಪಡೆದರೆ ಕ್ಯಾತ ಬಲಿಷ್ಠನಾಗುತ್ತಾನೆಂಬ ನಂಬಿಕೆ ದೇವೀರಿಯದು. "ದೇವೀರಿ ಕುಂತು ಅದ್ಯಾವುದೋ ಗೊಂಬೆಯ ಪುಸ್ತಕ ನೋಡ್ತಿದ್ಲು. ಆಕೆಗೆ ಓದಾಕೆ ಬರಲ್ಲ. ಒಲೆಮ್ಯಾಲೆ ಅಕ್ಕಿ ಬೇಯ್ತಿತ್ತು. ಕ್ಯಾತನ್ನ ಕಂಡಕೂಡ್ಲೆ ಒಂದೇ ಒಂದ್ಸಲ ನೋಡಿ, ಕೈಯಲ್ಲಿ ಸ್ಕೂಲಿನ ಬ್ಯಾಗು ಇಲ್ಲದ್ದಕ್ಕೆ ಕೊಂಚ ಹುಬ್ಬು ಗಂಟುಹಾಕಿದ್ಲು ಅವಳಿಗ್ಯಾಕೆ ಸಿಟ್ಟು ಬರುತ್ತೆ ಅಂತ ಕ್ಯಾತನಿಗೆ ಗೊತ್ತು. ಇಸ್ಕೂಲ್ ಅಂದ್ರೆ ಬಲೆ ಇಸ್ಟ ಆಕೆಗೆ ಈ ತಮ್ಮನು ಕಾರ್ಮೆಂಟ್‌ನಲ್ಲಿ ಓದಿ ಪಟಪಟ ಇಂಗ್ಲೀಷ್ ಮಾತಾಡಿ ಪರಪಂಚಾನೇ ಗೆದ್ದುಬಿಡಬೇಕು ಅಂತ ಆಸೆ ದೇವೀರಿಗೆ. ಆಕೆಯ ಆಸೆಗೆ ತಕ್ಕ ತಮ್ಮ ಈ ನನ್ಮಗ ಕ್ಯಾತ, ಸಲೀಸಾಗಿ 'ಅದ್ಯಂತದೋ ಸಾಬರಹಬ್ಬ ಇವತ್ತು ರಜಕಣಕ್ಕ' ಅಂತ ರೀಲುಬಿಟ್ಟ ದೇವೀರಿ ಗೊಂಬೆ ನೋಡ್ತಾನೆ ಇದ್ಲು"[೨೨] ಕ್ಯಾತ ತನ್ನ ಪರಿಸರವನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತ ತನ್ನೊಳಗೇ ಪ್ರತಿಕ್ರಿಯೆ ವರ್ತುಲವನ್ನು ಸಿದ್ದಪಡಿಸಿಕೊಳ್ಳುತ್ತಾನೆ. ವ್ಯಕ್ತಿಗತವಾಗಿ ಪ್ರಬಲವಾಗುವ ಆಶಯವೇ ಕ್ಯಾತನ ಪರಿಸರದ ಪ್ರಧಾನ ಗುಣವಾದುದರಿಂದ ಶಿಕ್ಷಣದ ಬಗೆಗೆ ಅವನ ಅಸಡ್ಡೆಯನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿದೆ. ಜತೆಗೆ ಕ್ಯಾತನ ಕೌಟುಂಬಿಕ ಆವರಣವು ದೇವೀರಿಗೇ ಸೀಮಿತವಾದುದರಿಂದ, ಆಕೆ ತನ್ನ ಬದುಕನ್ನು ನಿರ್ಮಿಸಿಕೊಳ್ಳುವುದರಲ್ಲೇ ಎಲ್ಲಾ ಸಮಯವೂ ಕಳೆದುಹೋಗುವುದರಿಂದ ತಮ್ಮನು ಓದಿದೊಡ್ಡ ಅಧಿಕಾರಿಯಾಗಬೇಕೆಂಬ ಆಸೆಯಿದ್ದರೂ ಅವನ

---

೨೧. ಅದೇ., ಪುಟ. ೨೩-೨೪.
೨೨. ಪಿ.ಲಂಕೇಶ್, ಅಕ್ಕ, ಪುಟ. ೩೬.

ಬಗೆಗಿನ ಕೌಟುಂಬಿಕ ಜವಾಬ್ದಾರಿ ಮತ್ತು ತನ್ನ ನಡತೆಯನ್ನು ಕ್ಯಾತ ಸೂಕ್ಷ್ಮವಾಗಿ ಅರಿತವನಾಗುತ್ತಾನೆ.

'ಅಕ್ಕ' ಕ್ಯಾತನ ಆತ್ಮರತಿಯೂ ಅಲ್ಲ; ನೇರ ಸರಳರೇಖೆಯ ಕಥಾನಕವೂ ಅಲ್ಲ. ಹಾಗೆ ನೋಡಿದರೆ ಇಲ್ಲಿ ಕಥೆಯೇ ಇಲ್ಲ. ಇಲ್ಲಿರುವುದು ಕೇವಲ ಘಟನೆಗಳು. ಕೆಲವು ದೃಶ್ಯಗಳು ಮತ್ತು ಕ್ಯಾತನ ಗೊಂದಲಗಳು. ಹಾಗಾಗಿ ಇದನ್ನು ಸಾಂಪ್ರದಾಯಿಕ ವಾಸ್ತವವಾದೀಕಾದಂಬರಿ ಎಂದಾಗಲೀ, ನವ್ಯ ಕಾದಂಬರಿ ಎಂದಾಗಲೀ ಓದಿದರೆ ಕೃತಿಯ ಅನುಭವಪೂರ್ಣವಾಗಿ ದಕ್ಕಲಾರವು. ಹಾಗೆಂದು 'ಅಕ್ಕ' ಕೆಲವು ಮನಕರಗಿಸುವ ರೋಚಕ ಮತ್ತು ಹಾಸ್ಯಭರಿತ ಘಟನೆಗಳ ಸಂಕಲನವೆಂದು ಸರಳೀಕರಿಸಲು ಬರುವುದಿಲ್ಲ. ಬರೇ ಕಾರ್ಯ ಕಾರಣ ಸಂಬಂಧದ ತರ್ಕವನ್ನು ಕಾದಂಬರಿ ಬಿಟ್ಟುಕೊಟ್ಟಿದೆ. ಹಾಗೆಂದು ಈ ಎಲ್ಲ ವಿವರಗಳನ್ನು ಒಂದು ಕಾಣ್ಕೆಗೆ ಬಂಧಿಸುವ ಏಕಸೂತ್ರತೆ ಇಲ್ಲದಿಲ್ಲ. ಕೊಳಗೇರಿಯ ಗಬ್ಬು, ಹಿಂಸೆ, ಕೊಳಕು, ದಾರಿದ್ರ್ಯ ಸಣ್ಣಪುಟ್ಟ ಸಂಭ್ರಮ ಎಲ್ಲವನ್ನು ಕಾದಂಬರಿ ದಾಖಲುಮಾಡುತ್ತದೆ. ಇಲ್ಲಿನ ಮನುಷ್ಯ ಸಂಬಂಧಗಳ ಒಂದು ಸಂಕೀರ್ಣ ಜಾಲವನ್ನೇ ನಮ್ಮಮುಂದೆ ತೆರೆದಿಡುತ್ತದೆ. ವ್ಯಕ್ತಿ ವಿಶಿಷ್ಟ ಅಂಶಗಳನ್ನು ಸೂಕ್ಷ್ಮವಾಗಿ ಗುರುತಿಸುವಂತೆ ಒಂದು ಸಮುದಾಯವಾಗಿ ಇತರ ಸ್ಥಿತಿ ಸಾಧ್ಯತೆಗಳ ನೋಟವನ್ನು ನೀಡುತ್ತದೆ. ಅಲ್ಲದೆ ಈ ಕೊಳಗೇರಿ ಒಂದು ಸ್ವಯಂಪೂರ್ಣ ಜಗತ್ತೇನಲ್ಲ ಸಿನಿಮಾ, ರಾಜಕೀಯ, ಚುನಾವಣೆ, ಕಂಟ್ರಾಕ್ಟ್, ಕುದುರೆ ಜೂಜು, ಕಾನ್ವೆಂಟ್, ಕಾರ್ಪೋರೇಷನ್ ಹೀಗೆ ಹೊರಜಗತ್ತಿನೊಂದಿಗೆ ನಿತ್ಯ ಸಂಪರ್ಕದಲ್ಲಿದೆ. ಅಂದರೆ ಕಾದಂಬರಿಕಾರ ಕತ್ತಲ ಜಗತ್ತಿನೊಳಗೆ ಕೇವಲ ಇಣುಕಿ ನೋಡುವ ಬಾಲಿಶ ಹವ್ಯಾಸಿ ಗುಣ ತೋರದೆ ಇಲ್ಲಿಯ ಬದುಕನ್ನು ಅದನ್ನು ನಿಯಂತ್ರಿಸುವ ಹಲವು ಹತ್ತು ಸಂಗತಿಗಳ ನಡುವೆ ಇಟ್ಟುನೋಡುವ ಪ್ರಬುದ್ಧತೆಯನ್ನು ತೋರುತ್ತಾನೆ.

'ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ' ಲಂಕೇಶರ ಪ್ರಸಿದ್ಧ ಕತೆ. ಉಮಾಪತಿ ಕೇಂದ್ರಪ್ರಜ್ಞೆಯ ಮೂಲಕ ಅವನ ಬದುಕಿನ ಮತ್ತು ಆವರಣದ ಏಳುಬೀಳಿನ ಕಥೆ ವಯಸ್ಸಿನಲ್ಲಿ ಚಿಕ್ಕವನಾದರೂ ಸೀಮಿತವಾಗಿದಕ್ಕುವ ಅನುಭವಗಳೊಡನೆಯೇ ತನ್ನ ಬದುಕನ್ನು ಗ್ರಹಿಸುವ ಪರಿ ಅದ್ಭುತವಾದುದು, ಹಳ್ಳಿ ಮತ್ತು ಪಟ್ಟಣಗಳ ನಡುವೆ ಈ ಹೊಸ ವ್ಯಕ್ತಿ ಸಿಕ್ಕಿ ಒದ್ದಾಡುತ್ತಿದ್ದಾನೆ. ಈತನನ್ನು ಪಟ್ಟಣದ ಸಂಪರ್ಕಕ್ಕೆ ತಂದಿರುವುದು ವಿದ್ಯಾಭ್ಯಾಸ. ಈ ವಿದ್ಯಾಭ್ಯಾಸ ಎನ್ನುವುದು ಅನೇಕ ಸಂಕೀರ್ಣವಾದ ಅನುಭವಲೋಕಗಳಿಗೆ ಈ ಹೊಸಪ್ರಜ್ಞೆಯ ನಾಯಕನನ್ನು ಪರಿಚಯಿಸುತ್ತದೆ. ಹಳ್ಳಿಯ ಸಮಾಜ ಪಟ್ಟಣದ ಕಡೆಗೆ ವಿಶೇಷವಾಗಿ ಆಕರ್ಷಿತವಾಗುವ ನೆಲೆಗಳಲ್ಲಿ ಈ ವಿದ್ಯಾಭ್ಯಾಸವು ಒಂದು ಎಂಬುದನ್ನು ಅರ್ಥೈಸಿಕೊಂಡಾಗ ಈ ಹೊಸಪ್ರಜ್ಞೆಯ ನಾಯಕನ ಸಮಸ್ಯೆಗಳು ನಮಗೆ ಸ್ಪಷ್ಟವಾಗುತ್ತಾ ಹೋಗುತ್ತವೆ. ಈ ವಿದ್ಯಾಭ್ಯಾಸದ ಕಾರಣಕ್ಕಾಗಿ

ಈ ಹೊಸ ಪ್ರಜ್ಞೆಯ ನಾಯಕ ಇತ್ತ ಪೂರ್ಣವಾಗಿ ಹಳ್ಳಿಗನೂ ಅಲ್ಲ, ಅತ್ತ ಪೂರ್ಣವಾಗಿ ಪಟ್ಟಣಿಗನೂ ಅಲ್ಲ. ಆದರೆ ಈ ಹೊಸ ಪ್ರಜ್ಞೆಯ ನಾಯಕನಲ್ಲಿ ಹಳ್ಳಿಯ ಅನೇಕ ಗುಣಗಳಿವೆ. ಅವನ ಸಂವೇದನೆಯ ಮೂಲ ಚೌಕಟ್ಟು ಪ್ರಾರಂಭದಲ್ಲಿ ಹಳ್ಳಿಗನ ಮುಗ್ಧತೆಯಲ್ಲಿ ಆಗುತ್ತದೆ. ಅಂದರೆ ಬರಬರುತ್ತಾ ತನ್ನ ಮುಗ್ಧತೆಯ ಮಿತಿಗಳನ್ನು ಅರ್ಥಮಾಡಿಕೊಳ್ಳುತ್ತಾ ಬರುತ್ತಾನೆ. ಹೀಗಾಗಿ ಈ ಹೊಸ ಪ್ರಜ್ಞೆಯ ನಾಯಕನ ಪಾತ್ರಗಳ ಮಹತ್ವ ಇರುವುದು ತಮ್ಮ ಮುಗ್ಧತೆಯನ್ನು ಕಳೆದುಕೊಳ್ಳುವಲ್ಲಿ. ಈ ದೃಷ್ಟಿಯಿಂದ 'ಉಮಾಪತಿ ಸ್ಕಾಲರ್ ಶಿಫ್ ಯಾತ್ರೆ'ಯ ನಾಯಕನ ಪಾತ್ರ ಮುಖ್ಯವಾಗುತ್ತದೆ.

ಮುಗ್ಧತೆ ಕಳೆದುಕೊಳ್ಳುವುದು ನಿಜವಾಗಿಯೂ ಹೊಸ ಜ್ಞಾನದ ಪ್ರಾರಂಭ. ಉಮಾಪತಿಯ ಸ್ಕಾಲರ್‌ಷಿಪ್‌ಗಾಗಿ ಯಾತ್ರೆ ಮಾಡಿದ್ದು, ಫಲ ನೀಡಿತೋ ಇಲ್ಲವೋ ಗೊತ್ತಿಲ್ಲ. ಆದರೆ ಭೌತಿಕವಾಗಿಯಂತೂ ಅದೊಂದು ಜ್ಞಾನಯಾತ್ರೆ. ಲೋಕದ ಸ್ವರೂಪದ ಬಗ್ಗೆ ಅವನಿಗೆ ಹೊಸ ಗೊಂದಲ ಪ್ರಾರಂಭವಾಗಿದೆ. ಆತ ಸಂಬಂಧಗಳನ್ನು ಹೊಸ ರೀತಿಯಲ್ಲಿ ನೋಡಲು ಪ್ರಾರಂಭಿಸಿದ್ದಾನೆ. ಇಲ್ಲಿಯ ತನಕ ಆತನಿಗೆ ಹೊಳೆಯದಿದ್ದ ಸಂಗತಿಗಳು ಹೊಳೆಯಲು ಪ್ರಾರಂಭವಾಗಿವೆ. ನೀತಿ ಅನೀತಿಯ ಬಗೆಗಿನ ದೊಡ್ಡ ಗೊಂದಲಗಳು ಪ್ರಾರಂಭವಾಗಿವೆ. ಈ ಎಲ್ಲಾ ಕಾರಣಗಳಿಂದಾಗಿ ಆತ ಹೆಚ್ಚು ತೀವ್ರವಾಗುತ್ತಿದ್ದಾನೆ. "ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ ಅವರನ್ನು ತನ್ನ ಗ್ರಾಮೀಣ ಪರಸರಕ್ಕಿಂತ ಭಿನ್ನವಾದ ಒಂದು ಪರಿಸರಕ್ಕೆ ಕರೆದೊಯ್ಯುತ್ತದೆ. ಇದು ಶಿವಮೊಗ್ಗೆಯ ಶಹರ ಪರಿಸರ. ಬಲಿಷ್ಠ ರಾಜಕಾರಣಿ ಶೇಖರಪ್ಪ ಇದರ ಕೇಂದ್ರ. ಅವನ ಜೊತೆಗೆ ಬಂದ ನಿಂಗಪ್ಪಗೌಡನಿಗಾಗಲಿ, ಅವನ ಅಕ್ಕ–ಅಪ್ಪರಿಗಾಗಲಿ ಈ ಪರಿಸರ ಹೊಸತಲ್ಲವಾದರೂ ಉಮಾಪತಿಗೆ ಇದೊಂದು ಹೊಸ ಜಗತ್ತು. ಶೇಖರಪ್ಪನ ಬಾಗಿಲಿನಲ್ಲಿಯೇ ಈ ಹೊಸ ಜಗತ್ತಿನ ಸಂಕೇತ ಉಮಾಪತಿಗೆ ದೊರೆಯುತ್ತದೆ. 'ಚಿತ್ರವತ್ತಾಗಿ ತೇಗದ ಮರದಲ್ಲಿ ಕಡೆದ ಬಾಗಿಲು; ಕೈಕಾಲುಗಳನ್ನು ಹರಿಬಿಟ್ಟು ವಿವಿಧ ಭಂಗಿಗಳಲ್ಲಿ ನಿಂತ ಬಳ್ಳಿಗಳಂಥ ಹುಡುಗಿಯರು ಆ ಚಿತ್ರಗಳಲ್ಲಿ! ರಾಜಕುಮಾರಿಯಂತಿರುವ ತನ್ನ ಸಹಪಾಠಿ ಸಂಧ್ಯಾಳನ್ನು ಒಳಗೊಂಡು ಈ ಅರಮನೆ ಉಮಾಪತಿಗೆ ಇನ್ನೂ ಸುಂದರವಾಗಿ ಕಾಣುತ್ತದೆ. ಆದರೆ ಉಮಾಪತಿಯ ಸೌಂದರ್ಯಾನುಭೂತಿಯನ್ನು ಕಲಕುವ ಘಟನೆಗಳು ಇಲ್ಲಿ ನಡೆದು ಹೋಗುತ್ತದೆ. ಶೇಖರಪ್ಪನಿಗೆ ತನ್ನ ಇಂಗ್ಲೀಷ್ ಜ್ಞಾನದ ಪರಿಚಯವನ್ನು ಉಮಾಪತಿ ಮಾಡಿಕೊಡುತ್ತಿರುವ ಪ್ರಯತ್ನದಲ್ಲಿದ್ದಾಗಲೇ ಹೊರಗೆ ತೋಟದಲ್ಲಿ ಅವನ ಅವ್ವ ತೋಟಿಗ ಹುಸೇನಿಯೊಡನೆ ರಂಪ ನಡೆಸುತ್ತಾಳೆ."[೨೩] ಉಮಾಪತಿಗೆ ಸೂಕ್ಷ್ಮಗ್ರಾಹಿಯಾಗಿ ಅವನ ಕುಟುಂಬ ಪರಿಸರದಲ್ಲಿ ನಡೆಯುವ ಎಲ್ಲಾ ಘಟನೆಗಳು ಅರ್ಥವಾಗುತ್ತಿರುತ್ತವೆ. ಯಜಮಾನನಿಲ್ಲದ

---

೨೩. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಪುಟ.೨೯೫.

ಉಮಾಪತಿಯ ಕುಟುಂಬಕ್ಕೆ ನೆರವಾಗುವವನು ನಿಂಗೇಗೌಡ. ಈ ನಿಂಗೇಗೌಡನ ವರ್ತನೆ ಉಮಾಪತಿಗೆ ಹಿಡಿಸುತ್ತಿರಲಿಲ್ಲ. ಅವನ ಅಕ್ಕನ ಜೊತೆ ವರ್ತಿಸುತ್ತಿದ್ದ ರೀತಿಯಂತೂ ಕೋಪಬರಿಸುತ್ತಿತ್ತು. ಉಮಾಪತಿ ಮತ್ತು ಅವನ ಅಕ್ಕ, ಅವ್ವ ಮತ್ತು ನಿಂಗೇಗೌಡ ಬೀದಿಯಲ್ಲಿ ಒಟ್ಟಿಗೆ ನಡೆಯುತ್ತಿದ್ದರೆ ಉಮಾಪತಿಗೆ ಯಾರೋ ವಿಚಿತ್ರವಾಗಿ ಕುಹಕವಾಗಿ ನಕ್ಕಂತೆ ಆಗುತ್ತಿತ್ತು. ಉಮಾಪತಿಗೆ ಕಿಶೋರಾವಸ್ಥೆಯಿಂದ ಹರೆಯದ ಪ್ರಬುದ್ಧತೆಯತ್ತ ಸಾಗುವ ಉಮಾಪತಿಯ ಮಾನಸಿಕ ಗೊಂದಲ, ತೊಳಲಾಟಗಳಿಗೂ ಅವನ ಸಾಮಾಜಿಕ ಪರಿಸರದ ಸಂದಿಗ್ಧತೆಗೂ ಅನ್ಯೋನ್ಯವಾದ ಸಂಬಂಧವಿದೆ. ಉಮಾಪತಿ ಹಳ್ಳಿಯಲ್ಲಿ ಹುಟ್ಟಿ ಬೆಳೆದವನಾದರೂ ಶಿಕ್ಷಣದಿಂದಾಗಿ ಅವನ ಸಂವೇದನೆಯಲ್ಲಿ ಮಹತ್ವದ ಬದಲಾವಣೆಗಳಾಗಿವೆ. ಅವನನ್ನು ಪ್ರತ್ಯೇಕಿಸುವುದರಿಂದ ಸಮಸ್ಯಾತ್ಮಕವಾಗುತ್ತದೆ. ಶೇಖರಪ್ಪನ ಮೂಲಕ ಉಮಾಪತಿಗೆ ವರ್ಷ ಪೂರ್ತಿ ಸ್ಕಾಲರ್‌ಶಿಫ್ ಕೊಡಿಸಿ ವಿದ್ಯಾಭ್ಯಾಸ ಮುಂದುವರೆಸಬೇಕು ಎಂಬ ಆಕಾಂಕ್ಷೆ ನಿಂಗೇಗೌಡರದಾದರೂ ಪ್ರತಿಫಲವಿಲ್ಲದೆ ಇಂಥ ನಿರ್ಗತಿಕರ ಸೇವೆಯನ್ನು ರಾಜಕೀಯ ಪುಡಾರಿ ಮಾಡಲಾರ ಎಂಬುದನ್ನು ಕತೆ ವಿಷಾದದಿಂದ ಗಮನಿಸುತ್ತದೆ. ಉಮಾಪತಿಯ ಕ್ಲಾಸ್‌ಮೇಟ್ ಆದ ಶೇಖರಪ್ಪನ ಮಗಳು ಭೌತಿಕ ಸವಲತ್ತುಗಳಿಗೆ ಮನಸ್ಸನ್ನು ಕೇಂದ್ರೀಕರಿಸುತ್ತಾಳೆ. ಅದೇ ಸಂದರ್ಭದಲ್ಲಿ ಉಮಾಪತಿ ಸೃಷ್ಟಿಗೆ ಸಂಕೇತವಾದ ಮೊಟ್ಟೆಯ ಮೇಲೆ ಕಾವು ಕೂರುವ ಕೋಳಿಯ ನೆನಪಿನಲ್ಲಿ ಗ್ರಾಮೀಣ ಪರಿಸರವನ್ನು ಸ್ವೀಕರಿಸುವ ಸದ್ಯದಲ್ಲಿ ಮುಖಾಮುಖಿಯಾಗಿರುವ ಭೌತಿಕ ಆಶಯದ ನಗರೀಕರಣವನ್ನು ತಿರಸ್ಕರಿಸುವ ದ್ವಂದ್ವವನ್ನು ಅರ್ಥಪೂರ್ಣವಾಗಿ ಎದುರಿಸುತ್ತಾನೆ.

ಈ ಕತೆಯಲ್ಲಿ ಗಮನಿಸಬೇಕಾದ ಒಂದು ಮುಖ್ಯ ಸಂಗತಿಯೆಂದರೆ ಸಮಾಜದ ವಿವಿಧ ವರ್ಗಗಳಿಗೆ ಸೇರಿದ ಇಲ್ಲಿನ ವ್ಯಕ್ತಿಗಳು ಯಾವುದೋ ರೀತಿಯಲ್ಲಿ ತಮ್ಮ ಪ್ರಭಾವವನ್ನು ಪರಸ್ಪರ ಮತ್ತೊಬ್ಬರ ಮೇಲೆ ಹೇರಲು ಪ್ರಯತ್ನಿಸುವುದು. ಇದು ಮನುಷ್ಯನ ಮೂಲ ಪ್ರವೃತ್ತಿಗಳಲ್ಲಿ ಒಂದು ಇದಕ್ಕೆ ಉಮಾಪತಿ ತನ್ನ ಪ್ರತಿಭೆ, ಪಾಂಡಿತ್ಯವನ್ನು ಬಳಸಿದರೆ ಶೇಖರಪ್ಪ ಹಣ, ಅಧಿಕಾರಗಳನ್ನು ಬಳಸುತ್ತಾನೆ. ಇಲ್ಲಿ ಪರಸ್ಪರ ಪ್ರಭಾವಗಳ ಫಲಕಾರಿಯಾಗುವುದು ಅಷ್ಟರಲ್ಲೇ ಇದೆಯಾದರೂ ಉಮಾಪತಿಯ ಪ್ರಜ್ಞಾವಲಯ ಸೂಕ್ಷ್ಮವಾದುದು. ಉಮಾಪತಿಗೆ ಸ್ಕಾಲರ್‌ಶಿಫ್ ಕೇವಲ ತನ್ನ ಪ್ರತಿಭೆಯಿಂದ ದೊರಕಲಾರದು ಕೆಲವರ ಪ್ರಭಾವದಿಂದ ಮಾತ್ರ ಸಾಧ್ಯ. ಆದರೆ ಸ್ಕಾಲರಶಿಫ್ ಯಾತ್ರೆಯ ಸಮಯದಲ್ಲಿ ಉಮಾಪತಿಗೆ ಹಂತಹಂತವಾಗಿ ಎದುರಾಗುವ ಘಟನೆಗಳಿಂದ ಕ್ರಮೇಣ ಮುಗ್ಧತೆ ಮಾಯವಾಗಿ ಅಲ್ಲಿ ವಿಕ್ಷಿಪ್ತತೆ ವ್ಯಾಪಿಸುತ್ತದೆ. ಆಧುನಿಕ ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧದಲ್ಲಿ ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆಯಲ್ಲಿ ಬರುವ ಘಟನೆಗಳನ್ನು ನಾವು ತಿಳಿಯಬಹುದು. ಲಂಕೇಶರು ಪ್ರಜ್ಞಾವಲಯದಾಚೆಗೆ ಆಗುವ ಪರಿಣಾಮವನ್ನು ಮನುಷ್ಯ ಸಂಬಂಧಗಳ ಹಿನ್ನೆಲೆಯಲ್ಲಿ ಶೋಧಿಸಿದ್ದಾರೆ.

ವಿದ್ಯೆ ಹಾಗೂ ಆಧುನಿಕ ನಗರೀಕರಣದ ಸಾಫಲ್ಯತೆಯನ್ನು ಅರ್ಥೈಸಿಕೊಳ್ಳುವ ಹಳ್ಳಿ ಹುಡುಗ ಹಾಗೂ ಆಧುನಿಕತೆಯನ್ನು ಮೌಢ್ಯವಾಗಿ ಸ್ವೀಕರಿಸಬರುವ ಹಳ್ಳಿ ಹುಡುಗಿಯ ಸಂಬಂಧಗಳು ಬಿರುಕಿನೆಡೆಗೆ ಸಾಗುವ ಕಥೆ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಯಲ್ಲಿ ನೋಡಬಹುದು. ಯಾವ ಪರಮೇಶನೊಂದಿಗೆ ಮದುವೆ ನಿಶ್ಚಿತವಾಗಿರುವ ಗೌರಿ ಅವನ ನಿರೀಕ್ಷೆಯಲ್ಲಿದ್ದಾಳೆ. ಆದರೆ ನಗರದ ಶೋಕಿಗೆ ಬಲಿಯಾಗಿರುವ ಮಾವನನ್ನು ಗೌರಿಯ ಮನಸ್ಸು ಸ್ವೀಕರಿಸುತ್ತಿಲ್ಲ. ಗೌರಿ ತನ್ನ ಶ್ರಮದಿಂದ ಮೈಬೆವರಿಳಿಸಿದರೆ ಪರಮೇಶನ ಬೆವರಿನ ವಾಸನೆಯನ್ನು ನಿರಾಕರಿಸಲು ಸುವಾಸನೆ ಬೀರುವ ಪರಿಕರವನ್ನು ಬಳಸುತ್ತಾನೆ. ಶುಂಠಿ ನೆಡುವಾಗಿನ ಮಣ್ಣಿನ ವಾಸನೆ ಗೌರಿಗೆ ಹಿತವೆನಿಸಿದರೆ ಪರಮೇಶನಿಗೆ ಮಣ್ಣಿನ ಸ್ಪರ್ಶವೇ ಕೊಳೆ ಎನಿಸುತ್ತದೆ. ಗೌರಿಯ ಹಳ್ಳಿ ಪ್ರಜ್ಞೆ, ಪರಮೇಶನ ಇಂಗ್ಲೀಷ್ ಬೆರೆತ ಭಾಷೆ, ಗರಿಯಾದ ಇಸ್ತ್ರಿ ಮಾಸದ ಬಟ್ಟೆ ಮೂಗು ಕತ್ತರಿಸುವ ಸುವಾಸನೆ, ಆತ ನೀಡುವ ವ್ಯಾನಿಟಿ ಬ್ಯಾಗುಗಳು ಅವಳಲ್ಲಿ ಅಪರಿಚಿತತೆಯನ್ನು ಸೃಷ್ಟಿಸುತ್ತದೆ. ಮಾನವನ ಆಧುನಿಕತೆಯ ಪ್ರಜ್ಞೆ ಗೌರಿಯಲ್ಲಿ ಪರಕೀಯತೆಯನ್ನು ಮೂಡಿಸಿ ಅವನನ್ನು ಹಂತ-ಹಂತವಾಗಿ ನಿರಾಕರಿಸತೊಡಗುತ್ತದೆ. ವಿದ್ಯೆ ಹಾಗೂ ನಗರ ಪ್ರಜ್ಞೆ ಹಳ್ಳಿಯ ಗೌರಿಯಲ್ಲಿ ಗುಮಾನಿಯನ್ನು ಸೃಷ್ಟಿಸಿದೆ. ಮನಸ್ಸಿನಿಂದ ದೂರವಾಗುತ್ತಿರುವ ಮಾವ ಕನಸಿನ ರೂಪದಲ್ಲಿ ಕಾಣಿಸಿಕೊಳ್ಳುವ ಚಿತ್ರಣ ನವ್ಯರ ತಂತ್ರಗಾರಿಕೆಯೇ ಆಗಿದೆ. ಕುದುರೆಯಿಂದ ಜಾರಿ ಬೀಳುತ್ತಿರುವ ಗೌರಿ ಮಾವನಿಂದ ದೂರವಾಗುತ್ತಿರುವ ಸಂಕೇತವಾಗಿದೆ.

ಆಧುನಿಕ ಶಿಕ್ಷಣದ ಪ್ರಭಾವ ಬದಲಿಸಿದ ಮನುಷ್ಯ ಸಂಬಂಧಗಳನ್ನು ಮತ್ತು ಅವರ ವರ್ತನೆಗಳನ್ನು ತಿಳಿಸುತ್ತವೆ. ಕೆಲಸದ ಶಿವರುದ್ರನೊಂದಿಗೆ ಶುಂಠಿ ನೆಡುವಾಗಿನ ಕಳೆ ಕೀಳುವಾಗ ಸಿಗುವ ಸಾಮೀಪ್ಯ ಮತ್ತು ಸುಖ ನಾಜೂಕಯ್ಯ ಪರಮೇಶನಲ್ಲಿ ಲಭ್ಯವಾಗುತ್ತಿಲ್ಲ. ಗೌರಿಯ ಹಳ್ಳಿ ಪ್ರಜ್ಞೆ, ಮಣ್ಣಿನ ವಾಸನೆ ಹಾಗೂ ಗಟ್ಟಿತನವನ್ನು ಇಷ್ಟಪಡುತ್ತಿದೆ. ತನ್ನೊಳಗಿನ ಕನಸುಗಳನ್ನು ಆಳು ಶಿವರುದ್ರನೊಂದಿಗೆ ಹಂಚಿಕೊಳ್ಳುವ ಗೌರಿ ಮಾವ ಹೊಗೆಯಾಗೆ ನಿಂತ್ಕೊಬ್ಯಾಡ ಬಟ್ಟೆ ಮಾಸ್ತವೆ. ಪುಸ್ತಕ ಓದ್ಕೋ ಹೋಗು ಎಂದು ಮಾವನನ್ನು ಜೋಪಾನ ಮಾಡುತ್ತಾಳೆ. ಈ ಒಂದು ಸಂದರ್ಭವನ್ನು ನೋಡಬಹುದು "ನಿನಗೇಕೋ ಅದೆಲ್ಲ – ನಿನ್ನ ಕೆಲಸ ನೀನು ಬಾಯಿ ಮುಚ್ಕೊಂಡು ಮಾಡು ಎಂದು ಪರಮೇಶ ಸಿಟ್ಟಿನಿಂದ ಅವನನ್ನು ಗದರಿಸಿದೊಡನೆ ಶಿವರುದ್ರ 'ಆಳು'! ಎಂದು ಹಲ್ಲು ಬಿಟ್ಟು, ಗೌರಿ ನಗು ತಡೆಯಲಾರದೆ ಬಾಯಿ ಮುಚ್ಚಿಕೊಂಡಳು, ಅವರೇ ಬಳ್ಳಿಯಿಂದ ಬಿದ್ದ ಎಲೆಗಳು ಹೊಗೆ ಎಬ್ಬಿಸಿ ಸಂಜೆಯ ನಸುಗತ್ತಲಲ್ಲಿ ಬೆರಳಾಡಿಸಿದವು. ಅಡ್ಡಾಡಿದ ಗಾಳಿ ಪರಮೇಶನ ಕಡೆ ಹೊಗೆಯನ್ನು ಅಟ್ಟಿದೊಡನೆ ಅವನ ಕಣ್ಣು ಮೂಗೆಲ್ಲ ಚಳವಳಿ ಹೂಡಿ ಗೌರಿಗೆ ತನ್ನ ಹಬ್ಬದ ಸೀರೆಗೆ ಹೊಗೆ ತಾಕಿದಷ್ಟು ಆತಂಕವಾಯಿತು. ಪರಮೇಶ ಅವಮಾನಕ್ಕೆ ಆಳಲ್ಲ. ಅತ್ತಲಾಗಿನ ಗೌರಿ ಮತ್ತು ಇತ್ತಲಾಗಿನ ಶಿವರುದ್ರ ಇಬ್ಬರೂ ಪಿತೂರಿ ನಡೆಸಿದವರಂತೆ ನಡೆದುಕೊಂಡರೆ, ಕಣ್ಣೊರಿಸಿಕೊಂಡು ದುರ್ಬಲ ಕೋಪದ ಮರೆಹೊಕ್ಕ

ಪರಮೇಶ. ಗೌರಿ ಜಗಳವಾದೀತೆಂದು 'ಮಾವ ಹೊಗೆಯಾಗೆ ನಿಂತ್ಕೋಬ್ಯಾಡ ಬಟ್ಟೆ ಮಾಸ್ತವೇ' ಎಂದಾಗ ಶಿವರುದ್ರ 'ಪುಸ್ತಕ ಓದು ಹೋಗು' ಎಂದ, ತುಟಿಯಲ್ಲಿ ತುಂಟಾಟ ಬೆಂಕಿ ಬಲವಾಯಿತು: ಮೂವರ ಮುಖದಲ್ಲೂ ಮೂರು ರೀತಿಯ ಭಾವನೆ".[೨೪] ಊರಿಗೆ ಹೊರಟು ನಿಂತವನನ್ನು ಮಾವ ಮರೆತ್ಯಲ್ಲ ಎಂದು ಪುಸ್ತಕವನ್ನು ಅವನ ಕೈಗಿಡುವ ಮೂಲಕ ನೀನು ಆಧುನಿಕ ಜಗತ್ತಿಗೆ ಮಾತ್ರ ಸೂಕ್ತನಾದವನು ಎಂಬ ವ್ಯಂಗ್ಯವನ್ನು ತರಲಾಗಿದೆ. ವಿದ್ಯೆ ಆಧುನಿಕತೆಯ ಸಂಬಂಧಗಳನ್ನೇ ಪರಕೀಯವಾಗಿಸುತ್ತಿರುವ ವಿವರಗಳನ್ನು 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆ ವಿವರಿಸಿದೆ.

ತಪ್ಪುಮಾಡಿದವರಿಗೆ ಸಾವೇ ಶಿಕ್ಷೆ ಎಂಬ ಕಲ್ಲು ಮನಸ್ಸಿನ ಮುಖಂಡನ ಮಗಳು ಶ್ಯಾಮಲ ತನ್ನ ಲಿಂಗಾಯತ ಜಾತಿಯನ್ನು ಮರೆತು ಬೇಡರ ತಿಪ್ಪಣ್ಣನನ್ನು ಪ್ರೀತಿಸುತ್ತಾಳೆ. ಲಿಂಗಾಯತರ ಮನೆಯಲ್ಲಿ ಬೇಡರ ಹುಡುಗನೊಬ್ಬನ ಉಣ್ಣುವ, ತಿನ್ನುವ ಮಲಗುವ ಕ್ರಿಯೆಗಳು ಸಂಪ್ರದಾಯಸ್ಥ ಅಮೃತಾಂಬುಧಿ ಎಂಬ ಹಳ್ಳಿಯವರಿಗೆ ಅಪರಾಧವೆನಿಸಿದೆ. ಧರ್ಮ ಗುರುವಿನ ಭೇಟಿ, ಅಪ್ಪನ ಛಲ ಊರಿನವರ ವಿರೋಧಗಳನ್ನು ತನ್ನ ದಿಟ್ಟತನ ಹಾಗೂ ನಿರ್ಭಾವುಕವಾದ ಸಂಘರ್ಷವಿಲ್ಲದ ತಣ್ಣನೆಯ ಮೌನಗಳಿಂದ ಶ್ಯಾಮಲ ಎದುರಿಸುತ್ತಾಳೆ. ಅವಳ ಅಹಿಂಸಾತ್ಮಕವಾದ ಕ್ರಾಂತಿ ಹಿಂಸಾಪಶುವಿನಂತಹ ಅಪ್ಪನ ಕಲ್ಲಿನಂತಹ ಮನಸ್ಸನ್ನು ನಿಧಾನವಾಗಿ ಕರಗಿಸುತ್ತದೆ. ಹೆಣ್ಣಿನ ಬದಲಾದ ಮನಸ್ಥಿತಿಗೆ ಶ್ಯಾಮಲ ಉದಾಹರಣೆಯಾಗಿದ್ದಾಳೆ. ಭಾರತದಲ್ಲಿ ಜಾತಿ ವ್ಯವಸ್ಥೆ ಜೀವಂತವಾಗಿರುವುದೇ ಹಳ್ಳಿಗಳಿಂದ. ಅಂತಹ ಹಳ್ಳಿಯಲ್ಲಿ ವಿವಾಹದಂತಹ ಸಾಂಪ್ರದಾಯಿಕ ಮೌಲ್ಯದ ಸಂದರ್ಭಕ್ಕೆ ತಾನೇ ತೀರ್ಮಾನ ತೆಗೆದುಕೊಳ್ಳುವಂತಹ ದೃಢ ನಿರ್ಧಾರವನ್ನು ಶ್ಯಾಮಲ ಕೈಗೊಳ್ಳುವುದು ಆಧುನಿಕ ಶಿಕ್ಷಣ ನೀಡಿದ ಸಕಾರಾತ್ಮಕ ಧೋರಣೆ ಎಂದೇ ಹೇಳಬಹುದು.

ಆಧುನಿಕ ಶಿಕ್ಷಣದಿಂದ ಮನುಷ್ಯ ಸಂಬಂಧಗಳು ಬದಲಾದದ್ದನ್ನು ತಿಪ್ಪಣ್ಣ ಮತ್ತು ಶ್ಯಾಮಲೆಯ ಅಂತರ್ಜಾತಿ ವಿವಾಹದಿಂದ ತಿಳಿಯಬಹುದು. ಶಿಕ್ಷಣ ಬದಲಿಸಿದ ವ್ಯವಸ್ಥೆಯನ್ನು ನಾವು ನೋಡಬಹುದು. ತಿಪ್ಪಣ್ಣ ಒಳ್ಳೆಯ ಹುಡುಗ ಎಂದು ಬಹುಬೇಗ ಅನ್ನಿಸಿಬಿಡುತ್ತದೆ. ಶ್ಯಾಮಲೆಗೆ ಮೊದಮೊದಲು ತನ್ನ ಜೊತೆಗಿನ ಗಾಳಿ, ಬೆಳಕಿನಂತೆ ಅವನೂ ಒಂದು ವಸ್ತು ಎನ್ನುವಂತೆ ಸುಮ್ಮನಿದ್ದಳು, ಪರಿಚಯ ಬೆಳೆದಂತೆ ಅವನ ಮುಗ್ಧತೆ ಗೊಂದಲ ಒಳ್ಳೆಯತನ, ಸಂಕೋಚ ಸ್ವಭಾವ, ಸೂಕ್ಷ್ಮವಾಗಿ ಗ್ರಹಿಸುವ, ಗ್ರಹಿಸಿದ್ದನ್ನು ದುರ್ಬಲ ಅಸ್ಪಷ್ಟ ನುಡಿಗಳಲ್ಲೇ ಹಂಚಿಕೊಳ್ಳುವ ಪ್ರಯತ್ನ ಇವುಗಳಿಂದ ಅಚ್ಚರಿಗೊಳ್ಳುತ್ತಾ ಹೋಗುತ್ತಾಳೆ. ಅವನನ್ನೇ ಮದುವೆಯಾಗಲು ತೀರ್ಮಾನಿಸುತ್ತಾಳೆ. ಬಿ.ಎ.ಪರೀಕ್ಷೆಯಲ್ಲಿ ಎರಡು ಸಲ ಫೇಲಾಗಿದ್ದ ತಂದೆ-ತಾಯಿ-ತಂಗಿಯರೊಂದಿಗೆ ಪುಟ್ಟದೊಂದು ಮನೆಯಲ್ಲಿ ವಾಸಮಾಡುತ್ತಿದ್ದ ರೇಷ್ಮೆ ತರಬೇತಿ

---

೨೪. ಪಿ.ಲಂಕೇಶ್, ಸಮಗ್ರಕಥೆಗಳು, ಪುಟ. ೭೬-೭೭.

ಕೇಂದ್ರದಲ್ಲಿ ಸಾಧಾರಣ ಗುಮಾಸ್ತನಾಗಿದ್ದ ತಿಪ್ಪಣ್ಣನನ್ನು ನೋಡಿದ ಕೂಡಲೆ ಆಕರ್ಷಿಸುವ ಸುಂದರನೂ ದೃಢಕಾಯನೂ ಬುದ್ಧಿವಂತನೂ ಆಗಿರಲಿಲ್ಲ. ಅಂದರೆ ಜನಪ್ರಿಯ ಸಂಸ್ಕೃತಿ ಆರೋಪಿಸುವ ಯಾವ ಗುಣವೂ ಅವನಲ್ಲಿರಲಿಲ್ಲ. ಶ್ಯಾಮಲಳಲ್ಲಿ ಅವನು ಪ್ರೇಮಭಿಕ್ಷೆಯನ್ನೇನೂ ಬೇಡಿರಲಿಲ್ಲ. ಆದರೂ ಶ್ಯಾಮಲಾ ಅವನನ್ನು ಮೆಚ್ಚಿಕೊಳ್ಳಲು ಕಾರಣವೇನು? ಶ್ಯಾಮಲ ತನ್ನ ಮನಸ್ಸನ್ನು ಪರಿಶೀಲಿಸಿಕೊಂಡಳು. ಅಲ್ಲಿ ಹುಚ್ಚು ಮೋಹವಿರಲಿಲ್ಲ. ಹಾಗೆಯೇ ವೈಚಾರಿಕ ಗೆಳೆತನದ ಭಾವನೆಗಿಂತ ಹೆಚ್ಚಿನ ಸ್ಪಂದನವಿತ್ತು. ಆತನಲ್ಲಿ ವಿಚಿತ್ರ ತಾಯಿತನವೇ? ಆತನ ಗೊಂದಲಮಯ ಮಾತುಗಳ ವಿಚಿತ್ರ ಹಂದರವೇ? ತನ್ನ ಬೇಸರದ ದಿನಗಳಿಂದಾಗಿ ಹೀಗೆಲ್ಲ ಅನ್ನಿಸುತ್ತಿರಬಹುದೇ? ಎಲ್ಲದರಲ್ಲಿಯೂ ಪರಸ್ಪರ ತುಂಬ ಭಿನ್ನರಾಗಿದ್ದ ಇವರ ನಡುವಣ ಪ್ರೇಮದ ಸ್ವರೂಪ ಮತ್ತು ಅದರ ಬೆಳವಣಿಗೆಯ ಪ್ರಕ್ರಿಯೆಯನ್ನು ಲಂಕೇಶರು ನಿರೂಪಿಸುವ ಸೊಗಸನ್ನು ಕಥೆ ಓದಿಯೇ ಅನುಭವಿಸಬೇಕು. ಓದುಗನ ಪ್ರಜ್ಞಾವಲಯವನ್ನು ವಿಸ್ತರಿಸುತ್ತದೆ.

ಲಂಕೇಶರು ಸಾಹಿತಿಗಳಿಗೆ ಸಾಮಾಜಿಕ ಜವಾಬ್ದಾರಿ ಇದೆ ಎನ್ನುವುದನ್ನು ಪದೇ ಪದೇ ನೆನಪಿಸಿಕೊಂಡಿದ್ದಾರೆ. ದೇಶೀಯ ನಾಯಕರುಗಳಾದ ಲೋಹಿಯಾ, ಜಯಪ್ರಕಾಶ್ ನಾರಾಯಣರ ತತ್ವಸಿದ್ಧಾಂತಗಳು, ಆದರ್ಶಗಳು ಅನುಕರಣ ಯೋಗ್ಯ ಹಾಗೂ ಅನುಷ್ಠಾನ ಯೋಗ್ಯ ಎಂದು ಭಾವಿಸಿದ್ದವರು. ಈ ಹಿನ್ನೆಲೆಯಲ್ಲಿ ಸಾಹಿತಿಗಳು, ದೇಶದ ನಾಯಕರುಗಳು ತತ್ವ–ಸಿದ್ಧಾಂತಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ದುರ್ಘಟನೆಗಳನ್ನು 'ಜೊತೆಗಾರ' ಕಥೆಯಲ್ಲಿ ಪಾತ್ರಗಳನ್ನಾಗಿಸಿದ್ದಾರೆ. ಹಳ್ಳಿಯನ್ನು ಭಾರತದ ಆರ್ಥಿಕ ನೀತಿಗಾಗಿ ಬಲಪಡಿಸಬೇಕೆಂಬ ಗಾಂಧೀಜಿಯವರ ಆಶಯವೂ ಆಧುನಿಕ ಶಿಕ್ಷಣ ಪಡೆದ ನಾಯಕರಂತಹ ಸಾಹಿತಿಗಳಿಂದ ಹಾಳಾಗುತ್ತಿರುವ ವಿಷಾದನೀಯ ಚಿತ್ರಣವಿದೆ.

ತಾಯಿ ಆಕಳನ್ನು ಹಾರಿದ ಹೋರಿಕರದ ಚಿತ್ರಣವನ್ನು ನಾಯಕರ ಮನಸ್ಸು ಸುಖಿಸುವಲ್ಲಿ ಅವರ ಅಧಃಪತನಗೊಂಡ ನೈತಿಕಮೌಲ್ಯ ಕೆಲಸಮಾಡಿದೆ. ಸಂಕೀರ್ಣವಾದ ಹಳ್ಳಿಯ ಬದುಕಿನಲ್ಲಿ ವಿಲಕ್ಷಣವಾಗಿ ವರ್ತಿಸುತ್ತ ನಾನಾ ಗೊಂದಲಗಳನ್ನು ಅನುಭವಿಸುತ್ತಾ, ಅವಮಾನ, ದಿಗ್ಭ್ರಮೆಯ ನವ್ಯ ನಾಯಕನಂತೆ ಸಾಯುತ್ತಾರೆ. ಗಾಂಧೀಜಿಯ ಆದರ್ಶ, ಜಯಪ್ರಕಾಶ್ ನಾರಾಯಣ, ರಾಮಮನೋಹರ ಲೋಹಿಯಾ ಅವರ ತತ್ವಸಿದ್ಧಾಂತಗಳು ಸಾರ್ಥಕತೆಯನ್ನು ಗಳಿಸದೆ ವಿಫಲಗೊಳ್ಳುವುದನ್ನು ಈ ಕಥೆಯ ವಿವರಗಳು ಕಟ್ಟಿಕೊಡುತ್ತವೆ. ಈ ಕಥೆಯ ನಾಯಕರ ಸೋಲು ಒಂದು ಸಾಂಸ್ಥಿಕ ಸೋಲಾಗಿ ಪರಿಣಮಿಸುತ್ತದೆ. ಈ ನಾಯಕನ ಗುಣ ಸಮಾಜವಾದಿ ಹೋರಾಟಗಾರರನ್ನು ನೆನಪಿಸುತ್ತದೆ. ಆಧುನಿಕ ಶಿಕ್ಷಣವು ಕಲಿಸಿದ ನೀತಿ ಮತ್ತು ಬದಲಾವಣೆ ಮನುಷ್ಯ ಸಂಬಂಧಗಳನ್ನು ಬದಲಿಸುತ್ತವೆ.

**೭.೩. ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನಲೆಯಲ್ಲಿ ಮನುಷ್ಯ ಸಂಬಂಧಗಳು**

ಮಾನವನ ಬದುಕು ದ್ವಂದ್ವದಿಂದ ಕೂಡಿದ್ದು ಒಂದನ್ನು ಕಳೆದುಕೊಂಡು ಇನ್ನೊಂದನ್ನು ಆತುಕೊಳ್ಳುತ್ತದೆ. ಅನಿವಾರ್ಯವೇನೋ ಎಂಬಂತೆ ಇದರಿಂದಾಗಿಯೇ ಮಾನವನಿಗೆ ಬದುಕು ಅನ್ನುವುದು ಅವಿರತವಾದ ಸಂಘರ್ಷ ಮತ್ತು ಸಮಸ್ಯೆಗಳ ಆಗರವಾಗಿರುತ್ತದೆ. ವ್ಯಕ್ತಿಯ ಆಂತರಿಕ ಮತ್ತು ಬಾಹ್ಯಾಕರ್ಷಣಗಳ ನಡುವೆ ಘಟಿಸುವ ತಾಕಲಾಟಗಳನ್ನು ಸಂಘರ್ಷ ಮತ್ತು ಸಮಸ್ಯೆಗಳೆಂದು ಕರೆಯುತ್ತೇವೆ. ಲಂಕೇಶರ ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ. 'ಬಿರುಕು'ವಿನ ನಾಯಕ ಬಸವರಾಜನ ಆಲೋಚನೆ, ನೆನಪು, ನಿರೀಕ್ಷೆ, ಒಳ ಸುಳಿಗಳನ್ನು ಸಂಘರ್ಷ ಮತ್ತು ಸಮಸ್ಯೆಯ ಹಿನ್ನೆಲೆಯಲ್ಲಿ ಅರ್ಥೈಸಲು ಲಂಕೇಶರು ಹೊರಡುತ್ತಾರೆ. ಮನುಷ್ಯನ ಮಾನಸಿಕ ಕ್ರಿಯೆಗಳನ್ನು ಭಾಷೆಯಲ್ಲಿ ಹಿಡಿದಿಡುವ ಪ್ರಯತ್ನ ಇದಾಗಿದ್ದು ಬಸವರಾಜನ ಗೊಂದಲಮಯ ಜಗತ್ತನ್ನು ವಿಶ್ಲೇಷಿಸುತ್ತದೆ. ನವ್ಯ ಸಿದ್ಧಾಂತದಂತೆ ಬಸವರಾಜ ಪಲಾಯನವಾದಿ ಬಸವರಾಜ ಅನೇಕ ಗೊಂದಲ, ದ್ವಂದ್ವ, ಅನುಮಾನ, ಸಂದೇಹಗಳ ಪಾತ್ರವಾಗಿದ್ದರೆ ಅದಕ್ಕೆ ವ್ಯತಿರಿಕ್ತವಾದ ಗುಣ ಸ್ವಭಾವ ಆನಂದನದು. ಆನಂದನದು ಮೂಲತಃ ಹೊಂದಿಕೊಂಡು ಬಾಳುವ ಸ್ವಭಾವ. ಸಹಜವಾಗಿಯೇ ಯಾವುದೇ ಗೊಂದಲ, ದ್ವಂದ್ವ, ಸಂಘರ್ಷಗಳಿಗೆ ಅವಕಾಶವಾಗದೆ ವ್ಯವಸ್ಥೆಯಲ್ಲಿ ಹೊಂದಿಕೊಂಡು ಸಮಾಜ ಬಯಸುವಂತೆ ನಡೆದು ತನ್ನ ಕ್ಷೇಮವನ್ನು ಕಾಯ್ದುಕೊಳ್ಳುತ್ತಾ ಬದುಕುತ್ತಾನೆ. ಒಂದು ನಿರ್ದಿಷ್ಟವಾದ ತತ್ವಾದರ್ಶ, ಸ್ವಂತ ವ್ಯಕ್ತಿತ್ವವಿಲ್ಲದವರು ಸಮಾಜದಲ್ಲಿ ಸದಾ ಇದ್ದುಕೊಂಡು ಇದ್ದು ಇಲ್ಲದಂತೆ ಬದುಕುತ್ತಾರೆ ಎಂಬುದನ್ನು ಲಂಕೇಶರು ಆನಂದನ ವ್ಯಕ್ತಿತ್ವದ ಮೂಲಕ ಸ್ಪಷ್ಟಪಡಿಸಿರುವುದನ್ನು ಕಾಣುತ್ತೇವೆ.

ಸಂಶೋಧನಾ ವ್ಯಾಸಂಗದ ವಿದ್ಯಾರ್ಥಿವೇತನವನ್ನು ಪಡೆಯುವ ಸಲುವಾಗಿ ಆಡಳಿತ ಕಛೇರಿಗೆ ಹೋದ ಬಸವರಾಜನಿಗೆ ಅಲ್ಲಿನ ವ್ಯವಸ್ಥೆ ಅಸಹ್ಯ ಉಂಟು ಮಾಡುತ್ತದೆ. ಅಸಂಬದ್ಧ ಎನಿಸುತ್ತದೆ. ಮನುಷ್ಯನ ಮನಸ್ಸಿನಲ್ಲಿ ಉಂಟು ಮಾಡಿದ ಇಂತಹ ಸೂಕ್ಷ್ಮವನ್ನು ಭಾಷೆಯ ಮೂಲಕ ದುಡಿಸಿಕೊಳ್ಳುವ ಲಂಕೇಶರು ಬಸವರಾಜನಲ್ಲಿ ಉಂಟಾದ ಭಾವನೆಯನ್ನು ವಾಚ್ಯವಾಗಿಸದೆ ಧ್ವನಿಪೂರ್ಣವಾಗಿ ನಿರೂಪಿಸುತ್ತಾರೆ. ಇಂತಹ ವ್ಯಕ್ತಿತ್ವವನ್ನು ಅವನ ಮನೋವ್ಯಾಪಾರವನ್ನು ಸಂಘರ್ಷದ ಹಿನ್ನಲೆಯಲ್ಲಿ ಕಾಣಬಹುದು. ಬಸವರಾಜ ತನ್ನ ಪ್ರೊಫೆಸರ್ ರಂಗಯ್ಯನವರಿಗೆ ತಾನು ಮಾಡಲಾಗದ ಕೆಲಸವನ್ನು ನೇರವಾಗಿ, ನಿರಾಕರಿಸಲಾರದೆ ತಡಬಡಾಯಿಸುತ್ತಾನೆ. ಪ್ರೊ॥ರಂಗಯ್ಯನವರಿಗೆ ಅದು ತಿಳಿಯದಂತೆ ತನ್ನ ಮೇಲೆ ಅವರು ಹೊಂದಿರುವ ವಿಶ್ವಾಸಕ್ಕೆ ಧಕ್ಕೆಯಾಗದ ರೀತಿಯಲ್ಲಿ ವರ್ತಿಸುತ್ತಾನೆ. ಇಂತ ಒತ್ತಡದಲ್ಲಿ ಬದುಕುತ್ತಿರುವ ಆತನಿಗೆ ಪ್ರೊಫೆಸರ್ ರಂಗಯ್ಯನವರೇ ಮಾರ್ಗದರ್ಶಕರಾಗಿದ್ದಾರೆ. ಅವರ ಕೃಪೆಯಿಂದಲೇ ಬಸವರಾಜುವಿನ ಸಂಶೋಧನಾ ವೇತನ ನಿಗದಿಯಾಗಬೇಕಿದೆ. ಈ ನಡುವೆ ರಂಗಯ್ಯನವರ ಮಗಳು ಶಾಂತಳೊಂದಿಗೆ ಬಸವರಾಜನ ಅವ್ಯಕ್ತ ಸಂಬಂಧವೂ ಇದೆ. ಹೀಗಾಗಿ ಇವರಿಬ್ಬರ ನಡುವಿನ ಸೂಕ್ಷ್ಮ ಒಳಸುಳಿಯನ್ನು ಗ್ರಹಿಸದೆ ಬಸವರಾಜನಲ್ಲಿ ಹಾಗೂ ರಂಗಯ್ಯನಲ್ಲಿ

ಸ್ವಾರ್ಥವನ್ನು ಕಾಣಬಹುದಾಗಿದೆ. ಒಬ್ಬ ಪ್ರಾಧ್ಯಾಪಕರ ಬಗೆಗಿನ ಗೌರವ ಬಸವರಾಜನಿಗಿಲ್ಲ. ಕಾದಂಬರಿಯನ್ನು ಹೊಕ್ಕು ನೋಡಿದಾಗ ಇದು ಸ್ಪಷ್ಟವಾಗುತ್ತದೆ. ಇಬ್ಬರೂ ಸಹ ಮುಖವಾಡಗಳನ್ನು ಧರಿಸಿದವರು. ಹಾಗೆಯೇ ಕಾದಂಬರಿಯಲ್ಲಿನ ಗಂಗಪ್ಪ ಹಾಗೂ ಆತನ ಮಗಳು ಇಂದಿರೆ ನಡುವಿನ ಬಸವರಾಜನ ಸಂಬಂಧಗಳು ಸಹ ಆಪ್ತತೆಯಿಂದ ಕೂಡಿದವುಗಳಲ್ಲ, ವ್ಯಾವಹಾರಿಕ ನೆಲೆಯವು ಎಂಬುದು ಸ್ಪಷ್ಟವಾಗುತ್ತದೆ.

ತನ್ನ ಪರಿಸರದ ಹಲವಾರು ವೈಶಿಷ್ಟ್ಯಗಳನ್ನು ತನಗೆ ಇಷ್ಟವಿಲ್ಲದಿದ್ದರೂ ಗ್ರಾಮ್ಯ ಭಾಷೆಯಲ್ಲಿ ವರ್ಣಿಸುವ ಈತ ಎಂದೂ ಯಾರನ್ನು ನಂಬಲಾರ. ಏಕೆಂದರೆ ತನ್ನ ಸುತ್ತಲಿನ ಎಲ್ಲರೂ ಆಧುನಿಕ ಸಮಾಜವು ಸೃಷ್ಟಿಸಿದ ವಿಕೃತ ರೂಪಗಳಾಗಿ ಕಾಣುತ್ತಾರೆ. ಹಣ, ಪ್ರಭಾವ, ಸಾಂಸ್ಕೃತಿಕ ಚಟುವಟಿಕೆಗಳು, ಸಾಹಿತ್ಯ ಪ್ರಕಾಶನ, ಸಾಮಾಜಿಕ ಪ್ರತಿಷ್ಠೆ ಇಂಥವುಗಳಿಂದಾವೃತವಾದ ಈ ವಾಸ್ತವತೆಯ ಕಾಡಿನಲ್ಲಿ ಬದುಕಲಾರದೆ ಬಸವರಾಜ ಅಲ್ಲಿಂದ ಕನಸಿನ ಲೋಕಕ್ಕೆ ಪಲಾಯನ ಮಾಡುತ್ತಾರೆ. ಆದರೆ ಅಲ್ಲಿಯೂ ಕೂಡ ಅವನಿಗೆ ಸಮಾಧಾನವೆಂಬುದಿಲ್ಲ. ಅಲ್ಲಿನ ವ್ಯಕ್ತಿತ್ವಗಳು ಇನ್ನೂ ಭಯಗೊಳಿಸುವಂಥವು. ಎಲ್ಲ ಕಡೆ ಈತ ಮಾನಸಿಕವಾಗಿ ದೈಹಿಕವಾಗಿ ಹಿಂಸೆಗೆ ಒಳಗಾಗುವನು. "ಆತ ಹೋದಲ್ಲೆಲ್ಲಾ ತೊಂದರೆ, ಅನ್ಯಾಯ, ಜುಲುಮೆ, ಹಿಂಸೆ, ಆತನನ್ನು ಸದಾ ಕಾಡುವ ಭಾವನೆಗಳೆಂದರೆ ಭೀತಿ, ಜಿಗುಪ್ಸೆ, ಅಭೀಪ್ಸೆ, ನಿರಾಶೆ, ಸಮಸ್ಯೆ, ಅಪರಾಧಭಾವ, ಪಲಾಯನ ಬುದ್ಧಿ, ಅಸಹಾಯಕತೆ, ದೀನತೆ, ಸಿಟ್ಟು, ಕಿಚ್ಚು, ಬಂಡಾಯ..... ಬದುಕಿನ ಈ ಕತೆ ತನ್ನ ಎರಡೂ ಭಾಗಗಳಲ್ಲಿ ಮನುಷ್ಯನ ವ್ಯಕ್ತಿತ್ವವನ್ನು ತನ್ನ ಸಾಮಾಜಿಕ ವಾತಾವರಣ ಹೇಗೆ ಹಿಂಸಿಸುತ್ತದೆ. ಹೇಗೆ ನಿರ್ವೀರ್ಯಗೊಳಿಸುತ್ತದೆ ಎಂಬುದನ್ನು ಅತ್ಯಂತ ಪ್ರಭಾವಶಾಲಿಯಾಗಿ, ತೀಕ್ಷ್ಣವಾಗಿ ರೂಪಿಸುತ್ತದೆ. ಈ ಕತೆಯಲ್ಲಿ ಬರುವ ಎಲ್ಲ ಪಾತ್ರಗಳೂ ಸಾಮಾಜಿಕ ಪ್ರವೃತ್ತಿಗಳ ಪ್ರತೀಕಗಳು ಹಾಗೂ ಬಸವರಾಜ ನಮ್ಮ ಸಮಾಜದಲ್ಲಿ ಅತ್ಯಂತ ತೀಕ್ಷ್ಣವಾಗಿ ಬೆಳೆಯುತ್ತಿರುವ ಅನಾಥಪ್ರಜ್ಞೆಯ, ಸಂಘರ್ಷ ಸ್ಥಿತಿಯಲ್ಲಿಯ ಪ್ರತೀಕ."[೨೫] ಎನ್ನುವ ಶಾಂತಿನಾಥ ದೇಸಾಯಿಯವರ ವಿಶ್ಲೇಷಣೆಯ ಸಮಕಾಲೀನ ಸಮಾಜದಲ್ಲಿ ಬಸವರಾಜುವಿನಂಥವರ ಸ್ಥಿತಿಯನ್ನು ಸ್ಪಷ್ಟವಾಗಿ ವಿವರಿಸುತ್ತದೆ.

ಸಾಮಾಜಿಕವಾದ ಮನುಷ್ಯ ಸಮೂಹದ ಜೊತೆಯಲ್ಲಿ ಬದುಕುತ್ತಿರುವ ಲೇಖಕ ತಾನು ಕಂಡದ್ದನ್ನು ಗೋಚರಿಸಿದ್ದನ್ನು ವಾಸ್ತವವೆಂದು ಭ್ರಮಿಸಿ ಯಥಾವತ್ತಾದ ಬದುಕನ್ನು ಕಟ್ಟಿಕೊಡಲು ಯತ್ನಿಸುತ್ತಾನೆ. ಇದೊಂದು ರೀತಿಯಲ್ಲಿ ವಾಸ್ತವವಾದಿ ನೆಲೆಯದೆಂತಲೇ ಭಾವಿಸಬೇಕಾಗುತ್ತದೆ. ಇಂತಹ ಈ ಸಂವೇದನೆಗಳು ಕನ್ನಡ ಸಾಹಿತ್ಯದ ಸಂದರ್ಭಗಳಿಗೆ ಅದರಲ್ಲೂ ವಿಶೇಷವಾಗಿ ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಹಾಗೂ 'ಮಲೆಗಳಲ್ಲಿ ಮದುಮಗಳು',

---

೨೫. ಶಾಂತಿನಾಥದೇಸಾಯಿ, ನವ್ಯ ಸಾಹಿತ್ಯ ದರ್ಶನ, ಪುಟ. ೧೩೦.

ಶಿವರಾಮಕಾರಂತರ 'ಬೆಟ್ಟದಜೀವ', 'ಅಳಿದಮೇಲೆ' ಶಂಕರಮೊಕಾಶಿ ಪುಣೇಕರರ 'ಗಂಗವ್ವಗಂಗಾಮಯಿ', ಚದುರಂಗರ 'ವೈಶಾಖ', ಮಾಸ್ತಿಯವರ ಕತೆಗಳು ಶ್ರೀ ಕೃಷ್ಣ ಆಲನಹಳ್ಳಿಯವರ ಕಾದಂಬರಿಗಳು, ಲಂಕೇಶರ 'ಮುಸ್ಸಂಜೆಯ ಕಥಾ ಪ್ರಸಂಗ', ಇನ್ನೂ ಮುಂತಾದವು ಈ ಸಂವೇದಿತ ಪರಂಪರೆಗೆ ಸೇರಿದವುಗಳಾಗುತ್ತವೆ.

'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಕಂಬಳ್ಳಿಯ ರಾಜಕಾರಣ ಮಾನಸಿಕ ಸಂಘರ್ಷವನ್ನು ಸೃಷ್ಟಿಸುತ್ತಾ ರಹಸ್ಯ ಕಾರ್ಯಾಚರಣೆಗಿಳಿದು ಬಲಾಢ್ಯ ಸಮಾಜಗಳು ಮಣ್ಣು ಮುಕ್ಕುತ್ತಿರುವ ಪ್ರಸಂಗಗಳನ್ನು ವಿಶ್ಲೇಷಿಸಲಾಗಿದೆ. ತಮ್ಮಲ್ಲಿಯೇ ಲೆಕ್ಕಾಚಾರದ ಗುಣಾಕಾರ ಭಾಗಾಕಾರ ಹಾಕಿ ಕಂಬಳ್ಳಿಯ ಮುಸ್ಸಂಜೆಯ ಅಂತ್ಯವನ್ನು ಕಾಣಲು ತವಕಿಸುವ ಸಣ್ಣ ಜಾತಿಗಳ ಮನೋಭಾವಗಳು ಕಾದಂಬರಿಯಲ್ಲಿ ಮನೋವೈಜ್ಞಾನಿಕ ನೆಲೆಯಲ್ಲಿ ಬಿಚ್ಚಿಕೊಳ್ಳುತ್ತವೆ. ಲಂಕೇಶರು ಕಂಡು ಮೇಳೈಸಿರುವುದು ಕಥೆಯ ಸಾರ್ವಕಾಲಿಕ ಸಂಗತಿಗಳನ್ನು ಹೇಳುತ್ತಿರುವುದನ್ನಿಲ್ಲಿ ಗಮನಿಸಬೇಕಿದೆ ಸಾಮಾಜಿಕ ಜನಜೀವನದ ವೈವಿಧ್ಯಮಯ ಜೀವನ ವಿಧಾನಗಳು ಎಲ್ಲಾ ಕಾಲಕ್ಕೂ ಒಂದೇ ತೆರನಾಗಿ ಇರುವುದಿಲ್ಲ ಎಂಬುದನ್ನು ಸಹಜ ಜೀವನ್ಮುಖಿ ಸಂಗತಿಗಳನ್ನು ಹೇಳಿದಷ್ಟೇ ಸರಳವಾಗಿ ಮುಸ್ಸಂಜೆಯ ಅಂತ್ಯವನ್ನು ಹೇಳುವ ಲಂಕೇಶರು ವರ್ತಮಾನದ ತರ್ಕಕ್ಕೆ ಲೇವಡಿಯಾಡುತ್ತಲೇ ಸ್ಪಂದಿಸುವ ಮೋಡಿ ಎದ್ದು ಕಾಣುತ್ತದೆ. ಹೀಗೆ ರಾಜ್ಯ, ಅಧಿಕಾರ, ಸ್ವಾರ್ಥ, ವೈಯಕ್ತಿಕ ಲಾಲಸೆಗಳು ವೈಯಕ್ತಿಕ ಕ್ಲೀಷೆಗಳು ಎಲ್ಲವನ್ನು ಮೈ ತುಂಬಿಕೊಂಡ ಸಮಾಜವೊಂದು ಹೇಗೆ ವರ್ತಿಸಬಹುದೋ ಹಾಗೆ ಕಂಬಳ್ಳಿಯ ಜನ ವರ್ತಿಸುತ್ತಾರೆ. ಭರ್ಮಣ್ಣನ ಸುತ್ತಲಿನ ಅನೇಕರು ರಂಗವ್ವನ ವಿರುದ್ಧದ ಹೋರಾಟಕ್ಕೆ ತಮ್ಮೆಲ್ಲಾ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಒಟ್ಟಾಗುತ್ತಾರೆ. ತಮ್ಮ ಸ್ವಾರ್ಥ ಸಾಧನೆಗಾಗಿಯೇ ತಮ್ಮಲ್ಲಿನ ಆಂತರಿಕ ಭಿನ್ನಾಭಿಪ್ರಾಯಗಳನ್ನು ಕ್ಷಣಕಾಲ ಮರೆತು ಒಂದಾಗುತ್ತಾರೆ. ಅಷ್ಟೇ ಅಲ್ಲದೆ ಜಾತಿ ಜಾತಿಗಳ ನಡುವೆ ಸಂಘರ್ಷ ಮನಸ್ಸಿನಲ್ಲಿಯೇ ಲೆಕ್ಕಾಚಾರ ಹಾಕುವ ಹಂತಕ್ಕೆ ತಲುಪುತ್ತದೆ. ಲಿಂಗಾಯಿತರ ಸಾವಂತ್ರಿ ಕಾಟಗರ ಜಾತಿಯವರ ಪಕ್ಕದಲ್ಲಿ ಮಲಗುವ ಮೂಲಕ ಲಿಂಗಾಯಿತ ಸಮಾಜದ ಗೌರವಕ್ಕೆ ಧಕ್ಕೆ ತರುವ ವಿಷಯವನ್ನು ಭರ್ಮಣ್ಣ ಪ್ರಸ್ತಾಪಿಸುತ್ತಿದ್ದರೆ, ಶಿವಾಜಿ ಒಳಗೊಳಗೆ ಹಲ್ಲುಮಸೆಯುತ್ತಾನೆ. ಕಾರಣ ತಾನೂ ಕೂಡ ರಂಗಾರ ಜಾತಿಗೆ ಸೇರಿದ ಕಾಟಗನೇ ಆದ್ದರಿಂದ ಈ ಹಾಳು ಲಿಂಗಾಯತರ ಗೌರವಕ್ಕಾಗಿ ತಾನೇಕೆ ಹೋರಾಡಬೇಕು ಎಂದು ಯೋಚಿಸುತ್ತಾ ಹೀಗೆ ವರ್ಗ ಸಂಘರ್ಷವೊಂದು ತಾತ್ವಿಕ ಪರಿಕಲ್ಪನೆಗಳೊಂದಿಗೆ ಇಲ್ಲಿ ಕಾಣುವುದಿಲ್ಲ, ಬದಲಿಗೆ ಆತ್ಮಿಕ ಚಿತಾವಣೆಯ ರೂಪದಲ್ಲಿ ಕಾಣುತ್ತದೆ.

ಕಂಬಳ್ಳಿಯಲ್ಲಿ ಕಾಣಬರುವ ಆಕ್ರಮಣಕಾರಿ ವ್ಯಕ್ತಿ ಎಂದರೆ ಭರ್ಮಣ್ಣ ಇಡೀ ಘಟನೆಯ ಸಂದರ್ಭದಲ್ಲಿ ಈತ ಮುಖ್ಯವಾಹಿನಿಗೆ ಬಂದು ನಿಲ್ಲುವಂತೆ ಗೋಚರಿಸುತ್ತದೆ ಮತ್ತು ಯಾವುದೇ ಘಟನೆಗೆ ಈತನೇ ಮುನ್ನುಡಿ ಹಾಡುತ್ತಾನೆ. ಹೀಗಾಗಿ ಬೇರೆ ಬೇರೆ ಕಾರಣಗಳಿಗಾಗಿ ಒಂದಾಗುವ

ಭರ್ಮಣ್ಣನ ಸ್ನೇಹಿತರ ಪಡೆ ವೈಯಕ್ತಿಕ ಲಾಲಸೆಗಳ ಹಿತಾಸಕ್ತಿಗಳೇ ಇಲ್ಲಿ ಮುಖ್ಯವಾಗುತ್ತವೆ. ಭರ್ಮಣ್ಣನಿಗೆ ಛೇರ್ಮನ್ ಆಗುವ ಲೆಕ್ಕಾಚಾರ, ರಾಚ, ಬೂಸಿ, ಬಸ್ಯ, ಶಿವಾಜಿಯಂಥವರಿಗೆ ಅಳಿದು ಹೋಗಿರುವ ಜಮಾನದ ಪ್ರತಿಷ್ಠೆಯನ್ನು ಪುನಃ ಸ್ಥಾಪಿಸಿಕೊಳ್ಳುವ ಹುನ್ನಾರ, ಹೀಗೆ ತಮ್ಮ ತಮ್ಮ ವೈಯಕ್ತಿಕ ಹಿತಾಸಕ್ತಿಗಳು ಫಲಿಸುವುದು ರಂಗವ್ವನ ಅವಸಾನದಿಂದ ಎಂದು ಅರಿತ ಈ ಎಲ್ಲರೂ ಮೌಲ್ಯರಹಿತ ಸಂಘಟನೆಯಂತೆ ಒಟ್ಟಾಗುತ್ತಾರೆ. ರಂಗವ್ವನ ಅಂತ್ಯ ಇವರ ಸರ್ವೋದಯ ಎಂದುಕೊಳ್ಳುತ್ತಾರೆ. ಒಂದು ವೇಳೆ ಅದು ಸಾಧ್ಯವಾಗುವುದಿಲ್ಲ ಎಂಬ ಸೂಚನೆ ಗೊತ್ತಾಗುತ್ತಿದ್ದಂತೆ ಎಲ್ಲರೂ ಪಕ್ಷೇತರರಾಗುತ್ತಾರೆ. ಇದೊಂದು ಬಗೆಯ ಅನುಕೂಲ ಸಿಂಧು ರಾಜಕಾರಣ, ರಂಗವ್ವನಂಥ ಲಿಂಗಾಯತರ ಮನೆಯಲ್ಲಿ ನಡೆಯುವ ವಯೋಸಹಜ ಪ್ರೇಮ ಪ್ರಕರಣದಲ್ಲಿ ಹಾದರತನವನ್ನು ಹುಡುಕುವ ಭರ್ಮಣ್ಣ ತಾನು ಮಾತ್ರ ಸ್ವತಃ ಇಬ್ಬರು ಹೆಂಡತಿಯರನ್ನು ಹೊಂದಿದ್ದು ಸಾವಂತ್ರಿಯ ಪ್ರೇಮ ಇವನಿಗೆ ಹಾದರದಂತೆ ಕಾಣುತ್ತದೆ. ಇವನಲ್ಲಿ ಜಾತಿಪ್ರಜ್ಞೆ ಜಾಗೃತಗೊಳ್ಳುತ್ತದೆ. ಅದನ್ನೆ ಮುಂದೆ ಮಾಡಿ ರಂಗವ್ವನನ್ನು ಹಣಿಯಲು ಪ್ರಬಲ ಅಸ್ತ್ರದಂತೆ ಬಳಸಿಕೊಳ್ಳುತ್ತಾನೆ. ಆದರೆ ತನ್ನ ಹೆಂಡತಿ ರಾಮಿಯ ವಿಷಯದಲ್ಲಿ ಜಾತಿಯ ಸೋಂಕು ಕಾಣುವುದಿಲ್ಲ. ಹಾಗಾಗಿಯೇ ಇಲ್ಲಿ ಪ್ರಖರವಾದ ಸಿದ್ಧಾಂತಗಳಿಲ್ಲದ ವೈಯಕ್ತಿಕ ಹಿತಾಸಕ್ತಿಯ ರಾಜಕಾರಣವೆಂದು ನಿಲುವು ತಳೆಯಬೇಕಾಗುತ್ತದೆ. ರಂಗವ್ವ ಮುಂದಿನ ಅಥವಾ ಅದರ ಮುಂದಿನ ಮಳೆಗಾಲದಲ್ಲಿ ಪಲ್ಟಿ ಹೊಡೆದರೆ ಅವಳ ಮಗಳಿಗೆ ಸುಳ್ಳು ಲೆಕ್ಕ ಒಪ್ಪಿಸಿ ಅವಳಿಂದ ಮೈ ಬೇಕಾದರೆ ಹೆಚ್ಚು ಹಣಕೊಟ್ಟು ಮೈಬೇಡವಾದರೆ ಕಡಿಮೆ ಹಣಕೊಟ್ಟು ತನ್ನ ಸುಖಸಂತೋಷ ಬೆಳೆಸಿಕೊಳ್ಳುವ ಕನಸು ಕಟ್ಟಿದ್ದ – ಲಿಂಗಾಯತ ಸಮಾಜದ ಪರಮ ಉದ್ಧಾರಕ ದೊಡ್ಡ ನಾಯಕನೆಂಬ ಕಲ್ಪನೆಯಲ್ಲಿದ್ದ ಭರ್ಮಣ್ಣ ಸಾವಂತ್ರಿಯ ಪ್ರೇಮವಂಚಿತನಾದ ಬಸ್ಯನನ್ನ ರಾಚ, ಶಿವಾಜಿಯವರನ್ನು ಎತ್ತಿಕಟ್ಟಿ ತನ್ನದೇ ಸಮಾಜದ ಕುಟುಂಬವೊಂದರ ಮೇಲೆ ಗದಾಪ್ರಹಾರ ಮಾಡುವುದು. ಮಂಜ ಸಾವಂತ್ರಿಯರ ಪ್ರೇಮವನ್ನು ಜಾತಿಕಾರಣ ಮುಂದುಮಾಡಿ ಸಾವಂತ್ರಿ ರಂಗವ್ವರ ಮೇಲೆ ಸೇಡು ತೀರಿಸಿಕೊಳ್ಳುವ ವಿಕೃತ ಕಾಮದಲ್ಲಿ ಬೇರೆಯವರಿಗೂ ಪಾಲುಕೊಡುವ ಮೂಲಕ ಕಂಡವರ ಮನೆಗೆ ಉರಿಹಚ್ಚಿ ಊರಿನಲ್ಲಿ ತನ್ನ ಬಲ ಸಂವರ್ಧನೆ ಮಾಡಿಕೊಳ್ಳುವುದು ಇದೆಲ್ಲ ಸಂಘರ್ಷಗಳಿಗೆ ಕಾರಣವೇ ಭರ್ಮಣ್ಣ, ರಂಗವ್ವ ಭರ್ಮಣ್ಣನ ಜೊತೆ ವ್ಯವಹಾರ ಸಂಬಂಧವನ್ನು ಕಡಿತಗೊಳಿಸಿಕೊಂಡಿದ್ದು ಹಾಗಂತಲೇ ಅವನು ವಾಪಸ್ಸು ಹಣ ಕೊಡುತ್ತಲೇ ರಂಗವ್ವನ ಮತ್ತು ಅವಳ ಮಗಳ ವ್ಯವಹಾರವೆಲ್ಲವೂ ತನಗೆ ಗೊತ್ತಾಗಿರುವುದರಿಂದ ಅದು ಅವಳಿಗಾಗಲಿ, ಅವಳ ಮಗಳಿಗಾಗಲಿ ವೀರಶೈವ ಸಮಾಜಕ್ಕಾಗಲೀ ಒಳ್ಳೆಯದಾಗಲಿಕ್ಕಿಲ್ಲವೆಂದು ಹೇಳುತ್ತಾರೆ.

ಇಲ್ಲಿ ಲಂಕೇಶರು ಭರತಖಂಡದ ವರ್ತಮಾನದ ಗ್ರಾಮರಾಜಕಾರಣದ ಬಗ್ಗೆ ಬರೆಯುತ್ತಾ ಅಧಿಕಾರ, ಸ್ವಾರ್ಥ, ಲಾಲಸೆ, ವೈಯಕ್ತಿಕ ಹಿತಾಸಕ್ತಿಗಳು ಹೇಗೆ ಒಂದು ಸಾಮಾಜಿಕ

ಸಂಘರ್ಷ ಮತ್ತು ಸಮಸ್ಯೆಯಾಗಿ ಏರ್ಪಡುತ್ತದೆ ಎಂಬುದಕ್ಕೆ ಇಲ್ಲಿ ನಡೆಯುವ ಕಂಬಳ್ಳಿಯ ಘಟನೆಗಳೇ ಸಾಕ್ಷಿಯಾಗುತ್ತದೆ. ಕಂಬಳ್ಳಿಯ ಜನರಿಗೆ ಕಾಗದ ಪತ್ರಗಳನ್ನು ಬರೆದುಕೊಡುತ್ತಿದ್ದ ಮೇಷ್ಟ್ರು ತನ್ನ ವಿದ್ಯೆ ಮತ್ತು ಪಟ್ಟಣದ ಜ್ಞಾನವನ್ನು ಓಸಿ ಕಂಪನಿಯ ಷೇರು ಹಾಗೂ ಜೂಜಿನ ರೂಪಗಳಾಗಿ ಹಂಚಿ ಕಂಬಳ್ಳಿಯ ಜನರನ್ನು ನಾಗರಿಕತೆಯ ಕಡೆಗೆ ಒಯ್ಯುತ್ತಿದ್ದ ವಿದ್ಯೆಯು ಸೃಷ್ಟಿಸಿದ ವಿಕೃತ ರೂಪದಂತಿದ್ದ ಈತ ತನ್ನ ಹಿತಾಸಕ್ತಿಗೋಸ್ಕರ ಏನೂ ಅರಿಯದ ನಂದ್ಯಪ್ಪನ ಮಗಳಾದ ಶಿವಿ, ದತ್ತಣ್ಣನ ಮದುವೆಯಾಗಲು ತೆರಳಿ ಮಾರ್ಗ ಮಧ್ಯೆಯಲ್ಲಿ ಕಾಯಿಲೆಯಿಂದ ವಾಂತಿ ಮಾಡಿಕೊಂಡು ಸತ್ತಾಗ ಅವಳ ಬಗ್ಗೆ ಕೆಟ್ಟದಾಗಿ ಅಪಪ್ರಚಾರ ಮಾಡಿ ತನ್ನ ನೀಚತನವನ್ನು ಪ್ರದರ್ಶಿಸುತ್ತಾನೆ. ಅಷ್ಟಲ್ಲದೆ ಊರಿನಲ್ಲಿ ದಿನ ಕಳೆದಂತೆ ತನ್ನ ವರ್ಚಸ್ಸನ್ನು ಕಳೆದುಕೊಂಡು ವೃತ್ತಿಯನ್ನು ಕಳೆದುಕೊಳ್ಳುತ್ತಾನೆ. ಸಣ್ಣೀರಪ್ಪ ತಾನು ಮೇಷ್ಟ್ರಾಗಿ ವಿದ್ಯಾರ್ಥಿಗಳ ಭವಿಷ್ಯವನ್ನು ಹಾಳು ಮಾಡುತ್ತಿರುವುದಷ್ಟೇ ಅಲ್ಲದೆ ಕಂಬಳ್ಳಿಯ ಅಧಃಪತನಕ್ಕೂ ಕಾರಣವಾಗುತ್ತಾನೆ. ಇಂತಹ ವಿಶಿಷ್ಟ ಬಗೆಯ ಪಾತ್ರವನ್ನು ಸೃಷ್ಟಿಸುವ ಮೂಲಕ ಲಂಕೇಶರು ಇಂತವರ ವಿಚಾರದಲ್ಲಿ ಸಮಾಜ ಹೊಂದಬೇಕಾದ ಎಚ್ಚರಿಕೆಯನ್ನು ಪರೋಕ್ಷವಾಗಿ ಸೂಚಿಸುತ್ತಾರೆ.

ಕಾದಂಬರಿಯ ಕೊನೆಗೆ ಏರ್ಪಡುವ ಕುಸ್ತಿ ಕಂಬಳ್ಳಿಯ ಕ್ರೌರ್ಯತನದ ಅಂತ್ಯವನ್ನು ಮನಗಾಣಿಸುತ್ತದೆ. "ಪ್ರೀತಿಯಾಗಲೀ ವಿಶ್ವಾಸವಾಗಲೀ ಅಪರೂಪವಾಗುತ್ತಿರುವ ಈ ಊರು ನಾಶವಾಗುತ್ತಿದೆ. ಇದರ ಧರ್ಮವಾಗಲೀ, ಜಾತಿಗಳಾಗಲಿ ಇದನ್ನು ಉಳಿಸುವುದಿಲ್ಲ. ನಾನು ಮಾತ್ರ ನನ್ನೆಲ್ಲ ಜಮೀನನ್ನು ಅದರ ನಿಜವಾದ ವಾರಸುದಾರರಾದ ಹರಿಜನರಿಗೆ ಬರೆದುಕೊಟ್ಟಿದ್ದೇನೆ. ಇದರಿಂದ ಮಹಾಕಾರ್ಯ ಮಾಡಿದ ಹೆಮ್ಮೆ ನನಗಿಲ್ಲ. ನನ್ನ ಜಮೀನಿನಿಂದ ಈ ಶಾಪವೇ ಹೆಚ್ಚಾಗುತ್ತದೆ. ಸಂಬಂಧವೂ ಇದೆ. ಅದೇನಾದರೂ ಇರಲಿ ನಾನು ಇಲ್ಲವಾದ ಪ್ರಯುಕ್ತ ನೀನು ಇಲ್ಲವಾದ ಸಂದರ್ಭದಲ್ಲಿ ಯಾವನಾದರೂ ನನ್ನ ಪತ್ರಗಳೊಂದಿಗೆ ಈ ಜಮೀನು ಪತ್ರವನ್ನು ಪಡೆಯಬಹುದು ಎಂದು ಅಲ್ಲ ನೀನು ಎಂಬ ಕಾರಣಕ್ಕೆ ಈ ಕಾಗದ ನಂದ್ಯಪ್ಪನ ಒಳ್ಳೆಯತನವಾಗಲೀ, ಮೇಷ್ಟ್ರ ಜಾಣತನವಾಗಲೀ ನನಗೆ ಹಿಡಿಸುವುದಿಲ್ಲ"[೨೬] ಎನ್ನುವ ಶ್ರೇಷ್ಠಿಯವರ ನಡುವಿನ ಮಾತುಗಳು, ಮತಧರ್ಮಗಳು ಪ್ರೀತಿಪ್ರೇಮಗಳನ್ನು ಹತ್ತಿಕ್ಕಲು ಪ್ರಯತ್ನಿಸುವುದು ಹಣವಿಲ್ಲದಿದ್ದರೂ ಅವುಗಳ ಕ್ರೌರ್ಯದ ಹಿಂದಿನ ಕಾಲ ಸ್ಥಿತಿಗೆ ವ್ಯತ್ಯಾಸವಾಗಬೇಕಾದ ಅಗತ್ಯವನ್ನು ಒತ್ತಿ ಹೇಳುವುದನ್ನು ಕಾಣುತ್ತೇವೆ.

ಕಂಬಳ್ಳಿಯನ್ನು ಆವರಿಸಿಕೊಂಡಿರುವ ಮೌಢ್ಯಗಳು ಆಧುನಿಕತೆಯಿಂದ ಉಂಟಾದ ವಿಕೃತಗಳು ಕಂಬಳ್ಳಿಯ ವಿನಾಶಕ್ಕೆ ಕಾರಣವಾಗುತ್ತವೆ. ಹೀಗಾಗಿ ಕಾಲ ಸಂದರ್ಭಕ್ಕೆ

---

೨೬. ಪಿ.ಲಂಕೇಶ್, ಮುಸ್ಸಂಜೆಯ ಕಥಾ ಪ್ರಸಂಗ, ಪುಟ. ೨೯೩.

ಅನುಗುಣವಾಗಿ ಬದುಕನ್ನು ಕಟ್ಟಿಕೊಳ್ಳಬೇಕಾದ ಅಗತ್ಯತೆಯನ್ನು ಕಾದಂಬರಿಕಾರರಾದ ಲಂಕೇಶರು ಸೂಚ್ಯವಾಗಿ ದಾಖಲಿಸುತ್ತಾರೆ. ಗ್ರಾಮ ಸಮಾಜದಲ್ಲಿ ಮಡುಗಟ್ಟಿರುವ ಜಾತೀಯತೆ, ಧಾರ್ಮಿಕ ಕಟ್ಟುಪಾಡು, ಅಸಮಾನತೆ, ಮೇಲುಕೀಳು ಮುಂತಾದವು ಸಾಮಾಜಿಕವಾಗಿ, ಸಾಮೂಹಿಕವಾಗಿ ಬದಲಾಗಬೇಕಾದ ಅಗತ್ಯವನ್ನು ತಿಳಿಸುತ್ತಾರೆ. ಈ ಬದಲಾವಣೆಗೆ ಅಂತರ್‌ಜಾತಿ ವಿವಾಹ, ಅಂತರ್‌ಧರ್ಮ ವಿವಾಹ, ಹಳ್ಳಿಗೆ ಆರ್ಥಿಕ ಸಮಾನತೆಗೆ ಮುಂತಾದವುಗಳನ್ನು ಕಲ್ಪಿಸುವ ಲಂಕೇಶರು ಅವುಗಳನ್ನು ಕಾರ್ಯರೂಪಗೊಳಿಸುತ್ತಲೇ ಹೊಸದೊಂದು ಸಂಸ್ಕೃತಿಗೆ ತಳಹದಿ ಹಾಕುತ್ತಾರೆ. ಇದನ್ನು ಲಂಕೇಶರ ಸಾಹಿತ್ಯದ ಒಂದು ತಾಂತ್ರಿಕ ಸಿದ್ಧಾಂತವಾಗಿ ಗುರುತಿಸಬಹುದಾಗಿದೆ.

'ಅಕ್ಕ' ಕಾದಂಬರಿಯಲ್ಲಿ ಕ್ಯಾತನ ಬದುಕು ಮತ್ತು ಗ್ರಹಿಕೆ ವಿಶಿಷ್ಟವಾದುದು ಅಕ್ಕನ ಬದುಕನ್ನು ಸೂಕ್ಷ್ಮವಾಗಿ ಗಮನಿಸುವಂತೆ ಪರಿಸರದ ಬದುಕನ್ನು ಅರಿಯಲು ಪ್ರಯತ್ನಿಸುತ್ತಾನೆ. ಅವನ ಮೂಲಕವೇ ಕೊಳಗೇರಿಯ ಬದುಕನ್ನು ಎದುರುಗೊಳ್ಳುತ್ತಿರುವುದರಿಂದ, ಅಲ್ಲಿನ ಬದುಕನ್ನು ಅರಸತೊಡಗುತ್ತಾನೆ. ತನ್ನ ಸುತ್ತಲ ಪರಿಸರವನ್ನು ಕೇವಲ ಅಧಿಕೃತವಾಗಿ ಚಿತ್ರಿಸುವುದು ಕ್ಯಾತನ ಉದ್ದೇಶವಲ್ಲ ನಿಜ ಆದರೆ ಅವನು ತನ್ನ ಅಕ್ಕನ ಬಗ್ಗೆ ಕೊಳಗೇರಿಯ ಇನ್ನೂ ಅನೇಕ ವ್ಯಕ್ತಿಗಳ ಬಗ್ಗೆ ಅಲ್ಲಿನ ಪುಡಾರಿಗಳ ಬಗ್ಗೆ ಕೊಳಗೇರಿಯ ನಾತದ ಬಗ್ಗೆ ಬರೆಯುತ್ತಿದ್ದಾನೆ. ಆದರೆ ಎಲ್ಲ ವಿವರಗಳನ್ನು ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನೆಲೆಯಲ್ಲಿ ಏರ್ಪಡುವ ಮನುಷ್ಯ ಸಂಬಂಧಗಳ ಜೊತೆಗೆ ಕೊಳಗೇರಿಯ ಪರಿಸರವನ್ನು ಚರ್ಚಿಸುತ್ತಾನೆ. 'ಅಕ್ಕ' ಕಾದಂಬರಿಯ ಬಹುಮುಖ್ಯವಾದ ಗುಣ ವರ್ಗ ಸತ್ವಗಳನ್ನು ಈ ಕೃತಿ ಲಘು ದಾಟಿಯಲ್ಲಿ ಚಿತ್ರಿಸುತ್ತದೆ. ಕ್ಯಾತನಿಗೆ ದೇವೀರಿ ಐವತ್ತು ರೂಪಾಯಿ ನೋಟನ್ನು ಕೊಟ್ಟಾಗ ಈ ಮೊತ್ತದ ಹಣ ಅವನಿಗೆ ಹೊಸ ಸಂತೋಷಗಳನ್ನು ಕೊಡುವುದರ ಬದಲು ಹೊಸ ಸಮಸ್ಯೆಗಳನ್ನು, ಪೇಚಿನ ಪ್ರಸಂಗಗಳನ್ನು ತಂದೊಡ್ಡುವ ವಿಪರ್ಯಾಸಗಳನ್ನು ಕಾದಂಬರಿ ಮೂರ್ಖವಾಗಿ ಚಿತ್ರಿಸುತ್ತದೆ. ಈ ನೋಟು ತನ್ನ ಬಳಿ ಇದೆ ಎಂದು ಗೊತ್ತಾದರೆ ಸಾಕು ವ್ಯಾಪಾರಿಗಳು ತನ್ನನ್ನು ಪೋಲೀಸಿಗೆ ಕೊಡುತ್ತಾರೆ. ರಿಕ್ಷಾ ಚಾಲಕನೇ ಇವನನ್ನು ರಿಕ್ಷಾದಲ್ಲಿ ಕರೆದೊಯ್ಯಲು ಅನುಮಾನಿಸುತ್ತಾನೆ. ಬಡವನೊಬ್ಬನ ಕೈಯಲ್ಲಿ ದುಡ್ಡಿದ್ದರೆ ಅವನು ಕಳ್ಳನೇ ಇರಬೇಕು ಎಂದು ನಿಸ್ಸಂದೇಹ ನಿರ್ಣಯಕ್ಕೆ ಸಮಾಜ ಬಂದು ಬಿಡುತ್ತದೆ. ಸ್ವತಃ ಕ್ಯಾತ ಕೂಡ ಇದಕ್ಕೆ ಅಪವಾದವಲ್ಲ ಅವನೂ ಈ ಸಮಾಜದ ಒಂದು ಭಾಗವಷ್ಟೇ ಅನೇಕ ಪ್ರಸಂಗಗಳಲ್ಲಿ ಕ್ಯಾತನೇ ದೇವೀರಿಯನ್ನು ಅನುಮಾನದಿಂದ ನೋಡುತ್ತಾನೆ. ಆಕೆಯ ಸಂಪಾದನೆ ಅನೈತಿಕ ಮೂಲಗಳಿಂದ ಬಂದಿರಬಹುದೇ ಎಂಬ ತಳಮಳಕ್ಕೆ ಒಳಗಾಗುತ್ತಾನೆ. ಈ ತಳಮಳ ತುಂಬಾ ಮಾನವೀಯವಾಗಿದೆ. ಏಕೆಂದರೆ ಇದು ಕ್ಯಾತನ ಆದರ್ಶ, ಗಾಢ ನೈತಿಕ ಪ್ರಜ್ಞೆ ತೋರುವಂತೆ ಕೆಲವೊಮ್ಮೆ ಆತನ ದೌರ್ಬಲ್ಯವನ್ನು ತೋರುತ್ತದೆ. ಅಂದರೆ ಕಾದಂಬರಿ ಕ್ಯಾತನನ್ನು

ಅನಗತ್ಯವಾಗಿ ಆದರ್ಶೀಕರಿಸುವುದಿಲ್ಲ ಬದಲಾಗಿ ಅವನ ಸೂಕ್ಷ್ಮ ನೈತಿಕ ಪ್ರಜ್ಞೆಯನ್ನು ಸ್ಪಷ್ಟವಾಗಿ ಗುರುತಿಸುತ್ತದೆ.

ಕಾದಂಬರಿಯಲ್ಲಿ ಕೊಳಗೇರಿಯ ಸ್ಥಿತಿಯ ಸದ್ಯದ ದುರಂತವನ್ನು ಬದಲಾವಣೆಯ ನಾಳಿನ ಕನಸಿನಲ್ಲಿ ತೆಳುಗೊಳಿಸುವುದಿಲ್ಲ. ದೇವೀರಿ ಪದ್ದಿ ತಮ್ಮ ಸ್ಥಿತಿಯನ್ನು ಮೀರುತ್ತಿದ್ದಾರೆ. ಆದರೆ ಮೀರುವ ಕ್ರಮದಲ್ಲಿ ನಿಜವಾಗಿ ಶೋಷಣೆಗೆ, ಅವಮಾನಕ್ಕೆ ಒಳಗಾಗುತ್ತಿದ್ದಾರೋ ಹೇಗೆ ಎಂಬ ಕ್ಯಾತನ ದುಗುಡ ಈ ಪ್ರಕ್ರಿಯೆಗೆ ತುಂಬಾ ಸಂಕೀರ್ಣವಾದ ನೈತಿಕ ಆಯಾಮವೊಂದನ್ನು ನೀಡುತ್ತದೆ. ಕೇವಲ ಭೌತಿಕ ಸ್ಥಿತಿಯ ಬದಲಾವಣೆ ನಿಜವಾದ ಬದಲಾವಣೆಯಲ್ಲ ಎಂಬ ತಾಂತ್ರಿಕ ದರ್ಶನ ಕೃತಿಯಲ್ಲಿ ಗುಪ್ತವಾಗಿ ಸುಳಿದಿದೆ. ಭೌತಿಕ ಸುಖಗಳನ್ನು ಕಾದಂಬರಿ ನೈತ್ಯಾತ್ಮಕವಾಗಿ ನೋಡುವುದಿಲ್ಲ. ಬದಲಾಗಿ ಕ್ಯಾತ ದೇವೀರಿ ಮತ್ತು ಪದ್ದಿಯರ ಹೊಸ ಬಳಕೆದಾರ ವಸ್ತುಗಳ ಬಗ್ಗೆ ತಾಳುವ ನಿಲುವು ಧ್ವನಿಪೂರ್ಣವಾಗಿದೆ. ಹೀಗೆ ಕಾದಂಬರಿಯಲ್ಲಿ ಸಂಘರ್ಷದ ಸ್ವರೂಪವನ್ನು ಗುರುತಿಸಬಹುದು.

ದಲಿತ – ಸವರ್ಣೀಯ ಪ್ರಶ್ನೆ ನಮ್ಮ ಕಾಲದ ಸಮಾಜದ, ಸಾಹಿತ್ಯದ ಒಂದು ಮುಖ್ಯ ಪ್ರಶ್ನೆ ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ಸಂಘರ್ಷ ಮತ್ತು ಸಮಸ್ಯೆಗಳನ್ನು ಎದುರಿಸುವಂತ ಕಥೆಗಳು ಸಾಕಷ್ಟು ಬಂದಿವೆ. ಸಮಾನ ಮತ್ತು ಮಾನವೀಯ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಸಂಘರ್ಷದ ಪ್ರಭಾವದ ನೆಲೆಗಳು ಲಂಕೇಶರ ಕಥೆಗಳಲ್ಲಿ ಕಂಡುಬರುತ್ತವೆ. ಅವರ 'ಸಹಪಾಠಿ' ಕತೆಯಲ್ಲಿ ಜಾಗೃತಗೊಂಡ ಸೂಕ್ಷ್ಮ ಸಂವೇದನೆಯುಳ್ಳ ಮನಸ್ಸು ಸವರ್ಣೀಯ ನೆಲೆಯಲ್ಲಿ ಸಿಕ್ಕಿಕೊಂಡು ವಿಲವಿಲ ಒದ್ದಾಡುತ್ತದೆ ಅಥವಾ ಹಳೆಯ, ಹೊಸ ಜೀವನ ಮೌಲ್ಯ ಮತ್ತು ಕ್ರಮಗಳಲ್ಲಿ ಸಿಕ್ಕಿಕೊಂಡು ತನ್ನ ದ್ವಂದ್ವದಲ್ಲಿ ತಾನೇ ತತ್ತರಿಸುತ್ತದೆ ಇಂಥ ಹಲವು ಸಾಧ್ಯತೆಗಳು ಸವರ್ಣೀಯ ನೆಲೆಯಿಂದಲೂ ಉಕ್ಕುತ್ತವೆ. ಜಾತಿ ಸಂಬಂಧಗಳ ಹಾಗೂ ಪಟೇಲ್ ಗಿರಿ ಹಿಡಿಸದ ಗುಲಾಮಗಿರಿ ಪದ್ಧತಿಯನ್ನು ನಿಗೂಢವಾಗಿ ವಿಶ್ಲೇಷಿಸುವ ಕಥೆ. ಪಟೇಲ್‌ಗಿರಿಯ ವ್ಯವಸ್ಥೆಯ ಹಿನ್ನೆಲೆಯಲ್ಲಿ ಹಿಂದಿನ ಮತ್ತು ಸಮಕಾಲೀನ ಬದುಕನ್ನು ಶೋಧನೆಯ ಶಿಸ್ತಿಗೆ ಅಳವಡಿಸುವುದರ ಮೂಲಕ ಕೆಳವರ್ಗದ ಜನರ ಬಡತನ, ಅನಕ್ಷರತೆ, ಅಜ್ಞಾನ ಮುಂತಾದ ಸಾಮಾಜಿಕ ದುರಂತವನ್ನು ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನೆಲೆಯಲ್ಲಿ ಈ ಕಥೆ ಚಿತ್ರಿಸುತ್ತದೆ.

ಪಾಳೆಗಾರಿಕೆಯ ಅಳಿದುಳಿದ ಘನತೆ–ಗೌರವಗಳ ಪ್ರತಿನಿಧಿ ಬಸವೇಗೌಡ ಇವನು ನಾಲ್ಕು ಗ್ರಾಮಗಳ ಗೌಡನಾದರೂ ಅಕ್ಷರ ಜ್ಞಾನವನ್ನು ಸಾಹಿತಿ ಭಗವಾನ್‌ನಂತಹ ಗೆಳೆಯರ ಸಹವಾಸದಿಂದ ಪಡೆದವನಾಗಿದ್ದಾನಲ್ಲದೆ, ಬದಲಾಯಿಸುತ್ತಿರುವ ಸಾಮಾಜಿಕ ಮೌಲ್ಯಗಳ ಅರಿವನ್ನು ಹೊಂದಿರುವನು ಈ ಅರಿವಿನ ಹೊರೆಯನ್ನೇ ಹೊತ್ತುಕೊಂಡು ವಂಶಪಾರಂಪರ್ಯದ ಪಾಳೇಗಾರಿಕೆಯನ್ನು ಮುಂದುವರೆಸಿಕೊಂಡು ಹೋಗುವ ಅನಿವಾರ್ಯತೆ ಇವನಿಗಿದೆ. ಬಲಿಷ್ಠ

ಹಿಂಬಾಲಕರ ಗುಂಪು ಕೂಡ ಇವನ ಬೆಂಬಲಕ್ಕಿದೆ. ಲಿಂಗಾಯತ ಹುಡುಗಿಯೊಬ್ಬಳು ಕೆಳಜಾತಿಯವನನ್ನು ಪ್ರೀತಿಸಿದಾಗ ಅದು ಹುಡುಗನ ಕೊಲೆಯಲ್ಲಿ ಪರ್ಯವಸಾನವಾಗುವುದು ಕಾಡು ನಾಶದ ಅನೇಕ ಕೃತ್ಯಗಳು ಈ ಪಾಳೇಗಾರಿಕೆಯಲ್ಲಿ ಸಾಮಾನ್ಯವಾಗಿ ನಡೆಯುತ್ತಲೇ ಇರುತ್ತವೆ. ಇಂತಹ ಸಂದರ್ಭದಲ್ಲಿ ಕಾಡು ನಾಶದ ವಿರುದ್ಧ ಹೋರಾಡಲು ಬಂದ ಪರಿಸರ ಜಾಗೃತಿ ತಂಡದವರು ಸದ್ದು ಗದ್ದಲವಿಲ್ಲದೆ ಊರು ಬಿಡಬೇಕಾದ ಪ್ರಸಂಗ ಏರ್ಪಟ್ಟಾಗ ದಲಿತ ಶಿಕ್ಷಕ ಶಿವಪ್ಪ ಇದರಿಂದ ಬೇಸರಪಟ್ಟುಕೊಳ್ಳುತ್ತಾನೆ. ಈ ಊರಿನಲ್ಲಿ ಹಲ್ಲೆ – ಅವಮಾನಗಳು ಹೆಚ್ಚಾಗುತ್ತಲೇ ಹೋಗುತ್ತವಲ್ಲದೆ ಗೌಡರ ಮಾನಸಿಕ ಅವಸ್ಥೆ ಕುಗ್ಗುತ್ತಲೇ ಹೋಗುತ್ತದೆ. ಇಲ್ಲಿ ಕಥೆ ಸಂಘರ್ಷ ಮತ್ತು ಸಮಾಜದಲ್ಲಿಯೇ ಮನುಷ್ಯ ಸಂಬಂಧಗಳನ್ನು ವಿವರಿಸುತ್ತದೆ. ಲಂಕೇಶರು ತಮ್ಮ ಹದಿಹರೆಯದ ಬಹುಪಾಲು ಜೀವನವನ್ನೆಲ್ಲಾ ಹಳ್ಳಿಯಲ್ಲೇ ಕಳೆದಿದ್ದರಿಂದ ಅವರ ಸಾಹಿತ್ಯಕ ವ್ಯಕ್ತಿತ್ವಕ್ಕೆ ಅವರ ಬಾಲ್ಯದ ಪರಿಸರ ಒಂದು ವರವಾಗಿ ಪರಿಣಮಿಸಿದೆ. ಹಾಗಾಗಿ ಅವರಿಗೆ ತಮ್ಮ ಕಥೆಗಳಲ್ಲಿ ಜೀವಂತ ಅನುಭವಗಳನ್ನು ಪುನರ್ ಸೃಷ್ಟಿಸಲು ಸಾಧ್ಯವಾಗಿದೆ ಎನಿಸುತ್ತದೆ. ಎಂದೋ ಆದ ಅವಮಾನ ಮತ್ತು ದಿಗ್ಭ್ರಮೆ ಎಂದೋ ನಾನು ಬಿಚ್ಚಲಾಗದ ಗಂಟುಗಳೊಂದಿಗೆ ಕಿತ್ತಾಡಿದ್ದು ಸೋತದ್ದು ಹಾಗೆಯೇ ಇನ್ನೊಂದು ಅರ್ಥದಲ್ಲಿ ಗೆದ್ದದ್ದು ಎಂಬ ಅವರ ನಂಬಿಕೆ ಸ್ಪಷ್ಟವಾಗಿಯೇ ಇದೆ. ಹಳ್ಳಿಯ ಬದುಕು, ಲಂಕೇಶರ ಲೈಂಗಿಕಾನುಭವಗಳಿಗೆ ನೀಡಿದ ತಿರುವು ಅತ್ಯಂತ ಪ್ರಭಾವಶಾಲಿಯಾದದ್ದು. ಇಂತಹ ಸಂಕೀರ್ಣತೆಯನ್ನೆಲ್ಲಾ 'ಉಮಾಪತಿಯ ಸ್ಕಾಲರ್ ಶಿಫ್ ಯಾತ್ರೆ' ಯ ನಾಯಕನ ಬಾಲಕನ ಪ್ರಜ್ಞೆಯು ಪ್ರತಿಬಿಂಬಿಸುತ್ತದೆ. ಎಳೆಯ ಹುಡುಗನೊಬ್ಬನ ಪ್ರೌಢಪ್ರಜ್ಞೆ ಬದುಕಿನ ಸಮಗ್ರ ವಿವರವನ್ನು ಅವಮಾನ, ಅನುಮಾನ, ದಿಗ್ಭ್ರಮೆ – ಮುಜುಗರಗಳನ್ನು ಉಮಾಪತಿಯ ಕಣ್ಣಲ್ಲಿ ರೂಪಿಸಲಾಗಿದೆ.

ಹಳ್ಳಿಯ ತನ್ನ ಮನೆಯಲ್ಲಿನ ಕೋಳಿ ಹುಂಜಗಳ ಮಿಲನ, ಹೆಣ್ಣುಕೋಳಿ ಮೊಟ್ಟೆ ಇಡುವುದು, ಮೊಟ್ಟೆಯ ಮೇಲೆ ದಿನಗಟ್ಟಲೇ ಕುಳಿತು ಹೇಳದೆ ಮರಿಮಾಡುವ ಸೃಷ್ಟಿಕ್ರಿಯೆಗಳನ್ನು ಮುಗ್ಧ ಹಾಗೂ ಕುತೂಹಲದ ಕಣ್ಣಿಂದ ಉಮಾಪತಿ ಗಮನಿಸುತ್ತಾನೆ. ಇವನು ಇನ್ನು ಚಿಕ್ಕವನು ಎಂದೇ ಅವನ ಅಸ್ತಿತ್ವವನ್ನು ನಿರಾಕರಿಸುತ್ತಾ ಹಿರಿಯರೆನಿಸಿಕೊಂಡವರು. ನಡೆಸುವ ನಾನಾ ತಪ್ಪುಗಳು ಉಮಾಪತಿಯಲ್ಲಿ ಗೊಂದಲ ದಿಗ್ಭ್ರಮೆಗಳನ್ನು ಮೂಡಿಸುತ್ತಿದೆ. ಬಾಲಕ ಉಮಾಪತಿಯ ಮುಂದೆ ನಿರಾತಂಕವಾಗಿ ಮೂತ್ರ ಮಾಡುವ ಸಿದ್ದಿ. ಸಿದ್ದಿ–ರಾಮರ ಸರಸ ಸಲ್ಲಾಪ ಸೀರೆ ಉಗುಚುವ ಅಕ್ಕ, ಅಕ್ಕ ಲಿಂಗಿಯ ಮೈ ಮುಟ್ಟಿ ಮಾತನಾಡಿಸುವ ನಿಂಗೇಗೌಡ ಅಕ್ಕ ಲಿಂಗಿಯ ಕಳ್ಳ ಬಸಿರಿಳಿಸಲು ತಾಯಿ ಪಡುವ ಪ್ರಯತ್ನ ಊರಿನವರ ಕುಹಕದ ಮತುಗಳು ನಗರದಲ್ಲಿ ವಿದ್ಯೆ ಪಡೆದ ಉಮಾಪತಿಯಲ್ಲಿ ಹೊಸ ಪ್ರಜ್ಞೆಯ ಅರ್ಥ ಮೂಡುತ್ತದೆ. ವಿದ್ಯೆಯಿಂದ ಪ್ರಾಪ್ತವಾದ ಜಾಗೃತಿ ಜೊತೆಗೆ ಸೀಬೇಹಣ್ಣನ್ನು ಕಿತ್ತು ಹುಸೇನಿಯೊಂದಿಗೆ ಜಗಳವಾಡುವ ಪ್ರಸಂಗ ಅಪಮಾನ ಅಕ್ಕನ ಬಸಿರಿನ ಪ್ರಸಂಗಗಳು ಸೃಷ್ಟಿಸುವ ತಲ್ಲಣಗಳು ಅವರ ಗ್ರಾಮೀಣ

ನಡವಳಿಕೆಗಳನ್ನು ಸೂಚಿಸುತ್ತದೆ. ತನಗಾಗುತ್ತಿರುವ ಅವಮಾನದ ತೀವ್ರತೆ ಇಡೀ ಕುಟುಂಬದ ಅವಮಾನ ಎನಿಸುವುದು. ಅವನ ಪರಿಸರದ ಬಾಹ್ಯ ನಡವಳಿಕೆಯೇ ಆಗಿದೆ. ಲಂಕೇಶರ ಗ್ರಾಮಸಂವೇದನೆಯಲ್ಲಿ ಅವ್ವ–ಅಕ್ಕ–ಅಣ್ಣ–ತಮ್ಮಂದಿರ ಸಂಬಂಧಗಳು ಅಪಾರ ಶ್ರದ್ಧೆಯಲ್ಲಿ ಚಿತ್ರಿಸಲ್ಪಟ್ಟಿವೆ. ಲಂಕೇಶರು ಶೋಧಿಸುವ ಗ್ರಾಮ ಸಮುದಾಯದಲ್ಲಿ ಆರೋಗ್ಯಕರ ಪ್ರೀತಿ–ವಾತ್ಸಲ್ಯ ನಂಬುಗೆಗಳ ಸಂಬಂಧಗಳಿಲ್ಲ. ಅಲ್ಲಿಯೂ ಕಾಣುವುದು ನಗರದ ವಿಕೃತಗಳನ್ನೇ ಮೋಸ, ವಂಚನೆ, ಅನ್ಯಾಯ, ಅಸೂಯೆ, ಸ್ವಾರ್ಥ, ಹಾದರ, ಅನೈತಿಕಸಂಬಂಧ ಇತ್ಯಾದಿಯಾಗಿ ಸಾಮಾಜಿಕ ಅಪಮೌಲ್ಯಗಳಾದ ಹೀನತೆಗಳೇ ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನೆಲೆಯಲ್ಲಿ ಕಾಣುವ ಮನುಷ್ಯ ಸಂಬಂಧಗಳನ್ನು ವಿಶಿಷ್ಟವಾಗಿ ಈ ಕಥೆಯಲ್ಲಿ ಚಿತ್ರಿಸಲಾಗಿದೆ.

ಭಾರತದ ಗ್ರಾಮ ಸಂಸ್ಕೃತಿಯ ವಿಭಿನ್ನ ಆಯಾಮಗಳನ್ನು ಚಿತ್ರಿಸುವ ಕಥೆ 'ಮಾರಲಾಗದ ನೆಲ' ಹಳ್ಳಿಯಲ್ಲಿನ ಕೀಳು ಮಟ್ಟದ ರಾಜಕೀಯ, ಲಿಂಗ ಅಸಮಾನತೆಗಳಿಂದ ತೀವ್ರವಾಗಿ ಘಾಸಿಗೊಂಡ ನಾಗರಿಕನ ದುರಂತ ಹಳ್ಳಿಗೆ ಬಂದು ನೆಲೆಗೊಂಡ ವಿದ್ಯಾವಂತ ಹಳ್ಳಿ ಹಾಗೂ ಹಳ್ಳಿಗರ ಮುಗ್ಧ ಹಾಗೂ ಶಾಂತ ಬದುಕನ್ನು ನಾಶ ಮಾಡುವ ಸ್ವಾರ್ಥಿಯ ಚಿತ್ರಣ ಈ ಕಥೆಯಲ್ಲಿದೆ. ಆಧುನಿಕ ವಿದ್ಯಾಭ್ಯಾಸವನ್ನು ಪಡೆದ ವಿದ್ಯಾವಂತ ನಿರುದ್ಯೋಗಿ ಯುವಕ ರುದ್ರಮೂರ್ತಿ ಆಧುನಿಕ ತಂತ್ರಜ್ಞಾನದ ಕೃಷಿ ಪದ್ಧತಿ ಹಾಗೂ ಸಹಕಾರ ಮನೋಭಾವದೊಂದಿಗೆ ಹಳ್ಳಿಗೆ ಬಂದಿದ್ದಾನೆ. ವಿದ್ಯೆ ಹಾಗೂ ವಿಜ್ಞಾನ ಉಪಕರಣಗಳು ಹಳ್ಳಿಯವರಿಗೆ ಉಪಯುಕ್ತವಾಗಬೇಕೆಂಬುದು ಗಾಂಧೀ ತತ್ವ ರುದ್ರಮೂರ್ತಿ ಆಧುನಿಕ ಉಪಕರಣಗಳನ್ನು ಕೃಷಿಯಲ್ಲಿ ಹಳ್ಳಿಗಳಿಗೆ ಪರಿಚಯಿಸುವುದರ ಮೂಲಕ ಹಳ್ಳಿಗಳನ್ನು ಅಭಿವೃದ್ಧಿಯತ್ತ ಕೊಂಡೊಯ್ದಿದೆ ಸ್ವಾರ್ಥ ಹಿತಾಸಕ್ತಿಗಳಿಗಾಗಿ ಬಳಸಿಕೊಳ್ಳುತ್ತಾನೆ. ಆ ಮೂಲಕ ಎಡಪಾಲ ಹಳ್ಳಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯ್ನಿಸುತ್ತಾನೆ. "ನಂಗೇನೋ ಅನುಮಾನ ನೋಡು ನಿನಗೆ ಕೆಟ್ಟ ಸುದ್ದಿ ಹೇಳೋಕೆ ಇಷ್ಟವಿಲ್ಲ ಬ್ಯಾಸರ ಪಡಿಸೋಕೆ ನನಗೆ ಇಷ್ಟವಿಲ್ಲ. ಈ ಊರಿಗೆ ಭೂತ ಹೊಕ್ಕಿದೆ. ತಮ್ಮ ಈ ಭೂತದಿಂದ ಏನೇನು ಅನಾಹುತ ಆಗುತ್ತೋ ಗೊತ್ತಿಲ್ಲ. ಎಲ್ಲರ ತಲೇಲೂ ಬರೀ ಲೆಕ್ಕಾಚಾರ ಯಾವುದಾದರೂ ಒಂದು ಮನೆಗೆ ಹೋಗಿ ಕೊಂಚ ಮಜ್ಜಿಗೆ ಕೇಳು ಗೊತ್ತಾಗ್ತೈತೆ. ಆಣೆಗೆ ಸೇರು ಮಜ್ಜಿಗೆ ಮಾರಿದ್ದು ಈ ಊರಲ್ಲೇನಾದ್ರೂ ಇತ್ತಾ? ಪಟ್ಟಣ ಹತ್ರಕ್ಕೆ ಬರ್ತಿದೆ ತಮ್ಮ "ನೋಡಿ ಯಜಮಾನ್ರೇ ದುರುಗ ನನ್ನ ಜಮೀನು ಬಿಡೋ ಮಾತು ಒತ್ತಟ್ಟಿಗಿರಲಿ, ಅವನು ಎಂಥೋನೋ ಅಂತನಂಗೆ ಗೊತ್ತು. ಈಗ ಅದನ್ನು ಬಿಡಿಸಿಕೊಂಡ್ರೆ ಬೇರೆಯಾರಾದ್ರೂ ಆರಂಭ ಮಾಡಬಹುದ? ಹೇಳಿ ಯಾರಾದ್ರೂ ಕೊಳ್ಳಬಹುದಾ? ಹೇಳಿ.

ಮಹಾದೇವಪ್ಪ ಯೋಚಿಸುತ್ತಾ ಕೂತರು, ಸಂಜೆಯಾಗತೊಡಗಿತ್ತು. ಕರುಗಳು ಹಕ್ಕೆಯಿಂದ ಕೂಗುತ್ತಿದ್ದವು. ಹೆಂಗಸರು ಬರಲು ತೆಗೆದುಕೊಂಡು ಅಂಗಳ ಗುಡಿಸುತ್ತಿದ್ದರು. ಮಕ್ಕಳು

ಸಗಣಿ ತಟ್ಟಿ ಗಳನ್ನು ತಂದು ಉದ್ದನೆಯ ದಾರಕಟ್ಟಿ ತಟ್ಟಿಗೆ ಒದೆಕೊಟ್ಟು ದೂರದಲ್ಲಿ ಕೂತು ಗುಬ್ಬಚ್ಚಿಗಳನ್ನು ಹಿಡಿಯಲು ಹೊಂಚು ಹಾಕುತ್ತಿದ್ದರು. ಬುಗುರಿಯಾಡುತ್ತಾ ಗಿಚ್ಚಾಬೊಡೆದು ಕೂಗಾಡುತ್ತಿದ್ದರು."[೨೭] ಹೀಗೆ ಮಹದೇವಪ್ಪ ಅವರಿಗೆ ಆಧುನಿಕತೆಯ ಹಳ್ಳಿಯ ಪರಿಸರದ ಮೇಲೆ ಬೀರಿರುವ ದುಷ್ಪರಿಣಾಮಗಳ ಅರಿವಿದೆ. ಆದ್ದರಿಂದಲೇ ಸುಖ ನೆಮ್ಮದಿ, ಶಾಂತಿ ಎಲ್ಲವನ್ನು ಕಸಿದುಕೊಂಡಿರುವ ನಾಗರಿಕತೆಯ ಸೌಲಭ್ಯ ಹಾಗೂ ಆ ಸೌಲಭ್ಯವನ್ನು ಒದಗಿಸಿದ ಆಧುನಿಕ ವಿದ್ಯಾವಂತ ಯುವಕ ರುದ್ರಮೂರ್ತಿಯ ನಡವಳಿಕೆಯ ಬಗ್ಗೆ ಊರಿನ ಹಿರಿಯರಿಗೆ ಅಸಮಾಧಾನಗಳಿವೆ. ರುದ್ರಮೂರ್ತಿ ಹಳ್ಳಿಗರ ಮೌಢ್ಯವನ್ನು ದೂರ ಮಾಡದೆ ತನ್ನ ಹಣ, ಹೆಂಡ, ವಿದ್ಯೆ, ಅಧಿಕಾರ, ಪ್ರಭಾವಗಳನ್ನು ಬಳಸಿ ಇಡೀ ಊರನ್ನೇ ತನ್ನ ವಶಕ್ಕೇರಿಸಿಕೊಳ್ಳುತ್ತಾನೆ. ನಗರದಿಂದ ಬಂದ ಆದರೆ ಹಳ್ಳಿಯ ನೀಚ ರಾಜಕೀಯ ತಿಳಿಯದ ಮುಗ್ಧ ವಿಶ್ವನಾಥ ತನ್ನದೇ ನೆಲವನ್ನು ತಾನೇ ಮಾರಲಾಗದ ಸ್ಥಿತಿಗೆ ರುದ್ರಮೂರ್ತಿ ತಂತ್ರ ಹೂಡುತ್ತಾನೆ.

ರುದ್ರಮೂರ್ತಿ ವರ್ಷಗಳಿಂದ ಪಾಳುಬಿಟ್ಟ ನೆಲವನ್ನು 'ದೆವ್ವದ ಹೊಲ' ಎಂದು ಪ್ರಚಾರಪಡಿಸಿ ಊರಿನವರನ್ನು ನಂಬಿಸುತ್ತಾನೆ. ಕುಡಿತ ಬಿಡಿಸಲು ವಿಶ್ವನಾಥ ದುರುಗನಿಗೆ ಆಣೆ-ಪ್ರಮಾಣ ಮಾಡಿಸಿದರೆ ರುದ್ರಮೂರ್ತಿ ಹೆಂಡ ಕುಡಿಸಿ ದುರುಗನ ಜೀವ ತೆಗೆಯುತ್ತಾನೆ. ಸಂಕ್ರಪ್ಪನ ಹೆಂಡ-ಹೆಣ್ಣಿನ ಚಪಲಗಳನ್ನು ಪೂರೈಸುತ್ತಾ, ಪ್ರೋತ್ಸಾಹಿಸುತ್ತಾ, ಅವನ ಮಗಳು ಸಾವಂತ್ರಿಯನ್ನು ಬಳಸಿಕೊಳ್ಳುತ್ತಾನೆ. ಈ ಎಲ್ಲಾ ಕ್ರೌರ್ಯಗಳೂ ಆಧುನಿಕತೆಯ ಅಟ್ಟಹಾಸವಾಗಿಯೇ ತೋರಿಬರುತ್ತದೆ. ಹಳ್ಳಿಗರ ಅವಶ್ಯಕತೆಗಳನ್ನು ಪೂರೈಸುತ್ತಾ ಹಳ್ಳಿ ಪರಿಸರದ ಮುಗ್ಧತೆಯನ್ನು ನಾಶ ಮಾಡುವಲ್ಲಿ ರುದ್ರಮೂರ್ತಿ ಯಶಸ್ವಿಯಾಗಿದ್ದಾನೆ. ಊರಿನ ಮನಸ್ಸುಗಳ ನಡುವೆ ಕಂದರವನ್ನು ಸೃಷ್ಟಿಸುವಲ್ಲಿ ಸಫಲನಾಗುತ್ತಾನೆ. ಈ ಮೂಲಕ ಸಂಘರ್ಷ ಮತ್ತು ಸಮಸ್ಯೆಗಳನ್ನು ಸೃಷ್ಟಿ ಮಾಡುತ್ತಾನೆ.

ಇಲ್ಲಿ ಆಧುನಿಕತೆ ಎಂದರೆ ದಗಾ, ಮೋಸ, ಅವ್ಯವಸ್ಥೆ ಹಾಗೂ ಅನಾಚಾರಗಳೊಂದಿಗೆ ಕೈ ಜೋಡಿಸುವುದು, 'ಮಾರಲಾಗದ ನೆಲ' ಕಥೆಯ ನಾಯಕ ಇಂಥಹ ಆಧುನಿಕ ಹಿಂಸೆ-ಕ್ರೌರ್ಯಗಳಿಗೆ ಬಲಿಯಾಗಿದ್ದಾನೆ. ನರಕ ರೂಪವಾಗುತ್ತಿರುವ ಸ್ವಾತಂತ್ರ್ಯೋತ್ತರ ಗ್ರಾಮವಾಗಿ ಈ ಎಡಪಾಲ ಹಳ್ಳಿಯು ಚಿತ್ರಿತವಾಗಿದೆ. ಹಳ್ಳಿಯ ಜೀವನ ಮೇಲು ನೋಟಕ್ಕೆ ಕಾಣುವಷ್ಟು ಸರಳವಲ್ಲ, ಮೂಢನಂಬಿಕೆ, ಕಪಟ, ಮೋಸ, ಹಳ್ಳಿಯ ಬದುಕು ತುಂಬಾ ಸಂಕೀರ್ಣವಾದುದು, ಇಂತಹ ಹಳ್ಳಿಯಲ್ಲೇ ಹುಟ್ಟಿ ಬೆಳೆದು ಇದೀಗ ಉದ್ಯೋಗದ ನೆಪದಿಂದ ನಗರವಾಸಿಯಾದ ವಿಶ್ವನಾಥ ಹಳ್ಳಿಯಲ್ಲಿನ ಸ್ಥಿತ್ಯಂತರಗಳನ್ನು ತಿಳಿಯದೆ ತನ್ನ ನೆಲವನ್ನು ತಾನೇ ಮಾರಲಾಗದೆ, ಅಸಹಾಯಕತೆಯಿಂದ ಹಿಂದಿರುಗುತ್ತಾನೆ. ಹಳ್ಳಿಯಲ್ಲಿನ ಮೂರು ದಿನಗಳು ಅವನ ಪಾಲಿಗೆ

---

೨೭. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೨೩೦.

ಸಮಸ್ಯೆಗಳ ಚಕ್ರವ್ಯೂಹದಂತೆ ಕಂಡು ನಗರ ಸೇರಿದರೆ ಸಾಕು ಎನಿಸುತ್ತದೆ. ಕಥೆಯ ಸಂಕೀರ್ಣತೆ ವ್ಯಕ್ತಿಯಿಂದ ವ್ಯಕ್ತಿಗೆ ಘಟನೆಯಿಂದ ಘಟನೆಗೆ ಬೆಳೆಯುತ್ತಾ ಸಂಕೀರ್ಣವಾಗುತ್ತಾ ಹೋಗುತ್ತದೆ. ಇದರ ಮೂಲಕ ಸಂಘರ್ಷ ಮತ್ತು ಸಮಸ್ಯೆಯನ್ನು ಮನುಷ್ಯ ಸಂಬಂಧಗಳು ಎದುರಿಸುತ್ತವೆ.

ಭಾರತೀಯ ಗ್ರಾಮಗಳು ಕೇವಲ ನೈತಿಕತೆಯಲ್ಲದೆ ಮುಗ್ಧತೆ ಹಾಗೂ ಅಪಾರವಾದ ಮಾನವೀಯ ಕಾಳಜಿಯನ್ನು ಮಾತ್ರ ಹೊಂದಿಲ್ಲ. ಹಠಮಾರಿತನ, ಗೊಂದಲ, ಅಸಂಬದ್ಧತೆ, ಒಡೆದ ಮನಸ್ಸು, ಅನೈತಿಕತೆ, ಸಂಘರ್ಷ, ಸಮಸ್ಯೆ ಅನೇಕ ರೀತಿಯ ಹಿಂಸೆಗಳಿಂದಾಗಿ ಅಸಹನೀಯವಾಗಿದೆ. ವರ್ಗ–ವರ್ಣ–ವೈಷಮ್ಯ, ಶೋಷಣೆ, ಸಮಾಜಬಾಹಿರವಾದ ಲೈಂಗಿಕ ಸಂಬಂಧಗಳೆಲ್ಲಾ ಹಳ್ಳಿ ಬದುಕಿನಲ್ಲಿ ದಟ್ಟೈಸಿಕೊಂಡಿದೆ ಇಂತಹ ಸಂಕೀರ್ಣತೆಗಳನ್ನೆಲ್ಲಾ ಪಡೆದ 'ಉರಿದ ಊರಿನವರು' ಕಥೆಯು ಬೈಲಳ್ಳಿ ಎಂಬ ಹಳ್ಳಿ ಹಾಗೂ ಹಳ್ಳಿಗರ ಸಣ್ಣತನಗಳನ್ನು ಅನಾವರಣಗೊಳಿಸಿದೆ. ಇಂದಿರಾಗಾಂಧಿ ಸ್ಟೈಲಿನಲ್ಲಿರುವ ವಿಧವೆ ಚೆಲುವಮ್ಮ ತನ್ನ ಪುಟ್ಟ ಕುಟುಂಬವನ್ನು ಪುರುಷ ಸಮಾಜದ ದಬ್ಬಾಳಿಕೆಯಿಂದ ರಕ್ಷಿಸಿಕೊಳ್ಳಲು ಊರಿನ ಪ್ರತಿಷ್ಠಿತ ವ್ಯಕ್ತಿ ಭೈರಪ್ಪ ಮೇಷ್ಟ್ರನ್ನು ಬಳಸಿಕೊಳ್ಳುತ್ತಾಳೆ. "ಇಲ್ಲಿಯ ಒಗಟೇನೆಂದರೆ ಚೆಲುವಮ್ಮ ಇವತ್ತು ನಿತ್ಯಕ್ಕಿಂತ ಹೆಚ್ಚು ಗದ್ದಲ ಮಾಡಲು ಕಾರಣ, ಭೈರಪ್ಪ ಮಾಸ್ಟರ್ ಊರಲ್ಲಿರಲಿಲ್ಲ. 'ಆ ಮೇಷ್ಟ್ರು ಊರಲಿಲ್ಲ ಅಂತ ನೋಡಿಕೊಂಡು ಮನೆ ನುಗ್ಗಿದ್ದಾರೆ.' ಎಂದು ಚೆಲುವಮ್ಮ ಅತ್ತಳು. ಭೈರಪ್ಪ ಮಾಸ್ತರು ನೆರೆಯೂರಾದ ಕಳ್ಳಸಂದ್ರದಲ್ಲಿ ಸ್ಕೂಲ ಟೀಚರ್ ಆಗಿದ್ದು ತಮ್ಮ ಊರಾದ ಬೈಲಳ್ಳಿಯಲ್ಲಿ ಮನೆ ಮಾಡಿಕೊಂಡು ಜೋರಾಗಿದ್ದರು. ನಾಲ್ಕು ಜೊತೆ ಎತ್ತು ಐವರು ಆಳುಗಳು, ಇಪ್ಪತ್ತೆಕರೆ ಭೂಮಿ ಮತ್ತು ಊರಿಗೇ ದೊಡ್ಡದಾದ ದನದಕೊಟ್ಟಿಗೆ ಮತ್ತು ಪತಳ ಭೈರಪ್ಪ ಮಾಸ್ತರಿಗಿತ್ತು. ಆಸ್ತಿಯಲ್ಲಿ ಪಾಲು ಕೇಳಬಹುದಾಗಿದ್ದ ತಮ್ಮನನ್ನು ಹದಿನೆಂಟು ವರ್ಷದ ಹಿಂದೆಯೇ ಸೈನ್ಯ ಸೇರಲು ಕಳಿಸಿದ್ದರು. ಭೈರಪ್ಪ ದೇಶಭಕ್ತಿ ಮತ್ತು ವೀರಸ್ವರ್ಗದ ಬಗ್ಗೆ ಕೊಟ್ಟ ಉಪನ್ಯಾಸಕ್ಕೆ ಕರಗಿ ಹೋದ ಈ ತಮ್ಮ ಧರ್ಮಪ್ಪ ಸೈನ್ಯಸೇರಿ ಚೈನಾ ಯುದ್ಧದಲ್ಲಿ ಸತ್ತು ಹೋಗಿದ್ದ, ಯುದ್ಧದಲ್ಲಿ ಪ್ರಾಣತ್ಯಾಗ ಮಾಡಿದವನ ಅಣ್ಣನೆಂಬ ಒಳ್ಳೆಯ ಹೆಸರಿನೊಂದಿಗೇ ಭೈರಪ್ಪ ಮಾಸ್ತರಿಗೆ ತಮ್ಮನ ತಂಟೆಯೇ ಇಲ್ಲದೆ ಇಡೀ ಆಸ್ತಿ ದಕ್ಕಿ ಹೋಗಿತ್ತು. ನಾಲ್ಕು ಜನ ಗಂಡು ಮಕ್ಕಳಲ್ಲಿ ಮೂವರು ಚಿಕ್ಕಂದಿನಲ್ಲಿಯೇ ತೀರಿಕೊಂಡು ಎರಡನೆಯವನಾದ ಚಂದ್ರು ಹೊಲಗದ್ದೆ ನೋಡಿಕೊಂಡು ಪೊಲೀಸ್ ಆಫೀಸರ್‌ಗಳೊಂದಿಗೆ ಸಲಿಗೆಯಿಂದಿದ್ದ."[೨೮] ಮೇಷ್ಟ್ರ ಕುಟುಂಬ ಮತ್ತು ಆತನ ಪೋಷಾಕು ಈ ರೀತಿ ಇದೆ. ಆ ಹಳ್ಳಿಯವರಲ್ಲೆಲ್ಲಾ ಅಪರೂಪದ ವಿದ್ಯೆಯನ್ನು ಪಡೆದ

---

೨೮. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೫೪.

ಚಲುವಮ್ಮ, ಆ ವಿದ್ಯೆಯನ್ನು ತನ್ನ ರಕ್ಷಣೆಗಾಗಿ ದಾಳದಂತೆ ಬಳಸುತ್ತಾಳೆ. ಗಂಡು ದಿಕ್ಕಿಲ್ಲದ ಚೆಲುವಮ್ಮ ಗಂಡು ಲಿಂಗದ ದಬ್ಬಾಳಿಕೆಯನ್ನು ತಾನೇ ಒಳಗೊಳ್ಳುತ್ತಾಳೆ. ಬೈಲಹಳ್ಳಿಯ ಪ್ರತಿಯೊಬ್ಬರ ಮೇಲೂ ಕೇಸು ಹಾಕಿ ಕೋರ್ಟಿಗೆ ಅಲೆಸುವ ಬಂಡಾಯಗಾರ್ತಿ ಚೆಲುವಮ್ಮ ಊರಿನ ಗಂಡಸರ ದೃಷ್ಟಿ ತನ್ನ ಹಾಗೂ ತಂಗಿಯ ಮೇಲೆ ಬೀಳದಂತೆ ಕಾಯುತ್ತಾಳೆ. ಹಳ್ಳಿಯ ಕುಡಿತ, ಬಡತನ, ನಿರುದ್ಯೋಗ, ರಾಜಕೀಯ, ಪುಂಡಾಟಿಕೆ, ಕುಡಿತಗಳಂತಹ ಅನೀತಿಯನ್ನು ತನ್ನ ಲಾಭಕ್ಕಾಗಿ ಬಳಸಿಕೊಳ್ಳುವ ಮೇಷ್ಟ್ರು ಊರಿನವರ ಪಾಲಿಗೆ ಆದರ್ಶ ವ್ಯಕ್ತಿ ಇವರಿಬ್ಬರ ಒಡನಾಟ ಚೆಲುವಮ್ಮನ ಬಜಾರಿತನದಿಂದಾಗಿ ಊರಿನವರ ಒಡೆದ ಮನಸ್ಸುಗಳು ಅವಳ ಮನೆಯನ್ನೇ ಉರಿಸಿ ಹಾಕುತ್ತವೆ. ದೀಪದ ಸುತ್ತ ಹಾರಾಡಿ ಬದುಕು ಕಳೆದುಕೊಳ್ಳುವ ಪತಂಗದಂತೆ ಯಜಮಾನ್ಯ ಸಂಸ್ಕೃತಿಯ ವಿರುದ್ಧ ಹೋರಾಡಿ ತಾನೇ ಸುಟ್ಟು ಭಸ್ಮವಾಗುವುದು ದುರಂತ ಎನಿಸುತ್ತದೆ. ಲಂಕೇಶರ ಕಥನ ಸಾಹಿತ್ಯದಲ್ಲಿ ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳು ಮೇಲೆ ವಿವರಿಸಿದ ಹಾಗೆ ಸಮಕಾಲೀನ ಸಂದರ್ಭದ ಸ್ಥಿತಿಯನ್ನು ಮನುಷ್ಯ ಯಾವೆಲ್ಲಾ ರೀತಿಯಲ್ಲಿ ಎದುರಿಸುತ್ತಾನೆ ಎಂಬ ನಿಲುವನ್ನು ಲೇಖಕರು ಕಟ್ಟಿಕೊಡುತ್ತಾರೆ. ಮನುಷ್ಯನ ಪಾತಳಿಯಲ್ಲಿ ಸಂಘರ್ಷವೇರ್ಪಟ್ಟಾಗ ಸಾಮಾಜಿಕ ಸಮಸ್ಯೆ ಹೇಗೆ ಉಂಟಾಗುತ್ತದೆ ಆ ಮೂಲಕ ಚಿಕಿತ್ಸಕ ಮನೋಭಾವದ ಚಿಂತನೆ ವರ್ತಮಾನಕ್ಕೆ ಹೇಗೆ ಮುಖಾಮುಖಿಯಾಗಿದೆ ಎಂಬುದನ್ನು ಲಂಕೇಶರು ಚಿಂತಿಸುತ್ತಾರೆ.

**೭.೪. ಆಚರಣೆ ಮತ್ತು ಶಿಷ್ಟಾಚಾರದೊಳಗಿನ ಮನುಷ್ಯ ಸಂಬಂಧಗಳು**

ಲಂಕೇಶರದು ಮೂಲತಃ ಸಮಾಜವಾದಿ ಮನೋಭಾವ. ಸಾಮಾಜಿಕ ಚಿಂತನೆಗಳಿಂದ ಪ್ರಭಾವಿತರಾದವರು. ಸಹಜವಾಗಿಯೇ ಇಂತಹ ಸೂಕ್ಷ್ಮಗಳು ಕೆಲವು ಸಂದರ್ಭದಲ್ಲಿ ವ್ಯಕ್ತಿಯನ್ನು ಮೀರಿ ಬೆಳೆಯುವಂತೆ ಮಾಡುತ್ತವೆ. ನವ್ಯದ ಆಶಯ ಹೊಂದಿದ್ದ ಲಂಕೇಶರು ಆ ಮನೋಧರ್ಮವನ್ನು ಸಾಮಾಜಿಕ ಆಶಯಗಳನ್ನು ಅಭಿವ್ಯಕ್ತಿಸಲು ಅನುವು ಮಾಡಿಕೊಡುತ್ತಾರೆ. ಒಬ್ಬ ಲೇಖಕ ತನ್ನ ಸಾಮಾಜಿಕ ಹೊಣೆಗಾರಿಕೆಯನ್ನು ಅರಿತುಕೊಂಡಾಗ ತನ್ನ ಮೇಲೆ ಆವಾಹಿಸಿಕೊಳ್ಳುವ ಜವಾಬ್ದಾರಿಗಳು ವಿಶಿಷ್ಟ ಬಗೆಯದಾಗಿರುತ್ತವೆ. ಸಮಾಜ ಮತ್ತು ಅದನ್ನು ಹೊಂದಿಕೊಂಡ ಜನರನ್ನು ತಲುಪಬೇಕೆಂಬುದು ಲಂಕೇಶರ ಸಾಮಾಜಿಕ ಆಶಯವಾಗಿದ್ದು ಸಾಹಿತ್ಯದಲ್ಲಿ ಸಂಬಂಧಗಳ ಹುಡುಕಾಟವೇ ಇವರ ಚಿಂತನೆಯಾಗಿದೆ. ತನ್ನೊಳಗಿನ ತುಡಿತದ ನೆಲೆಗಳನ್ನು ಸ್ಪಷ್ಟ ಮಾಡಿಕೊಳ್ಳುವ ಪರಿಯೇ ನಿಜವಾದ ಸಂವೇದನಾಶೀಲ ಲಕ್ಷಣವಾಗಿದೆ. ಆಚರಣೆ ಮತ್ತು ಶಿಷ್ಟಾಚಾರದೊಳಗಿನ ಮನುಷ್ಯ ಸಂಬಂಧಗಳನ್ನು ಲಂಕೇಶರು ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿರುವ ಬಗೆಯನ್ನು ನೋಡಬಹುದು.

'ಬಿರುಕು' ಕಾದಂಬರಿಯಲ್ಲಿ ಲಂಕೇಶರು ನಿರೂಪಕನಾಗಿ ಕತೆಗಾರ ಹಾಗೂ ಕಾದಂಬರಿಕಾರನಾಗಿ ಎಲ್ಲೂ ಕಂಡುಬರುವುದಿಲ್ಲ. ಬಸವರಾಜ ಕಾದಂಬರಿಯ ಪ್ರಧಾನ ಪಾತ್ರವಾಗಿರುವಾಗೆಯೇ ಕತೆಯ ನಿರೂಪಕ ಕೂಡ, ಅಲ್ಲದೆ ಸಮಾಜ, ಸಂಸ್ಕೃತಿ, ಪಾತ್ರಗಳ ಬಗ್ಗೆ ವಿಮರ್ಶಕ ಅಷ್ಟೇ ಅಲ್ಲದೆ ಪಾತ್ರಗಳ ನಡವಳಿಗಳ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳುವ ಮೂಲಕ ಈತನ ಸರ್ವ ಸ್ವಾತಂತ್ರ್ಯವುಳ್ಳ ದಂಡನಾಯಕನಾಗಿ ಕಾಣುತ್ತಾನೆ. ಈ ಬಗೆಯ ರಚನೆಯ ಮೂಲಕ ಇಡೀ ಕಾದಂಬರಿಯನ್ನು ನಿಯಂತ್ರಿಸುತ್ತಿರುವ ನಿರೂಪಕ ತನ್ನ ಪೂರ್ವ ನಿರ್ಧಾರಿತವಾದ ಸಾಮಾಜಿಕ ವ್ಯವಸ್ಥೆಯನ್ನು ಖಚಿತವಾಗಿ ಸೂಚಿಸುತ್ತಾನೆ. ಲಂಕೇಶರು 'ಬಿರುಕು'ವಿನಲ್ಲಿ ಹಲವಾರು ಪಾತ್ರ ಸಂಬಂಧಗಳ ಬಗ್ಗೆ ತರುವ ಅನೇಕ ಸನ್ನಿವೇಶಗಳು ಘಟನಾವಳಿಗಳಂತೆ ಕಾಣುತ್ತವೆ. ಅದು ನಿರೂಪಕ ಹಾಗೂ ಕಾದಂಬರಿಕಾರನ ಪೂರ್ವ ನಿಶ್ಚಿತವಾದ ಮಾದರಿಯಾಗಿದ್ದರು ಎಲ್ಲಿಯೂ ಆ ಅನುಭವ ಓದುಗನಿಗೆ ದರ್ಶಿಸದಂತೆ ಸಮಸ್ಯಾತ್ಮಕವಾಗಿ ಇರುವುದನ್ನು ಕಾದಂಬರಿಯ ಸನ್ನಿವೇಶಗಳು ಪುಷ್ಟೀಕರಿಸುತ್ತವೆ.

ಒಂದು ಸೃಷ್ಟ್ಯಾತ್ಮಕ ಸನ್ನಿವೇಶದ ಹಿನ್ನೆಲೆಯನ್ನು ಶಿಷ್ಟಾಚಾರದ ನೋಟಗಳು ಬಿರುಕುವಿನಲ್ಲಿ ಮುಖ್ಯವಾಗುತ್ತವೆ. ಗಂಗಯ್ಯ ಇಂದಿರೆಯನ್ನು ತನ್ನ ಮುಂದೆ ಓಡಾಡಲು ಪ್ರೇರೇಪಿಸುತ್ತಿರಬಹುದು ಎಂಬ ಶಂಕೆ ಕಾದಂಬರಿಯ ಮೊದಲಿಗೇ ಬಸವರಾಜುವಿಗೆ ಬಂದಿತ್ತು. ಈ ಆಚರಣೆಯ ನೋಟಕ್ಕೆ ಕಾರಣ ತಿಮಿಂಗಿಲ, ಸುವರ್ಣನು ಒಡ್ಡಿರುವ ಬರೆಯಿಂದ ತಪ್ಪಿಸಿಕೊಳ್ಳಲು ಅವನು ಓಡಿ ಹೋಗಬೇಕಾಗುತ್ತದೆ. ಈ ವ್ಯತ್ಯಾಸಕ್ಕೆ ಮುಖ್ಯಕಾರಣ ತಿಮಿಂಗಿಲ, ಸುವರ್ಣರು ಗಂಗಯ್ಯನ ಸಾಮಾಜಿಕ ಮಟ್ಟಕ್ಕಿಂತ ಮೇಲು ಮಟ್ಟದಲ್ಲಿರುವುದು ಬಸವರಾಜ ಶಾಂತಾಳಿಗೆ ಹೇಳುವ ಮಾತೊಂದಿಗೆ. 'ನಿಮ್ಮ ಮನೆ ಯಾವಾಗಲೂ ನನ್ನ ಮನೆ ಆಗಿದೆ. ನಿನ್ನ ತಂದೆ ತಾಯಿ ಯಾವಾಗಲೂ ನನ್ನನ್ನು ಮಗನ ಹಾಗೆ ಕಂಡಿದ್ದಾರೆ' ಎನ್ನವ ಮಾತು ತಾನು ಸಿಕ್ಕಿಹಾಕಿಕೊಂಡ ಸನ್ನಿವೇಶದಿಂದ ತಪ್ಪಿಸಿಕೊಳ್ಳಲು ಮಾತ್ರ ಬಸವರಾಜ ಹೇಳುವ ಮಾತು ಎನಿಸುವುದಿಲ್ಲ. ರಂಗಯ್ಯ ಬಸವರಾಜನಿಗೆ ಒಂದು ಸಾಧ್ಯತೆಯನ್ನು ಸೂಚಿಸುತ್ತಾನೆ. ಆದ್ದರಿಂದ ಬಿರುಕು ಬಸವರಾಜ ಮತ್ತು ಅವನ ಪರಿಸರದಲ್ಲುಂಟಾದ ಬಿರುಕು ಮಾತ್ರವಲ್ಲ; ಬಸವರಾಜನ ಪ್ರಜ್ಞೆಯಲ್ಲೇ ಬಿರುಕಿದೆ.

ಬಸವರಾಜ ಮೊದಲಿನಿಂದಲೂ ತನ್ನ ಸುತ್ತಲಿನ ಸಮಾಜದ ಮೌಲ್ಯಗಳನ್ನು ಒಂದು ಬಗೆಯ ತಿರಸ್ಕಾರದಿಂದ, ಬೇಜವಾಬ್ದಾರಿಯಿಂದ ನಿರಾಕರಿಸುತ್ತ ಹೋಗುತ್ತಾನೆ. ಗಟ್ಟಿಯಾಗಿ ನಿಂತು ಎದುರಿಸುವ ಒಂದು ಪ್ರಯತ್ನವನ್ನೂ ಅವನು ಮಾಡುವುದಿಲ್ಲ. ಮೊದಲಿನಿಂದ ಕೊನೆಯವರೆಗೆ ಅವನದು ಕೇವಲ ಓಡಿಹೋಗುವ, ತಪ್ಪಿಸಿಕೊಳ್ಳುವ ರೀತಿಯಾಗಿದೆ. ಆದ್ದರಿಂದ ಇದು ಹೋರಾಟದ ಮಟ್ಟವನ್ನು ಮುಟ್ಟುವುದೇ ಇಲ್ಲ. ಸಮಾಜದ ಅರ್ಥಹೀನ ಮೌಲ್ಯಗಳಿಗೆ ಬದಲಾಗಿ ಅವನಿಗೆ ಅವನದೇ ಆದ ಒಂದು ತಾಂತ್ರಿಕ ನಿಲುವು ಇಲ್ಲದಿರುವುದೇ ಈ ಎಲ್ಲ

ಗೊಂದಲಕ್ಕೆ ಕಾರಣವಾಗಿದೆ. ಆಚರಣೆ ಮತ್ತು ಶಿಷ್ಟಾಚಾರದೊಳಗೆ ಮನುಷ್ಯ ಸಂಬಂಧಗಳ ಹಿನ್ನಲೆಯಲ್ಲಿ ಆಧುನಿಕ ಪ್ರಜ್ಞೆಗೆ ಸಂಬಂಧಿಸಿದ ವಸ್ತುವಿಗೆ ಭಾಷೆಯನ್ನು ಒದಗಿಸಿಕೊಳ್ಳುವ ಪ್ರಯತ್ನದಲ್ಲಿ 'ಬಿರುಕು' ಒಂದು ಮಹತ್ವದ ಪ್ರಯೋಗವೆಂಬುದನ್ನು ಒಪ್ಪಬೇಕಾಗುತ್ತದೆ.

ಆಚರಣೆ ಮತ್ತು ಶಿಷ್ಟಾಚಾರದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ೧೯೯೧ರಲ್ಲಿ ಪ್ರಕಟವಾದ 'ಅಕ್ಕ' ಕಾದಂಬರಿ ಲಂಕೇಶರ ಸಮಕಾಲೀನ ಸಂವೇದನೆಯೊಂದರ ಸೂಕ್ಷ್ಮ ಅಧ್ಯಯನ ಮಾರ್ಡನ್ ಎಂಬ ಪದದ ವಿಸ್ತೃತ ಸಾಮಾಜಿಕ ಸಂದರ್ಭದ ಚಿಂತನೆ ಆಧುನಿಕ ಆವರಣವೊಂದರ ಹಲವು ಕುತೂಹಲಗಳ ವಿಶಿಷ್ಟ ಅನುಭವಗಳ ಹೊಸ ಮಾದರಿ, ಈ ಕಾದಂಬರಿ ಸೃಷ್ಟಿಕರ್ತನನ್ನೇ ಮೀರಿ ನಾಗರಿಕತೆಯ ನಾಗಾಲೋಟಕ್ಕೆ ಹೆಜ್ಜೆ ಹಾಕಿದ ಬರವಣಿಗೆ ಇದು. ಮುಸ್ಸಂಜೆಯಲ್ಲಿ ಗ್ರಾಮೀಣ ಸೊಗಡಿನ ಚಿಲ್ಲರೆತನಗಳನ್ನು ಬೆತ್ತಲು ಮಾಡಿದ ಲಂಕೇಶರು ಇಲ್ಲಿ ಪರಸ್ಪರ ವೈರುಧ್ಯದ ಅಕ್ಕ ತಮ್ಮರ ನಡುವಿನ ಜೀವನ ದೃಷ್ಟಿಯನ್ನು ವಿಭಿನ್ನ ಆಯಾಮಗಳಾಗಿ ಗುರುತಿಸುತ್ತಾರೆ. 'ಅಕ್ಕ' ಲಂಕೇಶರೇ ಬರೆದ 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ'ಯನ್ನು ನೆನಪಿಸುತ್ತದೆ. ಒಂದು ಶತಮಾನದ ಇತಿಹಾಸ ಹೊಂದಿರುವ ಕನ್ನಡ ಕಾದಂಬರಿಯು ಅನೇಕ ಪ್ರಯೋಗಗಳನ್ನು ಸಾಮರ್ಥ್ಯಗಳನ್ನು ಅಭಿವ್ಯಕ್ತಿಗೊಳಿಸುತ್ತಾ ಅನಾವರಣಗೊಂಡ ಅಧ್ಯಯನಗಳ ಶಿಷ್ಟ ಮಾದರಿಯ ಸ್ವರೂಪಗಳಂತೆ ಕಂಡುಬಂದದ್ದು ಅಕ್ಕದ ಸಂವಾದ ಸ್ವರೂಪದಲ್ಲಿ ಜಗತ್ತಿನ ಔದ್ಯೋಗಿಕ ಕ್ರಾಂತಿ ಮತ್ತು ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಗಳ ತಲ್ಲಣಗಳು ಕಾದಂಬರಿಯ ಗ್ರಹಿಕೆಗಳನ್ನು ಬದಲಾಯಿಸಿದ್ದವು. ಮನುಷ್ಯ ಹಾಗೂ ನೈಜ ಲೋಕದ ತಲ್ಲಣಗಳನ್ನು ಕಥಾನಕಗಳಾಗಿ ಪರಿವರ್ತಿಸಿದವು. ಭಾರತದಲ್ಲಿ ಮಾತ್ರ ಇದರ ಸ್ವರೂಪ ರಾಷ್ಟ್ರೀಯತೆಯ ಹೊಸ ಮಾದರಿಯಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳತೊಡಗಿತು. ಇತಿಹಾಸ, ನಾಟಕ, ಪುರಾಣಗಳಲ್ಲಿ ಪೂರ್ವೋಕ್ತವಾದ ಇತಿಹಾಸಗಳನ್ನೇ ಆದರ್ಶ ಜೀವನದ ಏರುಪೇರುಗಳಂತೆ ಬಿಂಬಿಸಿದವು. ಇಷ್ಟೆಲ್ಲಾ ವಿವರಗಳನ್ನು ಗರ್ಭೀಕರಿಸಿಕೊಂಡು ಸಿದ್ಧರೂಪದಲ್ಲಿ ಹೊರಬಂದ ಕಾದಂಬರಿ ಪ್ರಕಾರ ಲಂಕೇಶರಂಥ ಪತ್ರಕರ್ತನಿಗೆ ಸಮಕಾಲೀನ ಸಂವೇದನೆಯನ್ನು ವಿಶಿಷ್ಟ ರೂಪಸಂಬಂಧಗಳಲ್ಲಿ ಕಾಣಿಸುವ ವಿಲಕ್ಷಣವಾದ ಹಪಾಹಪಿಯನ್ನು ತಂದೊಡ್ಡಿತು. ಅದಕ್ಕಾಗಿ ಈಗಾಗಲೇ ಸ್ವೀಕೃತಿಯಾದ ಭಾಷಿಕ ದೂರುಗಳನ್ನು ಅವರು ಮೀರಬೇಕಾಯಿತು ವಸ್ತುವಿನಲ್ಲಿ ರೋಮ್ಯಾಂಟಿಕ್ ಮಾದರಿಗಳನ್ನು ತಮ್ಮ ಅನುಭವಗಳ ಮೂಲಕ ವಿಸ್ತರಿಸಬೇಕಾಯಿತು. ಹಾಗೆ ವಿಸ್ತರಿಸಿಕೊಂಡ ಅನುಭವಲೋಕದ ಕಥೆಯೇ 'ಅಕ್ಕ'.

ಕ್ಯಾತ ದೇವೀರಿಯನ್ನು ತನ್ನ ಅಕ್ಕ ಎಂದು ಗ್ರಹಿಸುವ ಕ್ರಮಕ್ಕಿಂತ ಆಕೆ ಒಂದು ಹೆಣ್ಣು ಎಂಬ ತಾತ್ವಿಕತೆಯ ಮೂಲಕ ನೋಡುವಾಗ ತುಂಬ ಭಿನ್ನವಾದ ನಿಲುವುಗಳನ್ನು ತಾಳುವುದೇ ವಿಶಿಷ್ಟವಾದದ್ದು. "ಈಚೆಗೆ ಅಕ್ಕ ದೇವೀರಿ ಮುಂಚಿನ ದೇವೀರಿ ಹಂಗಿರಲಿಲ್ಲ. ಅವ್ವ ಸತ್ತು

ಮಾರ್ನಮಿಗೆ ಎರಡು ವರ್ಸವಾಗುತ್ತೆ, ಆಗ ಉದ್ದನೆಯ ಲಂಗದಲ್ಲಿ ಕಪ್ಪಗೆ ತಲೆ ಕೆದರಿಕೊಂಡು ಒಳ್ಳೆಯವಳ ಹಾಗೆ ಕಾಣುತ್ತಿದ್ದಳು. ಆಗ ದೇವೀರಿಗೆ ಇಟ್ಟಿಗೆ ಹೊತ್ತಿದ್ದಕ್ಕೆ ಬರುತ್ತಿದ್ದುದು ಬರೇ ಮೂರು ರೂಪಾಯಿ. ಆಮೇಲೆ ಎಷ್ಟಾಯಿತು ಎಂಬುದು ಕ್ಯಾತನಿಗೆ ಆಕೆ ಹೇಳಲಿಲ್ಲವಾದರೂ ಆಕೆ ಮುಂಚಿನಷ್ಟು ಬಡವಿಯಲ್ಲ ಎನ್ನುವುದು ಕೆಲವು ಸಲ ಗೊತ್ತಾಗಿತ್ತು."[೨೯]

ಈ ಮೂಲಕ ತನ್ನ ಮತ್ತು ದೇವೀರಿಯ ನಡುವೆ ಅನುಮಾನ ಶುರುವಾದದ್ದನ್ನು ಕಾಣುವ ಕ್ಯಾತ ಸ್ಥಿತಿವಂತಿಕೆಯ ಮುಂದೆ ಎಲ್ಲಾ ಕ್ಷೇತ್ರಗಳಲ್ಲೂ ವ್ಯಕ್ತವಾಗುತ್ತದೆ. ಪದ್ದಿಯ ಬಣ್ಣದ ಬದುಕಿನ ಒಳಗೆ ಇರುವ ದುಷ್ಕೃತ್ಯ, ಕನ್ನಡ ರಕ್ಷಣೆಯ ಹೋರಾಟದಲ್ಲಿರುವ ಹೀನತ್ವ, ಭ್ರಷ್ಟಾಚಾರ, ದೇವೀರಿ ಬದುಕಿನಲ್ಲಿ ಸೇರಿ ನಡುವೆ ವೇಶ್ಯಾವಾಟಿಕೆ. ಇಂತಹ ಅನೇಕ ಸಂದರ್ಭಗಳ ಹಿನ್ನೆಲೆಯಲ್ಲಿ ಕ್ಯಾತನಿಗೆ ಯಾವುದೇ ಪಾತ್ರದ ಮೇಲೆ ನಂಬಿಕೆ ಉಳಿಯುವುದಿಲ್ಲ. ಅಲ್ಲದೆ ಈ ಎಲ್ಲದಕ್ಕೂ ಸಮಾಜ ಮತ್ತು ಅಲ್ಲಿನ ವ್ಯವಸ್ಥೆಯನ್ನು ಹೊಣೆಗಾರಿಕೆ ಮಾಡುವ ಮೂಲಕ ತನ್ನ ನಿಲುವನ್ನು ವ್ಯಕ್ತಪಡಿಸುವ ವಿವರಣಾತ್ಮಕ ಕಥೆಯು ಲಂಕೇಶ್ ಅಭಿವ್ಯಕ್ತಿಯ ರೂಪವಾಗಿ ಕಾದಂಬರಿಯ ಒಟ್ಟಾರೆ ಮೌಲ್ಯಕ್ಕೆ ಕಾರಣವಾಗಿದೆ. 'ಅಕ್ಕ' ಕಾದಂಬರಿಯು ಒಟ್ಟಾರೆ ಆಂತರಿಕ ಸ್ವರೂಪದ ಬಗೆಗೆ ಡಾ. ಕೆ. ಮರುಳಸಿದ್ದಪ್ಪನವರು ಸೂಚಿಸುವ ಮಾತು ಮೌಲ್ಯಾಧಾರಿತ ಆಗಿರುವುದಲ್ಲದೆ ವಿಷಯ ವ್ಯಾಪ್ತಿಗೆ ಹೆಚ್ಚು ಖಚಿತತೆಯನ್ನು ಸೂಚಿಸುವುದಾಗಿದೆ.

"ಒಟ್ಟಾರೆ ಕೊಳಗೇರಿಯ ಸಂಬಂಧಗಳಲ್ಲದೆ ಕೆಲವು ಬೇರೆ ಬೇರೆ ಕುಟುಂಬಗಳ ಕಥಾನಕಗಳು ಕಥೆಯ ಸೂತ್ರದಲ್ಲಿಯೇ ಸೇರಿಕೊಂಡಿವೆ. ಅಲ್ಲಿ ವಾಸವಿದ್ದ ಸಿನಿಮಾ ಸ್ಟಾರ್ ಪದ್ದಿ, ಅವರಪ್ಪ ನಾಗರಾಜನಾಯ್ಡು ಇವರ ರಂಗು ರಂಗಿನ ಭ್ರಮೆ ವಾಸ್ತವಗಳ ಮಿಶ್ರಣ ಕತೆಯ ವಿನೋದ ಒಂದು ರೀತಿಯಲ್ಲಿದ್ದರೆ, ಕ್ಯಾತನ ಗೆಳೆಯ ಸುಧೀರನ ಅಪ್ಪನ ಲಂಚ ಪ್ರಪಂಚವೇ ಮತ್ತೊಂದು ದುರಂತ. ಇವೆಲ್ಲವು ಕ್ಯಾತನ ಜಗತ್ತಿನ ಅವಿಭಾಜ್ಯ ಅಂಗಗಳು ಇವರೆಲ್ಲರೂ ಎಂ.ಎಲ್.ಎ ರಾಮಪ್ಪನ ಚುನಾವಣಾ ರಾಜಕೀಯದ ತೆಕ್ಕೆಯಲ್ಲಿ ಹುದುಗಿದ್ದಾರೆ. ವಿಶಾಲವಾದ ನಗರ ವ್ಯವಸ್ಥೆಯ ಹೊಟ್ಟೆಯೊಳಗೆ ಅಡಗಿರುವ ಪುಟ್ಟ ಕೊಳಗೇರಿ, ಮೂಲ ವ್ಯವಸ್ಥೆಯನ್ನು ಅನುಸರಿಸಿ ತನ್ನದೇ ಆದ ಒಂದು ಪ್ರತ್ಯೇಕ ಆಕಾರ, ವ್ಯವಸ್ಥೆ ವಿಧಿ, ನಿಷೇದ, ಆಚರಣೆಗಳೆಲ್ಲವನ್ನು ಕೂಡಿಸಿಕೊಂಡಿರುವ ಕ್ರಮವನ್ನು ಕಾದಂಬರಿ ಅದ್ಭುತವಾಗಿ ಕಟ್ಟಿಕೊಡುತ್ತದೆ."[೩೦] ಎನ್ನುವ ಈ ವಿವರಣಾತ್ಮಕತೆಯ ಆಚರಣೆ ಮತ್ತು ಶಿಷ್ಟಾಚಾರದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಕಾದಂಬರಿಯ ಒಟ್ಟಾರೆ ಅಭಿವ್ಯಕ್ತಿ ಸ್ವರೂಪಕ್ಕೆ ನೀಡಿದ ಸಮರ್ಥನೆ ಎನಿಸುತ್ತದೆ.

---

೨೯. ಪಿ.ಲಂಕೇಶ್, 'ಅಕ್ಕ', ಪುಟ. ೪೧೫.
೩೦. ಪಿ. ಲಂಕೇಶ್, ಅಕ್ಕ, ಪುಟ. ೧೧೨.

'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಕಂಬಳ್ಳಿಯ ವಾತಾವರಣದ ಆಚರಣೆ ಮತ್ತು ಶಿಷ್ಟಾಚಾರಗೊಳಗಿನ ಮನುಷ್ಯ ಸಂಬಂಧಗಳ ಸಂಬಂಧವನ್ನು ತುಂಬಾ ಭಿನ್ನವಾಗಿ ನೋಡಬಹುದು. ಭರ್ಮಣ್ಣ, ರಂಗವ್ವ, ಸಾವಂತ್ರಿ, ಮಂಜ, ದೇವಿ, ಸಣ್ಣೀರಪ್ಪ, ಸಿದ್ದ, ಶ್ರೇಷ್ಠಿ ಇನ್ನೂ ಅನೇಕ ಪಾತ್ರಗಳು ಆಚರಣೆ ಮತ್ತು ಶಿಷ್ಟಚಾರಗಳನ್ನು ಪಾಲಿಸುತ್ತವೆ. ಸಾವಂತ್ರಿ ಮತ್ತು ಮಂಜರ ಪ್ರಕರಣದಲ್ಲಿ ಅನ್ಯ ಜಾತಿಯ ಪ್ರೇಮ ಪ್ರಕರಣ ನಡೆಯುವ ಸಂದರ್ಭದಲ್ಲಿ ಅದನ್ನು ವಿರೋಧಿಸುವ ಒಂದು ಕೋಮಿನ ಜನಾಂಗ ಅವರ ಮದುವೆ ಮೂಲಕ ಶಿಷ್ಟಾಚಾರವನ್ನು ಮೀರುವ ಸಂದರ್ಭಗಳು ಇವನ್ನು ಲೇಖಕರು ಚಿತ್ರಿಸಹೊರಡುತ್ತಾರೆ. ಅದೇ ರೀತಿ ವೈಚಾರಿಕತೆಯ ಗಂಧ ಗಾಳಿ ಗೊತ್ತಿಲ್ಲದ ಕಂಬಳ್ಳಿಗೆ ಉಡುಪನಂಥವರು ನಗೆಪಾಟಲಿನ ಸಂಗತಿಯಂತೆ ಪ್ರಖರ ವೈಚಾರಿಕತೆಯ ಅಣುಕುವಿನ ಹಾಗೆ ಕಾಣುತ್ತಾರೆ. ಮುಂದೆ ರಂಗವ್ವ ಮೂಕರ ವ್ಯವಹಾರ ಸರಿಪಡಿಸಲು ಹೋದ ಉಡುಪ ಶ್ರೇಷ್ಠಿಯವರನ್ನು ಭೇಟಿ ಮಾಡುತ್ತಾರೆ. ಎಲ್ಲ ಕಡೆ ತಾನು ತನ್ನ ಚಿಂತನೆಗಳು ಇಲ್ಲಿ ಅನಗತ್ಯ ಎಂಬುದನ್ನು ಮನಗಾಣುತ್ತಾನೆ. ಅಂದರೆ ಒಟ್ಟಾರೆ ಭಾರತದ ಹಳ್ಳಿಗಳ ಶಿಷ್ಟಾಚಾರದ ಜೀವನ ಸೈದ್ಧಾಂತಿಕ ತಳಹದಿಯ ಒಟ್ಟಂದದ ಚೌಕಟ್ಟಿನಲ್ಲಿ ನಡೆಯುವುದಿಲ್ಲ. ವೈಯಕ್ತಿಕ ಮಟ್ಟದ ರಾಗ, ದ್ವೇಷ, ಈರ್ಷೆ ಸೋಗಲಾಡಿತನಗಳ ಸೋಗಿನಲ್ಲಿ ನರಳುತ್ತಿರುತ್ತವೆ ಎಂಬುದು ಸಾಬೀತಾಗುತ್ತದೆ. ಬ್ಯಾಡರ ಮಂಜ ಮತ್ತು ಲಿಂಗಾಯತರ ಸಾವಂತ್ರಿಯ ನಡುವೆ. ಮದುವೆ ನಡೆಯುವುದು ಸಿದ್ಧಾಂತದ ನೆಲೆಗಟ್ಟಿನಲ್ಲಿ ಸುಲಭವಾಗಿ ನಡೆದುಬಿಡಲ್ಲ. ಪರಿಸ್ಥಿತಿಯ ಅನಿವಾರ್ಯತೆ ಮತ್ತು ರಂಗವ್ವ ಭರ್ಮಣ್ಣರ ನಡುವಿನ ಸೇಡಿನ ರಾಜಕಾರಣ ಇವೇ ಇಲ್ಲಿ ಮುಖ್ಯವಾದ ಕಾರಣಗಳಾಗಿ ಪರಿಣಮಿಸಿದವೆಂಬುದನ್ನು ನಾವಿಲ್ಲಿ ಮರೆಯಲಾಗದು. ಭರ್ಮಣ್ಣನಿಗೆ ರಂಗವ್ವ ಆರ್ಥಿಕವಾಗಿ ದಿವಾಳಿಯಾಗಿ ಊರಿನ ಕುಲಸ್ಥರೆದುರು ಒಬ್ಬಂಟಿಯಾಗಿ ನಿಲ್ಲಬೇಕು. ಅದಕ್ಕಾಗಿ ಯಾವ ಕೃತ್ಯ ನಡೆಸಲು ತಾನು ಸಿದ್ಧ. ತನ್ನ ಎರಡೂ ಕಣ್ಣುಗಳು ಹೋದರೂ ಪರ್ವಾಗಿಲ್ಲ ಎದುರಾಳಿಯ ಒಂದು ಕಣ್ಣಾದರೂ ಹೋಗಬೇಕು ಎಂಬ ಧೋರಣೆ ಭರ್ಮಣ್ಣನದು. ಹಾಗಾಗಿಯೇ ರಂಗವ್ವನಿಗೆ ಕೊಟ್ಟ ಸಾಲವನ್ನು ಹಿಂದಿರುಗಿಸಬೇಡಿ ಎಂದು ಅವನು ಹೊಲೆಮಾದಿಗರಿಗೆ ಬೋಧಿಸುತ್ತಿದ್ದುದು ಒಂದು ಅರ್ಥಪೂರ್ಣ ಪ್ರತಿಭಟನೆಯಂತೆ ಕಾಣಿಸುವುದಿಲ್ಲ. ಒಂದು ನೆಗೆಟಿವ್ ಚಿಂತನೆಯ ಮನಸ್ಸೊಂದು ತನ್ನ ಎದುರಾಳಿಯ ವಿರುದ್ಧ ನಡೆಸುವ ಮಸಲತ್ತೆಂಬಂತೆ ಕಾಣುತ್ತದೆ. ಇಲ್ಲಿ ರಂಗವ್ವ ಬಂಡವಾಳ ಶಾಹಿಯನ್ನು ಪ್ರತಿನಿಧಿಸಿದರೆ ಭರ್ಮಣ್ಣ ಶಕ್ತಿ ರಾಜಕಾರಣದ ದುಷ್ಟ ಕೇಂದ್ರದಂತೆ ಕಾಣುತ್ತಾನೆ. ಈ ಎರಡೂ ಶಕ್ತಿಗಳ ಆಂತರಿಕ ವೈಮನಸ್ಸು ಕಂಬಳ್ಳಿಯ ಸರ್ವನಾಶಕ್ಕೆ ಕಾರಣವಾಗುತ್ತದೆ. ರಂಗವ್ವ ತನ್ನ ಗೆಲುವಿಗಾಗಿ ಶಾಸ್ತ್ರಿ, ಉಡುಪ, ಬ್ರಾಹ್ಮಣ, ವಿದ್ಯೆ, ಬುದ್ಧಿ, ತಂತ್ರಗಾರಿಕೆಯ ಬೆಂಬಲ ಪಡೆದರೆ ಭರ್ಮಣ್ಣ ಗುಂಪುಗಾರಿಕೆ, ಒಡೆದು ಆಳುವ ನೀತಿ ಮತ್ತು ಬೂಟಾಟಿಕೆಯ ಕೆಲಸಗಳಲ್ಲಿ ನಿಸ್ಸೀಮನಾಗಿರುತ್ತಾನೆ. ಇಷ್ಟೆಲ್ಲಾ ನಡೆಯುವ ಕಂಬಳ್ಳಿಗೆ

ನಾಯಕ ಪ್ರಧಾನ ಅಥವಾ ನಾಯಕಿ ಪ್ರಧಾನದ ಕಥೆಯಿಲ್ಲ. ಇದಕ್ಕೆ ಈ ಹಿಂದಿನ ಕಾದಂಬರಿ ಕಥೆಗಳ ಸರಳ ಸೂತ್ರದ ಕೇಂದ್ರಗಳಿಲ್ಲ. ಕಂಬಳ್ಳಿಯ ಸಮಸ್ತ ಜನರ ಬದುಕೇ ಇಲ್ಲಿನ ಕಥೆ. ಅವರ ಗುಣ ಸ್ವಭಾಗಳು ಘಟನಾವಳಿಗಳೇ ಇಲ್ಲಿ ಪ್ರಧಾನ. ಹಾಗಾಗಿ ಪಾತ್ರ ಪತೀತವಾದ ಕಥೆ ತನ್ನ ಹಾದಿಯನ್ನು ತಾನೇ ಸೃಷ್ಟಿಸಿಕೊಳ್ಳುತ್ತದೆ. ಲೇಖಕರನ್ನು ಮೀರಿ ಬೆಳೆಯುತ್ತದೆ. ಲೇಖಕರು ಆರಂಭದಲ್ಲೇ ಅದರ ಸೂಚನೆಯನ್ನು ನೀಡುತ್ತಾರೆ. ನಾಯಕ ಪ್ರಧಾನದ ಕಾದಂಬರಿಯನ್ನು ಹೆಣೆಯುತ್ತಾ ನಾಯಕನ ಅಥವಾ ನಾಯಕಿಯ ಹಂಗಿಗೆ ಒಳಗಾಗಿ ಅವರ ಸುತ್ತಾ ಉಳಿದದ್ದೆಲ್ಲವನ್ನು ಸುತ್ತುತ್ತಿದ್ದರೆ, ಕಂಬಳ್ಳಿಯ ಜನಮಾನಸಕ್ಕೆ ಅವರ ಗುಣ ಸ್ವಭಾವಕ್ಕೆ ಅನ್ಯಾಯ ಮಾಡಿದಂತೆ ಎಂಬ ಅರಿವಿನಿಂದಲೇ ಮುಸ್ಸಂಜೆ ಒಂದು ಪ್ರಧಾನ ಕೇಂದ್ರ ಪಾತ್ರವನ್ನು ಸೃಷ್ಟಿಸಿಕೊಳ್ಳದೆ ಗ್ರಾಮಭಾರತದ ಬದುಕನ್ನೇ ಕೇಂದ್ರವಾಗಿಸಿಕೊಂಡು ಕಥೆ ಶುರುವಾಗುತ್ತದೆ. ಕಥೆಯ ಹರಹು ಇಡೀ ಹಳ್ಳಿಗೆ ವಿಸ್ತರಿಸಿಕೊಂಡಿರುವುದರಿಂದ ಕಾದಂಬರಿಗೆ ಅಲ್ಲಲ್ಲಿ ಉಪಶೀರ್ಷಿಕೆಗಳನ್ನು ನೀಡುತ್ತಾ ಛಿದ್ರ ಛಿದ್ರ ಘಟನಾವಳಿಗಳನ್ನು ಒಂದು ಲವಲವಿಕೆಯ ಒಟ್ಟಂದದ ಕ್ರಮದಲ್ಲಿ ಕಟ್ಟಿಕೊಡುವ ಪ್ರಯತ್ನ ಇಲ್ಲಿ ಕಾಣುತ್ತದೆ. ಹಾಗಾಗಿಯೇ ಇಲ್ಲಿ ಒಟ್ಟು ೪೭ ಉಪಶೀರ್ಷಿಕೆಗಳ ಅಧ್ಯಾಯಗಳು ಲಭ್ಯವಾಗುತ್ತದೆ. ಶೀರ್ಷಿಕೆಯೊಂದೇ ಆ ಉಪಶೀರ್ಷಕೆಯ ಅಡಿಯಲ್ಲಿ ಬರುವ ಇಡೀ ಕಥೆಯನ್ನು ಧ್ವನಿಸುತ್ತದೆ. ಸಂಗ್ರಹಿಸಿಕೊಡುತ್ತದೆ. ಈ ಅನುಕೂಲ ಇಲ್ಲಿ ಆಚರಣೆ ಮತ್ತು ಶಿಷ್ಟಾಚಾರಗಳು ಸಂಬಂಧಗಳು ನಡೆಯುವ ಕ್ರಿಯೆಯನ್ನು ಜರುಗುವ ಘಟನೆಗಳ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಪ್ರೇಮ ಕಾಮಗಳ ಪ್ರಕರಣಗಳು ಸ್ವಾತಂತ್ರ್ಯಾ ನಂತರದ ಹತ್ತು ವರ್ಷಗಳ ಅವಧಿಯಲ್ಲಿ ಜಾತಿ ಕಾಮಗಳು ತಂತಮ್ಮ ಮಿತಿಯನ್ನು ಮೀರುತ್ತಾ ಬಹಿರಂಗವಾಗಿಯೇ ಕಾಣಿಸಿಕೊಳ್ಳ ತೊಡಗಿದವೆಂಬುದು ಶ್ರೇಷ್ಠಿಯವರ ಮಗಳು ದೇವಿ ಹೊಲೆಯರ ಹುಡುಗರೊಂದಿಗೆ ಓಡಿಹೋದ ಪ್ರಕರಣದಲ್ಲಿ ಸಾಕ್ಷಿಯಾಗುತ್ತದೆ. ಆದರೆ ದೇವಿ ಮತ್ತು ಆ ಹೊಲೆಯರ ಹುಡುಗನ ಪ್ರಕರಣ ರೂಢ ಮೌಲ್ಯಗಳನ್ನು ಧಿಕ್ಕರಿಸಿದ್ದೇ ಬಂತು. ಆದರೆ ಹಿಂದಿನ ಕಾಲದ ಮಿತ್ತನ್ನು ಹೊಡೆದು ಒಂದು ಹೊಸ ಅನ್ವೇಷಣೆಗೆ ನಾಂದಿಯಾಡುವುದನ್ನು ನಾವು ಗಮನಿಸಬಹುದು.

ಲಂಕೇಶರ ಕಥೆಗಳಲ್ಲಿ ಆಚರಣೆ ಮತ್ತು ಶಿಷ್ಟಾಚಾರಗಳನ್ನು ನೋಡಬಹುದು. ಇಲ್ಲಿ ನಗರದ ಮತ್ತು ಗ್ರಾಮೀಣ ಪ್ರದೇಶದ ಚಿತ್ರಣ ಕಥಾವಸ್ತುವಾಗಿ ಹೆಣೆದುಕೊಂಡಿರುವುದನ್ನು ಗಮನಿಸಬೇಕು. ಬಡತನ ಶ್ರೀಮಂತಿಕೆಗಳು ಬರುತ್ತವೆ ಕಥೆಗಳಲ್ಲಿ. ಬಡವರಲ್ಲಿ ಮಡುಗಟ್ಟಿರುವ ಮೌಢ್ಯ, ಮೂಢನಂಬಿಕೆ ಅಂದಾಚರಣೆ ಇವೆಲ್ಲವೂ ಅನಕ್ಷರತೆಯ ಪ್ರತಿಫಲಗಳೆಂಬ ನಂಬಿಕೆ ಲಂಕೇಶರದು. ಅದಕ್ಕಾಗಿ ಇವುಗಳನ್ನು ಹೋಗಲಾಡಿಸಲು ಮತ್ತು ಜನರಲ್ಲಿ ಶಿಕ್ಷಣದ ಮಹತ್ವವನ್ನು ಬಿತ್ತಲು ತಾವೇ ಕ್ರಿಯಾತ್ಮಕವಾಗಿ ತೊಡಗಿಸಿಕೊಂಡಿದ್ದರು ಎಂಬುದು ಗಮನಾರ್ಹ. ಲಂಕೇಶರ ಕಥೆಗಳೆಲ್ಲಾ ವಾಸ್ತವ ಜಗತ್ತಿನ ಘಟನೆಗಳ ಮುಖಾಮುಖಿಯಾದ್ದರಿಂದ ಮತ್ತು

ಅವರೊಬ್ಬ ಅಧ್ಯಾಪಕ ವೃತ್ತಿಯಲ್ಲಿದ್ದುದರಿಂದ ಅಕ್ಷರಸ್ಥ ಸಮುದಾಯದ ಅಂತರಂಗದ ಒಳಸುಳಿಗಳನ್ನು ಚಿತ್ರಿಸುವ ಸಂದರ್ಭದಲ್ಲಿ ಅಕ್ಷರಸ್ಥ ಸಮುದಾಯ ಆಚಾರ ಮತ್ತು ಆತಂಕಗಳನ್ನು ಮೀರುತ್ತಾ ಬದುಕು ಸಾಗಿಸಿದರೆ ಅನಕ್ಷರಸ್ಥರು ಶಿಕ್ಷಣದ ಕೊರತೆಯಿಂದಲೇ ಅನಾದಿಯಿಂದ ಸಾಗಿ ಬಂದ ಆಚರಣೆಗಳನ್ನು ಮುಂದುವರೆಸುತ್ತಾ ಬರುತ್ತಾರೆ ಎಂಬುದು ಅವರ ಕಥೆಗಳ ಅಭಿಮತ ಕೆಲವೊಮ್ಮೆ ಶಿಕ್ಷಣ ಪಡೆದರೂ ತಮ್ಮ ಹುಂಬತನದಿಂದ ಮೌಢ್ಯ ಮತ್ತು ನಂಬಿಕೆಗಳನ್ನು ಮುಂದುವರೆಸುವ ಕೆಲವು ಪಾತ್ರಗಳನ್ನು ಸಹ ಅವರು ಸೃಷ್ಟಿಸುತ್ತಾರೆ. ಈ ಪಾತ್ರಗಳು ಸಮಕಾಲೀನ ಸಂದರ್ಭಕ್ಕೆ ಹೊಂದುವಂಥವು, ಹೆಚ್ಚು ವಿದ್ಯಾವಂತರಲ್ಲೇ ಜಾತಿಯ ಪ್ರತಿಷ್ಠೆ ಹೆಚ್ಚಾಗುತ್ತಿರುವ ಈ ಹೊತ್ತಿನ ಸಂದರ್ಭಕ್ಕೆ ಅವು ಸರಿಯಾಗಿ ಇಲ್ಲಿಗೆ ಹೊಂದುತ್ತದೆ. ಅವುಗಳನ್ನು ಬದಲಾಯಿಸಲು ಸಾಧ್ಯ ಎನ್ನುವ ಆಶಾಭಾವನೆಯನ್ನು ನಾವು ಲಂಕೇಶರ ಕಥೆಗಳಲ್ಲಿ ಕಾಣುತ್ತೇವೆ.

ಸಮಕಾಲೀನ ಸಮಾಜದ ಅನಾದಿಕಾಲದಿಂದಲೂ ಒಂದೇ ರೀತಿಯ ಆಚರಣೆಯನ್ನು ಪಾಲಿಸಿಕೊಂಡು ಇನ್ನೂ ವಿಶಾಲಾತ್ಮಕವಾಗಿ ಆಲೋಚಿಸದೆ ಜಾತಿಯ ವಿಷವರ್ತುಲದಲ್ಲೇ ತಮ್ಮ ಬುದ್ಧಿಮತ್ತೆಯನ್ನು ಅಡವಿಟ್ಟು ದುರಂತವನ್ನು ಈ ಕಥೆಗಳು ಚಿತ್ರಿಸುತ್ತವೆ. ಇನ್ನು ಅನಕ್ಷರಸ್ಥ ಸಮುದಾಯ ಮಾತ್ರ ತಮ್ಮ ಮೌಢ್ಯ ಮತ್ತು ಕಂದಾಚಾರಗಳನ್ನು ಮೀರಲಾರದೆ ಅಲ್ಲೇ ಸುತ್ತುತ್ತಿರುವುದಕ್ಕೆ ಕಾರಣ ತಮ್ಮ ಅನಕ್ಷರತೆ ಎಂಬ ಸತ್ಯ ಗೊತ್ತಾದರೂ ಪ್ರಯೋಜನವಾಗಿಲ್ಲವೆಂಬ ಕಹಿ ಸತ್ಯವನ್ನು ಕಥೆಗಳು ಬೆತ್ತಲು ಮಾಡುತ್ತವೆ. 'ಮುಟ್ಟಿಸಿಕೊಂಡವನು' ಕಥೆ ಸಹ ಸಂಪ್ರದಾಯಬದ್ಧ ಆಚರಣೆ ಮುಟ್ಟಿಸಿಕೊಳ್ಳದೆ ಇರುವುದು ಒಂದು ಅನಾಹುತವನ್ನೇ ಮಾಡುತ್ತದೆ. ಸಮಾಜದಲ್ಲಿರುವ ಜಾತಿ ಎಂಬ ಭೂತದಿಂದ ಒಂದು ಕಣ್ಣು ಕಳೆದುಕೊಳ್ಳುವ ದುರಂತ ಸ್ಥಿತಿಯನ್ನು ತೋರಿಸುತ್ತದೆ. ಮೇಲುಜಾತಿಯ ಬಸಲಿಂಗ ಅಸ್ಪೃಶ್ಯ ಜಾತಿಯ ಕಣ್ಣಿನ ವೈದ್ಯ ಡಾ. ತಿಮ್ಮಪ್ಪರಿಂದ ಚಿಕಿತ್ಸೆ ಮಾಡಿಸಿಕೊಂಡ ಮೇಲೆ ವೈದ್ಯರ ಜಾತಿ ಗೊತ್ತಾಗಿ ಹಲಬುತ್ತಾನೆ. ಅವನ ಈ ಸಣ್ಣ ಮನಸ್ಸಿನಿಂದಾಗಿ ಮತ್ತೆ ಡಾಕ್ಟರಲ್ಲಿಗೆ ಹೋಗಿ ಸರಿಯಾದ ಅರೈಕೆ ಪಡೆಯದೆ ತನ್ನ ಒಂದು ಕಣ್ಣು ಕಳೆದುಕೊಳ್ಳುತ್ತಾನೆ. "ಮೇಲುಜಾತಿಯ ಬಸಲಿಂಗ ಅಸ್ಪೃಶ್ಯ ಜಾತಿಯ ಕಣ್ಣಿನ ವೈದ್ಯ ಡಾ. ತಿಮ್ಮಪ್ಪನವರಿಂದ ಚಿಕಿತ್ಸೆ ಮಾಡಿಸಿಕೊಂಡ ಮೇಲೆ ವೈದ್ಯರ ಜಾತಿ ಗೊತ್ತಾಗಿ ಹಲುಬುತ್ತಾನೆ. ಅವರ ಈ ಸಣ್ಣ ಮನಸ್ಸಿನಿಂದಾಗಿ ಮತ್ತೆ ಡಾಕ್ಟರಲ್ಲಿಗೆ ಹೋಗಿ ಸರಿಯಾದ ಆರೈಕೆ ಪಡೆಯದೆ ತನ್ನ ಒಂದು ಕಣ್ಣು ಕಳೆದುಕೊಳ್ಳುತ್ತಾನೆ. ಜಾತಿ ಅಹಂಕಾರ ಬಲಿತಂತೆ ಅವನ ಮುಗ್ಧತೆ ತೊಲಗುತ್ತದೆ ಮನಸ್ಸು ಕಲುಷಿತವಾಗಿ ದೇಹ ಕೊಳೆಯುತ್ತದೆ. ಮತ್ತೊಂದು ಕಣ್ಣಿಗೂ ರೋಗ ತಗುಲಿದಾಗ ಮೇಲುಜಾತಿ ಡಾಕ್ಟರಲ್ಲಿಗೆ ಹೋಗಿ ಗುಣವಾಗದೆ ಹತಾಶನಾಗಿ ಮತ್ತೆ ಡಾ.ತಿಮ್ಮಪ್ಪನವರಲ್ಲಿಗೇ ಹೋಗುವನು. ಈಗ ಅಹಂಕಾರದ ಜಾಗದಲ್ಲಿ ದೈನ್ಯತೆ ತುಂಬಿಕೊಂಡಿದೆ. ವೈದ್ಯರು ಅವನ ಸ್ಥಿತಿಗೆ

ಮರುಗುತ್ತಾರೆ. ಆಪರೇಷನ್ ಮಾಡಿ ಅದನ್ನು ಗುಣಪಡಿಸುತ್ತಾರೆ."[೩೧] ಹೀಗೆ ಅನಕ್ಷರಸ್ಥ ಮೇಲ್ವರ್ಗದ ಬಸಲಿಂಗ ತನ್ನ ಜಾತಿ ಪ್ರತಿಷ್ಠೆಯ ಗುಂಗಿನಲ್ಲಿ ಕಣ್ಣಿಗೆ ಸರಿಯಾದ ಆರೈಕೆ ಇಲ್ಲದೆ ಒಂದು ಕಣ್ಣು ಕಳೆದುಕೊಳ್ಳುತ್ತಾನೆ. ಹೀಗೆ ಅನಕ್ಷರತೆಯ ಕಾರಣದಿಂದ ಒದಗುವ ಅನೇಕ ದುರಂತಗಳನ್ನು ನಾವು ಲಂಕೇಶರ ಕಥೆಗಳಲ್ಲಿ ಸಂಶೋಧಿಸಬಹುದು. ಗ್ರಾಮೀಣ ಸಮಾಜ ಮತ್ತು ನಗರ ಸಮಾಜದ ನಡುವಿನ ಅಂತರವನ್ನು ಆಚರಣೆ ಮತ್ತು ಶಿಷ್ಟಾಚಾರ ಹಾಗೂ ಅಕ್ಷರಸ್ಥ ಮತ್ತು ಅನಕ್ಷರಸ್ಥ ಸಮಾಜದ ನಡುವಿನ ಅಂತರಗಳಾಗಿ ಲಂಕೇಶರ ಕಥೆಗಳಲ್ಲಿ ಶೋಧಿಸಬಹುದು. ಸಮಾಜವನ್ನು ನಿಯಂತ್ರಿಸುವ ಶಕ್ತಿ ಶಿಕ್ಷಣಕ್ಕಿದೆ ಅಂತ ಶಿಕ್ಷಣವನ್ನು ಪಡೆದಾಗ ಮಾತ್ರ ಸಮಾಜದಲ್ಲಿ ಸಮಾನತೆ ಸಾಧಿಸಲು ಸಾಧ್ಯ ಎಂಬುದು ಲಂಕೇಶರು ಸೃಷ್ಟಿಸಿದ ಆಧುನಿಕ ಚಿಂತನೆಯ ಕಥಾಫಲಿತ ಅವರ ಬಹುಮುಖ್ಯ ಕಾಳಜಿ ಶಿಕ್ಷಣ. ಅವರ ಮೊದಲ ಕಥಾಸಂಕಲನ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಮತ್ತು ಇತರ ಕಥೆಗಳು" ಸಂಕಲನವನ್ನು ಶೋಧಿಸಿದರೆ ಈ ಕಥೆಗಳಿಗೆ ಬರುವ ಎಲ್ಲಾ ಪಾತ್ರಗಳನ್ನು ಪರಿಶೀಲಿಸಿದರೆ ಎಲ್ಲರೂ ಉನ್ನತ ಶಿಕ್ಷಣವನ್ನು ಮುಗಿಸಿದವರೇ ಹೆಚ್ಚು ಮತ್ತೆ ಕೆಲವರು ನಗರ ಪ್ರದೇಶದಲ್ಲಿ ಬೆಳೆದವರು. ಸಮಾಜದ ಎಲ್ಲಾ ಸಾಮಾಜಿಕ ಸಮಸ್ಯೆಗಳಿಂದ ದೂರ ನಿಲ್ಲಬೇಕಾದರೆ ಶಿಕ್ಷಣ ಒಂದೇ ಮೂಲಮಂತ್ರ ಎಂಬುದು ಆಧುನಿಕತೆಯ ಸಂವಾದ. ಅದನ್ನು ತಮ್ಮ ಕಥಾಲೋಕದಲ್ಲಿ ಚರ್ಚಿಸುವ ಲಂಕೇಶರು ತಮ್ಮ ಸಮಕಾಲೀನ ಸಮಾಜದ ಸಮಾನತೆಗೆ ಶಿಕ್ಷಣವೇ ಶಕ್ತಿಯೆಂದು ಘೋಷಿಸಿದಂತೆ ಕಾಣುತ್ತದೆ.

'ಕಲ್ಲುಕರಗುವ ಸಮಯ' ಕತೆಯಲ್ಲಿನ ಶ್ಯಾಮಲ ಮತ್ತು ತಿಪ್ಪಣ್ಣರ ಪ್ರೇಮದ ಮೂಲಕ ಜಾತಿರೋಗವನ್ನು ತೊಡೆಯುವ ಕೆಲಸವನ್ನು ಲಂಕೇಶರು ಮಾಡುತ್ತಾರೆ. ತಿಪ್ಪಣ್ಣ ಬೇಡರವನು ಶ್ಯಾಮಲ ಲಿಂಗಾಯತಳು ಸಿನಿಮಾ ಕಮ್ಮಟದಲ್ಲಿ ಪರಸ್ಪರ ಪರಿಚಯವಾದ ಈ ಇಬ್ಬರೂ ಪರಸ್ಪರ ಪ್ರೀತಿಸುವ ಮಟ್ಟಕ್ಕೆ ಬೆಳೆಯುತ್ತಾರೆ. ಅವರ ಮದುವೆಯಿಂದ ಏನೇನೋ ಆಗಿ ಬಿಡುತ್ತದೆಂಬ ತಲ್ಲಣ ಹುಟ್ಟಿ ಕೊನೆಗೆ ಏನೂ ಆಗದೆ ತಣ್ಣಗಾಗಿ ಬಿಡುತ್ತದೆ. ಆಚರಣೆ ಮತ್ತು ಶಿಷ್ಟಾಚಾರದ ಹಿನ್ನಲೆಯಲ್ಲಿ ಮನುಷ್ಯ ಸಂಬಂಧಗಳ ಜಟಿಲತೆಗಳನ್ನು ಈ ಕತೆ ಹೇಳುತ್ತದೆ. ಅಪಾರ ಲವಲವಿಕೆಯ ಶ್ಯಾಮಲಾ ಸಮಚಿತ್ತದ ತಿಪ್ಪಣ್ಣ ಈ ಇಬ್ಬರ ನಡುವೆ ಶ್ಯಾಮಲಾಳ ತಂದೆ ಮಲ್ಲಯ್ಯನ ಅಬ್ಬರ, ಆರ್ಭಟಗಳೆಲ್ಲ ಕಲ್ಲು–ನೀರುಕರಗದಂತೆ ಮಾಯವಾಗಿ ಬಿಡುತ್ತದೆ. ಅಲ್ಲದೆ ಮಲ್ಲಯ್ಯ ಸಾಯುತ್ತಾನೆ.

ಜಾತಿ ಕಾರಣಕ್ಕಾಗಿ ತಾವು ಬಯಸಿದವರನ್ನು ಪಡೆಯಲು ಇರುವ ಸಾಮಾಜಿಕ ಅಡ್ಡಿಗಳನ್ನು ಶ್ಯಾಮಲೆ ದಿಟ್ಟತನದಿಂದಲೂ, ತಿಪ್ಪಣ್ಣ ಮೌನವಾಗಿಯೂ ಎದುರಿಸುತ್ತಾರೆ. ತಿಪ್ಪಣ್ಣನದು ಸಂಯಮದ ವ್ಯಕ್ತಿತ್ವ, ಯಾವುದಕ್ಕೂ ಹಿಗ್ಗದ, ಕುಗ್ಗದ ಪಾತ್ರವದು, ನಿಸರ್ಗದ

---

೩೧. ಕೆ.ಮರುಳಸಿದ್ದಪ್ಪ, ಪಿ.ಲಂಕೇಶ್, ಪುಟ.೯೩.

ತನ್ಮಯತೆ ಶ್ಯಾಮಲೆ ಅವಳ ವ್ಯಕ್ತಿತ್ವದಲ್ಲಿದೆ. ಗೃಹೀತವಾದ ಮೌಲ್ಯವನ್ನೇ ಒಪ್ಪಿರುವ ಒಂದು ಹಳ್ಳಿಯಲ್ಲಿ ಈ ಚಲನಶೀಲ ಪ್ರೇಮ – ಪ್ರಕರಣ ಪ್ರಧಾನವಾಗುತ್ತದೆ. ತನ್ನ ಮಗಳು ಶ್ಯಾಮಲಾಳನ್ನು ತಿಪ್ಪಣ್ಣನು ಮದುವೆಯಾಗುವ ಸುದ್ದಿಯು ರಾಮಯ್ಯನಿಗೆ ತಿಳಿದಾಗ ರೌದ್ರಾವೇಶದಿಂದ ತಿಪ್ಪಣ್ಣನ ಮನೆಗೆ ಹೋದಾಗಿನ ಸಂದರ್ಭ ನೋಡಿದರೆ "ಮಲ್ಲಯ್ಯ ನೋಡಲು ಬಂದದ್ದು ಗಟ್ಟಿದೇಹದ ಯೌವ್ವನ ತುಂಬಿದ ಹುಡುಗಿಯರನ್ನು ಬಲೆಗೆ ಬೀಳಿಸಿಕೊಳ್ಳಬಲ್ಲ ಆಧುನಿಕ ತರುಣನನ್ನು ತಿಪ್ಪಣ್ಣ ತದ್ವಿರುದ್ಧವಾಗಿದ್ದ ಚಪ್ಪಟೆಮುಖವ ನೋಡಿದರೆ ಕರುಣೆ ಬರುವಷ್ಟು ತೆಳ್ಳಗಿನ ನೋವು ತುಂಬಿದ ಕಣ್ಣುಗಳ ಹುಡುಗ. ಎದುರು ನಿಂತು ಲಜ್ಜೆಯಿಂದ ಭೂಮಿಗಿಳಿಯುವಂತಿದ್ದ ಆದರೂ ತನ್ನ ಸಿಟ್ಟು ಬಿಟ್ಟುಕೊಡುವ ಸ್ಥಿತಿಯಲ್ಲಿ ಮಲ್ಲಯ್ಯ ಇರಲಿಲ್ಲ. ನೀನೇ ಏನೊ? ನೀನು ನನ್ನ ಮಗಳ್ನ ಮದುವೆಯಾಗಬೇಕು ಅಂತ ಇದ್ದೀಯೇನೋ? ಅಂದ ಮಲ್ಲಯ್ಯ ಒಂದು ಕೈ ಜೇಬಿನ ರಿವಾಲ್ವರ್ ಮುಟ್ಟುತ್ತಿತ್ತು. ತಿಪ್ಪಣ್ಣ ಏನನ್ನಾದರೂ ಹೇಳಿ ಜೀವ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಎಂದು ಮಲ್ಲಯ್ಯ ತಿಳಿದಿದ್ದ. ಗುಬ್ಬಚ್ಚಿ ತರಹದ ಹುಡುಗ ಸುಮ್ಮನೆ ಮಲ್ಲಯ್ಯನನ್ನು ನೋಡಿ ನೆಲ ಕೆರೆಯತೊಡಗಿದ..... ತಿಪ್ಪಣ್ಣ ಎಂದೂ ಗಟ್ಟಿಯಾಗಿ ಮಾತಾಡಿದವನೇ ಅಲ್ಲ. ಈಗ ಮಲ್ಲಯ್ಯನಿಗೆ ಹೇಳು ಸಾರ್..... ಸಾರ್.... ನಾನು ಹುಟ್ಟಿದಾಗಿನಿಂದ ಯಾರ ಮನಸ್ಸೂ ನೋಯ್ಸಿಲ್ಲ. ನಿಮ್ಮ ಮನಸೂ ನೋಯಿಸೊಲ್ಲ ನಾನು ತಪ್ಪು ಮಾಡಿದ್ದರೆ ಮರೆತುಬಿಡಿ, ಮಿಸ್‌ನೇ ಕೇಳಿ. ಎಲ್ಲಾನು ಮಿಸ್‌ನೇ ಕೇಳಿ: ಏನದು ಮಿಸ್? ಎಂದು ಅರ್ಥವಾಗಿದ್ದರೂ ಮಲ್ಲಯ್ಯ ಕೂತ. ಅವನ ತಲೆ ಯೋಚಿಸುವ ಶಕ್ತಿಯನ್ನೇ ಕಳೆದುಕೊಂಡಂತೆ ಇತ್ತು.... ಮಲ್ಲಯ್ಯ ಬೋನಿನಲ್ಲಿ ಬಿದ್ದಂತಿದ್ದ ಅಗಲವಾದ ಚಲಿಸದ ಕಣ್ಣುಗುಡ್ಡೆಗಳು ಹಾಗೆ ಕೂತ ನೆಟ್ಟ ನೋಟ ತೆಗೆಯಲಿಲ್ಲ. ಗೋಡೆಯನ್ನು ನೋಡುತ್ತಿದ್ದಂತಿತ್ತು. ಎದ್ದು ಮನೆಗೆ ಹೊರಟ."[೩೨] ವಿಭಿನ್ನ ಜಾತಿಯ ಗಂಡುಹೆಣ್ಣುಗಳ ಪ್ರೇಮ ಆಕಾರ ಪಡೆದುಕೊಳ್ಳುವ ಸಂದರ್ಭದಲ್ಲಿ ಉಂಟಾಗುವ ಘರ್ಷಣೆ ಇಲ್ಲಿಲ್ಲ. ಏನೆಲ್ಲ ನಡೆಯಬಹುದಾದ ಸಾಧ್ಯತೆಗಳನ್ನು ಹೇಳಿ ನಿರ್ವಾತ ಗೊಳಿಸುವುದು ಕಲ್ಲು ಕರಗುವ ಸಮಯ ಕಥೆ ಸದ್ದುಗದ್ದಲವಿಲ್ಲದೆ ಕಲ್ಲು ಕರಗುತ್ತದೆ.

'ಚಂದ್ರಪ್ಪಗೌಡರಿಗೆ ಬಿದ್ದ ಕನಸು' ವಿಶಿಷ್ಟವಾದ ಕಥೆ ಕನಸಿನಲ್ಲಿ ವಾಸ್ತವ – ವಾಸ್ತವದಲ್ಲಿ ಕನಸು, ಜಡತೆ, ಜೀವಂತಿಕೆ, ಆಚರಣೆ – ಶಿಷ್ಟಾಚಾರ, ಬದುಕಿನ ತಹತಹ ಸಂಸಾರಗಳ ಛಿದ್ರತೆ ಹೀಗೆ ಭಿನ್ನ ಭಿನ್ನ ನೆಲೆಗಳಲ್ಲಿ ಒಂದೇ ವಸ್ತುವನ್ನು ಶೋಧಿಸಬಹುದು. ಯುವಕನ ಅಸ್ವಸ್ಥತೆಗೆ ಯಾವುದೇ ಸಾಮಾಜಿಕ ಕಾರಣಗಳಿರದೆ ವ್ಯಕ್ತಿಗತ ನೆಲೆಯ ಸಮಸ್ಯೆಯಲ್ಲಿ ತೊಳಲಾಡುವ ಮಗ ತನ್ನ ತಂದೆಯ ಬಗೆಗಿನ ಅಭಿಪ್ರಾಯಗಳನ್ನು ಹೇಳಲಾರದ ಸ್ಥಿತಿಯಲ್ಲಿರುವುದು, ವಯಸ್ಸಿನ ಅಂತರ, ಹಿರಿಯರೆಂಬ ಗೌರವ, ವಾದಿಸಲಾಗದ ಭಯಕ್ಕೆ ಒಳಗಾಗಿರುವುದು ಇವುಗಳನ್ನು ಚಿತ್ರಿಸುತ್ತದೆ.

---

೩೨. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೩೭೮.

'ವಾಸ್ತವ' ಕಥೆಯಲ್ಲಿ ಆಚರಣೆ ಮತ್ತು ಶಿಷ್ಟಾಚಾರದೊಳಗಿನ ಸಂಬಂಧಗಳನ್ನು ಕಾಣಬಹುದು. ವ್ಯವಸ್ಥೆಗೆ ವಿರುದ್ಧವಾಗಿರುವ ಹೆಣ್ಣುಗಂಡುಗಳ ಸಂಬಂಧ ಮೊದಲ ಹೆಂಡತಿ ಮತ್ತು ಎರಡನೇ ಹೆಂಡತಿ ಎಂಬುದು ಸಾಮಾಜಿಕ ರಚನೆಯಲ್ಲಿ ಸಲ್ಲದ ವಿಷಯ ಆದರೆ ಈ ಕತೆಯಲ್ಲಿ ನಾವು ಕಾಣಬಹುದು. ಸಾಮಾಜಿಕ ರಚನೆಗೆ ವಿರುದ್ಧವಾಗಿ ಸಾಗುವ ಕಥೆಯನ್ನು ನೋಡಬಹುದು. ವನಜಾಳು ತನ್ನ ಜೀವನದಲ್ಲಿ ಎದುರಾದ ಆಪತ್ತುಗಳನ್ನು ಎದುರಿಸಿದ ಬಗೆಯನ್ನು ಹಾಗೂ ತನ್ನ ಘಾಸಿಗೊಂಡ ಮನಸ್ಸನ್ನು ನಿರಾಳ ಮಾಡಿಕೊಂಡ ರೀತಿಯನ್ನು ಈ ಕತೆಯಲ್ಲಿ ಕಾಣಬಹುದು. ವನಜಾ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಗುಮಾಸ್ತಳಾಗಿ ಕೆಲಸ ನಿರ್ವಹಿಸುತ್ತಿದ್ದಳು. ತನ್ನ ಸೊಣಕಲ ಬಾಸ್ ಚಿತ್ರ ಹಿಂಸೆ ಕೊಡುತ್ತಿದ್ದು ಪ್ರೇಮ ಪತ್ರ ಕೊಟ್ಟಿದ್ದ. ಈ ಪತ್ರವನ್ನು ರೆವಿನ್ಯೂ ಮಂತ್ರಿಗೆ ಕಳುಹಿಸಿ ಅವನ ಕತೆ ಮುಗಿಸಿದ್ದಳು. ನಂತರ ಪ್ರಸಾದ್ ಬಾಸ್ ಕಛೇರಿಯಲ್ಲಿ ಬಹಳ ಒಳ್ಳೆಯವರಾಗಿದ್ದವರು. ಒಂದು ದಿನ ಬಾಸ್ ಹೆಂಡತಿ ತಮ್ಮ ಮನೆಗೆ ಬನ್ನಿ ಒಂದು ಕಾರ್ಯವಿದೆ ಎಂದು ಫೋನ್ ಮಾಡಿದ್ದರು. ಆಗ ವನಜಾ ಬಾಸ್ ಮನೆಗೆ ಹೋಗಿದ್ದಾಗ, ಬಾಸ್ ಹೆಂಡತಿ ವನಜಾಳಿಗೆ ಅನೇಕ ಉಡುಗೊರೆ ಕೊಟ್ಟು ಇನ್ನು ನೀನು ನನ್ನ ತಂಗಿ. ಈ ಮನೆ ನಿನ್ನಮನೆ ನಮ್ಮವರು ನಿನ್ನನ್ನು ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುತ್ತಾರೆ. ಹಾಗಾಗಿ ಇಲ್ಲ ಎನ್ನಬೇಡ. ಹಾಸಿಗೆ ಸಿದ್ದವಾಗಿದೆ ಎಂದಿದ್ದರು ವನಜಾಳಿಗೆ ಆಘಾತವಾಗಿತ್ತು ಅಲ್ಲಿಂದ ತಪ್ಪಿಸಿಕೊಳ್ಳುವ ಉಪಾಯ ಹುಡುಕಿ ನನಗೆ ಒಪ್ಪಿಗೆ ಇದೆ. ಆದರೆ ನಾಳೆ ನಮ್ಮ ಮನೆಯಲ್ಲಿ ತಿಥಿ ಇದೆ ಎಂದು ಹೇಳಿ ಪಾರಾಗಿ ಹೊರ ಬಂದಿದ್ದಳು. ಅವತ್ತಿಂದ ಬಾಸ್ ವನಜಾಳನ್ನು ಡಿಸ್‌ಮಿಸ್ ಮಾಡಲು ಫೈಲ್ ಸೃಷ್ಟಿಸ ತೊಡಗಿದರು.

ಈ ವಿಚಾರ ಹೇಳಿದರೆ ಯಾರು ನಂಬುವುದಿಲ್ಲ ಎಂದು ತನಗೆ ಇಷ್ಟವಿಲ್ಲದಿದ್ದರೂ ಫರ್ಟಿಲೈಸರ್ ವ್ಯಾಪಾರಿಗೆ ಎರಡನೇ ಹೆಂಡತಿಯಾಗಿ ಮದುವೆಯಾಗಿದ್ದಳು. ಗಂಡ–ಹೆಂಡತಿಯರಲ್ಲಿ ಅನ್ಯೋನ್ಯತೆಯಿಲ್ಲ. ಗಂಡ ಕುಡುಕ ಮದುವೆಯಾದ ಮೂರು ವರ್ಷದಲ್ಲಿ ಗಂಡನೊಂದಿಗೆ ಮಾತು ನಿಲ್ಲಿಸಿದಳು. ಸಣ್ಣಿ ಎಂಬ ಹುಡುಗಿಯನ್ನು ಕೆಲಸಕ್ಕಿಟ್ಟುಕೊಂಡಿದ್ದಳು. ಸಣ್ಣಿ ವನಜಾಳಿಗೂ ಮತ್ತು ಮಗುವಿಗೂ ಸರ್ವಸ್ವವಾಗಿದ್ದಳು. ಗಂಡ ಒಂದು ದಿನ ಮಗು ಮತ್ತು ಸಣ್ಣಿ ಮಲಗಿದ್ದಾಗ ವನಜಾಳಿಗೆ ಕಪಾಳಕ್ಕೆ ಹೊಡೆದಿದ್ದನು. ವನಜಾಳು ಕೂಡಲೇ ಅವನಿಗೆ ಮುಖಕ್ಕೆ ಚಚ್ಚಿ ಗೋಡೆಗೆ ತಳ್ಳಿದಳು. ಅವತ್ತೇ ಅವನ ಸಾಹಸ ಕೊನೆಯಾಗಿಸಿದ್ದಳು. ಪ್ರಸ್ತುತ 'ವಾಸ್ತವ' ಕತೆ ಸಮಾಜಕ್ಕೆ ವಾಸ್ತವವಾಗಿದೆ. ಉದ್ಯೋಗಸ್ಥ ಮಹಿಳೆಯರನ್ನು ಹೆಚ್ಚಾಗಿ ವಾಂಛಲ್ಯ–ವ್ಯಾಮೋಹ ದೃಷ್ಟಿಯಿಂದ ನೋಡುವ ಗಂಡಸರಿಗೆ ವನಜಾಳ ಪಾತ್ರದ ಮೂಲಕ ತಕ್ಕ ಶಾಸ್ತಿ ಮಾಡಿಸಿದ್ದಾರೆ. ಗಂಡನಿಂದ ಪ್ರೀತಿ ಸಿಗದೇ ಅಸಹಾಯಕಳಾಗಿ ಜೀವನ ನಡೆಸುತ್ತಿರುವ ಅನೇಕ ಸ್ತ್ರೀಯರ ಚಿತ್ರಣವನ್ನು ವನಜಾಳ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

'ಒಬ್ಬ ದಿಟ್ಟ ಮನುಷ್ಯ' ಕಥೆಯಲ್ಲಿ ರೇವತಿ ತನ್ನ ಜೀವನದಲ್ಲಿ ಸುಖ ಕಂಡುಕೊಂಡ ವಿಚಾರವೇ ಕಥೆಯ ಪ್ರಮುಖ ವಸ್ತು. ರಂಗಣ್ಣ ಮನೆಯ ಪಕ್ಕದವರು ರೇವತಿಗೆ ಮರುಮದುವೆ ಮಾಡುವಂತೆ ಹೇಳುತ್ತಾರೆ. ರಂಗಣ್ಣ ನಮ್ಮ ಜಾತಿಯಲ್ಲಿ ಮರು ಮರುಮದುವೆ ಮಾಡಿಲ್ಲ.

ಆದ್ದರಿಂದ ನಾನು ಜಾತಿಯ ನಡಾವಳಿ ಮತ್ತು ಆಚಾರ ಬಿಡೊಲ್ಲ ಎಂದು ನಿರ್ಧರಿಸಿದ್ದ. ಪಕ್ಕದ ಮನೆಯವರ ಅಂತರ್ಜಾತಿಯ ಸಂಬಂಧವನ್ನು ನೋಡಿದ್ದ ರಂಗಣ್ಣ ಅವರ ಬಗ್ಗೆ ಕೇವಲವಾಗಿ ಮಾತಾಡಿದ್ದನು. ರಂಗಣ್ಣ ಕೆಲಸಕ್ಕೆ ಹೋಗಿ ಮನೆಗೆ ಬಂದಾಗ ರೇವತಿ ಕೊಂಗರ ಮಣಿ ಜೊತೆ ನಗಾಡ್ತಿದ್ಲು ಮನೆಯ ಬಾಗಿಲು ತಟ್ಟಿದ್ದ ತೆಗೆಯಲಿಲ್ಲ. ಅಲ್ಲೆ ಕಾದು ನಿಂತ ಅನಂತರ ರೇವತಿ ಬಾಗಿಲು ತೆಗೆದಳು. ಮಣಿ ಓಡಿಹೋದ ರಂಗಣ್ಣ ತನ್ನ ಮಗಳ ವಿಚಾರದಲ್ಲಿ ತಣ್ಣಗಿದ್ದನು.

ರಂಗಣ್ಣ ತನ್ನ ನಿಲುವನ್ನು ಬದಲಾಯಿಸಿಕೊಂಡಿದ್ದರಿಂದ ರೇವತಿಯ ಬದುಕಿಗೆ ಯಾವುದೇ ತೊಂದರೆ ಆಗಲಿಲ್ಲ. ಈ ಕತೆಯಲ್ಲಿ ರಂಗಣ್ಣನ ಪಾತ್ರದ ಮುಖಾಂತರ ಸಮಾಜದಲ್ಲಿ ಜಾಗೃತಿ ಮೂಡಿಸಿದ್ದಾರೆ.

'ಅಂಚಿನ ಚಿತ್ರಗಳು' ಕಥೆಯಲ್ಲಿ ಪಾರ್ವತಿ ಮತ್ತು ಭೂಪಾಲಂರ ಪವಿತ್ರ ಸ್ನೇಹ ಕಂಡುಬರುತ್ತದೆ. ಆಚರಣೆ ಮತ್ತು ಶಿಷ್ಟಾಚಾರದ ಸಂದರ್ಭಗಳ ಹಿನ್ನಲೆಯಲ್ಲಿ ಈ ಕಥೆ ಸಾಗುತ್ತದೆ. ಭೂಪಾಲಂ ಹೆಂಡತಿಯನ್ನು ಕಳೆದುಕೊಂಡಿದ್ದನು. ಈತನಿಗೆ ಐವತ್ತು ವರ್ಷ ಪಾರ್ವತಿಗೆ ಮೂವತ್ತು ವರ್ಷ ಭೂಪಾಲಂ ಸಿನಿಮಾಗೆ ಹೋಗುತ್ತಿದ್ದುದು ಪಾರ್ವತಿಯ ಜೊತೆ ಇವರ ಅನ್ಯೋನ್ಯತೆ ನೋಡಿ ಜಯತೀರ್ಥನಿಗೆ ಭೂಪಾಲಂ ಬಳಿ ಮಾತನಾಡಲು ಹೋಗುತ್ತಾನೆ. ಆದರೆ ಭೂಪಾಲಂನ ಪ್ರಸನ್ನ ವ್ಯಕ್ತಿತ್ವವನ್ನು ನೋಡಿ ನಾಚಿಕೊಂಡು ಏನೂ ಮಾತನಾಡದೇ ವಾಪಸ್ಸು ಬಂದಿದ್ದನು. ಭೂಪಾಲಂನ ಹುಟ್ಟುಹಬ್ಬಕ್ಕೆ ಪಾರ್ವತಿ ಭಾರಿ ಉಡುಗೊರೆ ಕೊಡಲು ಹೋಗಿದ್ದಳು. ಭೂಪಾಲಂ ಇಷ್ಟು ಹಣದ ಉಡುಗೊರೆ ಕೊಡುವ ಅವಶ್ಯಕತೆ ಇರಲಿಲ್ಲ. ಒಂದೇ ಒಂದು ಮಲ್ಲಿಗೆ ಹೂವು ಸಾಕಾಗಿತ್ತು ಎಂದು ಬುದ್ಧಿ ಹೇಳಿದ್ದನು. ಪಾರ್ವತಿ ಈ ದಿನ ನನ್ನ ಹುಟ್ಟುಹಬ್ಬ ಕೂಡ ಎಂದು ಸುಳ್ಳುಹೇಳಿದ ಮೇಲೆ ಭೂಪಾಲಂ ಪಾರ್ವತಿಗೆ ಶುಭಾಶಯ ಹೇಳಿದ್ದನು.

ಪವಿತ್ರ ಸ್ನೇಹಕ್ಕೆ ಯಾವುದೂ ಅಡ್ಡಿ ಬರುವುದಿಲ್ಲ. ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವುದಕ್ಕೆ ಇಂತಹ ಪವಿತ್ರ ಸ್ನೇಹದ ಅವಶ್ಯಕತೆಯಿದೆ ಎಂದು ಲಂಕೇಶರು ಪಾರ್ವತಿ ಮತ್ತು ಭೂಪಾಲಂರ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಲಂಕೇಶರ ಕಥನ ಸಾಹಿತ್ಯದಲ್ಲಿ ಕಂಡು ಬರುವ ಆಚರಣೆ ಮತ್ತು ಶಿಷ್ಟಾಚಾರದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಮೇಲೆ ಚರ್ಚಿಸಿದ ವಿವರಗಳ ಮೂಲಕ ಶೋಧಿಸಲಾಗಿದೆ.

# ಅಧ್ಯಾಯ ಎಂಟು

# ಸಮಾರೋಪ

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಲಂಕೇಶರನ್ನು ಬಿಟ್ಟು ಚರ್ಚಿಸಲಾಗದ ಕಾಲಾತೀತ ದಾಖಲೆಯಾಗಿ ಉಳಿದವರು ಲಂಕೇಶ್ ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ, ಟೀಕೆ–ಟಿಪ್ಪಣಿ, ಪ್ರಗತಿರಂಗ, ಬರಹಗಾರರ ಒಕ್ಕೂಟ – ಹೀಗೆ ಹತ್ತಾರು ಸಾಹಿತ್ಯ ಮತ್ತು ಸಾಂಸ್ಕೃತಿಕ ಆಯಾಮಗಳಿಗೆ ಒಗ್ಗಿಕೊಂಡವರು. ಹಾಗೆ ತಮ್ಮನ್ನು ತಾವು ತೊಡಗಿಸಿಕೊಂಡು ಬರೆಯುತ್ತಲೇ ಬದುಕಿದ ಕನ್ನಡದ ವಿಶಿಷ್ಟ ಪ್ರತಿಭಾವಂತ ಬರಹಗಾರರೆಂದರೆ ಲಂಕೇಶರು.

ನವ್ಯಸಾಹಿತ್ಯದ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆಯಿಂದ ಬಂದ ಮೂರುಜನ ಲೇಖಕರು ಕರ್ನಾಟಕ ಜನಮಾನಸದ ಮೇಲೆ ತಮ್ಮದೇ ಆದ ವಿಭಿನ್ನ ತಿಳುವಳಿಕೆಗಳ ಹೊಸ ಆಲೋಚನೆಗಳನ್ನು ಹುಟ್ಟುಹಾಕಿದವರು. ಪಿ.ಲಂಕೇಶ್, ಕೆ.ಪಿ.ಪೂರ್ಣಚಂದ್ರತೇಜಸ್ವಿ, ಯು.ಆರ್.ಅನಂತಮೂರ್ತಿ ತಮ್ಮ ಬರವಣಿಗೆಗಳ ಮೂಲಕ ತಾವು ಬದುಕಿದ ಕಾಲಘಟ್ಟದ ಮನುಷ್ಯಜೀವನದ ಜೀವಂತ ಮಾದರಿಗಳನ್ನು ಸೃಷ್ಟಿಸಲು ಹೆಣಗಿದರು. ಸಾಹಿತ್ಯಚಿಂತನೆಯ ಕಾಲಘಟ್ಟದಲ್ಲಿ ನವ್ಯಸಾಹಿತ್ಯ ಪರಂಪರೆಯನ್ನು ಚರ್ಚಿಸುವಾಗ ಹಲವು ಪ್ರಮುಖ ಬರಹಗಾರರು ತಮ್ಮ ತಮ್ಮ ಬರಹಗಳ ಮೂಲಕ ಕಾಲಮಾನದ ತುಡಿತಗಳಿಗೆ ಸ್ಪಂದಿಸಿದರು. ಆದರೆ ಪಿ.ಲಂಕೇಶ್ ಮಾತ್ರವೇ ವ್ಯಕ್ತಿವಿಶಿಷ್ಟ ದೈತ್ಯ ಪ್ರತಿಭೆಯಂತೆ ಬರೆವ ಪೆನ್ನನ್ನೇ ಗದೆಯಾಗಿಸಿಕೊಂಡು ಸುಸ್ಥಿರ ಸಮಾಜದ ಮರುಸ್ಥಾಪನೆಗಾಗಿ ಗದಾಪ್ರಹಾರ ಪ್ರಾರಂಭಿಸಿದ ರಾವಣನಂತೆ ಒಡನಾಡಿದ ಅಪರೂಪದ ಬರಹಗಳಿಗೆ ಸಾಕ್ಷಿಯಾದರು. ಹೀಗೆ ತನ್ನ ಚಿಂತನೆಗಳಿಂದ ತನ್ನ ಬರಹಗಳಿಂದ ಕನ್ನಡ ಸಾಹಿತ್ಯದಲ್ಲಿ ಒಂದು ಅನನ್ಯತೆಯನ್ನು ಸೃಷ್ಟಿಸಿದ ವಿಶಿಷ್ಟ ನಿರೂಪಣಾ ಶೈಲಿ, ತಾವೇ ಸೃಷ್ಟಿಸಿದ ಶಬ್ದಜಗತ್ತು, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಕೃತಿಗಳಲ್ಲಿ ತಾವು ಗ್ರಹಿಸಿದ ಮನುಷ್ಯ ಸಂಬಂಧಗಳನ್ನು ಅನಾವರಣಗೊಳಿಸಿದವರು ಲಂಕೇಶರು. ಒಬ್ಬ ಲೇಖಕನಾಗಿ ಎಲ್ಲೂ ಕೂಡ ಸ್ವಂತಿಕೆಯನ್ನು ಕಳೆದುಕೊಳ್ಳದೆ ಚಿಕಿತ್ಸಕ ದೃಷ್ಟಿಯಿಂದ ಸ್ಪಂದಿಸಿದ ಕಾರಣಕ್ಕೆ ಪ್ರಸ್ತುತ ಮಹಾಪ್ರಬಂಧದಲ್ಲಿ ಲಂಕೇಶರನ್ನು ಮನುಷ್ಯ ಸಂಬಂಧಗಳ ಸ್ವರೂಪದ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ.

ಲಂಕೇಶರು ಸೃಷ್ಟಿಸಿದ ಕಥಾನಕಗಳು ಮನುಷ್ಯರ ಸಂಕೀರ್ಣತೆಯ ಜೀವನದ ಅನುಭವಗಳನ್ನು ವಿಶ್ಲೇಷಿಸಿದವು. ಅವರ ಮೂರು ಕಾದಂಬರಿಗಳು ಮತ್ತು ಒಟ್ಟು ಅರವತ್ತೆಂಟು ಕಥೆಗಳು ಬದುಕಿನ ಸಮಕಾಲೀನ ಸಮಾಜದ ನೈಜ ಚಿತ್ರಣವಾಗಿ ಸತ್ಯದ ಸುಂಟರಗಾಳಿಯಂತೆ ಮೇಳೈಸಿಕೊಂಡ 'ಮನುಷ್ಯ ಸಂಬಂಧಗಳ ಸ್ವರೂಪ' ಎಂಬ ಶೀರ್ಷಿಕೆ ಒಟ್ಟು ಎಂಟು ಅಧ್ಯಾಯಗಳಲ್ಲಿ ಲಂಕೇಶರ ಕಥಾನಕಗಳು ಹೊರಡಿಸಿರುವ ಹೊಸ ಆಲೋಚನಾ ಕ್ರಮಗಳನ್ನು

ಹುಡಕಲಾಗಿದೆ. ಹಾಗೆ ಸಂಶೋಧಿಸಿದ ಎಲ್ಲಾ ವಸ್ತು ವೈವಿಧ್ಯಗಳಿಂದ ಹೊರಟ ಆಶಯಗಳನ್ನು ಕ್ರೋಢೀಕರಿಸಲಾಗಿದೆ.

ಮನುಷ್ಯ ಸಮಾಜದ ಅಂತರಾಳದ ದನಿಗಳನ್ನು ಶುಷ್ಕ ವೈಚಾರಿಕಥೆಯಿಂದ ಸ್ಪಷ್ಟ ಮೌಢ್ಯ ಹಾಗೂ ಕಂದಾಚಾರಗಳಿಂದ ಬೇರ್ಪಡಿಸಿ ಮನುಷ್ಯ ಸಹಜ ಸ್ವಭಾವಗಳ ಸೃಜನಶೀಲ ನೆಲೆಗಟ್ಟಿನಲ್ಲಿ ವಿಶ್ಲೇಷಿಸಿದವರು ಲಂಕೇಶರು. ಮನುಷ್ಯನ ವರ್ತನೆಗೆ ಸಂಬಂಧಪಟ್ಟ ಸಾಚಾ–ಮೋಸಗಳನ್ನು ಅತ್ಯಂತ ನಿಷ್ಠುರವಾಗಿ ವಿಶ್ಲೇಷಿಸಬಲ್ಲ ಲಂಕೇಶರ ಪ್ರತಿಭೆ ಮುಖ್ಯವಾಗಿ ನೈತಿಕವಾದದ್ದು. ಭಾವಚಿತ್ರಗಳನ್ನು ಮೋಸವಿಲ್ಲದೆ ಗದ್ಯದಲ್ಲಿ ಪ್ರಾಮಾಣಿಕವಾಗಿ ಚಿತ್ರಿಸಬಲ್ಲ ಇವರು ಕನ್ನಡದಲ್ಲಿ ಅಗ್ರ ಪಂಕ್ತಿಯಲ್ಲಿ ನಿಲ್ಲುವ ಲೇಖಕರು. ಇವರ ಪ್ರತಿಭೆಯ ಮುಖ್ಯಗುಣವೇ ನೈತಿಕವಾದದ್ದು ಜೊತೆಗೆ ಬಹುಮುಖ ಚಿಂತನೆಯುಳ್ಳ ಲಂಕೇಶರು ದಟ್ಟ ಮತ್ತು ಮೂರ್ತವಾದ ಶೈಲಿಯ ಮೂಲಕ ಮನುಷ್ಯ ಸಂಬಂಧಗಳಲ್ಲಿಯ ಜಟಿಲತೆಯನ್ನು ಸಂದಿಗ್ಧತೆಗಳನ್ನು ಸರಳವಾಗಿ ಭಾವಾವೇಶವಿಲ್ಲದೆ ತೆರೆದು ಹೇಳುವ ನೈಜತೆಯ ಮೂಲಕ ಸ್ವಂತ ಸ್ವಾಭಾವಿಕ ಕೊರತೆಗಳನ್ನು ಮೀರುವ ಸಾಹಿತ್ಯ ಸೃಷ್ಟಿಸಿ ಎಲ್ಲ ಸಾಹಿತ್ಯದ ಓದುಗರನ್ನು ವಿಶೇಷವಾಗಿ ಸೆಳೆದವರು.

ಲಂಕೇಶರ ಕಥಾನಕಗಳ ಪಾತ್ರಪ್ರಪಂಚಗಳು ಅವುಗಳು ಜೀವಿಸುತ್ತಿರುವ ಸುತ್ತಲಿನ ಪರಿಸರದಲ್ಲಿನ ಮನುಷ್ಯ ಸಂಬಂಧಗಳ ಸ್ವರೂಪವನ್ನು ವರ್ತಮಾನದ ಘಟನೆಗಳ ಹಿನ್ನಲೆಯಲ್ಲಿ ಹುಡುಕಾಡಿ ವಿಶ್ಲೇಷಿಸ ಹೊರಟವು. ಅವರ ಕಥಾನಕಗಳು ತಳಸ್ತರದ ಬದುಕಿನಿಂದ ಹಿಡಿದು ನಾಜೂಕಿನ ಭ್ರಮಾತ್ಮಕ ಜೀವನದವರೆವಿಗೆ ರಚನೆಯಾಗಿವೆ. ಅವರ ಪಾತ್ರ ಪ್ರಪಂಚ ಕಠೋರ ಪ್ರವೃತ್ತಿಯಿಂದ ಪ್ರತಿಕ್ರಿಯಿಸಿದ ಕೂಡಲೇ ಪ್ರತಿ ಪಾತ್ರದ ಮೇಲೂ ಲಂಕೇಶ್ ಪ್ರಭಾವವನ್ನು ಗುರುತಿಸುವಷ್ಟು ಅವು ಮೊನಚಾಗಿವೆ. ಆದರೆ ವೈಯಕ್ತಿವಾಗಿ ಲಂಕೇಶರ ಒರಟುತನಕ್ಕಿಂತ ಅವರ ಚಿಂತನೆಗಳನ್ನು ಮನುಷ್ಯನ ಸೂಕ್ಷ್ಮ ಒಳನೋಟವನ್ನು ಮಾತ್ರ ಇಲ್ಲಿ ಪ್ರಧಾನವಾಗಿ ಗುರುತರವಾಗಿ ಗ್ರಹಿಸಲಾಗಿದೆ.

ಅರವತ್ತು – ಎಪ್ಪತ್ತರ ದಶಕದಲ್ಲಿ ಸಾಮಾಜಿಕ ಕಟ್ಟುಪಾಡುಗಳಿಗೆ ಜೋತುಬಿದ್ದ ಜೀವನ ವಿಧಾನವನ್ನು ರೂಪಿಸಿಕೊಳ್ಳುತ್ತಿದ್ದವರ ನಡುವೆ ವ್ಯಕ್ತಿ ಪ್ರತಿಷ್ಠೆ ಮತ್ತು ಖಾಸಗೀತನದ ಮೋಜು ಮತ್ತು ಲೋಲುಪತೆಗಳು ಮನುಷ್ಯನನ್ನು ನಿಭಾಯಿಸಿದವು. ಬದಲಾದ ಜೀವನ ಸನ್ನಿವೇಶಗಳನ್ನು, ಈರ್ಷ್ಯೆಗಳನ್ನು, ಅಸೂಯೆಯನ್ನು, ಕಾಮನೆಗಳನ್ನು ಬಹಳ ರೋಚಕವಾಗಿ ಕಟ್ಟಿದವರು ಲಂಕೇಶರು. ಪ್ರತಿಭಟನೆ ಅವರ ಧ್ವನಿ. ಕೆಲವೊಮ್ಮೆ ಸಾಮಾಜಿಕ ಪರಿಸರದ ಜೀವ ಸಂವಿಧಾನವನ್ನು ಬಹಿಷ್ಕರಿಸಿ ವೈಯಕ್ತಿಕ ಮಟ್ಟದಲ್ಲಿಯೇ ಚಿಂತಿಸಿಕೊಂಡು ಬದುಕಿದ ಪಾತ್ರಗಳನ್ನು ನಿಸ್ಸಂಕೋಚವಾಗಿ ಕಟ್ಟಿದ ಲಂಕೇಶ್ ವ್ಯಕ್ತಿಯನ್ನೂ ಸಮಾಜವನ್ನು ಗುಮಾನಿಯಿಂದಲೇ ನೋಡುವ ಪ್ರವೃತ್ತಿಯನ್ನು ಬೆಳೆಸಿಕೊಂಡವರು.

"ಮಾಧ್ಯಮಿಕ ಶಾಲೆಯಲ್ಲಿದ್ದಾಗಲೇ ಹೆಣ್ಣುಗಳ ಚೆಂದ ನನ್ನನ್ನು ಮುತ್ತುತ್ತಿತ್ತು ಕಾಡಿಸುತ್ತಿತ್ತು ಎಂದು ಹೇಳಿದ್ದೇನೆ. ಆದರೆ ಅದು ಪಾಠಗಳನ್ನು ಕೆಡಿಸುವಷ್ಟು ತೀವ್ರವಾಗಿರಲಿಲ್ಲ."[೧] ಎಂದು ಬರೆದುಕೊಂಡ ಲಂಕೇಶ್ ಬಾಲ್ಯದಿಂದಲೂ ತಾನು ಅನುಭವಿಸಿದ ಎಲ್ಲವನ್ನೂ ಅಂದರೆ ಕುತೂಹಲ, ಪೆದ್ದುತನ, ಗುಮಾನಿಗಳು ತನ್ನನ್ನು ರೂಪಿಸಿವೆ ಎಂಬುದನ್ನೂ ನಿರ್ವಚಿಸಿಕೊಳ್ಳುತ್ತಾರೆ. ಹಾಗಾಗಿಯೇ ಮನುಷ್ಯನಿಗಿದ್ದ ಕಾಮಾಸಕ್ತಿ, ಸ್ವೇಚ್ಛೆ, ಧನದಾಹ, ಲೋಲುಪತೆ, ಅಸಹಿಷ್ಣುತೆ, ಈರ್ಷ್ಯೆ, ವರ್ಗ, ಲಿಂಗ, ಶಿಕ್ಷಣ, ರಾಜಕಾರಣಗಳು ಲಂಕೇಶರನ್ನು ಪ್ರಭಾವಿಸುತ್ತವೆ. ಕಥನರಚನೆಗೆ ಇವೆಲ್ಲವೂ ಲಂಕೇಶರ ಚಿಂತನೆಗಳನ್ನು ಮುತ್ತುತ್ತವೆ. ಹೆಣ್ಣನ್ನು ಕುರಿತ 'ಕಾಮ' ಹೇಗೆ ಅವರನ್ನು ರೋಮಾಂಚನಗೊಳಿಸುತ್ತದೋ ಅದನ್ನು ಮೀರುವ ಅವರ ಪಾತ್ರ ಪ್ರಪಂಚದಲ್ಲಿ ಹೆಣ್ಣಿಗೆ ಸಹಜ ಸಮ್ಮಾನವನ್ನು ಧಾರೆ ಎರೆದು ಪೋಷಿಸುತ್ತಾರೆಂದೇ ಹೊರತು. ಬಿಗುಮಾನವನ್ನಲ್ಲ, ಇನ್ನು ವ್ಯವಸ್ಥೆಯ ಪರ ಲಂಕೇಶರು ವಾದಕ್ಕಾಗಲೀ, ಸಂವಾದಕ್ಕಾಗಲೀ ನಿಲ್ಲಲೇ ಇಲ್ಲ. ಮಾನವ ಶಾಸ್ತ್ರೀಯ ನೆಲೆಯ ಚಿಂತನೆ ಸ್ಥಾಪಿತ ಮನುಷ್ಯ ಸಂಬಂಧಗಳ ಅನನ್ಯತೆಯನ್ನು ಮೀರುತ್ತಲೇ ಅಸ್ತಿತ್ವದಲ್ಲಿ ಇದ್ದ ಸಿದ್ಧ ಮಾದರಿಯ ಮನುಷ್ಯ ಸಂಬಂಧಗಳ ವಾಸ್ತವಿಕ ವ್ಯವಸ್ಥೆ ಆ ಬದಲಾವಣೆಯನ್ನು ಒಡ್ಡಿಕೊಳ್ಳುತ್ತದೆ. ಕಂದಾಚಾರ, ನೈತಿಕತೆ, ಹಣ ಮತ್ತು ಅಧಿಕಾರ, ಜಾತಿ ಮತ್ತು ಧರ್ಮ ಇವುಗಳನ್ನು ಚಾಲ್ತಿಯಲ್ಲಿದ್ದ ಪಟ್ಟಭದ್ರ ಹಿತಾಸಕ್ತಿಗಳು ಅದನ್ನು ವಿರೋಧಿಸಿದರೆ ತಮ್ಮ ಅಸ್ತಿತ್ವ ಉಳುವಿಗಾಗಿ ಹುಸಿ–ಆದರ್ಶದ ಭ್ರಮೆಗಳ ವಿರುದ್ಧ ಹೊಸ ತಲೆಮಾರು ಪ್ರತಿಭಟಿಸಬೇಕು. ಹೀಗೆ "ಇಂಥ ಚಲನಶೀಲ ಚಿಂತನೆಗಳು ಸಾಹಿತ್ಯ ಕೃತಿಗಳ ಮೂಲಕ ಅದರಲ್ಲೂ ಕಥನ ಪ್ರಕಾರಗಳಲ್ಲಿ ಅದು ರೂಪುಗೊಳ್ಳಬೇಕು ಎಂಬ ವಾದಗಳನ್ನು ತಮ್ಮ ಸೃಜನಶೀಲ ಕಥಾನಕಗಳಲ್ಲಿ ಕಾಣಿಸುವುದರ ಜೊತೆಗೆ ನವ್ಯ ಪಂಥವನ್ನು ಮನುಷ್ಯನ ಸಾಚಾತನಗಳಿಗೆ ಒಗ್ಗಿಸುವ ಯತ್ನ ಮಾಡಿದರು. ಯಂತ್ರಗಳಂತೆ ಸುಮ್ಮನೆ ಬಳಸುವ ತಾಂತ್ರಿಕ ಪರಿಭಾಷೆಯ ಹರಟೆಯಲ್ಲಿ ಮುಳುಗಿದ ನಿರ್ಜೀವ ವಿಮರ್ಶಕರೇ ಹೆಚ್ಚಾಗಿ ಕಾಣುವ ಕನ್ನಡ ಸಂಸ್ಕೃತಿಯಲ್ಲಿ ವಿಮರ್ಶೆಯ ನಿಜವಾದ ಕಾರ್ಯ ಏನೆಂಬುದರ ಕೆಲವು ಮಾದರಿಗಳನ್ನು ಲಂಕೇಶ್ ತೋರಿಸಿದರು."[೨]

ಗಾಂಧೀಜಿ, ಲೋಹಿಯಾ, ಅಂಬೇಡ್ಕರ್ ಚಿಂತನೆಗಳು ಲಂಕೇಶರ ಕಣ್ಣಿಗೆ ರಾಚುವಂತೆ ಕಾಣುತ್ತಿತ್ತು. ಭಾರತದ ಗ್ರಾಮ ಸಮಾಜಗಳು ಆಧುನೀಕರಣವನ್ನು ಅಳವಡಿಸಿಕೊಂಡು ಪ್ರಗತಿಯಾಗಬೇಕೆ ವಿನಃ ಆಧುನೀಕರಣಕ್ಕೆ ಸಿಲುಕಿ ನಾಶವಾಗಬಾರದೆಂಬ ಗಾಂಧಿಯ ಚಿಂತನೆಯ ಪ್ರಭಾವಗಳಿಂದ ಅವರ ಕಥಾನಕಗಳು ತಪ್ಪಿಸಿಕೊಳ್ಳಲಾಗಲಿಲ್ಲ. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕಲ್ಪನೆ ಅವರ 'ಮುಸ್ಸಂಜೆಯ ಕಥಾ ಪ್ರಸಂಗ'ದಲ್ಲಿ ಪ್ರಧಾನ ಆಶಯವಾಗಿ ಕಂಡಂತೆ

೧. ಗಂಗಾಧರ ಕುಷ್ಟಗಿ (ಸಂ) – ತಲೆಮಾರಿನ ತಳಮಳ – ಪುಟ. ೧೧೬.
೨. ಕೆ.ಮರುಳ ಸಿದ್ದಪ್ಪ – ಪಿ.ಲಂಕೇಶ್, ಪುಟ. ೭೦.

'ಅಕ್ಕ' ಮತ್ತು 'ಬಿರುಕು' ವಿನಲ್ಲಿ ಮೂಲಧಾತುವಾಗಿ ಗೋಚರಿಸುತ್ತದೆ. ಆದರೂ ಜಾತಿ ಪ್ರಧಾನ ವ್ಯವಸ್ಥೆಯನ್ನು ಬಿಚ್ಚಿಡುವ ಸಲುವಾಗಿ ಲಂಕೇಶರು ಕಂಡುಕೊಂಡ ಮಾರ್ಗವೆಂದರೆ ಕಥಾನಕ ಮಾರ್ಗವೇ ಆಗಿದೆ.

ಜಾತಿಯ ಹಿನ್ನಲೆಯಲ್ಲಿ ರೂಪಿತಗೊಂಡ 'ಮುಟ್ಟಿಸಿಕೊಂಡವನು', 'ಕಲ್ಲುಕರಗುವ ಸಮಯ', 'ಕೊಳಗೇರಿಯ ಕ್ಯಾತ', 'ಮುಸ್ಸಂಜೆಯ ಸಾವಂತ್ರಿ' ತಮ್ಮ ತಮ್ಮ ಮುಗ್ಧತೆಯ ಹಾಗೂ ತನ್ಮಯತೆಯ ಸುಳಿಯಲ್ಲಿ ಮುಳುಗಿ ಹೊಗಿದ್ದರು. ವ್ಯವಸ್ಥೆಯ ಅಪೂರ್ಣತೆಯನ್ನು ಅನಾವರಣಗೊಳಿಸುವಲ್ಲಿ ಸಕ್ರಿಯರಾಗುತ್ತಾರೆ. ಕಥಾನಕದ ಅಂತಿಮ ಫಲಿತಗಳು ಮಾತ್ರ ಡಾ. ಬಿ.ಆರ್.ಅಂಬೇಡ್ಕರ್ ಅವರ ಜಾತ್ಯಾತೀತ ಚಿಂತನೆಯ ಮನುಷ್ಯತ್ವವನ್ನು ಮೀರುವ ಅಂತಃಕರಣದೆಡೆಗೆ ಎಳೆದೊಯ್ಯುತ್ತದೆ. "ಬಸಲಿಂಗ ನೇರವಾಗಿ ತಿಮ್ಮಪ್ಪನಲ್ಲಿಗೆ ಹೋದ ನೋವು ತುಂಬಿದ ಬಲಗಣ್ಣು ಕಂಬನಿ ಸುರಿಸುತ್ತಿದ್ದವು. ತಿಮ್ಮಪ್ಪನವರ ಕೈ ಹಿಡಿದುಕೊಂಡ ಅವರನ್ನು ಅಪ್ಪಿಕೊಂಡು ಗಟ್ಟಿಯಾಗಿ ಅಳತೊಡಗಿದ. ತಿಮ್ಮಪ್ಪ ಚಲಿಸಲಿಲ್ಲ. ತಲೆ ನೇವರಿಸಲಿಲ್ಲ ಕೂಡ ಉಸಿರು ಹತೋಟಿಗೆ ಬಂದಾಗ ಬಸಲಿಂಗ ಏನೇನೋ ಬಡಬಡಿಸಿದ ಅದು ಅವನಿಗೆ ಮತ್ತು ತಿಮ್ಮಪ್ಪನವರಿಗೆ ಮಾತ್ರ ಗೊತ್ತಾಗುವಂತಿತ್ತು."[೩] ಜಾತ್ಯಾತೀತ ಜೀವನ ಮೌಲ್ಯಗಳು ಸಕರಾತ್ಮ ಚಿಂತನೆಗಳು ಮನುಷ್ಯ ಮನುಷ್ಯನನ್ನು ಭಾವನಾತ್ಮಕವಾಗಿ ಆತುಕೊಳ್ಳುವ ಗುಣ ಜಾತ್ಯಾತೀತವಾದ ಚಿಂತನೆಗಳು ಲಂಕೇಶರ ಕಥಾನಕಗಳಲ್ಲಿ ವ್ಯಕ್ತವಾಗಿರುವುದನ್ನು ನೋಡಬಹುದು. ಹಾಗೇ ನೋಡಿದರೆ ಮಹಿಳಾ ಸಂವೇದನೆಯ ನೆಲೆಯಲ್ಲಿ ಪ್ರಾಮಾಣಿಕತನ, ಹದಿಹರೆಯದ ವಿದ್ಯಾರ್ಥಿನಿಯರ ಲೈಂಗಿಕ ಆಸಕ್ತಿ, ವೃತ್ತಿ ನಿಷ್ಠೆ, ಅಸ್ವಸ್ಥ ಮನಸ್ಸು, ವೈವಾಹಿಕ ಜೀವನದಲ್ಲಿ ಹೊಂದಾಣಿಕೆಯಿಲ್ಲದಿರುವುದು, ಮೌಢ್ಯತೆ, ಸಂಕೀರ್ಣ ಮನಸ್ಥಿತಿ, ಆದರ್ಶದ ಬದುಕು, ಜಾತಿ ತಾರತಮ್ಯ ಹೋಗಲಾಡಿಸುವುದು, ರೂಪಕ್ಕಿಂತ ಗುಣಕ್ಕೆ ಆದ್ಯತೆ, ಸಾಹಿತಿ, ಪ್ರೇಮವಿವಾಹ, ಹೋರಾಟದ ಮನೋಭಾವನೆ, ಸಬಲೆಯರಾಗಿ, ಪವಿತ್ರಸ್ನೇಹ, ಅಂತರ್ಜಾತಿಯ ವಿವಾಹ ಹಾಗೂ ಅನ್ಯಾಯದ ವಿರುದ್ಧ ಹೋರಾಟ ಮಾಡಿದ ಸ್ತ್ರೀಪಾತ್ರಗಳು ಲಂಕೇಶರ ಕಥಾನಕದಲ್ಲಿ ಚಿತ್ರಿತವಾಗಿದೆ. ಒಟ್ಟಾರೆ ವ್ಯಕ್ತಿತ್ವದ ಎಲ್ಲ ಸಾಧ್ಯತೆಗಳನ್ನು ತಮ್ಮ ಕಥೆ, ಕಾದಂಬರಿಗಳಲ್ಲಿ ದುಡಿಸಿಕೊಂಡರು ಸಮಾನತೆಗಾಗಿ ಹಂಬಲಿಸುವ ಸ್ತ್ರೀ ಮನಸ್ಸುಗಳು ಎಷ್ಟೋ ಬಿಕ್ಕಟ್ಟುಗಳನ್ನು ಸೃಷ್ಟಿಸಿಕೊಂಡರೂ ಬದುಕಿನ ತೀವ್ರ ತುಡಿತಗಳ ಕಡೆಗೆ ಅವು ಚಲಿಸಿದಂತೆ ಕಥನಸಾಹಿತ್ಯದಲ್ಲಿ ಲಂಕೇಶರು ಸೃಷ್ಟಿಸಿದರು.

ಹೀಗೆ ನೇರ ಹಾಗೂ ನಿಷ್ಠುರದ ಶೈಲಿಯಲ್ಲಿ ಕಥೆ ಹೇಳಿದ ಲಂಕೇಶರು ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನೂ, ಭ್ರಮಾತ್ಮಕ ಸಮಾಜದ ಅಧೋಗತಿಯನ್ನು ಯಾವ

---

೩. ಪಿ.ಲಂಕೇಶ್, ಸಮಗ್ರ ಕಥೆಗಳು, ಪುಟ. ೨೨೦.

ಭಾವಾವೇಶವೂ ಇಲ್ಲದಂತೆ ತೆರೆದು ತೋರಿಸಿದರು. ಮನುಷ್ಯನ ಢೋಂಗಿತನವನ್ನು ತೋರಿಸಿದರು. ಅವರ ನಿರೂಪಣೆ, ಭಾಷಾಶೈಲಿ, ಕಥಾನಕಗಳ ವಸ್ತು ಮತ್ತು ತಂತ್ರಗಳ ಮುಖೇನ ನವ್ಯದ ಧೋರಣೆಯನ್ನು ತಾನು ಕಂಡ ಮಾನವ ಶಾಸ್ತ್ರೀಯ ಮತ್ತು ಸಮಾಜಶಾಸ್ತ್ರೀಯ ಹಿನ್ನಲೆಯಲ್ಲಿ ಬಣ್ಣಿಸಿದರು. ಬದುಕಿನ ಕಟು ವಾಸ್ತವಕ್ಕೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರಕ್ಕೆ ಅವರು ನೀಡಿದ ಅನನ್ಯ ಕೊಡುಗೆಯಾಗಿ ಲಂಕೇಶರಲ್ಲಿ ಹರಳುಗೊಂಡಿರುವ ಈ ಮಾನವನ ಚಿಂತನೆಗಳನ್ನು ಪ್ರಸ್ತುತ ಮಹಾ ಪ್ರಬಂಧದ ಪ್ರಧಾನ ಶೀರ್ಷಿಕೆಯಾದ "ಪಿ. ಲಂಕೇಶರ ಕಥನಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ" ಎಂಬ ವಿಷಯದ ಹಿನ್ನಲೆಯಲ್ಲಿ ಎಂಟು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ವಿಶ್ಲೇಷಣಾತ್ಮಕವಾಗಿ ವಿಂಗಡಿಸಿ ಶೋಧಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು, ಅಧ್ಯಯನದ ವಿಧಾನವನ್ನು ಹಾಗೂ ಅಧ್ಯಯನದ ವಿಂಗಡಣೆಯನ್ನು ವಿವರಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ಲಂಕೇಶರ ಕುರಿತು ಬಂದಿರುವ ತಾತ್ವಿಕ ಆಯಾಮಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಮನುಷ್ಯ ಸಂಬಂಧಗಳ ಸ್ವರೂಪದ ಪ್ರಾಕ್ ಕಲ್ಪನೆಯನ್ನು ಸ್ಥೂಲವಾಗಿ ವಿಶ್ಲೇಷಿಸಿ ವಿವರವಾಗಿ ನಿರ್ವಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಲಂಕೇಶರ ಕಥನ ಸಾಹಿತ್ಯದಲ್ಲಿ ಕಂಡುಬರುವ ಕಾಮ ಮತ್ತು ಪ್ರೇಮದ ಹಿನ್ನಲೆಯ ಮನುಷ್ಯ ಸಂಬಂಧಗಳ ಸ್ವರೂಪವನ್ನು ತಿಳಿಸಲಾಗಿದೆ. ಮನುಷ್ಯ ಪ್ರೀತಿಯಿಂದ ಹೇಗೆ ವಂಚಿತನಾಗಿದ್ದಾನೆ, ಮಾನವ ಸಂಬಂಧಗಳನ್ನು ತಮ್ಮ ಸ್ವಾರ್ಥ ಹಾಗೂ ಸಣ್ಣತನಗಳಿಂದ ಪ್ರಭಾವಿಸ ಹೊರಟ ಚಿಂತನೆಗಳನ್ನು ನೋಡಲಾಗಿದೆ. ಕುಟುಂಬ ಮತ್ತು ಕುಟುಂಬದಾಚೆಗಿನ ಕಾಮ ಮತ್ತು ಪ್ರೇಮದ ಹಿನ್ನಲೆಯಲ್ಲಿ ತಮ್ಮಲ್ಲೇ ಜೇಡರಬಲೆ ನೇಯ್ದುಕೊಂಡು ಅದರಲ್ಲೇ ಸಿಲುಕಿ ಸಾಮಾಜಿಕ ಜೀವನದ ಘಟಕಗಳಾಗಿ ಹೋಗುವ ಬಿಡಿಬಿಡಿಯಾದ ಮಾದರಿಗಳಲ್ಲಿ ಲಂಕೇಶರು ಗುರುತಿಸಿದ ಸತ್ಯಗಳನ್ನು ವಿವರಿಸಲಾಗಿದೆ. ಜಾತಿ ಮತ್ತು ಲೈಂಗಿಕ ಸಂಬಂಧಗಳ ನೆಲೆಯಲ್ಲಿ ಕಾಮ ಮತ್ತು ಪ್ರೇಮ ಸಂಬಂಧಗಳನ್ನು ಪರಸ್ಪರ ಭಿನ್ನಾಭಿಪ್ರಾಯ ಬೇಧಗಳಿದ್ದರೂ ಜೀವಸಂಬಂಧದ ನೆಲೆಯಲ್ಲಿ ಮನುಷ್ಯತನವನ್ನು ಒಟ್ಟುಗೂಡಿಸುವ ಪರಿಯನ್ನು ಇಲ್ಲಿ ನೋಡಲಾಗಿದೆ. ವೃತ್ತಿಗಳು ಮತ್ತು ಲೈಂಗಿಕ ಸಂಬಂಧಗಳು ಮತ್ತು ಲೈಂಗಿಕತೆ ಮತ್ತು ಗಂಡಿನ ನೆನಪುಗಳ ನೆಲೆಯಲ್ಲಿ ಹೆಣ್ಣು ಗಂಡಿನ ಸಂಬಂಧಗಳು ಯಾವ ಸಮುದಾಯದ ಭ್ರಮನಿರಸನ, ದೊಡ್ಡವರ ಆತ್ಯಂತಿಕ ಭೋಳೇತನಗಳ ಮನುಷ್ಯ ಸಂಬಂಧದ

ನೆಲೆಗಟ್ಟಿನಲ್ಲಿ ಸಮಾಜಮುಖೀ ಚಿಂತನೆಗಳಿಗಾಗಿ ತುಡಿಯುವ ಎಚ್ಚರದ ಪ್ರಜ್ಞೆ ಮನುಷ್ಯತ್ವದ ನೆಲೆಗಟ್ಟಿನಲ್ಲಿ ಲಂಕೇಶರ ಕಥನ ಸಾಹಿತ್ಯದ ವಿಶ್ಲೇಷಣೆಯ ಹಿನ್ನಲೆಯಲ್ಲಿ ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಲಂಕೇಶರ ಕಥನಸಾಹಿತ್ಯದಲ್ಲಿ ವಿಶ್ಲೇಷಣಾತ್ಮಕವಾಗಿ ವಿವರಿಸಿಕೊಳ್ಳುತ್ತಾ ವಿವರಣಾತ್ಮಕವಾಗಿ ಶೋಧಿಸಲಾಗಿದೆ. ಮುಖ್ಯವಾಗಿ ಹಸಿವು ಮತ್ತು ದೌರ್ಜನ್ಯದ ಹಿನ್ನಲೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಮನುಷ್ಯನ ಪ್ರವೃತ್ತಿಗಳ ಸಮಷ್ಠಿ ಪ್ರಜ್ಞೆಯಿಂದ ವೈಯಕ್ತಿಕ ಲಾಲಸೆಗಳ ಕಡೆಗೆ ಪಟ್ಟಭದ್ರರ ಮುಖವಾಡದ ಬಲೆಗೆ ಸಿಲುಕಿ ತಮ್ಮಲ್ಲೇ ಅಸ್ವಸ್ಥಗೊಂಡ ಬಗೆಯನ್ನು ಹಸಿವು ಮತ್ತು ನೈತಿಕ ಸಂಘರ್ಷದ ಹಿನ್ನಲೆಯಲ್ಲಿ ಶೋಧಿಸಿದೆ. ಹಸಿವು ಮತ್ತು ಮಹಿಳಾ ಶೋಷಣೆಯ ಸಂಬಂಧಗಳನ್ನು ಸಬಲೀಕರಣದ ನೆಲೆಯಲ್ಲಿ ಮಹಿಳೆ ಗುರುತಿಸಿಕೊಳ್ಳುವಲ್ಲಿ ಆದಂತ ಘಟನೆಗಳನ್ನು ಇಟ್ಟುಕೊಂಡು ಲಂಕೇಶರು ಕಂಡುಕೊಂಡ ಜೀವನ ಸತ್ಯಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ವಿವರಿಸಲಾಗಿದೆ. ಹಸಿವು ಮತ್ತು ಪ್ರಭುತ್ವದ ನಿರ್ಣಯತೆಯ ಕಾನೂನು ಸಂಬಂಧಗಳನ್ನು ಮನುಷ್ಯನ ಬಹುಮುಖೀ ಚಲನೆಯ ಪ್ರವೃತ್ತಿಗಳು ಆಧುನೀಕರಣಗೊಂಡಂತೆಲ್ಲಾ ಸಂಕೀರ್ಣತೆಯಿಂದ ಹೊರಬಂದು ಕಾನೂನುಗಳ ಸಂಬಂಧಿತವಾದ ನಿಲುವುಗಳನ್ನು ವಿವರಿಸಲಾಗಿದೆ. ಹಸಿವು ಮತ್ತು ಸಾಮಾಜಿಕ ನಿಲುವುಗಳ ಸಂಬಂಧಗಳನ್ನು ಮೌಲ್ಯಾಧಾರಿತ ಮಾನವ ಸಂಬಂಧಗಳು ರೂಪುಗೊಂಡಾಗ ಮಾತ್ರ ಸ್ವಚ್ಛ ಸ್ವಾಭಾವಿಕ ನೈತಿಕ ಸಮಾಜ ಕಟ್ಟಲು ಸಾಧ್ಯ ಎಂಬುದನ್ನು ಕಥನದ ಆಶಯದಲ್ಲಿ ವ್ಯಕ್ತಪಡಿಸಿರುವ ಲಂಕೇಶರು ಮನುಷ್ಯ ಸಂಬಂಧಗಳನ್ನು ಸಾಮಾಜಿಕ ನಿಲುವುಗಳ ಹಿನ್ನಲೆಯಲ್ಲಿ ಚರ್ಚಿಸಿ ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ಹಣ ಮತ್ತು ಅಧಿಕಾರದ ಹಿನ್ನಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಲಂಕೇಶರ ಕಥನದಲ್ಲಿ ಚರ್ಚಿಸಿ ವಿವರಿಸಲಾಗಿದೆ. ಹಣ ಮತ್ತು ಅಧಿಕಾರ ಏನೆಲ್ಲಾ ಮಾಡಬಹುದು ಮನುಷ್ಯತ್ವದ ಹಿನ್ನೆಲೆಯನ್ನು ಹಿಂಡಿ ಹಿಪ್ಪೆ ಮಾಡುವ ಧೋರಣೆಯನ್ನು ಕೌಟುಂಬಿಕ ಸಂಬಂಧಗಳಲ್ಲಿ ಆಗುವ ಏರಿಳಿತಗಳು ಗಂಡಿನ ಯಜಮಾನಿಕೆಯ ಸಂಬಂಧಗಳನ್ನು ವಿಭಿನ್ನ ನೆಲೆಯಲ್ಲಿ ಹರಿತವಾದ, ಮೊನಚಾದ ಕಥಾನಕದ ವಿವರಗಳಲ್ಲಿ ಚರ್ಚಿಸಲಾಗಿದೆ. ಅಧಿಕಾರದ ಶೋಷಣಾ ನೆಲೆ ಮತ್ತು ಮಹಿಳಾ ಶೋಷಣಾ ನೆಲೆಯಲ್ಲಿ ವಿಭಿನ್ನ ಆಯಾಮಗಳನ್ನು ಚರ್ಚಿಸಿ ವಿವರಿಸಲಾಗಿದೆ.

ಅಧ್ಯಾಯ ಏಳರಲ್ಲಿ ಜಾತಿ ಮತ್ತು ಧರ್ಮದ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವನ್ನು ಲಂಕೇಶರ ಕಥಾನಕಗಳಲ್ಲಿ ಜಾತ್ಯಾತೀತ ಮನುಷ್ಯ ಮಾಡುವ ಕೆಲಸಗಳನ್ನು ಸಮಾಜಕ್ಕೆ ಅಂಟಿರುವ ಕೊಳಕು ಜಾಡ್ಯಗಳನ್ನು ಚರ್ಚಿಸಲಾಗಿದೆ. ಸಾಂಪ್ರದಾಯಕ ಬದುಕಿನ ಸ್ಥಾಪಿತ ಮನುಷ್ಯ ಸಂಬಂಧಗಳನ್ನು ಆದರ್ಶ ಮತ್ತು ವಾಸ್ತವದ ಹಿನ್ನೆಲೆಯಲ್ಲಿ ಚರ್ಚಿಸಿದೆ.

ಆಧುನಿಕತೆ ಮತ್ತು ಶಿಕ್ಷಣ ಬದಲಿಸಿದ ಮನುಷ್ಯ ಸಂಬಂಧಗಳನ್ನು ಶೈಕ್ಷಣಿಕ ಚರ್ಚೆಯ ಮೂಲಕ ಬದಲಾದ ಮನುಷ್ಯ ಸಂಬಂಧಗಳ ಪರಿಯನ್ನು ನೋಡಲಾಗಿದೆ. ಸಂಘರ್ಷ ಮತ್ತು ಸಮಸ್ಯೆಗಳ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧಗಳನ್ನು ಲಂಕೇಶರ ಕಥನ ಸಾಹಿತ್ಯದ ಮೂಲಕ ವಿಭಿನ್ನ ಆಯಾಮಗಳಲ್ಲಿ ಸಂಘರ್ಷದ ನೆಲೆಗಳನ್ನು ವಿವರಿಸಲಾಗಿದೆ. ಆಚರಣೆ ಮತ್ತು ಶಿಷ್ಟಾಚಾರದೊಳಗಿನ ಸಂಬಂಧಗಳನ್ನು ಸಾಂಸ್ಕೃತಿಕ ಪರಿವೇಶಗಳನ್ನು ಹರಿತವಾದ ಮಾತುಗಳಲ್ಲಿ ಟೀಕಿಸಿದ ಲಂಕೇಶರ ಕಥನಗಳಲ್ಲಿ ವಿಶ್ಲೇಷಣಾತ್ಮಕವಾಗಿ ಚರ್ಚಿಸಲಾಗಿದೆ.

ಉಳಿದಂತೆ ಪರಿಶಿಷ್ಟದಲ್ಲಿ ಲಂಕೇಶರನ್ನು ಕುರಿತ ಸಾಹಿತ್ಯ ಚಿಂತಕರು ಮತ್ತು ವಿಮರ್ಶಕರ ಮಾತುಗಳು ಹಾಗೂ ಅನುಬಂಧದಲ್ಲಿ ಲಂಕೇಶರ ಕೃತಿಗಳು ಲಂಕೇಶರಿಗೆ ದೊರೆತ ಪುರಸ್ಕಾರಗಳು ಲಂಕೇಶ್ ಜೀವನದ ಪ್ರಮುಖ ಘಟನೆಗಳ ಸಂಗ್ರಹ ಸೂಚಿಯನ್ನು ಉಲ್ಲೇಖಿಸಲಾಗಿದೆ.

**ಅಧ್ಯಯನದ ಫಲಿತಗಳು:**

**'ಪಿ. ಲಂಕೇಶರ ಕಥನ ಸಾಹಿತ್ಯ : ಮನುಷ್ಯ ಸಂಬಂಧಗಳ ಸ್ವರೂಪ'** ಎಂಬ ವಿಷಯವನ್ನು ಸಂಶೋಧನೆಗೆ ಆಯ್ದುಕೊಂಡಿದ್ದು, ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡಿರುವ ಫಲಿತಗಳು ಈ ಮುಂದಿನಂತಿವೆ.

೧. ಲಂಕೇಶ್ ಕಥಾನಕಗಳನ್ನು ಅನ್ವೇಷಿಸಿದಾಗ ಕಥೆ–ಕಾದಂಬರಿಗಳಲ್ಲಿ ಪ್ರಮುಖವಾಗಿ ಚರ್ಚಿತವಾಗುವ ವಸ್ತು, ಭಾಷೆ, ತಂತ್ರ ಮತ್ತು ಸಾಂಸ್ಕೃತಿಕ ಅವಲೋಕನಗಳು ಮನುಷ್ಯ ಸಂಬಂಧಗಳ ಮೇಲೆ ಉಂಟುಮಾಡಿದ ಬದುಕಿನ ದರ್ಶನ ಹಾಗೂ ಸಾಮಾಜಿಕ ಆಯಾಮಗಳು ವ್ಯಕ್ತವಾಗಿವೆ.

೨. ಲಂಕೇಶರು ಬರೆದ ಮೂರು ಕಾದಂಬರಿಗಳು, ಅರವತ್ತೆಂಟು ಕಥೆಗಳೂ ಕೂಡ ಬಹುಪಾಲು ಮನುಷ್ಯನ ಅಂತರಂಗದ ಕಥೆಗಳೇ ಆಗಿವೆ. 'ಬಿರುಕು'ವಿನ ಬಸವರಾಜ, 'ಮುಸ್ಸಂಜೆಯ ಕಥಾ ಪ್ರಸಂಗ'ದ ರಂಗವ್ವ, 'ಅಕ್ಕ'ದ ಕ್ಯಾತ ಈ ಎಲ್ಲಾ ಕೇಂದ್ರ ಪಾತ್ರಗಳು ಹಳ್ಳಿಯ ಹಿನ್ನಲೆಯಿಂದ ಬಂದಂಥವುಗಳು ಗ್ರಾಮಗಳೆಂದರೆ ಮುಗ್ಧ, ಏನೂ ಅರಿಯದ, ಉದಾತ್ತ, ಜನಜೀವನದ ಪಕಳೆಗಳೆಂದು ಪರಿಭಾವಿಸಿದ ಕಾಲಕ್ಕೆ ಲಂಕೇಶರು ಈ ಭಾವನೆಯನ್ನು ಒಡೆದು ಕಟ್ಟಿರುವುದು ಬಿಂಬಿತವಾಗಿದೆ.

೩. ಭಾರತದಲ್ಲಿ ಗಾಂಧೀಜಿಯ ಗ್ರಾಮಸ್ವರಾಜ್ಯದ ಪರಿಕಲ್ಪನೆ ಪ್ರಭಾವ ಬೀರುತ್ತಿದ್ದುದರಿಂದ ಲಂಕೇಶರು ತಮ್ಮ ಕಥಾನಕದ ವಸ್ತುಗಳು ಹೆಚ್ಚಾಗಿ ಗ್ರಾಮಭಾರತದಲ್ಲೇ ಉಸಿರಾಡುವಂತೆ ಗಮನಹರಿಸಿದ್ದರು. ವಸ್ತುವಿನ ಆಯ್ಕೆಯಲ್ಲಿ ಏಕತಾನತೆಗೆ ಅವಕಾಶವಾಗಬಾರದೆಂಬ ಹಿನ್ನೆಲೆಯಲ್ಲಿ 'ಅಕ್ಕ', 'ಬಿರುಕು'ವಿನಂಥಾ

ಕಾದಂಬರಿಗಳನ್ನು ಬರೆದರೂ ಅಲ್ಲಿ ಬರುವ ಕಥಾನಾಯಕರು ಮತ್ತದೇ ಗ್ರಾಮಗಳ ಹಿನ್ನೆಲೆಯಿಂದ ಬಂದಂತವರಾಗಿದ್ದರು. ಹಾಗೆ ಬಂದ ಲಂಕೇಶರ ಪಾತ್ರಗಳು ನಗರಕೇಂದ್ರಿತ ಜೀವನವಿಧಾನಕ್ಕೆ ಹೊಂದಿಕೊಳ್ಳುವ ಮನುಷ್ಯನ ಆಂತರಿಕ ತಾಕಲಾಟಗಳನ್ನು ಲಂಕೇಶ್ ಗ್ರಹಿಸಿದರು ತಮ್ಮ ಶ್ರೇಷ್ಠ ಕಥೆಗಳ ಮತ್ತು ಕಾದಂಬರಿಗಳ ವಸ್ತು ವೈವಿಧ್ಯದಲ್ಲಿ ಗ್ರಾಮ ಸಮಾಜಗಳು ಆಧುನಿಕತೆಯಿಂದ ಮನುಷ್ಯ ಸಂಬಂಧಗಳ ಜೀವನ ವಿಧಾನವನ್ನು ಅನುಸಂಧಾನದ ನೆಲೆಯಲ್ಲಿ ವಿವರಿಸಲಾಗಿದೆ. ಅಂತಹ ಸಂದರ್ಭದಲ್ಲಿ 'ಕಂಬಳ್ಳಿ'ಯಂಥಾ ಊರಿಗೆ ಬೆಂಕಿ ಬಿದ್ದು ಅದು ಬದುಕಿನ ಮುಸ್ಸಂಜೆಗೆ ಜಾರುತ್ತದೆ. 'ಅಕ್ಕ'ದಲ್ಲಿ ಕ್ಯಾತ ಹಲವು ವ್ಯಕ್ತಿಗಳಿಂದ ಶೋಷಣೆಗೆ ಒಳಗಾಗುತ್ತಾನೆ. 'ಬಿರುಕು'ವಿನ ಬಸವರಾಜ ಪಲಾಯನವಾದಿಯಾಗಿ ಓಡುತ್ತಲೇ ಇರುತ್ತಾನೆ. 'ಒಂದು ಬಾಗಿಲು', 'ರೊಟ್ಟಿ', 'ಮುಟ್ಟಿಸಿಕೊಂಡವನು', 'ದಾಳಿ', 'ಜೀರ್ಣೋಭವ', 'ಒಬ್ಬಂಟಿ', 'ನಿವೃತ್ತರು', 'ಕೊನೆ', 'ನಮ್ಮ ನಡುವಿನ ಹುಡುಗ', ಮುಂತಾದ ಕಥೆಗಳಲ್ಲಿ ಮನುಷ್ಯತ್ವದ ಅಧಃಪತನದ ಮನಃಶಾಸ್ತ್ರೀಯ ಹುಡುಕಾಟ ಎದ್ದು ಕಾಣುತ್ತದೆ.

೪. ಸಾಮಾಜಿಕ ಸಂಸ್ಥೆಗಳ ಮೂಲ ಘಟಕ ಮನುಷ್ಯನೇ ಹೌದು ವ್ಯಕ್ತಿ ಮತ್ತು ಕುಟುಂಬಗಳು ತನ್ನ ಪರಿವಾರವನ್ನು ಸಾಮಾಜಿಕ ಪರಿಸರಕ್ಕೆ ಒಗ್ಗಿಸಿಕೊಂಡಾಗ ಸಮುದಾಯಿಕ ಸಹಕಾರಗಳು ಮನುಷ್ಯ ಸಂಬಂಧಗಳ ಹಿನ್ನೆಲೆಯಲ್ಲಿ ಸಂಘಟಿತಗೊಳ್ಳುತ್ತವೆ.

೫. ಪ್ರಸ್ತುತ ಕಥನ ಸಾಹಿತ್ಯದ ವಸ್ತುವಿನ ಪ್ರಧಾನ ನೆಲೆಯ ಹುಡುಕಾಟದ ಮೂಲಕ ಶೋಧಿಸಿಕೊಂಡ ಫಲಿತಗಳೆಂದರೆ ಚಿಂತನಾಕ್ರಮದಲ್ಲಿ ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಪರಸ್ಪರ ಒಬ್ಬರನ್ನು ಒಬ್ಬರು ಓದಿಕೊಂಡೇ ಬರೆದ ಸಮಕಾಲೀನರು. ಆದರೆ ಅವರ ಆಯ್ಕೆಯ ವಸ್ತುಗಳು ಮತ್ತು ಚಿಂತನೆಯ ಕ್ರಮಗಳು ಬೇರೆ ಬೇರೆಯೇ ಆಗಿದ್ದವೆಂಬುದು ಲಂಕೇಶರನ್ನು ವಿಶ್ಲೇಷಿಸಿದಾಗಲೇ ಹೊಳೆಯುತ್ತದೆ. ಯು.ಆರ್.ಅನಂತಮೂರ್ತಿಯವರು ತಾವು ಕಂಡ ಬ್ರಾಹ್ಮಣ ಸಮಾಜದ ಕಟ್ಟುಪಾಡುಗಳ ಚಹರೆಗಳಡಿಯಲ್ಲಿ ಸಾಮಾಜಿಕ ಶೋಷಣೆಗೆ ನಿಂತ ಅಸ್ವಸ್ಥತೆಯ ಅದ್ವಾನಗಳ ವಿರುದ್ಧ ತಾವೇ ಬಂಡೇಳುವ 'ಅವಸ್ಥೆ', 'ಸಂಸ್ಕಾರ', 'ಭಾರತೀಪುರ'ಗಳನ್ನು ಬರೆದರೆ 'ಕರ್ವಾಲೋ', 'ಜಗಾರಿಕ್ರಾಸ್', 'ಕಿರಂಗೂರಿನ ಗಯ್ಯಾಳಿಗಳು', ಕೃತಿಗಳನ್ನು ವಸ್ತುವಾಗಿಸಿಕೊಂಡ ತೇಜಸ್ವಿಯವರು ಕೃಷಿಕ ಸಮಾಜದ

ಸಂದಿಗ್ಧತೆಗಳು ಮತ್ತು ಮೌಢ್ಯಗಳನ್ನು ಆಧುನಿಕತೆಗೆ ಹೊಂದಿಕೊಳ್ಳಲಾಗದ ಮನುಷ್ಯನ ಚಡಪಡಿಕೆಗಳನ್ನು ಕಟ್ಟುತ್ತಾರೆ. ಬಲವಿದ್ದೂ ಜಯಿಸಲಾಗದ ವಾಸ್ತವಿಕತೆಯ ತಾಂತ್ರಿಕತೆಯನ್ನು ಕಾಣಿಸುವ ತೇಜಸ್ವಿ ಒಕ್ಕಲುತನದ ಜೀವಿತ ವಾಸ್ತವಗಳನ್ನು ಕಟ್ಟುತ್ತಾರೆ. ಶ್ರೀಕೃಷ್ಣ ಆಲನಹಳ್ಳಿಯವರ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯನ ದಶಾವತಾರ' ಕೃತಿಗಳಲ್ಲಿ ಬಯಲುಸೀಮೆಯ ಬದುಕಿನ ಚಿತ್ರಣವನ್ನು ಕಾಣಬಹುದು. ಲಂಕೇಶ್ ಈ ಮೂವರಿಗಿಂತಲೂ ವಿಭಿನ್ನವಾಗಿ ಮನುಷ್ಯನ ಅಂತರಾಳದ ಅಸ್ತಿತ್ವ ಮತ್ತು ಅಸ್ಥಿರತೆಗಳ ಮನಸ್ಥಿತಿಯ ಅವಲೋಕನಕ್ಕೆ ಹೆಚ್ಚು ಒತ್ತುಕೊಡುತ್ತಾರೆ. ವರ್ತಮಾನವನ್ನು ಕಾಡುತ್ತಿರುವ ವರ್ಗಸಂಘರ್ಷ, ಕಾಮ–ಪ್ರೇಮಗಳ ಮನೋವೈಜ್ಞಾನಿಕ ವಿಶ್ಲೇಷಣೆ ಈ ಹಿನ್ನಲೆಯ ಕಥಾನಕಗಳ ತಂತ್ರಗಾರಿಕೆಯು ನೇಯ್ಗೆಗೊಂಡಿರುವುದು ವಿಶಿಷ್ಟತೆಯಾಗಿದೆ.

೬. ಸಮಾಜವನ್ನು ನಿಯಂತ್ರಿಸುವ ಶಕ್ತಿ ಶಿಕ್ಷಣಕ್ಕಿದೆ. ಅಂತಹ ಶಿಕ್ಷಣವನ್ನು ಪಡೆದಾಗ ಮಾತ್ರ ಸಮಾಜದಲ್ಲಿ ಸಮಾನತೆ ಸಾಧಿಸಲು ಸಾಧ್ಯ ಎಂಬುದು ಲಂಕೇಶರು ಸೃಷ್ಟಿಸಿದ ಆಧುನಿಕ ಚಿಂತನೆಯ ಬಹುಮುಖ್ಯ ಕಾಳಜಿ ಎಂಬುದನ್ನು ಒಪ್ಪಬಹುದು.

೭. ಗಾಂಧೀ, ಅಂಬೇಡ್ಕರ್, ಲೋಹಿಯಾ, ಬಸವಣ್ಣ ಇವರ ಚಿಂತನೆಗಳು ಲಂಕೇಶರ ಬರಹಗಳನ್ನು ರೂಪಿಸಿವೆ. ಮನುಷ್ಯ ಪ್ರೀತಿಯಿಂದ ಹುಟ್ಟುವ ನೈತಿಕ ನೆಲೆಗಟ್ಟು ಮತ್ತು ಬದುಕಿನ ಆತ್ಮವಿಶ್ವಾಸಗಳು ಹೊಸ ತಿಳಿವಳಿಕೆಯೊಂದಿಗೆ ವಿಸ್ತರಿಸಿಕೊಂಡಿದೆ.

೮. ಮನುಷ್ಯ ವ್ಯಕ್ತಿನಿಷ್ಠ ನೆಲೆಯಲ್ಲಿ ಕಾಮ, ಮೋಹ, ಸ್ವಾರ್ಥ, ದೌರ್ಜನ್ಯಗಳನ್ನು ನಿಯಂತ್ರಿಸಿಕೊಂಡರೆ ಸಮ ಸಮಾಜದ ಜೀವಿತದ ಸಮಷ್ಠಿನೆಲೆಯಲ್ಲಿ ಮನುಷ್ಯ ಸಂಬಂಧಗಳು ರೂಪುಗೊಳ್ಳುತ್ತವೆ ಎಂಬ ಆಶಯವನ್ನಿಟ್ಟುಕೊಂಡು ಬರೆದ ಲಂಕೇಶರ ಬರವಣಿಗೆ ಸ್ಪಷ್ಟವಾದ ಮನುಷ್ಯತ್ವದ ನಾಡಿಮಿಡಿತವನ್ನು ತುಡಿಯುವ ಜೀವಪರ ಕಾಳಜಿಯನ್ನು ಬೆಸೆಯುತ್ತದೆ.

೯. ಲಂಕೇಶರ ಗದ್ಯದ ರಚನೆ ನಾನು ಎಂಬ ಆತ್ಮಕತೆಯನ್ನು ಕಥಾನಕಗಳಲ್ಲಿ ಭಾಷೆಯನ್ನು ಬಳಸುತ್ತಾರೆ. ಲಂಕೇಶ್ ಅಕಾಡೆಮಿಕ್ ಸಂವಾದಗಳು ಅರ್ಥವಾಗದೇ ದೂರ ಉಳಿದ ಸಂದರ್ಭದಲ್ಲಿ ಮೊನಚಾದ ಪತ್ರಿಕೋದ್ಯಮದ ಭಾಷೆ ಜನರನ್ನು ತಲುಪುವಲ್ಲಿ ಯಶಸ್ವಿಯಾಗುವುದಾದರೆ ಸೃಷ್ಟಿಶೀಲ ಬರಹದ ಶಕ್ತಿ ಸಾಧ್ಯತೆಗಳಿಗೆ ಈ ಗದ್ಯದ ನೈತಿಕ ಜಿಗಿತ ಯಾಕೆ ಬಳಸಬಾರದು ಎಂಬ ನಿಲುವು ಲಂಕೇಶರಿಗಿತ್ತು ಎಂಬುದು ಗೊತ್ತಾಗುತ್ತದೆ. ಆದುದರಿಂದಲೇ ಅವರ ಕಥಾನಕಗಳು ದೃಶ್ಯ ಮತ್ತು

ಶ್ರವ್ಯ ಎರಡಕ್ಕೂ ಅಭ್ಯಸಿಸಲು ಸಾಧ್ಯವಾಯಿತೆಂಬುದು ಪ್ರಸ್ತುತ ಮಹಾಪ್ರಬಂಧದ ಫಲಿತಗಳಲ್ಲಿ ದಾಖಲಿಸಬಹುದು.

೧೦. ಸಮಾಜ ತನ್ನ ಎಲ್ಲಾ ಕ್ಷೇತ್ರಗಳನ್ನು ಆಧುನೀಕರಣಕ್ಕೆ ಒಗ್ಗಿಸಿಕೊಂಡಾಗ ಹಣ, ಅಧಿಕಾರ, ಜಾತಿ, ಧರ್ಮದಂಥಾ ವಿಚಾರಗಳಲ್ಲಿ ತಾರತಮ್ಯ ಏರ್ಪಡುತ್ತದೆ. ಇದು ಎಲ್ಲ ಕಾಲಮಾನಗಳ ಜ್ವಲಂತ ಜೀವಂತ ಸಮಸ್ಯೆಯಾಗಿ ಕಾಡುತ್ತವೆ. ಹಾಗೂ ಮನುಷ್ಯ ಸಂಬಂಧದ ಸ್ಥಿತ್ಯಂತರಗಳು ಮತ್ತು ಸಂಸ್ಮರಣೆಗಳು ಜೀವ ವೈವಿಧ್ಯತೆಯ ನೆಲೆಯಲ್ಲಿ ಸಾಹಿತ್ಯ ಸಂವೇದನೆಯ ಸ್ತರದಲ್ಲಿ ವ್ಯಕ್ತವಾಗಿರುವ ನಿಲುವುಗಳು ಕಂಡುಬರುತ್ತವೆ.

೧೧. ನಾನು ಎಂಬ ಐರನಿಯನ್ನು ಬಿಟ್ಟರೆ ಕನ್ನಡದ ಸಂದರ್ಭದಲ್ಲಿ ಲಂಕೇಶ್ ಮಾನವ ಸಂಬಂಧದ ಮನಸ್ಥಿತಿಯನ್ನು ಕರುಳುಬಳ್ಳಿಯೊಂದಿಗೆ ಚಿತ್ರಿಸುವ ಲೇಖಕರು ಮನುಷ್ಯ ಸಂಬಂಧಗಳನ್ನು ವಿಶ್ಲೇಷಣಾತ್ಮಕ ರೂಪದಲ್ಲಿ ಶೋಧಿಸಲು ಯತ್ನಿಸಿದವರು ಲಂಕೇಶರು ತಮ್ಮ ವ್ಯಕ್ತಿತ್ವದ ಒಂದು ಹನಿಯನ್ನಾದರೂ ಅಲ್ಲಿ ಕೊಡದೆ ಬರೆದವರಲ್ಲ ಎಂಬ ಮಾತು ಸತ್ಯ ಆದುದರಿಂದಲೇ ಲಂಕೇಶರು ತಾವು ಬದುಕಿದ್ದಾಗ ಉತ್ತರಿಸಿದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರತಿಕ್ರಿಯೆಗಳು ಅವರ ಅನಂತರದಲ್ಲೂ ವಿವಿಧ ಮಾರ್ಗಗಳಲ್ಲಿ ಬೇರೆ ಬೇರೆ ಸ್ತರಗಳಲ್ಲಿ ಇವತ್ತಿಗೂ ತೆರೆದುಕೊಳ್ಳುತ್ತಾ ಬೆಳೆಯುತ್ತಾ ಸಾಗುತ್ತಿರುವುದನ್ನು ಗುರುತಿಸಬಹುದು.

೧೨. ಹೊಸ ತಲೆಮಾರಿನ ಗ್ರಾಮಭಾರತದ ಸಂಕಷ್ಟಗಳಿಗೆ, ನಗರಕೇಂದ್ರಿತ ದುಷ್ಪರಿಣಾಮಗಳಿಗೆ ಲಂಕೇಶರಲ್ಲಿ ಉತ್ತರಗಳಿವೆ. ಲಂಕೇಶರ ಓರಗೆಯವರು ಮತ್ತು ಸಮಕಾಲೀನರ ನಡುವೆ ಎಷ್ಟೇ ಅಭಿಪ್ರಾಯ ಬೇಧಗಳೂ, ಅಸೂಯೆಗಳು, ಅಸಹನೆಗಳು ಕಂಡುಬಂದರೂ ಕೂಡ ತರುಣ ತಲೆಮಾರನ್ನು ರೂಪಿಸಿದವರು ಲಂಕೇಶರು.

೧೩. ಲಂಕೇಶರು ಕಟ್ಟಿದ ಕಥಾನಕಗಳು ಹೊಸ ತಲೆಮಾರಿನ ಚಿಂತನೆಗೆ ಒಳಸೂಕ್ಷ್ಮಗಳನ್ನು ನೀಡಿವೆ. ಗ್ಲೋಬಲೈಸೇಷನ್ನಿನ ಕಾರ್ಪೋರೇಟ್ ಸಂಸ್ಕೃತಿಗೆ ಪ್ರತಿಯಾಗಿ ಕನ್ನಡದ ದೇಸೀ ಜಗತ್ತನ್ನು ಅರಿಯಬೇಕಾಗಿದೆ ಎಂಬುದನ್ನು ಒತ್ತಿ ಹೇಳುತ್ತವೆ.

೧೪. ನಮ್ಮ ದೇಸೀ ಚಿಂತನೆ ಆಧುನಿಕ ಜಗತ್ತುಗಳ ಕನ್ನಡ ಸಂಸ್ಕೃತಿಗೆ ಅನುಸಂಧಾನ ಮಾರ್ಗವೇ ಉಚಿತ ಮತ್ತು ಅಂತಿಮ ಎಂಬ ತಿಳುವಳಿಕೆಯನ್ನು ಗದ್ಯದ ತಾಂತ್ರಿಕ ಕಲೆಗಾರಿಕೆಯನ್ನು ಹಾಗೂ ಸಾಮಾಜಿಕ ಬದ್ಧತೆಯನ್ನು ಅವರ ಕಥನ ಪ್ರಶ್ನೆಯೊಳಗೆ

ಗಮನಿಸಿದ ಡಿ.ಆರ್.ನಾಗರಾಜ್ ಲಂಕೇಶರನ್ನು 'ಶತಮಾನದ ಪ್ರತಿಭೆ' ಎಂದು ಕರೆದುದನ್ನು ಒಪ್ಪಬಹುದು.

೧೫. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಕನ್ನಡದ ಬೌದ್ಧಿಕ ಶಿಸ್ತಿನ ಸಾಂಸ್ಕೃತಿಕ ನಡೆಯನ್ನು ವೈಜ್ಞಾನಿಕತೆಯನ್ನು ರೂಪಿಸಿದವರು ಲಂಕೇಶರು ಎಂಬುದು ಸ್ಪಷ್ಟ ತಾವು ಮುಟ್ಟಿದ ಎಲ್ಲ ಪ್ರಕಾರಗಳಲ್ಲೂ ಶ್ರೇಷ್ಠತೆಯ ಗಳಿಗೆಗಳನ್ನು ಕಂಡು ಹಲವು ತಲೆಮಾರುಗಳನ್ನು ರೂಪಿಸಿದ ಲಂಕೇಶ್ ಪ್ರಸ್ತುತರಾಗಿ ಇಂದಿಗೂ ನಿಲ್ಲುತ್ತಾರೆ.

೧೬. ಲಂಕೇಶರ ಕಥನಗಳು ಸಮಾಜ ಜೀವನದ ಮನುಷ್ಯ ಸಂಬಂಧದ ಚಿಂತನೆಗಳ ವರ್ತಮಾನದ ತರ್ಕಗಳಿಗೂ ಉತ್ತರಿಸುತ್ತಾ ಸಮಕಾಲೀನ ಸಂದರ್ಭಕ್ಕೆ ತುಡಿಯುವ ಹಿತವನ್ನು ಕಾಯ್ದುಕೊಂಡಿವೆ.

೧೭. ಸದಾ ಎಚ್ಚರದ ಪ್ರಜ್ಞೆಯ ಭಾಗವಾಗಿ ಬರೆಯುತ್ತಿದ್ದ ಲಂಕೇಶರ ಕಥನ ಸಾಹಿತ್ಯದ ಭಾಷೆ ತುಸು ಪೋಲಿತನದಿಂದ ಕೂಡಿದೆ. ಕೆಲವೊಮ್ಮೆ ಶಿಷ್ಟ ಸಮಾಜ ಆಕ್ರಮಿಸಿ ಕೊಂಡಿರುವುದನ್ನು ನೇರವಾಗಿ ಬಳಸಲ್ಪಡುತ್ತದೆ ಎಂಬೆಲ್ಲಾ ವಿಮರ್ಶಾ ನಿಲುವುಗಳು ಕಾಣುತ್ತವೆ. ಆದರೆ 'ಪ್ರಸ್ತುತ', 'ಕಂಡದ್ದು ಕಂಡ ಹಾಗೆ' ಬರೆಹಗಳ ಮೂಲಕ ತೆರೆದುಕೊಂಡ ಲಂಕೇಶರಿಗೆ ಯಾವುದು 'ನಾನಲ್ಲ' ಎಂಬ ಸರಳಸತ್ಯ ಗೊತ್ತಾಗಿ ಹೋಗಿತ್ತು. ಮನುಷ್ಯರಿಗೆ ಕನಸು ಬೀಳಬಹುದು ಆದರೆ ಕನಸನ್ನು ಬೀಳಿಸಿಕೊಳ್ಳುವುದು ಕಷ್ಟ ಎನ್ನುತ್ತಿದ್ದವರು ಯಾವಾಗಲೂ ಸಾಮಾಜಿಕ ಪ್ರಜ್ಞೆಯ ಭಾಗವಾಗಿಯೇ ಇರಲು ಚಿಂತಿಸಿದ್ದಾರೆ. ಲಂಕೇಶ್ ಪ್ರತಿಪಾದಿಸಿದ ಚಿಂತನಾ ಸ್ವಭಾವವನ್ನು ಬೆಳೆಸಿಕೊಂಡೇ ಜಗಳಕ್ಕೆ ನಿಲ್ಲುತ್ತಿದ್ದರು. ಆದಕಾರಣ ಅವರ ಕಥಾನಕಗಳ ಎಲ್ಲ ಪಾತ್ರಗಳಲ್ಲಿ ಮನುಷ್ಯನ ಎಲ್ಲ ವಿಧದ ಇತಿ–ಮಿತಿಗಳನ್ನು ಶೋಧಿಸಿಕೊಳ್ಳಲು ಸಾಧ್ಯವಾಗಿದೆಯೆಂಬುದು ಪ್ರಬಂಧ ಕಂಡುಕೊಂಡ ಫಲಿತಗಳಲ್ಲಿ ಒಂದಾಗಿದೆ.

# ಅನುಬಂಧ

# ಆಕರ ಗ್ರಂಥಗಳು


೧. ಲಂಕೇಶ್.ಪಿ : ಬಿರುಕು

ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೯

ಮುಸ್ಸಂಜೆಯ ಕಥಾಪ್ರಸಂಗ, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೦

ಅಕ್ಕ

ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೧೧

ಸಮಗ್ರ ಕಥೆಗಳು

ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೨

ಉಲ್ಲಂಘನೆ ಮತ್ತು ಇತರ ಕಥೆಗಳು

ಲಂಕೇಶ್ ಪ್ರಕಾಶನ ಬಸವನಗುಡಿ, ಬೆಂಗಳೂರು, ೨೦೧೩

ಮಂಜು ಕವಿದ ಸಂಜೆ ಮತ್ತು ಇತರ ಕಥೆಗಳು

ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೪


## ಪಿ.ಲಂಕೇಶರ ಕೃತಿಗಳು

**ಕವನ ಸಂಕಲನ**

ಇಂಚರ – ೧೯೫೬

ಬಿಚ್ಚು – ೧೯೬೭

ತಲೆಮಾರು – ೧೯೭೩

ಚಿತ್ರಸಮೂಹ – ೧೯೯೯

ನೀಲುಕಾವ್ಯ – ೨೦೦೭

**ಸಂಪಾದಿತ**

ಅಕ್ಷರ ಹೊಸ ಕಾವ್ಯ – ೧೯೫೬

**ನಾಟಕಗಳು**

ಟಿ.ಪ್ರಸನ್ನನ ಗೃಹಸ್ಥಾಶ್ರಮ – ೧೯೬೨
ನನ್ನ ತಂಗಿಗೊಂದು ಗಂಡುಕೊಡಿ – ೧೯೬೩
ತೆರೆಗಳು – ೧೯೬೬
ಗಿಳಿಯು ಪಂಜರದೊಳಿಲ್ಲ – ೧೯೬೯
ಸಿದ್ಧತೆ – ೧೯೭೦
ಪೋಲೀಸರಿದ್ದಾರೆ ಎಚ್ಚರಿಕೆ – ೧೯೭೧
ಕ್ರಾಂತಿಬಂತು ಕ್ರಾಂತಿ – ೧೯೭೧
ಏಳು ನಾಟಕಗಳು (ಸಂಕಲನ) – ೧೯೭೧
ಬಿರುಕು – ೧೯೭೩
ಸಂಕ್ರಾಂತಿ – ೧೯೭೩
ಗುಣಮುಖ – ೧೯೭೩
ದೊರೆ ಈಡಿಪಸ್ ಮತ್ತು ಅಂತಿಗೊನೆ(ಅನು) ೧೯೭೧

**ಗದ್ಯ ಬರಹಗಳು**

ಪ್ರಸ್ತುತ – ೧೯೭೦
ಕಂಡದ್ದು ಕಂಡಹಾಗೆ – ೧೯೭೫
ಟೀಕೆ ಟಿಪ್ಪಣಿಗಳು (ಭಾಗ ೧, ೨ ಮತ್ತು ೩)– ೧೯೯೭, ೧೯೯೮, ೨೦೦೮
ರೂಪಕ ಲೇಖಕರು – ೨೦೦೮
ಸಾಹಿತಿ ಸಾಹಿತ್ಯ ವಿಮರ್ಶೆ – ೨೦೦೮
ಮರೆಯುವ ಮುನ್ನ (ಸಂಗ್ರಹ ೧) – ೨೦೦೯
ಈ ನರಕ ಈ ಪುಲಕ – ೨೦೦೯
ಮರೆಯುವ ಮುನ್ನ (ಸಂಗ್ರಹ ೧, ೨, ೩, ೪)
ಮನಕ್ಕೆ ಕಾರಂಜಿಯ ಸ್ಪರ್ಶ – ೨೦೧೦

**ಆತ್ಮಚರಿತ್ರೆ**

ಹುಳಿಮಾವಿನ ಮರ – ೧೯೯೭

## ಪಿ.ಲಂಕೇಶರಿಗೆ ದೊರೆತ ಪ್ರಶಸ್ತಿ ಹಾಗೂ ಗೌರವಗಳು

| | | |
|---|---|---|
| ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ | – | ೧೯೯೦ |
| ಭಾರತಿಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ | – | ೧೯೯೩ |
| ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ | – | ೧೯೯೩ |
| 'ಪಲ್ಲವಿ' ಚಿತ್ರ ನಿರ್ದೇಶನಕ್ಕೆ ರಾಷ್ಟ್ರಪ್ರಶಸ್ತಿ | – | ೧೯೭೭ |
| 'ಪಲ್ಲವಿ' ಚಿತ್ರಕ್ಕೆ ನಾಲ್ಕು ರಾಜ್ಯ ಪ್ರಶಸ್ತಿ | – | ೧೯೭೮ |
| ಎಲ್ಲಿಂದಲೋ ಬಂದವರು ಚಿತ್ರಕ್ಕೆ ರಾಜ್ಯ ಪ್ರಶಸ್ತಿ | – | ೧೯೮೦ |
| ಶಿವಮೊಗ್ಗ ಕರ್ನಾಟಕ ಸಂಘದ ಗೌರವ ಸದಸ್ಯತ್ವ | – | ೧೯೯೫ |

## ಲಂಕೇಶರ ಜೀವನದ ಪ್ರಮುಖ ಘಟನೆಗಳು

| | | |
|---|---|---|
| **ಜನನ** | : | ಮಾರ್ಚ್ ೮, ೧೯೩೫ |
| **ವಿದ್ಯಾಭ್ಯಾಸ** | : | ಶಿವಮೊಗ್ಗೆಯ ಇಂಟರ್ ಮೀಡಿಯಟ್ ಕಾಲೇಜ್ (೧೯೫೩–೫೫) |
| | | ಬೆಂಗಳೂರು ಸೆಂಟ್ರಲ್ ಕಾಲೇಜು (೧೯೫೫–೫೮) |
| | | ಮೈಸೂರು ಮಹಾರಾಜ ಕಾಲೇಜು (೧೯೫೮–೫೯) |
| **ವೃತ್ತಿ** | : | ಶಿವಮೊಗ್ಗ ಸಹ್ಯಾದ್ರಿ ಕಾಲೇಜು, ಅಧ್ಯಾಪಕ ೧೯೫೯–೬೨ |
| | | ಬೆಂಗಳೂರು ಸೆಂಟ್ರಲ್ ಕಾಲೇಜು, ಅಧ್ಯಾಪಕ ೧೯೬೪–೬೫ |
| | | ಬೆಂಗಳೂರು ವಿಶ್ವವಿದ್ಯಾನಿಲಯ, ೧೯೬೫–೭೮ |
| | | ಅಧ್ಯಾಪಕ ವೃತ್ತಿಯಿಂದ ಸ್ವಯಂನಿವೃತ್ತಿ, ೧೯೭೮ |
| **ಕೌಟುಂಬಿಕ** | : | ಇಂದಿರಾ ಜೊತೆ ವಿವಾಹ ಜನವರಿ ೨೯, ೧೯೬೧ |
| | | ಮಗಳು ಗೌರಿ ಜನನ ಜನವರಿ ೨೯, ೧೯೬೨ |
| | | ಮಗಳು ಕವಿತಾ ಜನನ ಡಿಸೆಂಬರ್ ೧೩, ೧೯೬೪ |
| | | ಮಗ ಇಂದ್ರಜಿತ್ ಜನನ ಸೆಪ್ಟೆಂಬರ್ ೨೩, ೧೯೬೮ |
| | | 'ಸಂಸ್ಕಾರ' ಚಲನಚಿತ್ರದಲ್ಲಿ ನಾರಣಪ್ಪನ ಪಾತ್ರ, ೧೯೬೯ |
| | | 'ಲಂಕೇಶ್ ಪತ್ರಿಕೆ' ಆರಂಭ ೧೯೮೦ |
| **ಮರಣ** | : | ಜನವರಿ ೨೫, ೨೦೦೦ |

## ಆಕರ ಗ್ರಂಥಗಳ ಪಟ್ಟಿ

೧. ಅಮರೇಶನುಗಡೋಣಿ, ಸಂ ೨೦೦೮, "ಕನ್ನಡ ಸಂಶೋಧನೆಯ ವೈಧಾನಿಕತೆಗಳು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨. ಅಶೋಕ ಟಿ.ಪಿ, "ಸ್ಮೃತಿ ಮತ್ತು ಕೃತಿ", ಸಪ್ನ ಬುಕ್ ಹೌಸ್, (೨೧೧೭)

೩. ಅಶೋಕ ಟಿ.ಪಿ, "ಪುಸ್ತಕ ಸಮಯ", ಅಕ್ಷರ ಪ್ರಕಾಶನ, ಹೆಗ್ಗೋಡು(೨೦೧೧)

೪. ಅಶೋಕ ಟಿ.ಪಿ "ಪುಸ್ತಕ ಪ್ರೀತಿ", ಅಕ್ಷರ ಪ್ರಕಾಶನ, ಸಾಗರ (೧೯೯೩)

೫. ಆಮೂರ ಜಿ.ಎಸ್, "ಕನ್ನಡ ಕಥನ ಸಾಹಿತ್ಯ-ಸಣ್ಣ ಕಥೆ", ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು (೨೦೧೨)

೬. ಕೃಷ್ಣಮೂರ್ತಿ ಎಂ.ಜಿ, "ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು", ಅಕ್ಷರ ಪ್ರಕಾಶನ, ಸಾಗರ(೧೯೯೭)

೭. ಕರೀಗೌಡ ಬೀಚನಹಳ್ಳಿ, "ವ್ಯಷ್ಠಿ ಮತ್ತು ಸಮಷ್ಟಿ", ಅಜಂತ ಪ್ರಕಾಶನ, ಬೆಂಗಳೂರು(೨೦೦೭)

೮. ಕರೀಗೌಡ ಬೀಚನಹಳ್ಳಿ, "ಶತಮಾನದ ಸಣ್ಣ ಕಥೆಗಳ ಸಮೀಕ್ಷೆ", ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು(೨೦೦೩)

೯. ಕೋದಂಡರಾಮ ಎನ್.ಕೆ. "ಕನ್ನಡ ಕಥಾಸಾಹಿತ್ಯದಲ್ಲಿ ಸಂಘರ್ಷ", ಗಾಯತ್ರಿ ಸ್ಮಾರಕ ಗ್ರಂಥ ಮಾಲೆ, ಮೈಸೂರು (೧೯೯೬)

೧೦. ಗಂಗಾಧರ ಕುಷ್ಟಗಿ (ಸಂ) "ತಲೆಮಾರಿನ ತಳಮಳ", ಕವಿತಾ ಪ್ರಕಾಶನ, ರಾಯಚೂರು(೧೯೯೭)

೧೧. ಗಿರಡ್ಡಿಗೋವಿಂದರಾಜ, "ಸಣ್ಣ ಕಥೆಯ ಹೊಸ ಒಲವುಗಳು", ಸಾಹಿತ್ಯ ಭಂಡಾರ, ಹುಬ್ಬಳ್ಳಿ(೧೯೯೭)

೧೨. ಗಿರಡ್ಡಿ ಗೋವಿಂದರಾಜ "ನವ್ಯ ವಿಮರ್ಶೆ", ಅಕ್ಷರ ಪ್ರಕಾಶನ, ಸಾಗರ (೧೯೭೩)

೧೩. ಗಿರಡ್ಡಿ ಗೋವಿಂದರಾಜು "ಕಾದಂಬರಿ : ವಸ್ತು ಮತ್ತು ತಂತ್ರ", ಸ್ನೇಹ ಪ್ರಕಾಶನ, ಬೆಂಗಳೂರು (೧೯೮೭)

೧೪. ಗಿರಡ್ಡಿಗೋವಿಂದರಾಜ, ೨೦೦೯, "ಕಲ್ಪಿತವಾಸ್ತವ, ಕನ್ನಡ ಸಣ್ಣಕತೆ", ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೧೫. ಗೋವಿಂದರಾಜ ತಳಕೋಡ, "ಕಲ್ಲುಕರಗಿದಾಗ", ಚಂದ್ರನಾಥ ಪ್ರಕಾಶನ, ಧಾರವಾಡ (೨೦೧೩)

೧೬. ನಟರಾಜ್ ಹುಳಿಯಾರ್, "ಇಂತಿನಮಸ್ಕಾರಗಳು", ಪಲ್ಲವ ಪ್ರಕಾಶನ, ಚನ್ನಪಟ್ಟಣ (೨೦೧೩)

೧೭. ನರೇಂದ್ರ ರೈದೇರ್ಲ, "ಲಂಕೇಶ್ ನೆನಪು", ಕರ್ನಾಟಕ ಸಂಘ, ಪುತ್ತೂರು, ದಕ್ಷಿಣ ಕನ್ನಡ, (೨೦೦೦)

